

ಶ್ರೀರಾಮಜನನ.

ಓಂ ಶ್ರೀ ಕೃಷ್ಣಾಯನಮಃ.

ಸಚಿತ್ರ ಕನ್ನಡ ವಚನ

# ರಾಮಾಯಣ

## ಕಥಾ ಸಂಗ್ರಹ.

ವೇ॥ ಕವಿನಾಗಶರ್ಮರಿಂದ

ಪರಿಶೋಧಿಸಲ್ಪಟ್ಟುದು.



ಸೀತಾಸ್ವಯಂವರ.




1939 1939

ಸುಗ್ರೀವಸಖ್ಯ.



—: ಪ್ರಕಾಶಕರು :—

ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ,

ಪ್ರೊಪ್ರೈಟರ್,

ಕಲಾನಿಧಿ ಬುಕ್‌ಡಿಪೊ,

ಚಿಕ್ಕಪೇಟೆ, ಬೆಂಗಳೂರು ಸಿಟಿ.



ಕ್ರಯ ೧—೪—೦.

ರಾವಣವಧೆ.



ಕಳಾನಿಧಿ ಮುದ್ರಾಲಯದಲ್ಲಿ
ಮುದ್ರಿಸಿ ಪ್ರಕಟಿಸಲ್ಪಟ್ಟಿತು,
ಚಿಕ್ಕಪೇಟೆ, ಬೆಂಗಳೂರು ಸಿಟಿ.
1939.

ದಶಾವತಾರ ಕಥೆಸಹಿತ

# ರಾಮಾಯಣ ಕಥಾಸಂಗ್ರಹದ

## ವಿಷಯ ಸೂಚಿಕೆ.

(24)





# ವಿಚಿತ್ರ ಕಥಾ ಪ್ರಪಂಚಂ

ಎಂಬ

## (ಕಾಶೀರಾಮೇಶ್ವರ ಯಾತ್ರೆಯ ಕಥೆಗಳು.)

"**ವಿಚಿತ್ರಕಥಾಪ್ರಪಂಚಂ**" ಎಂಬ ಹೆಸರನ್ನು ಕೇಳಿದಮಾತ್ರದಿಂದಲೇ ಶ್ರೋತೃಗಳಿಗೆ ಅದೊಂದು ಬಗೆಯಾದ ಭಾವವು ಹೃದಯದಲ್ಲಿ ತಲೆದೋರದೆ ಇರದು. ಈ ಪುಸ್ತಕದಲ್ಲಿರುವ ಇಪ್ಪತ್ತೆಂಟು ಕಥೆಗಳಲ್ಲಿ ಪ್ರತಿಯೊಂದು ಕಥೆಯೂ ವಾಚಕರಿಗೆ ಅಡಿಗಡಿಗೆ ಆಶ್ಚರ್ಯವನ್ನೂ ಆನಂದವನ್ನೂ ಉಂಟುಮಾಡದೆ ಇರುವುದಿಲ್ಲವೆಂದೂ ಘಂಟಾಘೋಷವಾಗಿ ಹೇಳಬಹುದು. ಇದಲ್ಲದೆ ಆರ್ಯರ ನೀತಿರೀತಿಗಳೂ ಉಪದೇಶ ವಚನಗಳೂ ಇದರಲ್ಲಿ ಹೇಳಲ್ಪಟ್ಟಿರುವಹಾಗೆ ಮತ್ತೊಂದು ಗ್ರಂಥದಲ್ಲಿ ಹೇಳಲ್ಪಟ್ಟಿರುವದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು ಪರಂತು ಈ ಗ್ರಂಥವು ಪ್ರತಿಯೊಬ್ಬ ಪುರುಷನೂ ಸ್ತ್ರೀಯೂ ಓದುವುದಕ್ಕೆ ಅರ್ಹವಾಗಿದೆಯೆಂದು ಧಾರಾಳವಾಗಿ ಹೇಳಬಹುದೆಂದು ಅನೇಕರು ಅಭಿಪ್ರಾಯಪಟ್ಟಿರುತ್ತಾರೆ.

ಭಾಷಾಶೈಲಿಯು ಸುಗಮವಾಗಿದೆ ವ್ಯಾಕರಣ ಮಾರ್ಗವನ್ನು ಅನುಸರಿಸಿ ಬರೆಯಲ್ಪಟ್ಟದ್ದಾಗಿದೆ. ಅಲ್ಲಲ್ಲಿ ಬರೆಯಲ್ಪಟ್ಟಿರುವ ನೀತಿ ಧರ್ಮಬೋಧಕಗಳಾದ ಶ್ಲೋಕಗಳಿಗೆ ಅಲ್ಲಲ್ಲಿಯೇ ಅರ್ಥವು ಬರೆಯಲ್ಪಟ್ಟಿದೆ. ಆದುದರಿಂದ ಇದು ಸರ್ವರಿಗೂ ಪರಿಗ್ರಹಾರ್ಹವಾದುದು.

**ಬೆಲೆ ೧—೮—೦.**

ನಮ್ಮ ವಿಳಾಸ:—**ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ,**

ಕಳಾನಿಧಿ ಪ್ರೆಸ್ ಪ್ರೊಪ್ರೈಟರ್,

ಚಿಕ್ಕಪೇಟೆ, ಬೆಂಗಳೂರು ಸಿಟಿ

ಬಲದಿಂದ ಆವನು ಸಾಯಲಿಲ್ಲವಾಗಿ ಬಾಲವು ಕೇತುವಾಗಿ ಭೂಮಿಯ ನೆರಳಿನಲ್ಲಿಸೇರಿ ಛಾಯಾ ಗ್ರಹಗಳೆನಿಸಿಕೊಂಡವು ಅಲ್ಲದೇ ತಮ್ಮ ಕಾಪಟ್ಯವನ್ನು ಹೊರಗೆ ಹಾಕಿದುದಕ್ಕೆ ಚಂದ್ರಸೂರ್ಯ ರಿಗೆ ದ್ವೇಷಿಗಳಾಗಿ ಪರ್ವಕಾಲಗಳಲ್ಲಿ ಅವರಿಗೆ ಅಡ್ಡವಾಗಿ ಬರುತ್ತ ಸೂರ್ಯಚಂದ್ರರ ಗ್ರಹಣ ವನ್ನು ನಡೆಸುತ್ತಿರುವರು.

ಮೋಹಿನಿಯು ಇಂತು ವಂಚನೆಮಾಡಿ ಅಮೃತಶೇಷದಿಂದ ಕೂಡಿದ ಕಲಶವನ್ನು ಇಂದ್ರಂಗೆ ಕೊಟ್ಟಳು ಬಳಿಕ ಮೋಹಿನಿಯು ಅಂತರ್ಧಾನವಾಗಿ ಶಂಖಚಕ್ರಗದಾಪಾಣಿಯಾದ ವಿಷ್ಣು ರೂಪವೆ ಕಾಣಿಸಿತು ಅಸುರರು ಇದೇನೋ ವಿಷ್ಣುವಿನ ಕಪಟದಿಂದ ತಾವು ಮೋಸಹೋದೆ ವೆಂದು ಸಂದೇಹಪಡುತ್ತಿರುವಾಗ ಅಮೃತಪ್ರಾಶನದಿಂದ ಬಲಾಧಿಕರಾದ ದೇವತೆಗಳನ್ನು ಪ್ರೇರಿಸಿ ವಿಷ್ಣುವು ತಾನೇಅಸುರರನ್ನು ಹೊಡೆಯತೊಡಗಲು ದೇವಾಸುರರಿಗೆ ಮಹಾಯುದ್ಧ ವಾಗಿ ಅನೇಕರು ಅಸುರರು ಸತ್ತುಹೋದರು ಹತಶೇಷರಾದವರು ಓಡಿಹೋಗಿ ಪಾತಾಳವನು ಹೊಕ್ಕರು. ಇಂದ್ರಾದಿ ದೇವತೆಗಳು ಹರಿಪ್ರಸಾದದಿಂದ ಅಮೃತವನ್ನು ಪಡೆದು ಅಮರರಾಗ್ನಿ ನಿರ್ಜರರೆನಿಸಿಕೊಂಡು ನಿರ್ಭಯರಾಗಿ ಸ್ವರ್ಗರಾಜ್ಯವನ್ನು ಪಡೆದರು. ಇಂತು ಶ್ರೀಮಹಾವಿಷ್ಣುವು ಕೂರ್ಮಾವತಾರಮಾಡಿ ದೇವತೆಗಳನ್ನು ಸಲಹಿದನೆಂದು ಮಾರ್ಕಂಡೇಯ ಮಹಾಮುನಿಯು ಧರ್ಮರಾಯನಿಗೆ ಹೇಳಿ ಸುಮ್ಮನಾದನು.

ಇತಿ ಕೂರ್ಮಾವತಾರದಕಥೆ ಸಮಾಪ್ತಂ ಶ್ರೀ ಶ್ರೀ ಶ್ರೀ.

## ವರಾಹಾವತಾರದ ಕಥೆ.

ಪೂರ್ವದಲ್ಲಿ ಬ್ರಹ್ಮದೇವನ ಮಾನಸಪುತ್ರರಾದ ಸನಕ ಸನಂದನಾದಿಗಳು ಒಂದಾ ನೊಂದು ದಿನ ಆದಿನಾರಾಯಣನ ದರ್ಶನಾರ್ಥವಾಗಿ ವೈಕುಂಠಕ್ಕೆ ಬರಲು ವೈಕುಂಠದ ದ್ವಾರ ವನ್ನು ಕಾಯುತ್ತಿದ್ದ ಜಯವಿಜಯರು ಬಂದಿರ್ಪ ಮುನಿವರ್ಯರ ಯೋಗ್ಯತೆಯನ್ನು ತಿಳಿಯದೆ ಬಾಲರೆಂದು ಭಾವಿಸಿ ಒಳಗೆ ಹೋಗಲು ಮಾರ್ಗವನ್ನು ಕೊಡದೆ ಪ್ರಭುವಿನ ಅಪ್ಪಣೆಯಾದ ಬಳಿಕ ಒಳಗೆ ಬರ ಬಹುದೆಂದು ನುಡಿಯಲು ಆ ಮುನಿವರರು ಆಹಾ ಕೇವಲ ಸತ್ವಗುಣ ಪ್ರಾಧಾನ್ಯವಾದ ವೈಕುಂಠದಲ್ಲಿ ರಜೋಗುಣ ತಮೋಗುಣಗಳು ವ್ಯಕ್ತ ವಾಗಬಹುದೇ ನೀವು ಇಲ್ಲಿರುವುದಕ್ಕೆ ಯೋಗ್ಯರಲ್ಲ ಆದಕಾರಣ ನೀವಿ ಬ್ಬರೂ ರಕ್ಕಸರಾಗಿ ಜನಿಸಿ ಎಂದು ಶಾಪಕೊಟ್ಟರು. ಅದನ್ನು ಕೇಳಿ ಜಯವಿಜಯರು ಗಡಗಡನೆ ನಡುಗುತ್ತ ಮುನಿಗಳ ಪಾದಗಳಿಗೆರಗಿ ಸ್ವಾಮಿ ನಮ್ಮ ಅಪರಾಧವನ್ನು ಕ್ಷಮಿಸಿ ಎಂದು ಪರಿಪರಿಯಿಂದ ಬೇಡಿ ಕೊಳ್ಳಲು ಕರುಣಾಶಾಲಿಗಳಾದ ಮುನಿವರರು ಎಲೈ ಜಯವಿಜಯರೇ



ನಾವು ಹೇಳಿದುದು ಅಸತ್ಯವಾಗಲಾರದು ನೀವು ಮೂರು ಜನ್ಮಗಳವರೆಗೆ ರಕ್ಕಸಕುಲದಲ್ಲಿ ಜನಿಸಿ ಭಗವಂತನಾದ ನಾರಾಯಣನೇ ನಿಮ್ಮನ್ನು ಆ ಜನ್ಮಗಳಿಂದ ಮುಕ್ತರನ್ನಾಗಿ ಮಾಡಿ ತನ್ನೆಡಗೆ ಸೇರಿಸಿಕೊಳ್ಳುವನೆಂದು ಹೇಳಿ ಪರಮೇಶ್ವರನ ದರ್ಶನಾರ್ಥವಾಗಿ ಕೈಲಾಸಕ್ಕೆ ತೆರಳಿದರು.

ಬಳಿಕ ಜಯವಿಜಯರು ಕಶ್ಯಪಮುನಿಯ ಪತ್ನಿಯಾದ ದಿತೀದೇವಿಯ ಗರ್ಭದಲ್ಲಿ ಹುಟ್ಟಿ ಹಿರಣ್ಯಾಕ್ಷ ಹಿರಣ್ಯಕಶಿಪುಗಳೆಂದು ಪ್ರಸಿದ್ಧರಾಗಿ ತಪವಂಗೆಯ್ದು ಬ್ರಹ್ಮದೇವನನ್ನು ಮೆಚ್ಚಿಸಿ ವರಗಳನ್ನು ಪಡೆದು ಕೆಲವು ಭೂಖಂಡಗಳನ್ನು ಆಳುತ್ತಿದ್ದರು. ಆ ಕಾಲದಲ್ಲಿ ಆ ದೈತ್ಯರು

ಪಾಲಿಸುತ್ತಿದ್ದ ಭೂಮಿಗೆ ಆಧಾರಂಗಳಾದ ಪರ್ವತಂಗಳು ರೆಕ್ಕೆಗಳುಳ್ಳದ್ದಾಗಿ ಹಾರಿಹೋಗಲು ಆ ಭೂಖಂಡಗಳು ಸಮುದ್ರದಲ್ಲಿ ಮುಳುಗಿಹೋದುವು. ಅದನ್ನು ನೋಡಿ ಹಿರಣ್ಯಾಕ್ಷನು ಕಡು ಕೋಪದಿಂದ ನನ್ನ ಭೂಮಿಯು ನಾಶವಾದಮೇಲೆ ದೇವತೆಗಳ ಭೂಮಿಯು ಏಕಿರಬೇಕು. ಆದಕಾರಣ ದೇವಭೂಮಿಯನ್ನು ನೀರಿನಲ್ಲಿ ಮುಳುಗಿಸುತ್ತೇನೆ ಎಂದು ಯೋಚಿಸಿ ದೈತ್ಯಬಲ ದೊಡನೆ ಇಂದ್ರನಮೇಲೆ ಯುದ್ಧಕ್ಕೆ ಹೊರಟನು.

ಆಗ ದೇವಾಸುರ ಸೈನ್ಯಗಳಿಗೆ ಘೋರವಾದ ಯುದ್ಧವಾಯಿತು ಕಡೆಗೆ ದೇವಸೈನ್ಯವು ಸೋತುಹೋಗಲು ದೇವರಾಜನೇ ಯುದ್ಧಮಾಡಿದನು. ಹಿರಣ್ಯಾಕ್ಷನು ಇಂದ್ರನನ್ನು ಸೋಲಿಸ ಲಾಗಿ ದೇವತೆಗಳೆಲ್ಲರೂ ಓಡಿಹೋದರು. ಆಗ ದೇವಭೂಮಿಯನ್ನು ಹಿರಣ್ಯಾಕ್ಷನು ಮಹಾ ಸಮುದ್ರದಲ್ಲಿ ಮುಳುಗಿಸಿದನು. ಆಗ ದೇವತೆಗಳೂ ಮನಿಗಳೂ ಭೂಮಿಯನ್ನು ಉದ್ಧರಿಸ ಲೋಸುಗ ಶ್ರೀಮಹಾವಿಷ್ಣುವನ್ನು ಪ್ರಾರ್ಥಿಸುತ್ತಿದ್ದರು.

ಶ್ರೀ ಮಹಾವಿಷ್ಣುವು ಪ್ರಸನ್ನನಾಗಿ ದೇವತೆಗಳಿಗೆ ಅಭಯವನ್ನಿತ್ತು ವರಾಹವೆಂಬ ಪರ್ವ ತದಿಂದ ತಾನು ಶ್ವೇತವರಾಮೂರ್ತಿಯಾಗಿ ಆವಿರ್ಭವಿಸಿ ಶಂಖಚಕ್ರಗದಾಪಾಣಿಯಾಗಿ ದೈತ್ಯರ ಮೇಲೆ ಯುದ್ಧಕ್ಕೆ ಹೊರಡಲು ವಿಷ್ಣುವಿನ ಶಂಖಧ್ವನಿಯಿಂದ ದೈತ್ಯದಾನವ ರಾಕ್ಷಸರು ಹೆದರಿ ಓಡಿಹೋದರು. ಆಗ ಹಿರಣ್ಯಾಕ್ಷನು ವರಾಹಮೂರ್ತಿಯಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಲಾಗಿ ಹಿರಣ್ಯಾಕ್ಷನ ತಲೆಯು ಹರಿದು ಹಾರಿಬಿತ್ತು.

ಬಳಿಕ ದೇವತೆಗಳಿಂದ ಸ್ತುತಿಸಲ್ಪಟ್ಟು ಸಂತುಷ್ಟನಾದ ವರಾಹಮೂರ್ತಿಯು ಇಂದ್ರನಿಗೆ ತ್ರಿಲೋಕಾಧಿಕಾರವನ್ನು ಕೊಟ್ಟು ಧರ್ಮದಿಂದ ಪಾಲಿಸುವಂತೆ ಕಟ್ಟುಮಾಡಿ ದೇವತೆಗಳಿಗೆ ಹವಿ ರ್ಭಾಗಗಳನ್ನು ಕೊಡುತ್ತಿರುವಂತೆ ಋಷಿಗಳಿಗೆ ನಿಯಮಿಸಿ ಸಮುದ್ರದಲ್ಲಿ ಮುಳುಗಿಸಿದ್ದ ದೇವ ಭೂಮಿಯ ಭಾಗವನ್ನು ಕೋರೆಹಲ್ಲಿನ ತುದಿಯಿಂದ ಎತ್ತಿಕೊಂಡು ಬಂದು ಸಪ್ತದ್ವೀಪಗಳನ್ನೂ ಪೂರ್ವದಂತೆ ಸಮನಾಗಿ ನಿಲ್ಲಿಸಿ ಭೂದೇವಿಗೊಡೆಯನಾಗಿದ್ದನು. ಆಗ ಯಜ್ಞ ವರಾಹ ಮೂರ್ತಿಯ ಅಂಗಸ್ಪರ್ಶದಿಂದ ಭೂದೇವಿಯಲ್ಲಿ ನರಕಾಸುರನು ಹುಟ್ಟಿದನು ಬಳಿಕ ಶ್ವೇತವರಾ ಹಮೂರ್ತಿಯ ಪ್ರಸಾದದಿಂದ ಅಧಿಕಾರ ಪಡೆದ ದೇವೇಂದ್ರನು ವಜ್ರಾಯುಧದಿಂದ ಪರ್ವತಗ ರೆಕ್ಕೆಗಳನ್ನು ಛೇದಿಸಿ ಆ ಬೆಟ್ಟಗಳನ್ನು ಹಾರಾಡದಂತೆಮಾಡಿ ಭೂಮಿಗೆ ಆಧಾರವಾಗಿ ಸ್ಥಿ ವಾಗಿರುವಂತೆಯೂ ಪಾತಾಳದಲ್ಲಿರುವ ದೈತ್ಯದಾನವ ರಾಕ್ಷಸರು ಮೇಲಕ್ಕೆ ಬಾರದಹಾಗೆ ತ ಯಾಗಿಯೂ ನಿಲ್ಲಿಸಿದನು. ಮೈನಾಕಪರ್ವತವು ಮಾತ್ರ ರೆಕ್ಕೆಗಳು ಕಡಿಯಲ್ಪಡದೆ ದಕ್ಷಿ ಸಮುದ್ರದಲ್ಲಿ ಅವಿತುಕೊಂಡಿತು. ಇಂತು ಶ್ರೀವಿಷ್ಣುವು ವರಾಹಾವತಾರಮಾಡಿ ಹಿರಣ್ಯಾಕ್ಷನನ ಕೊಂದು ಭೂಮಿಯನ್ನುದ್ಧರಿಸಿ ಲೋಕಗಳನ್ನು ರಕ್ಷಿಸಿದನು ಎಂದು ಮಾರ್ಕಂಡೇಯನು ಧರ್ಮ ರಾಯನಿಗೆ ಹೇಳಿ ಸುಮ್ಮನಾದನು.

ಇಂತು ವರಾಹಾವತಾರದಕಥೆ ಸಮಾಪ್ತಂ ಶ್ರೀ ಶ್ರೀ ಶ್ರೀ.



## ನೃ ಸಿಂ ಹಾ ವ ತಾ ರ ದ ಕ ಥೆ

ಮಾರ್ಕಂಡೆಯ ಋಷಿಯು ಧರ್ಮರಾಯನನ್ನು ಕುರಿತು ಎಲೈ ಯುಧಿಷ್ಠಿರನೇ! ಕ್ಷನನ್ನು ವರಾಹರೂಪದಿಂದ ನಾರಾಯಣನು ಸಂಹರಿಸಿದುದನ್ನು ಕೇಳು ಅವನ



ಹಿರಣ್ಯಕಶಿಪುವು ಕಡುಕೋಪವಂತಾಳಿ ಹೇಗಾದರೂ ಮಾಡಿ ವಿಷ್ಣು ವನ್ನು ಸಂಹರಿಸಿ ತನ್ನ ಹಗೆತನವನ್ನು ತೀರಿಸಿಕೊಳ್ಳಬೇಕೆಂದು ಯೋಚಿಸಿ ಅರಣ್ಯದಲ್ಲಿ ಬ್ರಹ್ಮದೇವನನ್ನು ಕುರಿತು ಘೋರತಪಸ್ಸನ್ನು ಮಾಡಿ ಮೆಚ್ಚಿಸಿ ಅವನಿಂದ ತಾನು ದೇವಮಾನುಷ್ಯ ತಿರ್ಯಗ್ಜಾತಿಗ ಳಿಂದಲೂ ಶಸ್ತ್ರಾಸ್ತ್ರಪರ್ವತವೃಕ್ಷಗಳಿಂದಲೂ ದಿವಾರಾತ್ರಿಯಲ್ಲಿಯೂ ತನಗೆ ಮರಣವಾಗದಂತೆಯೂ ತನ್ನಲ್ಲಿ ಘನವಾದ ಶಕ್ತಿಯುಂಟಾಗು ವಂತೆಯೂ ವರವನ್ನು ಪಡೆದು ಮದೋನ್ಮತ್ತನಾಗಿಪಾತಾಳದಲ್ಲಿರುವ ಸಕಲ ದೈತ್ಯರನ್ನು ಕರೆಯಿಸಿಕೊಂಡು ಜಗತ್ತಿನಲ್ಲಿ ಯಜ್ಞಯಾಗಾದಿ ಗಳನ್ನು ಕೆಡಿಸುತ್ತ ಗೋಬ್ರಾಹ್ಮಣರಿಗೆ ಕಂಟಕನಾಗಿ ದೇವತೆಗಳ ಹವಿರ್ಭಾಗವನ್ನು ದೂರಮಾಡಿ ದೇವತೆಗಳನ್ನು ಪೀಡಿಸುತ್ತ ಲೋಕ ಕಂಟಕನಾಗಿರಲು ದೇವತೆಗಳು ಇವನ ಬಾಧೆಯನ್ನು ತಾಳದೆ ಬ್ರಹ್ಮದೇವನಿಗೆ ಶರಣಾಗತರಾ ಗಲು ಚತುರ್ಮುಖನು ಇವರೊಂದಿಗೆ ಕ್ಷೀರಸಮುದ್ರಕ್ಕೆ ಬಂದು ಆದಿನಾರಾಯಣನಿಗೆ ಸಕಲ ವೃತ್ತಾಂತವನ್ನರುಹಿ ಜಗದೀಶನಿಂದ ಅನುಜ್ಞೆಯನ್ನು ಪಡೆದು ಕಾಲವನ್ನು ನಿರೀಕ್ಷಿಸುತ್ತಿದ್ದನು. ಇತ್ತಲಾ ದೈತ್ಯೇಂದ್ರನಾದ ಹಿರಣ್ಯಕಶಿಪುವು ವರಗರ್ವಿತನಾಗಿ ವೇದಧರ್ಮಗಳಿಗೆ ಲೋಪವನ್ನುಂ ಟುಮಾಡುತ್ತ ರಾಜರ್ಷಿಗಳನ್ನು ಸೋಲಿಸಿ ಸ್ವರ್ಗಲೋಕಕ್ಕೆ ಹೋಗಿ ಅಮರಾವತಿಯನ್ನು ಕೊಳ್ಳೆ ಹೊಡೆದು ಐರಾವತಾದಿಗಳನ್ನು ಅಪಹರಿಸಿ ತ್ರಿಲೋಕಾಧಿಪತಿಯಾಗಿದ್ದನು. ಅವನನ್ನು ಸಂಹ ರಿಸಲೋಸುಗ ಸರ್ವವ್ಯಾಪಕನಾದ ವಿಷ್ಣುಮೂರ್ತಿಯು ಹಿರಣ್ಯಕಶಿಪುವಿನ ಆಸ್ಥಾನಮಂಟಪ ದಲ್ಲಿ ವಜ್ರಸ್ತಂಭದೊಳಗೆ ಅಡಗಿ ಇದ್ದುಕೊಂಡು ಹಿರಣ್ಯಕಶಿಪುವಿನ ತಪೋಬಲವು ಕ್ಷೀಣಿಸಿ ಹೋಗುವ ಕಾಲವನ್ನು ನಿರೀಕ್ಷಿಸುತ್ತಿದ್ದನು. ಹಿರಣ್ಯಕಶಿಪುವಿನ ಪತ್ನಿಯಾದ ಕಯಾಧುವು ತನಗೆ ಸಂತಾನವಿಲ್ಲದ್ದರಿಂದ ನಾರದಮುನಿಯನ್ನು ಸೇವಿಸಿನಾರಾಯಣಾಷ್ಟಾಕ್ಷರಿ ಮಂತ್ರವನ್ನು ಜಪಿಸುತ್ತಿ ದ್ದಳು. ಗುಟ್ಟಾಗಿ ಆಕೆಯು ಮಾಡಿದ ತಪೋಬಲದಿಂದ ಆಕೆಯಲ್ಲಿ ಹಿರಣ್ಯಕಶಿಪುವಿನಿಂದ ಭಾಗವತಶಿರೋಮಣಿಯಾದ ಪ್ರಹ್ಲಾದನು ಹುಟ್ಟಿದನು. ಬಳಿಕ ಅವನ ತಮ್ಮಂದಿರು ಅನುಹ್ಲಾದ ಸಂಹ್ಲಾದ ಆಹ್ಲಾದ ಮೊದಲಾದವರೂ ಹುಟ್ಟಿದರು. ಅವರಲ್ಲಿ ಪ್ರಹ್ಲಾದನೆಂಬ ಹುಡುಗನು ನಾರದೋಪದೇಶದಿಂದ ಭಾಗವತನಾಗಿ ನಾರಾಯಣ ಮಂತ್ರ ಪರಾಯಣನಾಗಿದ್ದನು. ಇತ್ತಲಾ ದೈತ್ಯೇಂದ್ರನಾದ ಹಿರಣ್ಯಕಶಿಪುವು ವಿಶ್ವಕರ್ಮನಿಂದ ನಿರ್ಮಿತವಾದ ದಿವ್ಯ ಸಭಾಮಂಟಪದಲ್ಲಿ ಕುಳಿತು ದೈತ್ಯರಾಜ್ಯವನ್ನಾಳುತ್ತಾ ತನ್ನ ಮಗನಾದ ಪ್ರಹ್ಲಾದನನ್ನು ಓದಿಸುವದಕ್ಕೋಸ್ಕರ ಶುಕ್ರಾ ಚಾರ್ಯನನ್ನು ನಿಯಮಿಸಲಾಗಿ ಆತನು ಪ್ರಹ್ಲಾದನಿಗೆ ಉಪಾಧ್ಯಾಯನಾದನು. ಪ್ರಹ್ಲಾದನು ನಿಂದ ಹೇಳಲ್ಪಟ್ಟ ಯಾವ ವಿದ್ಯವನ್ನೂ ಲೆಕ್ಕಿಸದೆ ಪರಮ ಭಾಗವತನಾಗಿ ಶ್ರೀಮನ್ನಾರಾ ನನ್ನು ಸ್ಮರಿಸುತ್ತ ಮಹಾವೈಷ್ಣವನಾಗಿದ್ದನು. ಶುಕ್ರಾಚಾರ್ಯನು ಆ ಹುಡುಗನಲ್ಲಿ ತನ್ನ ಧ್ಯಾಯತ್ವವೇನೂ ಸಾಗದೆ ಹಿರಣ್ಯಕಶಿಪುವಿನೊಡನೆ ದೂರುಹೇಳಲಾಗಿ ಹಿರಣ್ಯಕಶಿಪುವು ್ಲಾದನನ್ನು ಕರೆಯಿಸಿ ತಾನೇ ಪರೀಕ್ಷಿಸಿನೋಡಿ ತನ್ನ ಮಗನು ತನಗೆ ಹಗೆಯಾದ ವಿಷ್ಣುವಿಗೆ ನಾಗಿರುವದನ್ನು ಕಂಡು ಸಹಿಸಲಾರದೆ ಹಲವು ಬಗೆಯಿಂದ ಅವನನ್ನು ತಿದ್ದಿ ವಿಷ್ಣುಭಕ್ತಿ ್ನ ತಪ್ಪಿಸ ತೊಡಗಿದರೂ ಸಾಧ್ಯವಾಗದೇ ಹೋಗಲು ನಾನಾವಿಧವಾಗಿ ಪ್ರಹ್ಲಾದನನ್ನು ಪಡಿಸಿ ಕೊಲ್ಲಿಸುವ ಪ್ರಯತ್ನಮಾಡಿದನು. ಪ್ರಹ್ಲಾದನು ನಾರಾಯಣಾನುಗ್ರಹದಿಂದ ವ ಹಿಂಸೆಗೂ ಸಿಕ್ಕದೆ ಸುರಕ್ಷಿತವಾಗಿದ್ದನು.

ಕಡೆಗೊಂದುದಿನ ಭಗವದ್ದ್ವೇಷಕನಾಗಿ ನಿಷ್ಠುರೋಕ್ತಿಗಳನ್ನು ನುಡಿಯುತ್ತಿರುವ ಹಿರಣ್ಯಕಶಿಪುವನ್ನು ಕುರಿತು ನನ್ನ ತಂದೆಗೆ ಹಿತವಾಗಲಿಯೆಂದೆಣಿಸಿ ದೈತ್ಯೇಂದ್ರನಾದ ತಂದೆಯೇ ನಿನ್ನ



ವೈರಿಗಳು ಕಾಮಕ್ರೋಧಾದಿಗಳೇ ಹೊರತು ನಿನಗೆ ಆತ್ಮನಾದ ನಾರಾಯಣನು ವೈರಿಯಲ್ಲ. ನಾರಾಯಣನಿಗೆ ನೀನು ಶರಣಾಗತನಾದರೆ ಈ ಜನ್ಮದಲ್ಲಿ ಜಯವನ್ನು ಪಡೆದು ಸರ್ವಸುಖಿಯಾಗಿ ದೇಹಾಂತರದಲ್ಲಿ ಶಾಶ್ವತಸುಖವಾದ ಮುಕ್ತಿಯನ್ನು ಪಡೆಯುವೆ. ವಿಷ್ಣುದ್ವೇಷವಂಗೆಯ್ದರೆ ಕೊಟ್ಟುಹೋಗುವೆ, ನಾರಾಯಣನೇ ಸರ್ವೇಶ್ವರನು, ಆತನಿಗಿಂತಲೂ ದೊಡ್ಡದೇವರಿಲ್ಲ, ಆತನೇ ಸರ್ವವ್ಯಾಪಕನೆನ್ನಲಾಗಿ ಹಿರಣ್ಯಕಶಿಪುವು ಮಹಾಕೋಪದಿಂದ ಎಲಾ ದುಷ್ಪುತ್ರನೇ ನಿನ್ನ ವಿಷ್ಣುವು ಸರ್ವವ್ಯಾಪಕನಾಗಿದ್ದರೆ ಈ ಮಣಿಸ್ತಂಭದಲ್ಲಿ ಹುಟ್ಟಿಬರಲಿ ಇಲ್ಲದಿದ್ದರೆ ನಿನ್ನನ್ನು ಈಗಲೇ ಕಡಿಯುವೆನೆಂದು ಖಡ್ಗಪಾಣಿಯಾಗಿ ವಜ್ರಸ್ತಂಭವನ್ನು ಒದೆದು ಗದ್ದಿಸಲಾಗಿ ಭಕ್ತರಕ್ಷಕನಾದ ಶ್ರೀಮನ್ನಾರಾಯಣನು ವೈಶಾಖ ಶುಕ್ಲ ಚತುರ್ದಶೀ ಸಂಧ್ಯಾ ಸಮಯದಲ್ಲಿ ಪ್ರದೋಷಕಾಲದಲ್ಲಿ ಬ್ರಂಹಾಂಡವು ಬಿರಿಯುವಂತೆ ಮಹಾಧ್ವನಿಯೊಡನೆ ಸಭಾಸ್ತಂಭವನ್ನು ಭೇದಿಸಿಕೊಂಡು ಅಗ್ನಿಜ್ವಾಲೆಗಳಂತೆ ಹೊಳೆಯುತ್ತಿರುವ ಹಿರಣ್ಮಯಂಗಳಾದ ನೋಟಗಳಿಂದಲು ವಜ್ರದಂಷ್ಟ್ರಗಳಿಂದಲು ತೀಕ್ಷ್ಣ ನಖಗಳಿಂದಲು ಅತ್ಯುಗ್ರವಾದ ಸಿಂಹಮುಖದಿಂದಲೂ ಕೂಡಿ ಕಂಠದವರೆಗೂ ನರರೂಪದಿಂದ ಕೂಡಿ ಕೋಟಿಸೂರ್ಯಪ್ರಕಾಶನಾಗಿ ನರಸಿಂಹನಾಗಿ ಅವಿರ್ಭವಿಸಿದನು.

ಹಿರಣ್ಯಕಶಿಪುವು ಮೃತ್ಯುವಿಗೆ ಮೃತ್ಯುವಾಗಿರುವ ಅತ್ಯುಗ್ರಮೂರ್ತಿಯಾದ ನರಸಿಂಹರೂಪಿ ಎನಿಸುವ ಮಹಾವಿಷ್ಣುವಂ ಕಂಡು ತಾನು ಗದಾಪಾಣಿಯಾಗಿ ಯುದ್ಧಕ್ಕೆ ನಿಂತನು. ಹಿರಣ್ಯಕಶಿಪುವಿನ ಪರಿವಾರದ ರಕ್ಕಸರು ನರಸಿಂಹಮೂರ್ತಿಯಮೇಲೆ ದಿವ್ಯಾಸ್ತ್ರಂಗಳನ್ನು ಪ್ರಯೋಗಿಸಿದರು. ಸರ್ವಸಂಹಾರಕನಾದ ನರಹರಿಯು ಘೋರಯುದ್ಧಮಾಡಿ ಕಡೆಗೆ ಹಿರಣ್ಯಕಶಿಪುವನ್ನು ಎಳೆದುಕೊಂಡು ತನ್ನ ತೊಡೆಯಮೇಲೆ ಕೆಡಹಿ ಅವನ ಹೊಟ್ಟೆಯನ್ನು ಬಗೆದು ರಕ್ತವನ್ನು ಕುಡಿದು ಕರುಳುಗಳನ್ನು ಮಾಲೆ ಹಾಕಿಕೊಂಡು ಅತ್ಯುಗ್ರ ಜ್ವಾಲಾಮೂರ್ತಿಯ[illegible] ಆ ಘೋರಮೂರ್ತಿಯನ್ನು ನೋಡುವುದಕ್ಕೂ ಶಕ್ತರಾಗದೆ ದೇವತೆಗಳು ಹೆದರುತ್ತಿ[illegible] ಮಹಾಲಕ್ಷ್ಮಿಯು ತಾನುಕೂಡ ಶ್ರೀನೃಸಿಂಹನ ಕೋಪವನ್ನು ಶಾಂತಪಡಿಸುವುದಕ್ಕೆ ಅ[illegible]ಳಾಗಿ ಬಳಿಕ ಭಕ್ತಶಿರೋಮಣಿಯಾದ ಪ್ರಹ್ಲಾದನನ್ನು ಪ್ರೇರಿಸಲಾಗಿ ಅವನು ಶ್ರೀ ನ[illegible] ಮೂರ್ತಿಯನ್ನು ಸ್ತುತಿಸಲು ಸ್ವಾಮಿಯು ಶಾಂತಕೋಪನಾಗಿ ಪ್ರಸನ್ನನೆನಿಸಿ ಸಂತು[illegible] ಪಡೆದು ಪ್ರಹ್ಲಾದಂಗೆ ತತ್ವೋಪದೇಶಮಾಡಿದನು. ನೃಸಿಂಹನು ಕಂಠದವರೆಗೂ ರೌ[illegible] ಪವೂ ಕೆಳಭಾಗದಲ್ಲಿ ವೈಷ್ಣವರೂಪವು ಉಳ್ಳವನಾಗಿರಲಾ ಸರ್ವ ದೇವತಾತ್ಮಕನಾದ ಆ[illegible]

ಮೂರ್ತಿಯನ್ನು ನೋಡಿ ಬ್ರಹ್ಮಾದಿ ದೇವತೆಗಳು ಸ್ತುತಿಸಿ ಧನ್ಯರಾದರು. ಆಗ ಶ್ರೀನರಸಿಂಹನು ಇಂದ್ರನಿಗೆ ಸ್ವರ್ಗರಾಜ್ಯವನ್ನಿತ್ತು ಭೂಲೋಕದಲ್ಲಿ ಪ್ರಹ್ಲಾದಂಗೆ ಪಟ್ಟಾಭಿಷೇಕಮಾಡಿಸಿ ಇನ್ನು ಮೇಲೆ ನಿನ್ನ ವಂಶದಲ್ಲಿ ಹುಟ್ಟುವ ದೈತ್ಯರನ್ನು ನಾನು ಕೊಲ್ಲುವುದಿಲ್ಲವೆಂದು ವರವನ್ನಿತ್ತು ತಾನು ಲಕ್ಷ್ಮೀಸಮೇತನಾಗಿ ಅಂತರ್ಧಾನನಾದನು ಎಂದು ವಿಷ್ಣುಪುರಾಣದಲ್ಲಿ ಹೇಳಲ್ಪಟ್ಟಿದೆ.

ಹಿರಣ್ಯಕಶಿಪುವಿನ ರಕ್ತವನ್ನು ಕುಡಿದದ್ದರಿಂದ ನೃಸಿಂಹನು ನಿಜಸ್ವರೂಪವನ್ನು ಮರೆತು ತಮೋಗುಣಪ್ರಧಾನವಾದ ರೌದ್ರದಿಂದ ಲೋಕವನ್ನು ನಾಶಮಾಡತೊಡಗಲು ಸತ್ವಪ್ರಧಾನ ವಾದ ಅಂತರಂಗವುಳ್ಳ ಶೈವಮೂರ್ತಿಯಾದ ಪರಮೇಶ್ವರನ ಆಜ್ಞೆಯಿಂದ ವೀರಾಂಶವು ಶರಭಾ ವತಾರಮಾಡಿ ವಿಷ್ಣುವಿನ ನರಸಿಂಹಾವತಾರವನ್ನು ಪರಿಹರಿಸಿ ಲೋಕವನ್ನು ಪಾಲಿಸಿತೆಂದು ಕೆಲವು ಪುರಾಣಗಳಲ್ಲಿ ಹೇಳಲ್ಪಟ್ಟಿದೆ.

ಹರಿಹರಾದಿ ಸರ್ವದೇವಮಯನಾದ ಶ್ರೀ ನಾರಸಿಂಹರೂಪವೇ ಸಗುಣಬ್ರಹ್ಮದ ಸರ್ವೋ ತ್ತಮವಾದ ಮೂರ್ತಿಯೆಂತಲೂ, ಶ್ರೀ ನರಸಿಂಹ ಮಂತ್ರವೇ ಮಂತ್ರರಾಜನೆಂತಲೂ, ವೇದಾಂ ತೋಪನಿಷತ್ತುಗಳಿಲ್ಲಿ ಸಿದ್ಧಾಂತಿಸಿ ಮಂತ್ರಶಾಸ್ತ್ರಗಳಲ್ಲಿ ಮಂತ್ರಗಳ ಬಲ ತಾರತಮ್ಯವನ್ನು ಹೇಳುವಾಗ ನೃಸಿಂಹನನ್ನು ಪರಾಭವಿಸದೆ ಶರಭನಮೇಲೆ ಹನುಮಂತನು ಪಂಚಮುಖವಾಗಿ ತಗಲಿ ಗೆಲ್ಲಲಾರದೆ ಹಿಮ್ಮೆಟ್ಟಿದಾಗ ಶ್ರೀಮನ್ನಾರಾಯಣನ ಅಷ್ಟಮುಖವು ಗಂಡಭೇರುಂಡಾವ ತಾರಮಾಡಿ ಶರಭನನ್ನು ನಿಗ್ರಹಿಸಿ, ಸರ್ವೋತ್ತಮವೆನಿಸಿಕೊಂಡಿತೆಂದು ಹೇಳಲ್ಪಟ್ಟಿದೆ. ಹೀಗೆ ಅತ್ಯಾಶ್ಚರ್ಯಕರಂಗಳಾವ ಹರಿಯಲೀಲೆಗಳಲ್ಲಿ ಶ್ರೀಮನ್ನಾರಾಯಣನ ನೃಸಿಂಹಾವತಾರವು, ವಿಷ್ಣುಸರ್ವೋತ್ತಮತ್ವಕ್ಕೆ ನಿದರ್ಶನವಾಗಿ ಸ್ಮರಣಮಾತ್ರದಿಂದ ಭಕ್ತರಿಗೆ ಸಕಲ ಪಾಪಗಳನ್ನು ಪರಿ ಹರಿಸಿ ಸರ್ವೇಷ್ಟಾರ್ಥಂಗಳನ್ನು ಕೊಟ್ಟು ಮುಕ್ತಿಯನೀವುದೆಂದು ವೇದಶಾಸ್ತ್ರಗಳಲ್ಲಿ ನಿರೂಪಿಸಲ್ಪ ಟ್ಟಿದೆ ಎಂದು ಮಾರ್ಕಂಡೇಯ ಋಷಿಯು ಧರ್ಮರಾಯನಿಗೆ ಹೇಳಿ ಸುಮ್ಮನಾದನು.

ಇಂತು ಶ್ರೀ ನೃಸಿಂಹಾವತಾರದ ಕಥೆ ಸಮಾಪ್ತಂ ಶ್ರೀ ಶ್ರೀ ಶ್ರೀ.



## ವಾಮನಾವತಾರದ ಕಥೆ.

ಅನಂತರದಲ್ಲಿ ಯುಧಿಷ್ಠಿರನ ಪ್ರಶ್ನೆಯನ್ನರಿತು ಮಾರ್ಕಂಡೇಯನು ಮುಂದಣ ಕಥೆಯನ್ನು ಹೇಳಿದನು. ಬಳಿಕ ಶ್ರೀಮನ್ನಾರಾಯಣನಿಂದ ಚತುರ್ಮುಖಬ್ರಹ್ಮನು ಹುಟ್ಟಲು ಆತನಿಂದ



ಮರೀಚಿಬ್ರಹ್ಮನೂ, ಅವನಿಂದ ಕಶ್ಯಪಮುನಿಯೂ ಹುಟ್ಟಿದರು. ಕಶ್ಯಪನ ಧರ್ಮಪತ್ನಿಯರು ೧೩ ಮಂದಿಯಲ್ಲಿ ಹಿರಿಯಳಾದ ದಿತೀ ದೇವಿಯ ಗರ್ಭದಿಂದ ದೈತ್ಯರು ಹುಟ್ಟಿ ತಪೋಬಲದಿಂದ ಲೋಕ ಕಂಟಕರಾದರು, ಅದಿತಿಯ ಗರ್ಭದಿಂದ ಇಂದ್ರಾದಿ ದೇವತೆಗಳು ಹುಟ್ಟಿ ಸತ್ವಬಲದಿಂದ ಭಗವತ್ಪ್ರಿಯರಾದರು. ಕಶ್ಯಪಪುತ್ರನಾದ ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನಿಗೆ ವಿರೋಚನನು ಹುಟ್ಟಿ ದನು, ಅವನ ಮಗನಾದ ಬಲಿಯು ತಪೋಬಲಿಯಾಗಿ ದೈತ್ಯಕುಲ ಚಕ್ರವರ್ತಿಯೆನಿಸಿ ಇಂದ್ರಾದಿಗಳನ್ನು ಜಯಿಸಿ, ಸ್ವರ್ಗವನ್ನು ಕಸಿದು ಗೊಂಡು ದೇವತೆಗಳ ಹವಿರ್ಭಾಗಂಗಳನ್ನು ದೈತ್ಯರಿಗೇ ಕೊಡಿಸುತ್ತ ತ್ರಿಲೋಕರಾಜ್ಯವನ್ನಾಳುತ್ತಿದ್ದನು. ದೇವತೆಗಳು ದೈತ್ಯರಿಂದ ಅಪಹತರಾಗಿ ಕಷ್ಟಪಡುತ್ತಾ ಅಲ್ಲಲ್ಲಿ ಅಡಗಿಕೊಂಡು ತಾಯಿಗೆ ದೂರ ಹೇಳಲಾಗಿ ದೇವಮಾತೆಯಾದ ಅದಿತಿಯು ಕಶ್ಯಪಾನು

ಗ್ರಹದಿಂದ ವೈಷ್ಣವದೀಕ್ಷೆಗೊಂಡು ದೈತ್ಯನಿಗ್ರಹಾರ್ಥವಾಗಿ ನಾರಾಯಣನನ್ನು ಕುರಿತು ನಿಯಮದೊಡನೆ ತಪಸ್ಸು ಮಾಡುತ್ತಿದ್ದಳು. ಇತ್ತ ದೇವತೆಗಳು ನಿಜಗುರುವಾದ ಬೃಹಸ್ಪತಿಯೊಡನೆ ಬ್ರಹ್ಮದೇವನ ಬಳಿಗೆ ಹೋಗಿ ತಮ್ಮ ಕಷ್ಟಂಗಳನ್ನು ಬಿನ್ನೈಸಲಾಗಿ ಬ್ರಹ್ಮನು ಸುರನಿಕರ ಸಹಿತನಾಗಿ ವಿಷ್ಣುವಿನ ಸನ್ನಿಧಿಗೆ ಹೋಗಿ ಸಕಲವನ್ನೂ ವಿಜ್ಞಾಪಿಸಿ ಸ್ತುತಿಸುತ್ತಿರಲು ಆರ್ತತ್ರಾಣಪರಾಯಣನಾದ ಶ್ರೀಮನ್ನಾರಾಯಣನು ಇಂದ್ರನಿಗೆ ಮರಳಿ ರಾಜ್ಯವನ್ನಿತ್ತು ದೇವವರ್ಗವನ್ನು ಪಾಲಿಸುವೆನೆಂದು ಅಭಯವಿತ್ತು ಕಳುಹಿಸಿ ತಾನು ತಪಸ್ವಿನಿಯಾದ ಅದಿತಿಗೆ ಪ್ರತ್ಯಕ್ಷನಾಗಿ ವರವನ್ನು ಬೇಡೆನಲು ಆಕೆ ಭಗವಂತನನ್ನು ಕುರಿತು ಸ್ವಾಮೀ ನೀನೇ ನನ್ನ ಗರ್ಭದಲ್ಲಿ ಅವತರಿಸಿ ಇಂದ್ರಾದಿಗಳನ್ನು ಪಾಲಿಸಬೇಕೆಂದು ಪ್ರಾರ್ಥಿಸಿದಳು. ದೇವರು ಹಾಗೆಯೇ ಆಗಲೆಂದು ಸಮ್ಮತಿಸಿ ವೈಷ್ಣವಜ್ಯೋತಿಯನ್ನು ಅದಿತಿಯ ಪ್ರಾಣಮಾರ್ಗವಾಗಿ ಹೃದಯಕಮಲದಲ್ಲಿ ಆವಿರ್ಭವಿಸುವಂತೆ ಮಾಡಲು ವಿಷ್ಣುಗರ್ಭಿಯಾದ ಆ ಸತಿಯು ಮಹಾಧಿಕ ತೇಜಸ್ವಿನಿಯಾಗಿ ಗರ್ಭವು ಬೆಳೆಯತೊಡಗಿದಹಾಗೆಲ್ಲಾ ಇಂದ್ರಾದಿಗಳಿಗೆ ಜ್ಞಾನ ಬಲ ಕ್ರಿಯಾದಿ ಶಕ್ತಿವೃದ್ಧಿಯು ದೈತ್ಯರಿಗೆ ಜ್ಞಾನ ಬಲ ಕ್ರಿಯಾದಿ ಶಕ್ತಿಕ್ಷಯವು ಆಗುತ್ತ ಬಂದಿತು. ಬಲಿಚಕ್ರವರ್ತಿಯು ಹೀಗಾಗುತ್ತಿರುವುದನ್ನು ತಿಳಿದುಕೊಳ್ಳಲೋಸುಗ ತನ್ನ ಪಿತಾಮಹನಾದ ಪ್ರಹ್ಲಾದನನ್ನು ಕೇಳಲು ಯೋಗನಿಷ್ಠನಾಗಿ ಅಪರೋಕ್ಷಜ್ಞಾನದಿಂದ ತತ್ವವನ್ನು ತಿಳಿದು ಇಂದ್ರಾನುಗ್ರಹಾರ್ಥವಾಗಿ ಶ್ರೀಹರಿಯು ಅದಿತಿಯ ಗರ್ಭವಲ್ಲಿ ಆವಿರ್ಭವಿಸಿದುದರಿಂದ ದೈತ್ಯರಿಗೆ ಶಕ್ತಿಕ್ಷಯವಾಗುತ್ತಿದೆ ಕಡೆಗೆ ನನ್ನ ತಂದೆಯಾದ ಹಿರಣ್ಯಕಶಿಪುವಿನ ಹಾಗೆ ದೈತ್ಯರ ಕುಲವೆಲ್ಲವೂ ದೈತ್ಯಾರಿಯಾದ ವಿಷ್ಣುವಿನಿಂದಲೇ ನಿಗ್ರಹಿಸಲ್ಪಟ್ಟು ವಿಷ್ಣುವೇ ಸರ್ವೋತ್ತಮನೆನ್ನುತಲೂ ಬಲಿಯು ಬಲಗರ್ವಿತನಾಗಿ ವಿಷ್ಣುವನ್ನು ಲೆಕ್ಕಿಸದೆ ಪಳಿಯಲಾಗಿ ಭಾಗವತ ಶಿರೋಮಣಿಯಾದ ಪ್ರಹ್ಲಾದನು ನರಹರಿದೂಷಣೆಯನ್ನು ಸೈರಿಸಲಾರದೇ ಸಿಟ್ಟಿನಿಂದ ಎಲಾ ಬಲಿಯೇ ನೀನು ದೈತ್ಯವರ್ಗದೊಡನೆ ಶ್ರೀಹರಿಯಿಂದ ವಂಚಿತನಾಗಿ ನಿಗ್ರಹವನ್ನು ಪಡೆದು ಪಾತಾಳವನ್ನು ಸೇರುವನಾಗೆಂದು ಶಾಪವನ್ನು ಕೊಟ್ಟನು. ಆಗ ಬಲಿಯು ಭೀತನಾಗಿ ವಿವೇಕವನ್ನು ತಂದುಕೊಂಡು ಪ್ರಹ್ಲಾದಂಗೆರಗಿ ವಿಧೇಯನಾಗಿ ತನ್ನ ಕ್ಷೇಮವನ್ನು ಪ್ರಾರ್ಥಿಸಲು ಪ್ರಹ್ಲಾದನು ಕರುಣಿಸಿ, ಎಲೈ ಕಂದನೇ? ನೀನು ಇದುವರೆಗೂ ದೇವತೆಗಳಿಗೆ ದ್ರೋಹಿಯಾಗಿ ಯಜ್ಞಭಾಗಂಗಳನ್ನು ಅಪಹರಿಸಿದುದಲ್ಲದೆ ಹಿರಿಯನಾದ ನನ್ನ ಮಾತನ್ನು ಮೀರಿ ಹರಿಯನ್ನು ನಿಂದಿಸಿದ್ದರಿಂದ ನಿನ್ನ ಹಮ್ಮಿಗೆ ತಕ್ಕಂತೆ ನೀನು ವಿಷ್ಣುವಿನಿಂದ ಶಿಕ್ಷೆಯನ್ನು ಅನುಭವಿಸದೇ ತೀರದು, ನನ್ನ ಶಾಪವು ಹುಸಿಯಾಗಲಾರದು, ಆದರೆ ಈಗ ನೀನು ನನ್ನ ಮಾತುಗಳನ್ನು ಕೇಳುವವನಾದರೆ ಇನ್ನುಮೇಲಾದರೂ ಸರ್ವೇಶ್ವರನಿಗೆ ಭಕ್ತನಾಗಿ ವಿಷ್ಣುಧರ್ಮಗಳನ್ನು ಪಾಲಿಸುತ್ತಾ ಲೋಭಾದಿಗಳಂ ತೊರೆದು ಯಜ್ಞಪುರುಷನನ್ನು ಆರಾಧಿಸುತ್ತಿದ್ದರೆ ವಿಷ್ಣುವಿನದೆಸೆಯಿಂದ ನಿನಗುಂಟಾಗುವ ನಿಗ್ರಹವೇ ಅನುಗ್ರಹರೂಪವಾಗಿ ಪರಿಣಮಿಸುವುದೆಂದು ಆಶೀರ್ವದಿಸಿ ತಾನು ತಪಸ್ಸುಮಾಡಲು ಹೊರಟುಹೋದನು.

ಇತ್ತಲಾ ಬಲಿಚಕ್ರವರ್ತಿಯು ಸುರವೈರಿಯಾದರೂ ತನ್ನ ಅಸುರಕೃತ್ಯಗಳನ್ನು ತ್ಯಜಿಸಿ ದುರ್ಗುಣಗಳನ್ನು ಬಿಟ್ಟು ವಿಷ್ಣುಭಕ್ತನಾಗಿ ತನ್ನ ರಾಜ್ಯದೊಳಗಾಗಿ ಬೇಡುವಂಥಾ ದೀನರಿಲ್ಲದಂತೆ ದಾನ ಧರ್ಮ ಪರೋಪಕಾರಗಳನ್ನು ಮಾಡುತ್ತಾ ಬ್ರಾಹ್ಮಣರನ್ನು ಸ್ತುತಿಸುತ್ತಾ ಧರ್ಮವನ್ನು ನಡೆಸುತ್ತಿರಲಾಗಿ ಆ ಬಲಿಯ ರಾಜ್ಯದಲ್ಲಿ ಕಾಲವೃಷ್ಟಿಯೂ ಪ್ರಜಾಸೌಖ್ಯವು ಹೆಚ್ಚುತ್ತಾ ಅವನ ಪುಣ್ಯಕೀರ್ತಿಗಳು ಲೋಕೋತ್ತರಗಳೆನಿಸಿ ಬೆಳಗುತ್ತಿದ್ದವು.

ಅತ್ತಲಾ ಶ್ರೀಮನ್ನಾರಾಯಣನು ಭಾದ್ರಪದ ಶುಕ್ಲ ದ್ವಾದಶೀ ಶ್ರವಣ ನಕ್ಷತ್ರ ಮಧ್ಯಾಹ್ನ ಸಮಯದ ಧನುರ್ಲಗ್ನದಲ್ಲಿ ಆ ದಿತಿಯಗರ್ಭದಿಂದ ಕೋಟಿಸೂರ್ಯ ಪ್ರಕಾಶನಾಗಿ ಶ್ರೀ ವಿಷ್ಣು

ಚಿಹ್ನೆಗಳೊಡನೆ ವಾಮನಮೂರ್ತಿಯಾಗಿ ಅವತರಿಸಲು ದೇವರ್ಕಳು ಹುವ್ವಿನಮಳೆಯನ್ನು ಸುರಿಸಿದರು. ಬ್ರಹ್ಮಾದಿ ದೇವತೆಗಳೂ, ದೇವಋಷಿಗಳೂ, ಬ್ರಹ್ಮಋಷಿಗಳೂ ಸಿದ್ಧರೂ ಬಂದು ಶ್ರೀಹರಿಯನ್ನು ವೇದಾಂತವಾಕ್ಯಗಳಿಂದ ಸ್ತುತಿಸುತ್ತಿದ್ದರು. ದೇವದುಂದುಭಿಗಳು ಮೊಳಗುತ್ತಿದ್ದವು. ಆಗಲೇ ಶ್ರೀ ವಾಮನಮೂರ್ತಿಯು ಕಶ್ಯಪನನ್ನು ಕರುಣಿಸಿ ಅದಿತಿಗೆ ಸಂತಸವಿತ್ತು ಸಂರಕ್ಷಿಸಿ ಅಭಯವಿತ್ತು ಬ್ರಹ್ಮಋಷಿಗಳಿಗೆ ಪ್ರಸನ್ನನಾಗಿ ಯಾಮಮಾತ್ರದೊಳು ೭ ವರುಷಗಳು ತುಂಬಿದ ಗರ್ಭಾಷ್ಟಮ ವಯಸ್ಕನಾದ ವಟುವಾಗಲು ಕಶ್ಯಪಮುನಿಯು ಉಪನಯನವನ್ನು ಮಾಡಿದನು. ಬ್ರಹ್ಮದೇವನು ಭಕ್ತಿಯಿಂದ ಜ್ಞಾನಮಯವಾದ ಕೃಷ್ಣಾಜಿನವನ್ನು ಸಮರ್ಪಿಸಿದನು. ಬೃಹಸ್ಪತಿಯು ಬ್ರಹ್ಮಸೂತ್ರವೆನಿಸುವ ಯಜ್ಞೋಪವೀತವನ್ನೂ ಮರೀಚಿಯು ಪಾಲಾಶದಂಡವನ್ನೂ, ವಶಿಷ್ಠನು ಕಮಂಡಲವನ್ನು, ಅಂಗಿರಸನು ಕೌಪೀನ ಕಟಿಸೂತ್ರಗಳನ್ನೂ, ಪುಲಹಮುನಿಯು ಜಪಮಾಲೆಯನ್ನೂ, ಪುಲಸ್ತ್ಯನು ಮಾಂಜಿಷ್ಟವಸ್ತ್ರವನ್ನೂ, ಕ್ರತುವು ಛತ್ರವನ್ನೂ ತಂದಿತ್ತರು. ಶ್ರೀ ವಾಮನಮೂರ್ತಿಯು ಭಸ್ಮೋದ್ಧೂಳಿತ ವಿಗ್ರಹನಾಗಿ ಗೋಪಿಚಂದನೋರ್ಧ್ವಪುಂಡ್ರಧಾರಿಯಾಗಿ ದೇವತೆಗಳಿಂದರ್ಪಿಸಲ್ಪಟ್ಟ ಪಾದುಕೆಗಳನ್ನು ಮೆಟ್ಟಿ ಶಿಷ್ಯರಾಗಿ ಬಂದ ವೇದಗಳಿಂದ ಸೇವಿಸಲ್ಪಡುತ್ತಾ ಅಕ್ಷರಮಾತೃಕಾರೂಪವಾದ ಜಪಸರವಂ ಪಿಡಿದು ಬ್ರಹ್ಮಜ್ಯೋತಿರ್ಮಯನಾಗಿರುವ ಶ್ರೀ ಸಚ್ಚಿದಾನಂದಮೂರ್ತಿಯು ನೋಡಿದವರ ನೇತ್ರಗಳಿಗೆ ಬ್ರಹ್ಮಾನಂದವನ್ನೀಯುತ್ತಾ ಭರದ್ವಾಜನ ಹಸ್ತವನ್ನು ಪಿಡಿದು ಬ್ರಹ್ಮಸಭಾ ಪುರಸ್ಕೃತನಾಗಿ ವೇದಸ್ವರದ ಮಂಗಳ ಘೋಷದೊಡನೆ ಪವಿತ್ರಪಾಣಿಯಾಗಿ ಅಲ್ಲಿಂದ ಹೊರಟು ಮೆಲ್ಲನೆ ವಿಲಾಸದಿಂದ ಅಡಿಗಳನ್ನಿಡುತ್ತ ಬರುತ್ತಿರಲು ಶ್ರೀ ವಾಮನಮೂರ್ತಿಯ ಪಾದವಿನ್ಯಾಸಗಳಿಂದ ವನ ಪರ್ವತ ಸಾಗರ ಸಹಿತವಾದ ಭೂಗೋಳವೇ ಜಗ್ಗಿ ನಡುಗುತಲಿತ್ತು. ಆತನ ನಿಸರ್ಗ ಬ್ರಹ್ಮತೇಜದಿಂದ ಲೋಕಗಳೆಲ್ಲವೂ ಬೆಳಗುತಲಿದ್ದವು. ಇಂತು ವೈಭವದೊಡನೆ ಶ್ರೀ ವಾಮನಮೂರ್ತಿಯು ತನ್ನ ಭಕ್ತನಾದ ಪ್ರಹ್ಲಾದನ ವಚನವನ್ನು ಸತ್ಯಗೊಳಿಸಿ ಅವನ ವಂಶದವರನ್ನು ತಾನು ಕೊಲ್ಲುವದಿಲ್ಲವೆಂದು ಹೇಳಿದ ಅಭಯವನ್ನು ಸಾರ್ಥಕಗೊಳಿಸಲೋಸುಗ ಪೂರ್ವದಲ್ಲಿ ದುಷ್ಟನಾಗಿದ್ದ ಬಲಿಯು ಮಾಡಿದ್ದ ಪಾಪಗಳಿಗೆ ಶಿಕ್ಷೆಯನ್ನು ವಿಧಿಸಲೋಸುಗ ಭಕ್ತರಾದ ಇಂದ್ರಾದಿ ದೇವತೆಗಳನ್ನು ಪೊರೆದು ವೇದಮಾರ್ಗವನ್ನು ಪ್ರತಿಷ್ಠಿಸಲು ಈಚೆಗೆ ಕೇವಲ ಭಕ್ತನಾಗಿ ಧರ್ಮವನ್ನಾಚರಿಸುತ್ತಿರುವ ಬಲಿಯನ್ನು ಅನುಗ್ರಹಿಸಲೋಸುಗ ತಾನು ಮಾಡುವ ನಿಗ್ರಹವೇ ಬಲಿಗೆ ಅನುಗ್ರಹವಾಗುವಂತೆ ತಂತ್ರವನ್ನು ಯೋಚಿಸಿ ಬಲಿಚಕ್ರವರ್ತಿಯ ಯಜ್ಞವಾಟಿಕೆಗೆ ಬರುತ್ತಿದ್ದನು. ಇತ್ತ ಹರಿಪ್ರೀತ್ಯರ್ಥವಾಗಿ ವಿಶ್ವಜಿದ್ಯಾಗಕ್ಕೆ ಸಂಕಲ್ಪಿಸಿ ಯಕ್ಷದೀಕ್ಷಿತನಾಗಿದ್ದ ಬಲಿಚಕ್ರವರ್ತಿಯು ಆಕಸ್ಮಿಕವಾಗಿ ಸಂಭವಿಸುತ್ತಿರುವ ಭೂಕಂಪಾದಿಗಳನ್ನು ನೋಡಿ ಆಶ್ಚರ್ಯಯುಕ್ತನಾಗಿ ತಮ್ಮ ಗುರುವಾದ ಶುಕ್ರಾಚಾರ್ಯನಿಗೆ ನಮಸ್ಕರಿಸಿ ಬದ್ಧಾಂಜಲಿಪುಟನಾಗಿ ಬೆಸಗೊಂಡನು. ಸರ್ವಜ್ಞರಾದ ಗುರುಗಳೇ, ಭೂಗೋಳದಲ್ಲಿ ಪರ್ವತಾದಿಗಳಿಗೆ ಸಂಭವಿಸುತ್ತಿರುವ ಚಲನಾದಿಗಳಿಗೆ ನಿಮಿತ್ತವೇನು, ತ್ರೇತಾಗ್ನಿಗಳು ಪ್ರಜ್ವಲಿಸದೇ ಶಾಂತವಾಗಲು ನಿಮಿತ್ತವೇನು, ದೈತ್ಯಕೋಟಿಗಳು ಆ ಕಾಲದಲ್ಲಿ ಭೀತರಾಗುವದಕ್ಕೆ ಕಾರಣವೇನೆಂದು ಕೇಳಲು ಶುಕ್ರಾಚಾರ್ಯನು ಅಂತರ್ಮುಖನಾಗಿ ಯೋಗಬಲದಿಂದ ಎಲ್ಲವನ್ನೂ ತಿಳಿದು, ಬಹಿರ್ಮುಖನಾಗಿ ಎಲೈ ಸುರೇಂದ್ರನೇ, ಜಗನ್ನಾಯಕನಾದ ಶ್ರೀ ಮಹಾವಿಷ್ಣುವು ದೇವತೆಗಳನ್ನು ಸಲಹಲೋಸುಗ ನಿನಗೆ ನಿಗ್ರಹಾನುಗ್ರಹಗಳೆರಡನ್ನೂ ಮಾಡಲು ತನ್ನ ಪ್ರತಿಜ್ಞೆಯನ್ನೂ ಭಾಗವತನಾದ ಪ್ರಹ್ಲಾದನ ವಚನವನ್ನು ಸ್ಥಿರಗೊಳಿಸಲೋಸುಗ ತಾನು ದೇವಮಾತೆಯಾದ ಅದಿತಿಯ ಗರ್ಭದಲ್ಲಿ ವಾಮನಮೂರ್ತಿಯಾಗಿ ಅವತರಿಸಿ ಬ್ರಹ್ಮಚಾರಿಯ ರೂಪದಿಂದ ನಿನ್ನನ್ನು ಬೇಡಲೋಸುಗ ಕಪಟದಿಂದ ಈ ಯಜ್ಞಶಾಲೆಗೆ

ಬರುತ್ತಿರುವನು. ವಿಶ್ವಂಭರನಾದ ಆ ಮಹಾಪುರುಷನ ಪಾದವಿನ್ಯಾಸಗಳಿಂದ ಹೀಗೆ ಭೂಕಂಪಾದಿಗಳೆಲ್ಲವೂ ಸಂಭವಿಸುತ್ತಲಿವೆ, ಆತನು ಬಂದು ಯಾಚಿಸಿದಾಗ ನೀನು, ಸರ್ವಪೂರ್ಣನಾದ ನಿನಗೆ ನಾನು ಕೊಡತಕ್ಕದ್ದೇನಿದೆ ಎಂದು ಮೊದಲಾದ ವಿನಯ ಭಕ್ತಿ ಸ್ತುತಿ ವಚನಗಳಿಂದ ಸಿಟ್ಟುಬಾರದಂತೆ ಮಾತನಾಡುತ್ತಾ ನೀನು ತಪ್ಪಿಸಿಕೊಳ್ಳಬೇಕೇ ಹೊರತು ಕೇಳಿದ್ದನ್ನು ಕೊಡುವೆನೆಂದು ವಾಗ್ದಾನವನ್ನು ಮಾಡಿದರೆ ಆ ಕುಹನಾವಟುವು ಅಲ್ಪವನ್ನು ಬೇಡಿ ನಿನ್ನ ಸರ್ವೈಶ್ವರ್ಯವನ್ನೂ ಸೆಳೆದುಕೊಂಡು ನಿಮ್ಮ ದೈತ್ಯಕುಲವನ್ನೇ ಅಧೋಗತಿಗೆ ತರುವನು ನೀನೂ ಕೆಟ್ಟು ನಿನ್ನ ಕುಲವನ್ನೂ ಕೆಡಿಸಬೇಡ, ಬಾಹ್ಯೋಪಚಾರಗಳಿಂದಲೇ ತೃಪ್ತಿಗೊಳಿಸುತ್ತಾ ಶುಷ್ಕವಚನಗಳಿಂದ ಕಾಲಹರಣಮಾಡಿ ಯಜ್ಞಕರ್ಮವನ್ನು ಪೂರ್ತಿಗೊಳಿಸಿ ಈ ದುರ್ಘಟನವನ್ನು ದಾಟಿಕೋ ಜಾಗರೂಕನಾಗಿರೆಂದು ಹೇಳಲು ಬಲಿಚಕ್ರವರ್ತಿಯು ಪ್ರಹ್ಲಾದನ ಅನುಗ್ರಹದಿಂದ ತನಗುಂಟಾದ ಸತ್ವ ಸಂಸ್ಕಾರದಿಂದ ತನ್ನ ವಿವೇಕ ಧರ್ಮನಿಷ್ಠೆಗಳನ್ನು ಬಿಡದೇ ಶುಕ್ರಾಚಾರ್ಯನಿಗೆ ಹೀಗೆ ಪೇಳಿದನದೆಂತೆನೆ.

ಎಲೈ ಆಚಾರ್ಯನೇ! ಶಿಷ್ಯರಿಗೆ ದುರ್ಬುದ್ಧಿ ಹುಟ್ಟಿದಾಗ ಆಚಾರ್ಯರು ಸುಬುದ್ಧಿಯನ್ನು ಕಲಿಸಬೇಕಲ್ಲದೆ, ಶಿಷ್ಯರಿಗಿದ್ದ ಸುಬುದ್ಧಿಯನ್ನೂ ಕೆಡಿಸುವದು ಯಾವ ಧರ್ಮ? ಹುಟ್ಟಿದ ಪ್ರಾಣಿಗಳಿಗೆ ನಾಶವು ಸಂಭವಿಸದಿರುವುದೆ? ಕಷ್ಟಸುಖಗಳು ಯಾರಿಗೆ ಶಾಶ್ವತ? ಆತ್ಮೋದ್ಧಾರಣದಲ್ಲಿ ಲಕ್ಷ್ಯವನ್ನು ಬಿಟ್ಟು ನಶ್ವರವಾದ ಪ್ರಭುತ್ವವನ್ನು ಬಯಸಬಹುದೆ? ವಿವೇಕವನ್ನು ಪಡೆದುದಕ್ಕೆ ಪ್ರಯೋಜನವೇನು ? ಯಾರ ಪ್ರಸಾದವನ್ನು ನಾವು ಬಯಸುತ್ತಿರುವೆವೋ ಅಂಥಹ ಸರ್ವಸ್ವಾಮಿಯಾದ ಆ ಮಹಾತ್ಮನೇ ಪ್ರತ್ಯಕ್ಷನಾಗಿ ಬಂದು ಬೇಡುವದಾದರೆ ಆತನ ಸತ್ವವನ್ನು ಆತನಿಗೆ ಅರ್ಪಿಸಿದ ಮಾತ್ರದಿಂದ ನಾವು ಧನ್ಯರಾಗುವೆವು. ಭಾಗ್ಯ ಸಂಭವಿಸಿದಾಗ ನಾವಾಗಿ ತೊರೆದುಕೊಂಡರೆ ನಮ್ಮ ಆ ಆತ್ಮಕ್ಕೆ ಎಂದಿಗೂ ಸುಖವಾಗಲಾರದು. ಹೀಗಿರುವುದರಿಂದ ನಾನು ವಾಮನಮೂರ್ತಿಗೆ ನಾಸ್ತಿಯೆಂಬ ವಚನವನ್ನು ನುಡಿಯಲಾರೆನು ಅದರಿಂದ ನಾನೂ ಕೆಡುವದಿಲ್ಲ, ನನ್ನ ಮೂಲಕವಾಗಿ ಸಾಧುಗಳಾದ ದೈತ್ಯರೂ ಕೆಡುವುದಿಲ್ಲ, ಎಂದಿಗಾದರೂ ಹೇಗಾದರೂ ಕೊಡದೇ ಉಳಿಯುವದಿಲ್ಲ, ಆದ್ದರಿಂದ ಅತಿಥಿಯಾಗಿ ಬಂದ ಸತ್ಪಾತ್ರದಲ್ಲಿ ಬಯಸಿದ್ದನ್ನು ಯಥಾವಿಧಿಯಾಗಿ ದಾನಮಾಡುವೆನು ಧರ್ಮವನ್ನು ನಂಬಿ ಪ್ರವರ್ತಿಸುವ ನನಗೆ ಯಾವ ಅನರ್ಥಬಂದರೂ ಚಿಂತೆಯಿಲ್ಲ ಕಡೆಗೆ ಅದು ಸುಖವಾಗಿಯೇ ಪರಿಣಮಿಸೀತು, ಶ್ರೀಹರಿಗೋಸುಗ ನನ್ನ ಸರ್ವಸ್ವವನ್ನೂ ಸಮರ್ಪಿಸಿ ಆತನ ದಾಸ್ಯವೆ ಸಾಕು ಎನ್ನುವೆನು ಎನಲು ಬಲಿಚಕ್ರವರ್ತಿಯ ಆ ಧರ್ಮನಿಷ್ಠೆಯನ್ನು ನೋಡಿ ಶುಕ್ರನು ನಾಚಿಕೆಗೊಂಡು ಸುಮ್ಮನಾದನು. ಇತ್ತ ಶ್ರೀ ವಾಮನಮೂರ್ತಿಯು ಯಜ್ಞಶಾಲೆಗೆ ಬಿಜಯಮಾಡಲು ದುರ್ನಿರೀಕ್ಷಿತವಾದ ಆತನ ತೇಜಸ್ಸಿನಲ್ಲಿ ಯಜ್ಞವಾಟದ ಸಭಿಕರೆಲ್ಲರೂ ಪ್ರತ್ಯುತ್ಥಾನಾಭಿವಾದನಗಳಿಂದ ಸ್ತುತಿಸುತ್ತಿರಲಾಗಿ ಬಲಿಚಕ್ರವರ್ತಿಯು ಆಚಾರ್ಯಸಹಿತನಾಗಿ ಯಥಾವಿಧಿಯಿಂದ ಅತಿಥಿಯಂ ಬರಮಾಡಿಕೊಂಡು ಅರ್ಘ್ಯ ಪಾದ್ಯಾಸನಗಳಿಂದ ಸತ್ಕರಿಸಿ ನಿಂತಿರಲು, ಶ್ರೀ ವಾಮನಮೂರ್ತಿಯು ವೇದಶಾಸ್ತ್ರಸಮ್ಮತವಾಗಿರುವಂತೆ ಸಕಲ ಧರ್ಮರಹಸ್ಯಗಳನ್ನು ಸೂಚಿಸುವ ಜ್ಞಾನಮಯವಾದ ತನ್ನ ವೈಖರಿಯಿಂದ ಬಲಿಯ ನಿಮಿತ್ತೀಕರಿಸಿ ಸರ್ವರಿಗೂ ಉಪದೇಶವನ್ನು ಮಾಡುತ್ತಿರಲು ಬಲಿಚಕ್ರವರ್ತಿಯು ತಾನಾಗಿ ಅಂತರಾತ್ಮಪ್ರೇರಣೆಯಿಂದ ಸ್ವಾಮಿಾ ಸೇವಕನಾದ ನನ್ನಿಂದ ಆಗತಕ್ಕ ಸೇವೆಯೇನೆಂದು ಬೆಸಗೊಳ್ಳಲಾಗಿ ಶ್ರೀವಾಮನನು ಎಲೈ ಚಕ್ರವರ್ತಿಯೇ ದಾರಪರಿಗ್ರಹಾದಿ ಸಂಸಾರದ ತೊಡಕಿಲ್ಲದೇ ವಿರಕ್ತನಾಗಿ ಬ್ರಹ್ಮಚರ್ಯದಿಂದಿರುವ ನನಗೆ ರಾಜರಿಂದಾಗಬೇಕಾದದ್ದೇನಿದೆ ಆದರೆ ಅಗ್ನಿಕಾರ್ಯಕ್ಕೆ ಸ್ವಕ್ಷೇತ್ರದಲ್ಲಿ ಅಗ್ನ್ಯಾಯತನವನ್ನು ಕಲ್ಪಿಸಿಕೊಳ್ಳಬೇಕೆಂ

ದೊಂದು ಸಂಕಲ್ಪ ಹುಟ್ಟಿರುವುದರಿಂದ ಧಾರ್ಮಿಕನ ದ್ರವ್ಯವನ್ನು ಪರಿಗ್ರಹಿಸಬೇಕೆಂಬ ಅಪೇಕ್ಷೆಯಿಂದ ಮೂರಡಿಯ ನೆಲವನ್ನು ನಿನ್ನಿಂದ ಪಡೆಯಲು ಯಾಚಕನಾಗಿ ಬಂದಿರುವೆನು, ಈ ಯಜ್ಞಕಾಲದಲ್ಲಿ ಇಲ್ಲವೆನ್ನದೇ ದೃಢವಾಗಿ ಕೊಡುವುದಾದರೆ ವಾಗ್ದಾನವನ್ನು ಮಾಡು ಎಂದನು. ಆಗ ಬಲಿಚಕ್ರವರ್ತಿಯು ಆಶ್ಚರ್ಯಭರಿತನಾಗಿ ಎಲೈ ವಟೋತ್ತಮನೇ ಸರ್ವಸ್ವಂ ಬ್ರಾಹ್ಮಣೋ ಹರತಿಯೆಂಬ ಶಾಸ್ತ್ರಪ್ರಕಾರ ಅತಿಥಿಯಾದ ನೀನು ಯಜ್ಞದಲ್ಲಿ ಯಜಮಾನನಾಗಿರು, ನನ್ನ ಸರ್ವಸ್ವವನ್ನೂ ಪಡೆಕೊಳ್ಳುವದಕ್ಕೆ ಅರ್ಹನಾಗಿ ನಿನ್ನ ವಿರಕ್ತಸ್ವಭಾವದಿಂದ ಇಷ್ಟು ಅಲ್ಪವನ್ನು ಬೇಡುತ್ತಿರುವೆ ಆದರೂ ನಿನ್ನನ್ನು ಸಾಕ್ಷಾತ್ ಶ್ರೀಮನ್ನಾರಾಯಣಮೂರ್ತಿಯೆಂದು ತಿಳಿದು ನಿನ್ನ ಇಷ್ಟಪ್ರಕಾರ ಕೊಡುವೆನೆಂದು ವಾಗ್ದಾನವನ್ನು ಮಾಡಿ ವಿದ್ಯಾವಳಿಯೆಂಬ ಪತ್ನಿ ಸಹಿತನಾಗಿ ಸಂಕಲ್ಪವಂಗೈದು ಶ್ರೀವಾಮನಮೂರ್ತಿಗೆ ಯಥಾವಿಧಿಯಾಗಿ ಪಾದಪ್ರಕ್ಷಾಳನವನ್ನು ಮಾಡಿ ಮೂರು ಲೋಕಂಗಳಿಗೂ ಪ್ರತಿಯಾಗಿ ಮೂರಡಿಗಳ ಭೂಮಿಯನ್ನು ತುಲಸೀದಳ ಹಿರಣ್ಯ ಸಹಿತವಾಗಿ ಧಾರೆಯನ್ನೆರೆದುಕೊಡುವುದಕ್ಕೆ ಉದಕವನ್ನು ಹಾಕುವಾಗ ವಿದ್ಯಾವಳೀಕರಸ್ಥವಾದ ಕಮಂಡಲುವೆಂಬ ದ್ವಿಮುಖ ಪಾತ್ರೆಯ ತೀರ್ಥಪ್ರಣಾಳಿಯಲ್ಲಿ ಶುಕ್ರಾಚಾರ್ಯನು ಸೂಕ್ಷ್ಮರೂಪದಿಂದ ಪ್ರವೇಶಿಸಿ ಅಡ್ಡವಾಗಿ ನಿಂತು ದಾನಕ್ಕೆ ಪ್ರತಿಬಂಧಕವನ್ನು ಮಾಡಿದನು. ಸರ್ವಜ್ಞನಾದ ಶ್ರೀವಾಮನನು ತನ್ನ ಕೈನೀಡುವ ವ್ಯಾಜದಿಂದ ಅನಾಮಿಕಾಂಗುಳಿಯಲ್ಲಿದ್ದ ಪವಿತ್ರದ ದರ್ಭಾಗ್ರದಿಂದ ಶುಕ್ರಾಚಾರ್ಯನ ಕಣ್ಣನ್ನು ಚುಚ್ಚಲಾಗಿ ಅವನು ಏಕಾಕ್ಷನಾಗಿ ಹಿಂಜರಿದನು. ದಾನೋದಕಧಾರೆ ನಿರರ್ಗಳವಾಗಿ ಬೀಳುತಲೂ ಬಲಿಚಕ್ರವರ್ತಿಯು ನಮಮ ಎಂದು ಉದ್ದೇಶತ್ಯಾಗವನ್ನು ಪೇಳುತ್ತಾ ಆನಂದಾಶ್ರುಭರಿತನಾದನು. ಆ ಕಾಲದಲ್ಲಿ ಶ್ರೀವಾಮನನು ಭೂದಾನವನ್ನು ಪರಿಗ್ರಹಿಸಿ ಆಶೀರ್ವದಿಸುತ್ತಿರಲು ದೇವದುಂದುಭಿಗಳು ಮೊಳಗಿದವು ಬಲಿಚಕ್ರವರ್ತಿಯ ಶಿರಸ್ಸಿನ ಮೇಲೆ ಮಂದಾರಪುಷ್ಪ ವೃಷ್ಟಿಯು ಸುರಿಯಿತು. ಬಲಿಚಕ್ರವರ್ತಿಯು ಇಂತು ಜಗದೀಶ್ವರನ ಹಸ್ತದಲ್ಲಿ ಪ್ರತ್ಯಕ್ಷನಾಗಿ ಭೂದಾನಮಾಡಿ ಧನ್ಯನಾದನು. ಆಗ ಬಲಿಚಕ್ರವರ್ತಿಯನ್ನು ಆ ಸಭೆಯಲ್ಲಿದ್ದ ಸಮಸ್ತರೂ ಕೊಂಡಾಡಿದರು. ಬಲಿಯ ಪುಣ್ಯಕೀರ್ತಿಗಳು ಜಗದ್ಭರಿತಗಳಾದವು. ಇಂತು ಶ್ರೀವಾಮನ ಬ್ರಹ್ಮಚಾರಿಯು ಕಪಟವೇಷಧಾರಿಯಾಗಿ ಬ್ರಾಹ್ಮಣವೃತ್ತಿಯಿಂದ ಭೂಮಿಯನ್ನು ಪಡೆದು ಅಲ್ಲಿ ಆಗಲೇ ರೂಪಾಂತರವನ್ನು ಹೊಂದಿ ಬಲಿಯನ್ನು ನಿಗ್ರಹಿಸಿದನೆಂದು ಮಾರ್ಕಂಡೇಯ ಮಹಾಮುನಿಯು ಧರ್ಮರಾಯನಿಗೆ ಹೇಳಿ ಸುಮ್ಮನಾದನು.

ಶ್ರೀರಸ್ತು.

## ಶ್ರೀ ತ್ರಿ ವಿ ಕ್ರ ಮ ಲೀ ಲೆ.

ಅನಂತರದಲ್ಲಿ ಶ್ರೀ ವಾಮನಮೂರ್ತಿಯು ಕೂಡಲೇ ಅತ್ಯಾಶ್ಚರ್ಯಕರವಾಗಿ ಬೆಳೆದನು ಅವನ ಶರೀರವು ವಿಶ್ವಮೂರ್ತಿಯಾದ ವಿರಾಟ್ಪುರುಷನಂತಾಯಿತು. ಆ ವಿಶ್ವಂಭರನ ಬಾಹುಗಳು ಭೂಮಂಡಲವನ್ನು ತುಂಬಿದಂತಾದವು ಆತನ ಜಾನುಪ್ರದೇಶವು ಮೇಘಮಂಡಲವನ್ನು ಮೀರಿತು, ನಾಭಿಯು ಅಂತರಿಕ್ಷವನ್ನತಿಕ್ರಮಿಸಿತು, ತೋಳುಗಳು ದಿಕ್ಕುಗಳನ್ನು ವ್ಯಾಪಿಸಿದವು, ಕಣ್ಣುಗಳು ಸೂರ್ಯಚಂದ್ರಬಿಂಬಗಳಂತೆ ತೋರಿದವು ತಲೆಯು ಸ್ವರ್ಗಲೋಕದ ಮೇಲೆ ಕಾಣಿಸಿತು, ಇಂತು ಸಕಲ ತತ್ವಾತ್ಮಕನಾಗಿ ಸರ್ವದೇವಮಯನೆನಿಸಿ ಸರ್ವಭರಿತನಾಗಿ ಸರ್ವವನ್ನು ತನ್ನೊಳಡಗಿಸಿಕೊಂಡು ತೋರಿದ ಶ್ರೀಮಹಾವಿಷ್ಣುವಿನ ಮಾಯಾಮೂರ್ತಿಯು ಎಲ್ಲರಕಣ್ಣುಗಳಿಗೂ ಅತ್ಯದ್ಭುತವಾಗಿ ತೋರಿತು ಹೀಗೆ ಶ್ರೀ ವಾಮನಮೂರ್ತಿಯು ಬಲಿಚಕ್ರವರ್ತಿಯಿಂದ

ಅನುಜ್ಞಾತನಾಗಿ ತನ್ನ ಪಾದಗಳಿಂದ ನೆಲವನ್ನು ಅಳೆದುಕೊಳ್ಳಲು ಒಂದು ಹೆಜ್ಜೆಯಿಂದ ಭೂಮಂಡಲವೆಲ್ಲವನ್ನು ಅಳೆದು ತೋರಿಸಿ ಭೂಮಿಯೆಲ್ಲವೂ ನನಗೆ ಸಂದಿತು ಎಂದನು. ಮತ್ತೊಂದಡಿಯನ್ನು ಅಂತರಿಕ್ಷಕ್ಕೆ ನೀಡಿ ಅಳೆಯಲು ಊರ್ಧ್ವಲೋಕಗಳು ಮುಚ್ಚಲ್ಪಟ್ಟಂತಾದವು. ಆಗ ಶ್ರೀ ತ್ರಿವಿಕ್ರಮನ ಊರ್ಧ್ವಪಾದನ್ಯಾಸದಿಂದ ಬ್ರಹ್ಮಾಂಡದ ಊರ್ಧ್ವಕಟಾಹಭಿತ್ತಿಯು ಸಚ್ಛಿದ್ರವಾಗಿ ಒಡೆದು ಆ ತೂತಿನಿಂದ ಬ್ರಹ್ಮಾಂಡದ ಬಹಿರಾವರಣದಲ್ಲಿ ಭರಿತವಾಗಿ ವ್ಯೋಮಕೇಶ ಜಟಾಧೃತವಾದ ಅಲಕನಂದಾಖ್ಯ ಮಹಾಜಲೌಘವು ಆ ತೂತಿನಿಂದ ಬ್ರಹ್ಮಾಂಡದೊಳಗೆ ನುಗ್ಗಿ ಬರಲು ಸೃಷ್ಟಿಕರ್ತನಾದ ಬ್ರಹ್ಮದೇವನು ತನ್ನ ಸೃಷ್ಟಿಯೆಲ್ಲ ನಾಶವಾದೀತೆಂಬ ಶಂಕೆಯಿಂದ ಪ್ರಳಯಾಂತದಲ್ಲಿ ವಿಷ್ಣುವು ನಾರಾಯಣರೂಪದಿಂದ ಮಲಗಿ ನೀರಿನಮೇಲೆ ತೇಲಾಡುತ್ತಿದ್ದಾಗ ವಟಪತ್ರವನ್ನು ಆ ತೂತಿಗೆ ಮುಚ್ಚಿ ಮಹಾಜಲವು ಬ್ರಹ್ಮಾಂಡದೊಳಗೆ ಬಾರದೇ ನಿಲ್ಲುವಂತೆ ಮಾಡಿ ಮೊದಲು ಒಳಗೆ ನುಗ್ಗಿಬಂದ ಮಹಾಜಲವನ್ನು ಆಕರ್ಷಿಸಿ ತನ್ನ ಕಮಂಡಲದಲ್ಲಿ ತುಂಬಿಕೊಂಡು ಶ್ರೀ ತ್ರಿವಿಕ್ರಮನ ಚರಣವನ್ನು ಬ್ರಹ್ಮನು ಗಂಗೆಯನ್ನು ಪೂಜಿಸಿದನು. ಆ ಚರಣತೀರ್ಥವನ್ನು ಕಾಲರುದ್ರನು ಶಿರಸಾವಹಿಸಿ ತಾನು ಧನ್ಯನಾದನೆಂದುಕೊಂಡನು. ಇಂದ್ರಾದಿ ದೇವತೆಗಳೂ ಸನಕಾದಿ ಮುನಿಗಳೂ ಶ್ರೀ ತ್ರಿವಿಕ್ರಮಮೂರ್ತಿಯನ್ನು ಕೊಂಡಾಡುತ್ತ ನಮಸ್ಕರಿಸುತ್ತಿದ್ದರು.

ತ್ರಿವಿಕ್ರಮ ಚರಣತೀರ್ಥವನ್ನು ಧರಿಸಿದ್ದರಿಂದ ಸ್ಮಶಾನವಾಸಾದಿಗಳನ್ನು ಮಾಡಿ ಅಪವಿತ್ರನಾಗಿದ್ದ ಶಿವನು ಈಗ ಪವಿತ್ರನೆನಿಸಿ, ಹರಿಭಕ್ತರೊಳು ಅಗ್ರಣಿಯನಾದ ಮಹಾಭಾಗವತನಾಗಿ ಗಂಗಾಧರನಾಮವನ್ನು ಪಡೆದಿರುವನೆಂದು ವಿಷ್ಣುಭಾಗವತ ಪ್ರಮಾಣವಿದೆ ಎಂದು ವೈಷ್ಣವರೆನ್ನುವರು. ಶಿವನು ನಿಜಭಕ್ತ ಚರಣತೀರ್ಥವನ್ನು ತಾನೇ ಪ್ರೀತಿಯಿಂದ ಧರಿಸುವನೆಂದು ಹೇಳಿರುವದರಿಂದ ವಿಷ್ಣುವಿನಂತೆ ಶಿವಭಕ್ತರಾದ ತನ್ನ ಪಾದೋದಕವನ್ನೂ ಲಿಂಗಕ್ಕಭಿಷೇಕವನ್ನು ಮಾಡುವರು ಆಗ ಮಿಕ್ಕವರಾದ ವೀರಶೈವರು ಇನ್ನು ಶೈವಪುರಾಣಂಗಳಲ್ಲಿ ಗಂಗೆಯು ಪಾರ್ವತೀ ಹಸ್ತದಲ್ಲಿ, ಶಿವನೇತ್ರಗಳಿಂದಾವಿರ್ಭವಿಸಿ ಮರಳಿ ಶಿವಜಟಾಜೂಟವೊಳಡಗಿದಳೆಂದು ಹೇಳಲ್ಪಟ್ಟಿದೆ ಶಿವನು ವೇದಸಾರವನ್ನು ಸರ್ವದಾ ಶಿರಸಾವಹಿಸಿ, ಗಂಗಾಧರನೆನಿಸಿದನೆಂದು ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ. ರಾಮಾಯಣದಲ್ಲಿ ಹಿಮವತ್ಪುತ್ರಿಯಾದ ಗಂಗೆಯು ಸ್ವರ್ಗದಲ್ಲಿದ್ದು ಭಗೀರಥನಿಂದ ಧರಣಿಗೆ ತರಲ್ಪಡುವಾಗ ಶಿವನು ಗಂಗೆಯನ್ನು ಧರಿಸಿದನೆಂದು ಹೇಳಲ್ಪಟ್ಟಿದೆ. ವೈಷ್ಣವ ಪುರಾಣಗಳಲ್ಲಿ ಗಂಗೆಯು, ವಿಷ್ಣುಪಾದೋದ್ಭವೆಯೆಂದು ವರ್ಣಿಸಲಾಗಿದೆ, ಕವಿಗಳು ಗಂಗಾವತಾರವನ್ನು ಒಂಭತ್ತು ಬಗೆಯಾಗಿ ಬಣ್ಣಿಸಿರುವರು. ಸಚ್ಚಿದಾನಂದಾತ್ಮಕನಾದ ನಾರದವೆಂಬ ಮಹಾಜಲವೇ ನಾರಾಯಣನಿಗೆ ಅಯನವೆನಿಸಿರ್ಪುದು ಅದೇ ಗಂಗೆಯ ಮೂಲರೂಪವು ಇದನ್ನು ಧರಿಸಿದ ಶಿವನಿಗೆ ಆತ್ಮರೂಪನಾದ ವಿಷ್ಣುವೇ ಇದಕ್ಕೆ ವಿಷಯವಾಗಿರ್ಪನು ಗಂಗಾವತಾರಗಳು ಹಲವುಬಗೆಯಾಗಿ ಕಲ್ಪಭೇದದಿಂದಾಗಿದೆ ಮತ್ತು ಶುಕ್ರಾಚಾರ್ಯನು ತಪಸ್ಸುಮಾಡಿ ಶಿವಾನುಗ್ರಹದಿಂದ ಮರಳಿ ಕಣ್ಣನ್ನು ಪಡೆಕೊಂಡನೆಂದು ಕೆಲವು ಪುರಾಣಗಳಲ್ಲಿ ಹೇಳಿದೆ, ಶುಕ್ರನು ವಾಮನಾವತಾರದಿಂದ ಕಳೆದುಕೊಂಡಿದ್ದ ಏಕನೇತ್ರವನ್ನು ತಪೋಬಲದಿಂದ ಪಡೆದ ಕ್ಷೇತ್ರವು ಗಂಗಾತೀರದಲ್ಲಿ ಈಗಲೂ ವಹ್ನಿತೀರ್ಥವೆಂದು ಪ್ರಸಿದ್ಧವಾಗಿದೆ ಬಳಿಕ ತ್ರಿವಿಕ್ರಮರೂಪಿಯಾದ ಶ್ರೀ ವಾಮನನು ಬಲಿಯನ್ನು ಕುರಿತು ತನ್ನ ಮೂರನೆಯ ಹೆಜ್ಜೆಯನ್ನು ಎಲ್ಲಿರಿಸಿ ಅಳೆಯಬೇಕೆಂದು ಕೇಳಲು ವಿಷ್ಣುಮಾಯಾ ಮೋಹಿತನಾದ ಬಲಿಯು ಏನೂ ತೋರದೆ ತನ್ನ ತಲೆಯ ಮೇಲೆ ಇರಿಸಬೇಕೆಂದು ಪ್ರಾರ್ಥಿಸಲಾಗಿ ತ್ರಿವಿಕ್ರಮನು ತನ್ನ ಮೂರನೆಯ ಹೆಜ್ಜೆಯನ್ನು ಬಲಿಚಕ್ರವರ್ತಿಯ ತಲೆಯಮೇಲಿರಿಸಿ ಅವನನ್ನು ಪಾತಾಳಕ್ಕೆ ತುಳಿದನು ದೈತ್ಯಗಣಂಗಳು ತ್ರಿವಿಕ್ರಮನ ಮೇಲೆ ಪ್ರಯೋಗಿಸಿದ ದಿವ್ಯಾಸ್ತ್ರಶಸ್ತ್ರಂಗಳೆಲ್ಲವೂ ವ್ಯರ್ಥವಾಗಿ ಅವರೆಲ್ಲರೂ ತ್ರಿವಿಕ್ರಮನಿಗೆ

ಹೆದರಿ ಇಂದ್ರಾದಿಗಳನ್ನು ಪೀಡಿಸುತ್ತಿರಲೋಸುಗ ಪಾತಾಳವನ್ನು ಸೇರಿ ಬಲಿಯ ಬಳಿಯಲ್ಲಿ ನಿಂತರು. ವಿಷ್ಣುಭಕ್ತನಾದ ಬಲಿಯು ಶ್ರೀಹರಿಯನ್ನು ಸ್ತುತಿಸಿ ಸ್ವಾಮಿ ನೀನು ಸರ್ವದಾ ನನಗೆ ದರ್ಶನ ಕೊಡುತ್ತಾ ನನ್ನ ಬಳಿಯಲ್ಲಿಯೇ ಇರಬೇಕು. ನಾನು ಪ್ರತಿದಿನವೂ ನಿನ್ನನ್ನು ಭಜಿಸುತ್ತಾ ನಿನ್ನನ್ನು ದರ್ಶಿಸುತ್ತಾ ನಿನ್ನಿಂದ ರಕ್ಷಿಸಲ್ಪಡುತ್ತಿರಬೇಕು ಎಂದು ಪ್ರಾರ್ಥಿಸಲಾಗಿ ಶ್ರೀವಿಷ್ಣುವು ಬಲಿಯನ್ನು ಕರುಣಿಸಿ ಎಲೈ ಭಕ್ತನೇ ಹೆದರಬೇಡ, ನಿನ್ನ ಇಷ್ಟವನ್ನು ನೆರವೇರಿಸುವೆನು ನೀನು ಪಾತಾಳದಲ್ಲಿ ಬಲೀಂದ್ರನೆನಿಸಿಕೊಂಡು ದೈತ್ಯದಾನವ ರಾಕ್ಷಸ ಪಿಶಾಚ ಗಣಂಗಳನ್ನು ಪಾಲಿಸುತ್ತಾ ದೇವರಾಜನಂತೆ ಪೂಜ್ಯನಾಗಿ, ಸ್ವರ್ಗಮರ್ತ್ಯ ಲೋಕಂಗಳ ಭೋಗಂಗಳೆಲ್ಲವನ್ನೂ ಈ ಭೋಗಿ ಲೋಕದಲ್ಲಿಯೇ ಅನುಭವಿಸುತ್ತ ಸುಖವಾಗಿರು ನಾನು ಗದಾಧರಮೂರ್ತಿಯಾಗಿ, ನಿನ್ನ ಮನೆಯ ಬಾಗಿಲನ್ನು ಕಾಯುತ್ತಿರುವೆನು. ಈ ವೈವಸ್ವತಮನ್ವಂತರವು ಕಳೆಯುವತನಕ ಪ್ರತಿಸಂವತ್ಸರವು ಕಾರ್ತಿಕಶುಕ್ಲ ಪ್ರಾಥಮ್ಯದಿನ ಮನುಷ್ಯರಿಂದ ಬಲೀಂದ್ರನೆಂದು ಪೂಜಿಸಲ್ಪಡುವನಾಗು ಮಂತ್ರಲೋಪವಾಗಿ ಶ್ರದ್ಧಾರಹಿತವಾಗಿ ದಕ್ಷಿಣೆಯಿಲ್ಲದೇ ಯಾರು ಸತ್ಕರ್ಮಗಳನ್ನಾಚರಿಸುವರೋ ಅವರ ಡಾಂಭಿಕಕರ್ಮದ ಫಲವೆಲ್ಲವೂ ದೇವತೆಗಳಿಗೆ ಸೇರದೆ ನಿನಗೆ ಪ್ರೀತಿಕರವಾಗುತ್ತಿರಲಿ, ಮತ್ತು ನನ್ನ ಭಕ್ತರು ನನ್ನನ್ನು ಪೂಜಿಸಿದಬಳಿಕ, ನನ್ನ ಭಕ್ತರಾದ ಸನಕ ನಾರದಾದಿ ಪರಮಭಾಗವತರನ್ನು ಪೂಜಿಸುವಾಗ ಅವರೊಡನೆ ನಿನ್ನನ್ನೂ ಪೂಜಿಸಲಿ, ಮುಂದಣ ಸೂರ್ಯಸಾವರ್ಣಿಕ ಮನ್ವಂತರದಲ್ಲಿ ನೀನೇ ಇಂದ್ರಾಧಿಕಾರವನ್ನು ಪಡೆದು ತ್ರಿಲೋಕಾಧಿಪತಿಯಾಗಿದ್ದು ಕಡೆಗೆ ನನ್ನ ಪರಮಪದವಾದ ಶ್ರೀವೈಕುಂಠಕ್ಕೆ ಬರುವವನಾಗು ಎಂದು ಅನುಗ್ರಹಿಸಿ ಕಳುಹಿಸಿ ತಾನು ಶ್ರೀ ತ್ರಿವಿಕ್ರಮರೂಪವನ್ನು ಪರಿಹರಿಸಿ ವಾಮನಮೂರ್ತಿಯಾಗಿಯೇ ಸ್ವರ್ಗದಲ್ಲಿ ಉಪೇಂದ್ರನೆನಿಸಿವ ದೇವರಾಜನಿಗೆ ಸಹಾಯಮಾಡುತ್ತಾ ಮತ್ತೊಂದಂಶದಿಂದ ಬಲಿಯ ದ್ವಾರಪಾಲಕನಾಗಿರುತ್ತಾ ಅನಂತಾಂಶುಗಳಿಂದ ಸೂರ್ಯಬಿಂಬದಂತೆ ಶ್ವೇತದ್ವೀಪಾದಿ ದಿವ್ಯದೇಶಗಳಲ್ಲಿರುತ್ತಾ ಸಕಲಾತ್ಮಸ್ವರೂಪನಾಗಿ ಸತ್ಯಾತ್ಮಕನಾಗಿ ತಾನು ನಿರಂಶನಾದರೂ ಅಖಂಡನಾದರೂ ನಿರ್ಗುಣನಾದರೂ, ನಿರಂಜನನಾದರೂ, ನಿಜಮಾಯೆಯಿಂದ ಅನಂತ ಕಲ್ಯಾಣಗುಣನೆನಿಸಿ ಅಚಿಂತ್ಯವಾದ ಅಪರಮಿತಾದ್ಭುತ ಶಕ್ತಿಗಳನ್ನು ವಹಿಸಿ ಶ್ರೀ ವೈಕುಂಠವನ್ನು ಸೇರಿದನು ಈ ವಾಮನ ತ್ರಿವಿಕ್ರಮಾವತಾರ ಕಥೆಯನ್ನು ಕೇಳಿದವರು ಶ್ರೇಯೋವಂತರಾಗುವರು.

ಮತ್ಸ್ಯ ಕೂರ್ಮ ವರಾಹ ನರಸಿಂಹ ತ್ರಿವಿಕ್ರಮಾವತಾರಂಗಳು ಶ್ರೀ ರುದ್ರನಿಂದ ಸಂಹೃತಗಳಾಗಿ ಅವುಗಳ ಅಸ್ಥಿಚರ್ಮಂಗಳು ಮಹಾಕಾಲರುದ್ರನಿಗೆ ಆಭರಣಗಳಾಗಿರುವವೆಂದು ಶೈವಪುರಾಣಗಳಲ್ಲಿ ಹೇಳಲ್ಪಟ್ಟಿದೆ, ವೈಷ್ಣವಪುರಾಣಗಳಲ್ಲಿ ಶೈವಪುರಾಣಗಳನ್ನು ನಿರಾಕರಿಸೋಣವಾಗಿದೆ. ಹಾಗೆಯೇ ಶೈವಪುರಾಣಗಳಲ್ಲಿ ವೈಷ್ಣವರನ್ನು ನಿರಾಕರಿಸಲಾಗಿದೆ, ಸರ್ವತ್ರ ವೇದಾಂತಶಾಸ್ತ್ರದಲ್ಲಿ ಹರಿಹರರೀರ್ವರೂ ಪರಮೇಶ್ವರ ರೂಪಗಳಾದ್ದರಿಂದ ಸಗುಣಬ್ರಹ್ಮರೂಪರೂಪಗಳಿಗೆ ಆ ಭೇದವೆನುತಲೂ, ಭೇದಕಲ್ಪನವು ಲೀಲಾವಿನೋದ ಮಾತ್ರವೆನುತಲೂ ಹೇಳಲ್ಪಟ್ಟಿದೆ. ನಿಗ್ರಹಾನುಗ್ರಹಂಗಳು ಶಿವಕೇಶವರ ಕಾರ್ಯಗಳಾದ್ದರಿಂದ ಉಭಯವಿಶಿಷ್ಟಂಗಳಾದ ಅವತಾರಗಳೆಲ್ಲ ಶಂಕರನಾರಾಯಣ ಸ್ವರೂಪಗಳೆಂದು ತಾತ್ವಿಕರು ಅನುಸಂಧಾನಗೈಯುತ್ತಿರುವರು, ಹೇಗಾದರೂ ಭಗವದವತಾರ ಕಥೆಗಳು ಸಂಸಾರಿಗಳಿಗೆ ಶ್ರವಣಮನನಾದಿಗಳಿಂದ ನಿಶ್ರೇಯಸ್ಸಾಧನಗಳು ಎಂಬುದು ವೇದಸಮ್ಮತವಾಗಿದೆ ಎಂದು ಮಾರ್ಕಂಡೇಯ ಮಹಾಮುನಿಯು ಧರ್ಮರಾಯನಿಗೆ ಹೇಳಿ ಸುಮ್ಮನಾದನು.

ಇಂತು ವಾಮನಾವತಾರದ ಕಥೆ ಸಮಾಪ್ತಂ. ಶ್ರೀ ಶ್ರೀ॥

# ಪರಶುರಾಮಾವತಾರದ ಕಥೆ.

ಅನಂತರದಲ್ಲಿ ಧರ್ಮಜನು ಪ್ರಶ್ನೆಮಾಡಲು ಮಾರ್ಕಂಡೇಯ ಮುನೀಶ್ವರನು ಮುಂದಣ ವೃತ್ತಾಂತವನ್ನು ಹೇಳತೊಡಗಿದನು. ಶ್ರೀ ಮಹಾವಿಷ್ಣುವಿನ ದಶಾವತಾರಗಳಲ್ಲಿ ಪರಶುರಾ



ಮಾವತಾರಕ್ಕೆ ಕಾರಣವೇನೆಂದರೆ, ಚಕ್ರಪಾಣಿಯಾದ ಶ್ರೀಹರಿಯು ತನ್ನ ಸುದರ್ಶನಾಸ್ತ್ರದಿಂದ ದೈತ್ಯಕೋಟಿಗಳನ್ನು ಸಂಹರಿಸುತ್ತ ಭೂಭಾರವನ್ನು ಪರಿಹರಿಸಿ ದೈತ್ಯಾರಿಯೆಂಬ ಬಿರುದನ್ನು ವಹಿಸಿ ಸರ್ವಸತ್ವತ್ಯನಾಗಿರಲು ಆಗ ಚಕ್ರಾಯುಧಕ್ಕೆ ಅಭಿಮಾನಿಯಾದ ಸುದರ್ಶನ ಮಂತ್ರ ದೇವತೆಯು ತನ್ನ ಶಕ್ತಿಯಿಂದ ದೈತ್ಯಸಂಹಾರವಾಯಿತು, ತಾನು ಜಲಂಧರಾಸುರನ ಸಂಹಾರಕ್ಕೋಸುಗ ಪರಮೇಶ್ವರನಿಂದ ರೂಪಿಸಲ್ಪಟ್ಟ ಸಹಸ್ರಾರ ಯಂತ್ರದ ಶಕ್ತಿಯಾಗಿರುವೆನು ಈ ವಿಷ್ಣುವು ಸಹಸ್ರ ಕಮಲಾರ್ಚನದಿಂದ ಪರಮೇಶ್ವರನನ್ನು ಮೆಚ್ಚಿಸಿ ತನ್ನನ್ನು ಸಂಪಾದಿಸಿ ತನ್ನ ಬಲದಿಂದ ದೈತ್ಯರನ್ನು ಕೊಂದು ಇಷ್ಟು ಖ್ಯಾತಿಯನ್ನು ಪಡೆದಿರುವನು. ವಿಷ್ಣುಬಲಕ್ಕಿಂತಲೂ ತನ್ನ ಬಲವೇ ಅಧಿಕವೆಂಬ ಹಮ್ಮುಹೆಚ್ಚಿತ್ತು, ಸರ್ವಜ್ಞನಾದ ಶ್ರೀವಿಷ್ಣುವು ಸ್ವಾಭಾವಿಕ ಜ್ಞಾನ ಬಲ ಕ್ರಿಯಾಶಕ್ತಿ ಪೂರ್ಣನಾಗಿದ್ದರೂ ಸ್ವೇಚ್ಛಾವಿಲಾಸದಿಂದ ತನ್ನವರನ್ನು ಗೌರವಿಸಲೋಸುಗ ತನಗೆ ಪರಾಪೇಕ್ಷೆಯಿದ್ದಂತೆ ತೋರ್ಪಡಿಸುತ್ತಿರುವನೆಂಬ ರಹಸ್ಯವನ್ನು ತಿಳಿಯದೆ ಚಕ್ರಾಯುಧವು ಅಹಂಕರಿಸಿ ತನ್ನ ಗರ್ವದಿಂದ ಮೈಮರೆತಿರಲಾಗಿ ಭಕ್ತರಕ್ಷಣನಾದ ಶ್ರೀವಿಷ್ಣುವು ಚಕ್ರವನ್ನನುಗ್ರಹಿಸಿ ಅದರ ಗರ್ವಭಂಗವನ್ನು ಮಾಡಲೆಳಸಿ ಭೂಲೋಕದಲ್ಲಿ ವಿಷ್ಣುಹತರಾಗಿದ್ದ ದೈತ್ಯಾತ್ಮರು ಕ್ಷತ್ರಿಯರಾಗಿ ಜನಿಸಿ ಲೋಕಕಂಟಕರಾಗುತ್ತಾ ಭೂಮಿಗೆ ಭಾರವಾಗಿರಲು ಅವರೆಲ್ಲರನ್ನು ಕೊಂದು ಭೂಭಾರವನ್ನು ಹರಿಸಬೇಕೆಂದು ದೇವತೆಗಳೊಡನೆ ಬ್ರಹ್ಮನೈತಂದು ಪ್ರಾರ್ಥಿಸುತಲಿದ್ದನು. ದೇವರ ಸಂಕಲ್ಪವು ಕ್ಷತ್ರಿಯರಿಗೆ ಬಹುಫಲ ಕಲ್ಪಿಸುವುದರಿಂದ ಶ್ರೀಪತಿಯು ಆಗ ಬ್ರಹ್ಮಾದಿಗಳಿಗೆ ಅಭಯವನ್ನಿತ್ತು ಕಳುಹಿಸಿ ತನ್ನ ಚಕ್ರಾಯುಧವನ್ನು ನೋಡಿ ಎಲೈ ಕಾಲಾಗ್ನಿ ರೂಪನಾದ ಸುದರ್ಶನಾಸ್ತ್ರವೇ ನಿನಗೆ ನನಗಿಂತಲೂ ಹೆಚ್ಚಾದ ಸಾಮರ್ಥ್ಯವಿರುವಂತೆ ತೋರುವುದರಿಂದ ನೀನು ಭೂಲೋಕದಲ್ಲಿ ವೈಷ್ಣವನಾದ ಕ್ಷತ್ರಿಯನಾಗಿ ಹುಟ್ಟು ನಾನು ಶೈವಬ್ರಾಹ್ಮಣನ ಪುತ್ರನಾಗಿ ಅವತರಿಸುವೆನು ನಮ್ಮಿಬ್ಬರ ಸಾಮರ್ಥ್ಯವನ್ನೂ ಪರೀಕ್ಷಿಸೋಣ ಎಂದನು. ಚಕ್ರಾಯುಧವು ಆ ಮಾತನ್ನು ಕೇಳಿ ಹೆದರಿ ಎಲೈ ಜಗನ್ನಾಥನೇ! ನನ್ನ ಮಾನಸಿಕಾಪಚಾರವನ್ನು ಕ್ಷಮಿಸುವನಾಗು ನಿನ್ನ ಮುಂದೆ ನನ್ನ ಸಾಮರ್ಥ್ಯವು ಸೂರ್ಯನೆದುರಿಗೆ ಮಿಣುಕುಹುಳುಗಳಂತಾಗುವದು ನಿನ್ನನ್ನು ಬಿಟ್ಟು ನಾನಿರಲಾರೆನು. ಮನುಷ್ಯನಾಗಿ ಹುಟ್ಟಿದರೆ ನನಗೆ ಸಹಾಯಕರು ಯಾರು ಎಂದು ಬೆಸಗೊಂಡು ವಿಧೇಯನಾಗಲು ಆ ಮಹಾವಿಷ್ಣುವು ದಯೆಯಿಂದ ಎಲೈ ಚಕ್ರಾಯುಧವೇ ನೀನು ಮನುಷ್ಯನಾಗಿ ಅವತರಿಸು, ನಿನಗೆ ಬೇಕಾದ ಸಹಾಯಗಳೆಲ್ಲವನ್ನೂ ನಾನು ಮಾಡಿಕೊಡುವೆನು ಕ್ಷಿಪ್ರದಲ್ಲಿ ನಮ್ಮಿಬ್ಬರ ಬಲ ತಾರತಮ್ಯವನ್ನು ವ್ಯಕ್ತಪಡಿಸಿ ನಾನು ಕೆಲವು ಅವತಾರಗಳಲ್ಲಿ ಚಕ್ರಪಾಣಿಯಾಗದೆ ನಿನ್ನನ್ನು ಬಿಟ್ಟಿದ್ದು ಕೃಷ್ಣಾವತಾರದಲ್ಲಿ ಮರಳಿ ನಿನ್ನನ್ನು ಪರಿಗ್ರಹಿಸಿ ಚಕ್ರಪಾಣಿಯಾಗಿ ಚಕ್ರಹಸ್ತನೆನಿಸಿಕೊಂಡು ನಿನಗೇ ಪ್ರಾಶಸ್ತ್ಯವನ್ನು ಕೊಡುವೆನೆಂದು ಹೇಳಿ ಕಳುಹಿಸಿದನು. ಇತ್ತಲಾ ಚಕ್ರಾಯುಧ ಶಕ್ತಿಯು ಭೂಲೋಕದಲ್ಲಿ ನರ್ಮದಾನದಿಯ ತೀರದಲ್ಲಿರುವ ಮಾಹಿಷ್ಮತೀನಗರದ ದೊರೆಯಾದ ಹೇಹಯರಾಯನ ವಂಶದ ಕೃತವೀರ್ಯನೆಂಬವನು ಪುತ್ರಾರ್ಥಿಯಾಗಿ ತಪಸ್ಸುಮಾಡುತ್ತಿರಲು ಆತನನ್ನು ಸೇರಿ ಅವನಿಗೆ ಮಗನಾಗಿ

ತನ್ನ ಸಹಸ್ರಧಾರೆಗಳನ್ನು ಸಾವಿರ ತೋಳುಗಳಾಗಿ ಮಾಡಿಕೊಂಡು ಅರ್ಜುನನೆಂಬ ಹೆಸರಿನಿಂದ ವರ್ಧಿಸುತ್ತಿದ್ದನು. ಆ ಕೃತಯುಗದಲ್ಲಿಯೇ ಅತ್ರಿಮಹಾಮುನಿಯ ಧರ್ಮಪತ್ನಿಯಾದ ಅನಸೂಯಾದೇವಿಯ ಪಾತಿವ್ರತ್ಯ ಪ್ರಭಾವವನ್ನು ಪರೀಕ್ಷಿಸಲೋಸಲೋಸುಗ ಲಕ್ಷ್ಮಿ, ಪಾರ್ವತಿ, ಸರಸ್ವತಿಯರ ಪ್ರಾರ್ಥನೆಯಂತೆ ಹರಿಹರಬ್ರಹ್ಮರು ಯತ್ನಿಸಿ ಅನಸೂಯೆಗೆ ಸೋತು ಮಕ್ಕಳಾಗಿ ಹುಟ್ಟಿದರು. ಆಗ ಶ್ರೀಹರಿಯು ದತ್ತಾತ್ರೇಯನೆಂಬ ಯೋಗಿಯಾದನು. ಶ್ರೀರುದ್ರನು ದೂರ್ವಾಸಮುನಿಯಾದನು. ಬ್ರಹ್ಮನು ಅತ್ರಿಮುನಿಯ ನೇತ್ರದಿಂದ ಚಂದ್ರನಾಗಿ ಆವಿರ್ಭವಿಸಿದನು. ಈ ಕಾರ್ತವೀರ್ಯಾರ್ಜುನನು ಆ ದತ್ತಾತ್ರೇಯಮುನಿಗೆ ಶಿಷ್ಯನಾಗಿ ಯೋಗಾದಿ ವಿದ್ಯೆಗಳನ್ನು ಕಲಿತು ದತ್ತಾತ್ರೇಯನ ಅನುಗ್ರಹದಿಂದ ಸಕಲ ಸಿದ್ಧಿಗಳನ್ನು ಪಡೆದು ಅಷ್ಟಾದಶ ಮಹಾದ್ವೀಪ ಸಾಮ್ರಾಜ್ಯಪತಿಯೆಂಬ ಬಿರುದನ್ನು ವಹಿಸಿ ಲೋಕೈಕವೀರನಾಗಿ ರಾವಣಾಸುರನನ್ನು ಗೆದ್ದು ಸೆರೆಯಲ್ಲಿಟ್ಟು ಪುಲಸ್ತ್ಯಬ್ರಹ್ಮನ ವಚನದಿಂದ ಲೋಕದಲ್ಲಿ ರಾವಣನನ್ನು ಬಿಟ್ಟುಕೊಟ್ಟು, ತನ್ನ ನಾಮಸ್ಮರಣ ಮಾತ್ರದಿಂದ ಲೋಕದಲ್ಲಿ ನಷ್ಟದ್ರವ್ಯಲಾಭವಾಗುವಂತೆ ಮಹಿಮೆಯನ್ನು ಪಡೆದು ರೋಗ ಚೋರಾದ್ಯುಪದ್ರವಗಳನ್ನು ಪರಿಹರಿಸುತ್ತ ವೈಷ್ಣವಯಾಗಗಳನ್ನು ಮಾಡುತ್ತ ಮಂತ್ರೇಶ್ವರನಾಗಿ ಲೋಕಪೂಜ್ಯತೆಯನ್ನು ಪಡೆದಿದ್ದನು ಆದರೂ ತಾನು ಸಹಸ್ರಬಾಹುವೆಂದೂ, ಮಹಾಬಲಶಾಲಿಯೆಂದೂ ತನಗಿಂತಲೂ ಬಲಾಧಿಕರಿಲ್ಲವೆಂದೂ ತಾನೇ ಸ್ವತಂತ್ರನೆಂದೂ ದುರಹಂಕಾರಪಟ್ಟು ಮದದಿಂದ ಉಚ್ಛೃಂಕಲನಾಗಿ ಚಿರಕಾಲ ಲೋಕವನ್ನಾಳುತ್ತ ಇದ್ದನು.

ಇತ್ತಲಾ ಕನ್ಯಾಕುಬ್ಜ ನಗರೇಶ್ವರನಾಗಿದ್ದ ಗಾಧಿರಾಯನು ಬಹುಕಾಲದವರೆಗೂ ಸಂತಾನವಿಲ್ಲವೆಂದು ತಪಸ್ಸುಮಾಡಿ ಉಮಾನುಗ್ರಹದಿಂದ ಸತ್ಯವತಿಯೆಂಬ ಪುತ್ರಿಯನ್ನು ಪಡೆದು ಬೆಳಸುತ್ತಿರ್ದನು, ಭೃಗುಮುನಿಯ ವಂಶದಲ್ಲಿ ಮಹಾತಪಸ್ವಿಯಾದ ಋಚಿಕನೆಂಬ ಮಹರ್ಷಿಯು ಸತ್ಯವತಿಯೆಂಬ ಕನ್ನಿಕೆಯನ್ನು ನೋಡಿ ಮೋಹಿಸಿ ಗಾಧಿರಾಯನನ್ನು ಯಾಚಿಸಲಾಗಿ ಆ ರಾಯನು ಋಚಿಕನ ಸಾಮರ್ಥ್ಯವನ್ನು ಪರೀಕ್ಷಿಸಬೇಕೆಂದು ದಕ್ಷಿಣ ಕರ್ಣಮಾತ್ರವೇ ಕಪ್ಪಾಗಿ ಮೈಯೆಲ್ಲವೂ ಧವಳವರ್ಣವಾಗಿರುವ ಸಹಸ್ರ ಉತ್ತಮಾಶ್ವಂಗಳನ್ನು ಕನ್ಯಾಶುಲ್ಕವಾಗಿ ತಂದಿತ್ತು ನನಗಳಿಯನಾಗು ಎನಲು ಋಚಿಕನು ಭೂಲೋಕದಲ್ಲಿ ಅಂಥಾ ಕುದುರೆಗಳನ್ನು ಕಾಣದೇ ವರುಣನನ್ನು ಯಾಚಿಸಿ ತಂದು ಗಾಧಿರಾಯನಿಗೆ ಕೊಟ್ಟು ಸತ್ಯವತಿಯಂ ಮದುವೆಯಾಗಿ ಗೃಹಧರ್ಮದಿಂ ತಪಸ್ಸಂಗೈಯುತ್ತ ಸುಖವಾಗಿದ್ದನು. ಇಂತು ಚಿರಕಾಲ ಕಳೆದುಹೋಗುತ್ತಿರಲು ಸತ್ಯವತಿಯು ಪಾತಿವ್ರತ್ಯದಿಂದ ಸೇವಿಸುತ್ತ ಪತಿಯಂಮೆಚ್ಚಿಸಿ ಆತನು ಪ್ರಸನ್ನನಾಗಿ ವರವನ್ನು ಬೇಡೆನಲು ತನಗೂ ತನ್ನ ತಾಯಿಗೂ ಪುತ್ರಲಾಭವಾಗುವಂತೆ ಅನುಗ್ರಹಮಾಡಿ ಎಂದು ಬೇಡಿಕೊಂಡಳು. ಋಚಿಕಮುನಿಯು ಯಜ್ಞೇಶ್ವರನಾದ ಅಗ್ನಿಯನ್ನು ಆರಾಧಿಸಿ ತನ್ನ ಸಿದ್ಧಮಂತ್ರಗಳ ಪ್ರಭಾವದಿಂದ ಎರಡು ಕಲಶಂಗಳಲ್ಲಿ ಚರುದ್ರವ್ಯವನ್ನು ಮಾಡಿ ಒಂದರಲ್ಲಿ ಬ್ರಹ್ಮತೇಜಸ್ಸನ್ನೂ ಮತ್ತೊಂದರಲ್ಲಿ ಕ್ಷತ್ರತೇಜಸ್ಸನ್ನೂ ಪ್ರತಿಷ್ಠಿಸಿ ತನ್ನ ಪತ್ನಿಯಾದ ಸತ್ಯವತಿಯನ್ನು ಕರೆದು ದಕ್ಷಿಣಕಲಶದ ಚರುದ್ರವ್ಯನ್ನು ನೀನು ಭಕ್ಷಿಸು, ಬ್ರಹ್ಮತೇಜಃಪೂರ್ಣನಾದ ಕುಮಾರನು ನಿನಗೆ ಹುಟ್ಟುವನು ಉತ್ತರ ಕಲಶದ ಚರುವಿಶೇಷವನ್ನು ನಿನ್ನ ತಾಯಿ ಭಕ್ಷಿಸಲಿ ಅವಳಿಗೆ ಕ್ಷತ್ರ ತೇಜಸ್ಸಂಪನ್ನನಾದ ಪುತ್ರನಾಗುವನು ಎಂದು ಹೇಳಿ ತಾನು ಸಮಿತ್ಕುಶಾಹರಣಕ್ಕೆ ತೆರಳಿದನು. ಬಳಿಕ ಸತ್ಯವತಿಯೂ ಆಕೆಯ ತಾಯಿಯು ಮಿಂದು ಮಡಿಯುಟ್ಟು ಶುಚಿಯಾಗಿ ಸಂತೋಷ ಸಂರಂಭಾತಿಶಯದಿಂದ ದಿಕ್‌ಭ್ರಾಂತಿಗೊಂಡು ಉತ್ತರ ಕಲಶದ ಚರುವನ್ನು ಸತ್ಯವತಿಯು ಭಕ್ಷಿಸಲು ದಕ್ಷಿಣ ಕಲಶದಚರುವನ್ನು ಗಾಧಿಪತ್ನಿಯುಭಕ್ಷಿಸಿ ಅವರೀರ್ವರೂ ಗರ್ಭಿಣಿಯರಾದರು. ಆಗ ಯಜ್ಞ

ನಾರಾಯಣ ಕಲೆಯು ಸತ್ಯವತೀ ಗರ್ಭದಲ್ಲಿ ಕ್ಷೇತ್ರ ತೇಜೋಮಯವೆನಿಸಿ ಪ್ರವೇಶಂಗೆಯ್ದು, ಗಾಧಿಪತ್ನಿಯು ವಿಶ್ವಾಮಿತ್ರನನ್ನು ಪೆತ್ತಳು. ಸತ್ಯವತಿಯು ಜಮದಗ್ನಿಮುನಿಯನ್ನು ಹಡೆದಳು. ಆ ಕುಮಾರರ ಬ್ರಹ್ಮ ಕ್ಷತ್ರ ತೇಜಸ್ಸುಗಳು ವಿನಿಮಯವಾಗಿ ತೋರುತಲೂ ಋಚೀಕಮುನಿಯು ಯೋಗಬಲದಿಂದ ಭವಿಷ್ಯರ್ಥವನ್ನರಿತು ತನಗೆ ವಿಧೇಯಳಾದ ಸತ್ಯವತಿಯ ಪ್ರಾರ್ಥನೆಯಿಂದ ಆಕೆಯ ಅಪರಾಧವನ್ನು ಕ್ಷಮಿಸಿ ಪ್ರಸನ್ನನಾಗಿ ಜಮದಗ್ನಿಮುನಿಯ ಕ್ಷತ್ರತೇಜಸ್ಸು ಕಠಿನವಾದರೂ ಅದರ ಫಲವನ್ನನುಭವಿಸಿ ಕ್ಷತ್ರಿಯನಿಂದ ಹತವಾಗಿ ತನಗೆ ಪುತ್ರನಾಗಿ ಅವತರಿಸುವ ಶ್ರೀಮಹಾ ವಿಷ್ಣುವಿನಿಂದ ಮರಳಿ ಉಜ್ಜೀವಿತನಾಗಿ ತನ್ನ ತಪಃಪ್ರಭಾವದಿಂದ ಬ್ರಹ್ಮರ್ಷಿಯಾಗಿರಲಿ ವಿಶ್ವಾ ಮಿತ್ರರಾಯನು ವಸಿಷ್ಠಮುನಿಗೆ ಸೋತು ಆ ರೋಷದಿಂದ ಚಿರಕಾಲ ಮಹಾಘೋರ ತಪಸ್ಸು ಮಾಡಿ ಹತವೃತ್ತಿಯಿಂದ ಮಹಾಕಾರ್ಯಗಳನ್ನು ಸಾಧಿಸಿ ಗಾಯತ್ರೀ ಸಿದ್ಧಿಯನ್ನು ಪಡೆದು ಬ್ರಹ್ಮನ ವರದಿಂದಲೂ ವಸಿಷ್ಠರ ವಚನದಿಂದಲೂ, ಬ್ರಹ್ಮರ್ಷಿಯಾಗಿ ಪ್ರಖ್ಯಾತನಾಗಲಿ ಎಂದು ಪೇಳಿ ತಾನು ತಪೋನಿರತನಾದನು. ಜಮದಗ್ನಿಮುನಿಯು ಪ್ರಸೇನ ಜಿಪ್ರಾಯನ ಮಗಳಾದ ರೇಣುಕಾದೇವಿಯನ್ನು ಮದುವೆಯಾಗಿ ಧರ್ಮದಿಂದ ಕರ್ತೃರತ ಪತ್ನಿ ಧರ್ಮನಿರತನಾದನು. ಇಂತು ಆ ಗರ್ಭಗಳೆರಡೂ ಸರಸು ತೇಜೋಮಯಗಳಾದವು

ಬಳಿಕ ಆ ಜಮದಗ್ನಿಯು ರೇಣುಕಾದೇವಿಯಲ್ಲಿ ರುಮಣ್ವಂತ ಸುಷೇಣ ವಸು ವಿಶ್ವಾವಸು ಗಳೆಂಬ ನಾಲ್ವರು ಪುತ್ರರನ್ನು ಪಡೆದನು. ಬಳಿಕ ರೇಣುಕಾದೇವಿಯು ಮಹಾವ್ರತಸಂಗೈದು ಪತಿಯೊಡನೆ ದೀಕ್ಷಾನಿರತಳಾಗಿ ಮಹಾಪುರುಷನಾದ ಪುತ್ರನನ್ನು ಪಡೆಯಬೇಕೆಂದು ತಪವನ್ನು ಮಾಡುತ್ತಿರಲು ಸಾಕ್ಷಾನ್ನಾರಾಯಣಾಂಶವು ಆ ಪತಿವ್ರತೆಯ ಗರ್ಭದಲ್ಲಿ ಆವಿರ್ಭವಿಸಿ ದಿವ್ಯ ತೇಜೋಮಯನಾದ ಭಾರ್ಗವರಾಮನೆಂಬ ಹೆಸರಿನಿಂದವತರಿಸಿ ಸರ್ವ ದೇವಸ್ತುತನಾಗಿ ನಿಜ ಕಾಂತಿಯಿಂದ ಲೋಕಗಳನ್ನು ಬೆಳಗುತ್ತಿದ್ದನು. ಸುದರ್ಶನಾಸ್ತ್ರವು ಕಾರ್ತವೀರ್ಯಾರ್ಜುನನಾಗಿ ಅವತರಿಸಿ ಮಂತ್ರಾಸ್ತ್ರಗಳಿಗೆ ಮೂಲಭೂತವಾದ ಪ್ರಣವ ಮಂತ್ರಾಸ್ತ್ರವು ಆ ಪ್ರತಿಯತವಾದ ಪರಶುವೆನಿಸಿ ಪರಮೇಶನನ ಕೈಯೊಳಿರಲು ಸಂಕೇತನಾದ ಆ ಪರಶುವಿನ ಖಂಡಾಂಶವು ಚಕ್ರ ರಹಿತನಾಗಿದ್ದ ಶ್ರೀನಾರಾಯಣಾಂಶವಾದ ಭಾರ್ಗವರಾಮನ ಬಳಿಯಲ್ಲಿ ತಾನಾಗಿ ಬಂದು ಸೇರಿತು ಆಗ ಪರಶುರಾಮನು ಕ್ಷತ್ರಕ್ಷೇತ್ರದಲ್ಲಿ ಬ್ರಹ್ಮತೇಜಸ್ಸಂಭೋಕನಾಗಿ ನಾನಾವಿಧ ಸಂಸ್ಕಾ ರಗಳಿಂದ ಉತ್ತೇಜಿತನಾಗಿ ನಿಸರ್ಗಸಿದ್ಧ ತೇಜಸ್ಕನಾದರೂ ಶಿಷ್ಟಸಂಪ್ರದಾಯ ಪರಿಪಾಲನಾರ್ಥ ವಾಗಿ ತಪಸ್ಸುಮಾಡುತ್ತಿದ್ದನು.

ಒಂದು ದಿನ ಚಿತ್ರರಥನೆಂಬ ಗಂಧರ್ವನು ವನದಲ್ಲಿ ತನ್ನ ಸತಿಯೊಡನೆ ಜಲಕ್ರೀಡೆಯಾಡು ತಿರಲು ರೇಣುಕಾದೇವಿಯು ಅಗ್ನ್ಯೋದಕವನ್ನು ತರುವುದಕ್ಕಾಗಿ ಆ ನದೀತೀರಕ್ಕೆ ಬಂದು ದೂರ ದಿಂದ ಚಿತ್ರರಥನ ಕ್ರೀಡೆಯನ್ನು ನೋಡುತ್ತಾ ನಿಂತಿದ್ದು ಮರಳಿ ತನ್ನ ಪರ್ಣಶಾಲೆಗೆ ಬಂದು ಸೇರುವಷ್ಟರಲ್ಲಿ ಘೋರತಪಸ್ವಿಯಾದ ಜಮದಗ್ನಿಯು ರೇಣುಕಾದೇವಿಗೆ ಸ್ತ್ರೀಸ್ವಭಾವದಿಂದ ಸಂಭ ವಿಸಿದ ಚಿತ್ತಚಾಂಚಲ್ಯವನ್ನು ತಿಳಿದು ಕುಪಿತನಾಗಿ ಅವಳ್ಗೆ ಶಿಕ್ಷೆಮಾಡಬೇಕೆಂದು ಆಕೆಯನ್ನು ಸಂಹರಿ ಸುವಂತೆ ರುಮಣ್ವಂತನೇ ಮೊದಲಾದ ನಾಲ್ವರು ಪುತ್ರರಿಗೂ ಆಜ್ಞಾಪಿಸಲು ಅವರು ಮಾತೃ ಹತ್ಯವನ್ನು ಮಾಡಲಾರದೇ ಪಿತೃವಾಕ್ಯವನ್ನು ಉಪೇಕ್ಷಿಸಿದ್ದರಿಂದ ಜಮದಗ್ನಿಯು ಅವರನ್ನು ಮೂಕರಾಗಿ ಎಂದು ಶಪಿಸಿ ಪರಶುರಾಮನನ್ನು ಕರೆದು ರೇಣುಕೆಯನ್ನು ಸಂಹರಿಸು ಎಂದು ಆಜ್ಞಾಪಿಸಿದನು. ಪರಶುರಾಮನು ಪಿತೃವಾಕ್ಯವನ್ನು ಪರಿಪಾಲಿಸಬೇಕೆಂದು ನಿಶ್ಶಂಕನಾಗಿ ತನ್ನ ಕೈಯಲ್ಲಿದ್ದ ಪರಶುವಿನಿಂದ ತಾಯಿಯ ಶಿರಚ್ಛೇದನಗೈದು ನಿಂತಿರಲು ಜಮದಗ್ನಿಯು ಪರಶು ರಾಮನ ದೃಢವಾದ ಪಿತೃಭಕ್ತಿಗೆ ಮೆಚ್ಚಿ ನಿನಗೆ ಬೇಕಾದ ವರವನ್ನು ಕೇಳು ಕೊಡುವೆನೆನಲು

ಪರಶುರಾಮನು ಪೂಜ್ಯನಾದ ತಂದೆಯೇ ನನ್ನ ತಾಯನ್ನು ಬದುಕಿಸಿ ನನ್ನ ಅಗ್ರಜರಿಗೆ ವಿಶಾಪ ವಂಕೊಟ್ಟು ನನಗೆ ಮಾತೃಹತ್ಯಾ ದೋಷವಿಲ್ಲದಂತೆ ಅನುಗ್ರಹಿಸು ಎಂದನು ಜಮದಗ್ನಿಯು ಆ ವರವನ್ನು ಕೊಟ್ಟು ಪರಶುರಾಮನಿಗೆ ಶಿವಮಂತ್ರೋಪದೇಶ ಮಾಡಿ ನೀನು ಪರಮೇಶ್ವರನನ್ನು ಆರಾಧಿಸಿ ಇಷ್ಟಾರ್ಥಂಗಳನ್ನು ಪಡೆದು ಸುಖಿಯಾಗಿರು ಎಂದು ಹರಸಿದನು.

ಬಳಿಕ ಪರಶುರಾಮನು ತೀರ್ಥಯಾತ್ರೆಯನ್ನು ಮಾಡಿ ಶಿವಪ್ರತಿಷ್ಠೆಯಂಗೈದು ಮಾತೃಹತ್ಯಾದೋಷ ವಿಮುಕ್ತನಾಗಿ ಹಿಮಾಲಯದಲ್ಲಿ ಚಿರಕಾಲ ಪ್ರಣತಾರ್ತಿಹರನಾದ ಶಿವನನ್ನು ಕುರಿತು ಉಗ್ರತಪವಂಗೈಯ್ಯಲು ಪರಮೇಶ್ವರನು ಪ್ರತ್ಯಕ್ಷನಾಗಿ ನಿನ್ನ ಮನೋರಥವನ್ನು ಸಲ್ಲಿಸುವೆನೆಂದು ಅಭಯವನ್ನು ಕೊಟ್ಟನು. ಪರಶುರಾಮನು ಎಲೈ ಸ್ವಾಮಿಯೇ ನನ್ನನ್ನು ನಿನ್ನ ಶಿಷ್ಯನನ್ನಾಗಿ ಪರಿಗ್ರಹಿಸಿ ವಿದ್ಯಾನಿಧಿಯಾದ ನೀನು ಸಕಲ ವಿದ್ಯೆಗಳನ್ನೂ ಕಲಿಸಿ ಸಲಹಬೇಕೆಂದು ಪ್ರಾರ್ಥಿಸಿ ವರವನ್ನು ಪಡೆದು ಸಶರೀರನಾಗಿ ಆ ಮಹಾದೇವನೊಡನೆ ಕೈಲಾಸಕ್ಕೆ ಹೋಗಿ ಚಿರಕಾಲ ಅಲ್ಲೇ ಇದ್ದು ಕುಮಾರಸ್ವಾಮಿಯೊಡನೆ ಶಿವಸನ್ನಿಧಿಯಲ್ಲಿ ವೇದವೇದಾಂತ ವೇದಾಂಗ ಧನುರ್ವೇದ ಮಂತ್ರಶಾಸ್ತ್ರ ಯೋಗಶಾಸ್ತ್ರ ಪುರಾಣ ಇತಿಹಾಸ ಆಗಮ ಸಂಹಿತಾದಿ ಚತುಷ್ಷಷ್ಟಿ ವಿದ್ಯೆಗಳನ್ನೂ ಸಂಪೂರ್ಣವಾಗಿ ಕಲಿತು ಹರಪ್ರಸಾದದಿಂದ ಚಿರಂಜೀವಿತ್ವವನ್ನು ಪಡೆದು ಅವ್ಯಾಹತಶಕ್ತಿಕನಾಗಿ ಹಿಮವದ್ಗಿರಿಯಲ್ಲಿ ಯೋಗಸಿದ್ಧನಾಗಿ ಮಹಾ ಸಿದ್ಧನೆನಿಸಿಕೊಂಡಿದ್ದು ಜಮದಗ್ನಿಯ ಆಶ್ರಮಕ್ಕೆ ಬಂದನು.

ಆ ಕಾಲದಲ್ಲಿ ಲೋಕೈಕವೀರನೆನಿಸಿಕೊಂಡಿದ್ದ ಕಾರ್ತವೀರ್ಯಾರ್ಜುನನು ಪರಶುರಾಮನ ಮಹಿಮೆಯನ್ನು ಕೇಳಿ ಸೈರಿಸಲಾರದೆ ಪ್ರತ್ಯಕ್ಷನಾಗಿ ಹೋಗಿ ಅವನನ್ನು ನಿಗ್ರಹಿಸುವುದಕ್ಕೆ ಚಕಿತನಾಗಿ ಯೋಚಿಸುತ್ತಿದ್ದನು. ಕಾರ್ತವೀರ್ಯನ ಮಕ್ಕಳು ಜಮದಗ್ನಿಯ ಹೋಮಧೇನುವಿನ ಪ್ರಭಾವವನ್ನು ಕಂಡು ಇಂಥಾ ಆಕಳು ನಮ್ಮಲ್ಲಿರಬೇಕೆಂದು ಅದನ್ನು ಹಿಡಿದೊಯ್ಯುತ್ತಿರುವಾಗ ಪರಶುರಾಮನು ಅವರನ್ನು ನಿಗ್ರಹಿಸಿ ಹೋಮಧೇನುವನ್ನು ಬಿಡಿಸಿ ತಂದನು. ಕೆಲವುಕಾಲದ ಮೇಲೆ ಹೈಹಯರೆಂಬ ಕ್ಷತ್ರಕುಮಾರರು ಪರಶುರಾಮನು ಆಶ್ರಮದಲ್ಲಿ ಇಲ್ಲದ ಸಮಯದಲ್ಲಿ ಬಂದು ಸಮಾಧಿನಿಷ್ಠನಾಗಿದ್ದ ಜಮದಗ್ನಿಯನ್ನು ಸಂಹರಿಸಿ ಹೋಮಧೇನುವನ್ನು ಅಪಹರಿಸಿಕೊಂಡು ಹೋದರು. ಜಮದಗ್ನಿಯು ಮಹಾತೇಜಸ್ವಿಯಾದ ಬ್ರಹ್ಮರ್ಷಿಯಾಗಿದ್ದರೂ ಕಠಿನ ಹೃದಯನಾಗಿ ನಿರ್ದಯನಾಗಿದ್ದ ದೋಷಕ್ಕೆ ತಕ್ಕ ಶಿಕ್ಷೆಯನ್ನು ಪಡೆದನು. ಆ ಬ್ರಹ್ಮಹತ್ಯಾ ದೋಷವು ಹೈಹಯ ಕುಲವನ್ನು ನಿರ್ಮೂಲಮಾಡುವ ಘೋರಮೂರ್ತಿಯಾಗಿ ಪರಶುರಾಮನ ಆಗಮನವನ್ನು ನಿರೀಕ್ಷಿಸುತಲಿದ್ದಿತು, ಬಳಿಕ ಪರಶುರಾಮನು ಬಂದು ಪಿತೃವಧಾ ವೃತ್ತಾಂತವನ್ನು ಕೇಳಿ ಕ್ರೋಧಪರವಶನಾಗಿ ತಪಶ್ಶಕ್ತಿಯಿಂದ ಶತ್ರುನಿಗ್ರಹ ಮಾಡಲು ಸಮರ್ಥನಾದರೂ ತನ್ನ ತಪಶ್ಶಕ್ತಿಯು ವ್ಯಯವಾಗುವದೆಂಬ ಆಲೋಚನೆಯಿಂದ ಹಾಗೆ ಮಾಡದೆ ಪೌರುಷದಿಂದ ವೈರಿಗಳನ್ನು ನಿಗ್ರಹಿಸುವೆನೆಂದು ಸಂಕಲ್ಪಿಸಿ ಬ್ರಹ್ಮಹತ್ಯೆಯಿಂದ ಮಾಹಿಷ್ಮತೀನಗರಕ್ಕೆ ಕರೆದೊಯ್ಯಲ್ಪಟ್ಟನು. ಬ್ರಹ್ಮಹತ್ಯೆಯು ಹೈಹಯವಂಶವನ್ನು ಆಕ್ರಮಿಸಿದ್ದರಿಂದ ಕಾರ್ತವೀರ್ಯಾರ್ಜುನನು ಶ್ರೀದತ್ತಾತ್ರೇಯನ ಅನುಗ್ರಹದಿಂದ ಸರ್ವಸಿದ್ಧಿಗಳನ್ನು ಪಡೆದು ಮಹಾಯೋಗಿಯಾದರೂ ಬ್ರಹ್ಮಹತ್ಯಾದೋಷದಿಂದ ಪ್ರತಿಬದ್ಧನಾಗಿ ನಿರ್ವೀರ್ಯನೆನಿಸಿ ಪರಾಜಿತನಾದನು. ಆದರೂ ಸಹಸ್ರಾರ ಚಕ್ರಾವತಾರಿಯಾದ್ದರಿಂದ ಲೋಕೋತ್ತರ ಮಹಾವೀರ್ಯನೆನಿಸಿದ್ದ ಕಾರಣ ಸಹಸ್ರ ಬಾಹುಗಳಿಂದ ಆಯುಧಗಳನ್ನು ಧರಿಸಿ ಸೇನಾಸಮೇತನಾಗಿ ಪರಶುರಾಮನ ಮೇಲೆ ಯುದ್ಧಕ್ಕೆ ಬಂದನು ಐದು ನೂರು ಬಿಲ್ಲುಗಳಿಂದ ನಿಮಿಷಮಾತ್ರಕ್ಕೆ ಐದುಲಕ್ಷ ಬಾಣಗಳನ್ನೂ ದಿವ್ಯಾಸ್ತ್ರಗಳನ್ನೂ ಪ್ರಯೋಗಿಸುತ್ತಿರಲು ವೀರಮಾಹೇಶ್ವರ ಸಿದ್ಧಿಯನ್ನು ಪಡೆದ ಪರಶುರಾಮನು ಸ್ತಂಭನವಿದ್ಯಾಪ್ರಭಾವ

ದಿಂದ ಅರ್ಜುನನನ್ನು ತಡೆದು ಘೋರಯುದ್ಧಮಾಡಿ ತನ್ನ ಹಸ್ತದಲ್ಲಿದ್ದ ಉಗ್ರಕುಠಾರದಿಂ ಕಾರ್ತ ವೀರ್ಯಾರ್ಜುನನ ಸಹಸ್ರಬಾಹುಗಳನ್ನೂ ಖಂಡಿಸಿ ಅವನನ್ನು ಸಂಹರಿಸಿ, ತದ್ಭಾಂಧವ್ಯಪುತ್ರವರ್ಗ ಗಳನ್ನೂ ಹೈಹಯ ಕುಲವನ್ನೂ ನಿರ್ಮೂಲಮಾಡಿ ಅಲ್ಲಿಗೂ ತನ್ನ ರೋಷವು ಶಾಂತವಾಗದಿರಲು, ನಿಜಾಶ್ರಮಕ್ಕೈತಂದು ಅಲ್ಲಿ ವೈಧವ್ಯ ದುಃಖಪೀಡಿತಳಾಗಿ ಅಳುತ್ತಿರುವ ತನ್ನ ತಾಯಿ ರೇಣುಕಾ ದೇವಿಯನ್ನು ಕಂಡು ತಾನು ವೈರಿಗಳನ್ನು ಕೊಂದು ಹಗೆತೀರಿಸಿಕೊಂಡು ಬಂದ ಸುದ್ಧಿಯನ್ನು ಪೇಳಲು ಆಕೆ ದುಃಖದಿಂದ ಇಪ್ಪತ್ತೊಂದುಸಲ ಉರಸ್ತಾಡನವನ್ನು ಮಾಡಿಕೊಂಡದ್ದನ್ನು ನೋಡಿ ಆಕೆಯನ್ನು ಮನಃಪೂರ್ವಕವಾಗಿ ಸಮಾಧಾನಪಡಿಸಿ ತಾನು ಇಪ್ಪತ್ತೊಂದುಸಲ ಭೂ ಪ್ರದಕ್ಷಿಣೆ ಮಾಡಿ ಲೋಕದಲ್ಲಿರುವ ಕ್ಷತ್ರಿಯರನ್ನೆಲ್ಲ ಸಂಹರಿಸುವೆನೆಂದು, ಶಪಥದಿಂದ ಸಂಕ ಲ್ಪಿಸಿ ಏಕಕ್ಷತ್ರಾಪರಾಧದಿಂದ ಸರ್ವ ಕ್ಷತ್ರನಾಶಕ್ಕುದ್ಯೋಗಿಸಿ ಪ್ರಪಂಚದಲ್ಲಿ ದುಷ್ಟಕ್ಷತ್ರಿಯ ರಾಗಿ ಜನಿಸಿದ್ದ ಲೋಕಕಂಟಕರಾದ ದೈತ್ಯವರ್ಗವನ್ನು ನಿಶ್ಶೇಷಮಾಡಿ ಭೂಭಾರವನ್ನು ಪರಿಹರಿ ಸಲೆಳಸಿ ದಿಗ್ವಿಜಯಕ್ಕೆ ಹೊರಟನು. ಸರ್ವಕ್ಷತ್ರಿಯರೂ ಪರಶುರಾಮನ ಪ್ರತಾಪಾಗ್ನಿಯಲ್ಲಿ ಶಲಭಗಳಂತೆ ಭಸ್ಮೀಭೂತರಾಗುತ್ತಿದ್ದರು. ದಶರಥರಾಯನು ಪರಶುರಾಮನ ಪಿತೃದೀಕ್ಷಾ ಕಾಲವು ಕಳೆಯುವತನಕ ತಾನು ದಿನಕ್ಕೊಂದು ಮದುವೆಮಾಡಿಕೊಳ್ಳುತ್ತಾ ವಿವಾಹದೀಕ್ಷಿತ ನೆಂಬ ನೆವದಿಂದ, ಪರಶು ಪ್ರಹಾರವನ್ನು ತಪ್ಪಿಸಿಕೊಂಡು ಜೀವದಿಂದುಳಿದನು ವಿದೇಹರಾಜ ನಾದ ಜನಕನು ಯಾಜ್ಞವಲ್ಕ್ಯೋಪದಿಷ್ಟಯೋಗ ಪ್ರಭಾವದಿಂದ ಆಕಾಶ ತತ್ವಮಯನಾಗಿ ಪರ ಶುಪ್ರಹಾರಪೀಡಿತನಾಗದೇ, ಸಜೀವನಾಗಿ ಉಳಿದನು. ಕುಶಧ್ವಜಾದಿ ಕ್ಷತ್ರಿಯರು ಕೆಲವರು ರಾಮನು ಬರುವಾಗ್ಯೆ ಆಯುಧಗಳನ್ನು ತೊರೆದು ಶಿವಪೂಜಾದಿ ಕರ್ಮನಿರತರಾಗಿದ್ದು ತಪ್ಪಿಸಿ ಕೊಂಡರು ಕ್ಷತ್ರಿಯಪತ್ನಿಯ ಗರ್ಭಗಳಲ್ಲಿದ್ದ ಶಿಶುಗಳು ಹೊರತು ಭೂಮಿಯಲ್ಲಿ ಹುಟ್ಟಿದ್ದ ಕ್ಷತ್ರಿ ಯರೆಲ್ಲರನ್ನೂ ಸೈನ್ಯಸಹಿತವಾಗಿ ಕುಠಾರಧಾರೆಯಿಂದ ಛೇದಿಸಿ ಒಂದು ವರ್ಷದೊಳಗೆ ಇಪ್ಪ ತ್ತೊಂದುಸಲ ಭೂಪ್ರದಕ್ಷಿಣವೆಂಬ ದಿಗ್ವಿಜಯ ಯಾತ್ರೆಯನ್ನು ಮಾಡಿ ಕ್ಷತ್ರಿಯರ ಹೃದಯರಕ್ತ ವನ್ನು ಅವರವರ ಕಪಾಲಗಳಲ್ಲಿ ತುಂಬಿಸಿ ಕುರುಕ್ಷೇತ್ರದಲ್ಲಿ ಶ್ಯಮಂತಪಂಚಕವೆಂಬ ಐದು ರಕ್ತ ಸರಸ್ಸುಗಳನ್ನು ಕಲ್ಪಿಸಿ ವೀರಕ್ಷತ್ರಿಯರಿಂದ ಸತ್ತುಹೋಗಿದ್ದ ಜಮದಗ್ನಿ ಮುನಿಗೆ ಆ ರಕ್ತೋದಕ ದಿಂದ ತರ್ಪಣಮಾಡಿ ಪಿತೃದೀಕ್ಷೆಯನ್ನು ತೀರಿಸಿಕೊಂಡು ಅಲ್ಲಿಗೂ ಶಾಂತನಾಗದೇ ಮರಳಿ ಹತಾ ವಶಿಷ್ಟ ಕ್ಷತ್ರಿಯ ಕುಲೋತ್ಪಾಟನಕ್ಕೆ ಪ್ರವರ್ತಿಸುತ್ತಿರಲು ಪರುಶುರಾಮನ ಪಿತಾಮಹನಾದ ರುಚಿ ಕಮುನಿಯು ಬಂದು ಶಿಶುವೇ ಈ ಘೋರಕೃತ್ಯವನ್ನು ಇನ್ನು ಸಾಕುಮಾಡೆಂದು ಭೂತದಯಾದಿ ಶಾಂತಿವೃತ್ತಿಯನ್ನೂ ಅಹಿಂಸೆಯೆಂಬ ಬ್ರಾಹ್ಮಣಧರ್ಮವನ್ನೂ ಉಪದೇಶಗೈದು ವಿರಕ್ತನಾಗಿರು ವಂತೆ ನಿಯಮಿಸಿ ತೆರಳಿದನು. ರೇಣುಕಾದೇವಿಯು ತನ್ನ ಪಾತಿವ್ರತ್ಯಯೋಗಾಗ್ನಿಯಿಂದ ದೇಹ ವನ್ನು ತ್ಯಜಿಸಿ ಮಹಿಮೆಯಿಂದ ಜ್ಯೋತಿರ್ಮಯಳಾಗಿ, ರೇಣುಕಾಪರಂಜ್ಯೋತಿಯೆಂಬ ಹೆಸರಿನಿಂದ ಪೂಜಿಸಲ್ಪಡುತ್ತಾ ಮನುಷ್ಯರಿಗೆ ಇಷ್ಟಾರ್ಥಗಳನ್ನು ಕೊಡುವ ದೇವರೂಪಿಣಿಯಾಗಿದ್ದಳು.

ಇತ್ತಲಾ ಪರಶುರಾಮನು ಸ್ನಾನದಾನ ಜಪತಪಾದಿ ಧರ್ಮಾಚರಣದಿಂದ ಪಾಪಪರಿಹಾರ ಮಾಡಿಕೊಂಡು ಅವಿಮುಕ್ತ ವಾರಾಣಿಸಿ ಕ್ಷೇತ್ರದಲ್ಲಿ ರಾಮೇಶ್ವರಲಿಂಗ ಪ್ರತಿಷ್ಠೆಮಾಡಿ ಯಜ್ಞ ಸಮಯದಲ್ಲಿ ತಾನು ಸಂಪಾದಿಸಿದ್ದ ಭೂಮಂಡಲ ರಾಜ್ಯವೆಲ್ಲವನ್ನೂ ಶಿವಾರ್ಪಣವಾಗಿ ಕಶ್ಯಪ ಬ್ರಹ್ಮನಿಗೆ ದಾನಕೊಟ್ಟು ತಾನು ಸಮುದ್ರತೀರದ ಮಹೇಂದ್ರಾದ್ರಿಯಲ್ಲಿ ತಪಸ್ಸುಮಾಡುತ್ತಿರಲು ಕಶ್ಯಪನ ಸಂತತಿಯಲ್ಲಿ ರಾಜ್ಯಾಧಿಕಾರಿಗಳೆನಿಸಿದ ಬ್ರಾಹ್ಮಣರು ಕುಯುಕ್ತಿಯಿಂದ ಪರಶುರಾಮನ ಬಳಿಗೈದಿ ನೀನು ಭೂಮಿಯೆಲ್ಲವನ್ನೂ ಬ್ರಾಹ್ಮಣರಿಗೆ ಕೊಟ್ಟಮೇಲೆ ಇಲ್ಲಿಯೇ ವಾಸಮಾಡುತ್ತಿ ರುವುದು ದತ್ತಾಪಹಾರ ದೋಷವಲ್ಲವೆ ಎಂದು ಕೇಳಲು ಕೃದ್ಧನಾದ ಪರಶುರಾಮನು ಇಕ್ಷುಪಥ

ಕೃತಘ್ನರಾಗಿ ಕುಯುಕ್ತಿವಂತರಾದ ಈ ಬ್ರಾಹ್ಮಣರಿಗೆ ದೊರೆತನವಿಲ್ಲದೇ ಹೋಗಲಿಯೆಂದು ಶಾಪಕೊಟ್ಟನು ಅದನ್ನು ಕೇಳಿ ಕಶ್ಯಪಾದಿಮುನಿಗಳು ಆ ಬಳಿಕ ಹುಟ್ಟಿದ ಸೂರ್ಯಚಂದ್ರವಂಶದ ಕ್ಷತ್ರಿಯರಿಗೆ ರಾಜ್ಯವನ್ನೊಪ್ಪಿಸಿ ತಾವು ವಿರಕ್ತರಾಗಿ ತಪೋನಿಷ್ಠರಾದರು.

ಇತ್ತ ಪರಶುರಾಮನು ಸಿಂಧುರಾಜನನ್ನು ನಿಗ್ರಹಿಸಿ, ಆತನಿಂದ ತಾನು ಪಡೆದ ಪರಶುರಾಮ ಕ್ಷೇತ್ರವೆಂಬ ಪಶ್ಚಿಮಘಟ್ಟದ ಕೆಳಗಣ ಭೂಮಿಯಲ್ಲಿ ತಪವಂಗೈಯುತ್ತ ಶಮಾಧನನಾಗಿ ತನ್ನ ತಪೋಬಲದಿಂದ ಸರ್ವಪ್ರಾಣಿಗಳೂ ಪುಣ್ಯವಂತರಾದರೆ ಸುಲಭವಾಗಿ ಶರೀರದೊಡನೆಯೇ ಸ್ವರ್ಗಕ್ಕೆ ಹೋಗಬಹುದಾದ ದಿವ್ಯಸೋಪಾನವನ್ನು ಭೂಮಿಯಿಂದ ಸ್ವರ್ಗಪದವಿಗೂ ಕಲ್ಪಿಸಿದನು, ಅಷ್ಟರಲ್ಲಿ ತನ್ನ ತಂದೆಯು ವೃದ್ಧನಾನೆಂಬ ಚಿಂತೆಯಿಂದ ಮಹಾತಪಸ್ವಿನ ಯೋಗಬಲದಿಂದ, ಮರಳಿ ಯಥಾಪೂರ್ವಕವಾಗಿರುವಂತೆ ತಾಯಿತಂದೆಗಳನ್ನು ಬದುಕಿಸಿದನು. ರೇಣುಕಾಸಹಿತನಾದ ಜಮದಗ್ನಿಮುನಿಯು ಪರಮೇಶ್ವರನ ಪ್ರತಾಪದಿಂದ ಅಸದೃಶತಪಸ್ವನೆನಿಸಿ ಬ್ರಹ್ಮಿಷ್ಠನಾಗಿ ಸಪ್ತರ್ಷಿಮಂಡಲದಲ್ಲಿ ಗಣ್ಯವಾಗಿ ನಿಂತನು, ಅಂತು ಅಚಿಂತ್ಯಾದ್ಭುತ ಮಹಿಮನಾದ ಶ್ರೀ ಪರಶುರಾಮನು ಭರದ್ವಾಜಾದಿಮುನಿಗಳಿಗೆ ವಿದ್ಯೆಗಳನ್ನು ಹೇಳುತ್ತಾ ಇರಲು, ಭೂಮಿಯಲ್ಲಿ ರಾವಣಾದಿಗಳ ಸಂಹಾರಾರ್ಥವಾಗಿ ದಶರಥಪುತ್ರನಾಗಿ ಅವತರಿಸಿರುವ ಸಾಕ್ಷಾತ್ ನಾರಾಯಣನು ಹರಧನುರ್ಭಂಗ ಮಾಡಿದನೆಂಬ ಸುದ್ದಿಯನ್ನು ಕೇಳಿ ಹರಶಿಷ್ಯನಾದ ತಾನು ಅದನ್ನು ಸೈರಿಸಲಾರದೆ ರಾಮನಿಗ್ರಹಾರ್ಥವಾಗಿ ಪ್ರವರ್ತಿಸುವ ರೀತಿಯನ್ನು ತೋರಿಸುತ್ತಾ, ರಾಮಚಂದ್ರನ ದರ್ಶನ ಕುತೂಹಲಿಯಾಗಿ ಬಂದು ಶ್ರೀರಾಮನಂ ನೋಡಿ ಕಲಹವ್ಯಾಜದಿಂದ ತನ್ನ ಕೈಯಲ್ಲಿದ್ದ ವೈಷ್ಣವ ಕೋದಂಡವನ್ನು ರಘುರಾಮನಿಗೆ ಕೊಟ್ಟಾಗ ಆತನು ಪೂರ್ಣಾವತಾರನಾದ ಕಾರಣ ಪರಶುರಾಮನಲ್ಲಿದ್ದ ವಿಷ್ಣುಕಳೆಯನ್ನು ಆಕರ್ಷಿಸಿಕೊಂಡು ಅದೇ ಬಿಲ್ಲಿನಲ್ಲಿ ಹೂಡಿ ಆ ಬಾಣದಿಂದ ಮುನಿವಧೆಗೈಯಲಾರದೇ ಆತನು ಸ್ವರ್ಗಕ್ಕೆ ಕಟ್ಟಿಸಿದ್ಧ ಸೋಪಾನ ಪಂಕ್ತಿಯನ್ನು ಕತ್ತರಿಸಿ ಕೆಡಹಿಬಿಟ್ಟನು ಅಲ್ಲಿಂದ ಕೃತಕೃತ್ಯನಾಗಿ ಬಂದ ಪರಶುರಾಮನು [illegible] ವಹಿಸಿ ಚಿರಂಜೀವಿಯಾಗಿ ತಪವಂಗೈಯ್ಯುತ್ತಿದ್ದರೂ ದ್ವಾಪರಯುಗದಲ್ಲಿ ಅಗ್ನಿವೇಶ್ಯ [illegible]ನಾದಿ ಮುನಿಗಳಿಗೂ ಭೀಷ್ಮಕರ್ಣರಿಗೂ ಅಸ್ತ್ರವಿದ್ಯೆಯನ್ನು ಉಪದೇಶ ಮಾಡಿದನು ಇಂತು ನಾರಾಯಣಾಂಶದಿಂದ ಅವತರಿಸಿ ಭೂಭಾರವನ್ನು ಪರಿಹರಿಸಿ ಲೋಕವನ್ನು ರಕ್ಷಿಸಿದ [illegible]ಮೂರ್ತಿಯಾದ ಶ್ರೀ ಪರಶುರಾಮನ ದಿವ್ಯಚರಿತ್ರವನ್ನು ಬರೆದೋದಿ ಹೇಳಿ ಕೇಳಿ [illegible]ಸುವರಿಗೆ, ಆಯುರಾರೋಗ್ಯ ವಿಜಯೈಶ್ವರ್ಯ ಜ್ಞಾನವೈರಾಗ್ಯಾದಿ ಸತ್ಫಲಗಳು ಸಿದ್ಧಿಸುವವೆಂದು ಮಾರ್ಕಂಡೇಯ ಮುನಿಯು ಧರ್ಮರಾಯನಿಗೆ ಹೇಳಿ ಸುಮ್ಮನಾದನು.

ಇಂತು ಪರಶುರಾಮಾವತಾರದಕಥೆ ಸಮಾಪ್ತಂ. ಶ್ರೀ ಶ್ರೀ ಶ್ರೀ.



ಶ್ರೀ ರಾಮಚಂದ್ರಾಯ ನಮಃ.

## ಶ್ರೀರಾಮಾಯಣ ಕಥಾಸಂಗ್ರಹ ವಚನದಲ್ಲಿ.

# ರಾವಣನ ದಿಗ್ವಿಜಯ.

ಶ್ಲೋ॥ ವಂದಾಮಹೇ ಮಹೇಶಾನ ಚಂಡಕೋದಂಡ ಖಂಡನಂ ॥
ಜಾನಕೀ ಹೃದಯಾನಂದ ಚಂದನಂ ರಘುನಂದನಂ ॥

ಶ್ರೀಮತ್ಸಚ್ಚಿದಾನಂದವಿಗ್ರಹ ನಿತ್ಯಪರಿಪೂರ್ಣ ನೀಲಮೇಘಶ್ಯಾಮನಾಗಿ ಕೋಟಿಚಂದ್ರ ಪ್ರಕಾಶನಾಗಿ ಮಂದಹಾಸ ಮನೋಹರನಾಗಿ ಪೀತಾಂಬರಾಲಂಕೃತನಾಗಿ ಆದಿನಾರಾಯಣನು ಲಕ್ಷ್ಮೀಯಿಂದೊಡಗೂಡಿ ವೈಕುಂಠದಲ್ಲಿ ರತ್ನಖಚಿತ ಸಿಂಹಾಸನ ದಮೇಲೆ ಕುಳಿತ ಸಮಯದಲ್ಲಿ ಬ್ರಹ್ಮನ ಮಾನಸಪುತ್ರರಾದ ಸನಕಸನಂದಾದಿಗಳು ದೇವಾಧಿದೇವನ ದರ್ಶನಾರ್ಥವಾಗಿ ವೈಕುಂಠಕ್ಕೆ ಬಂದರು, ಆಗ ಅಲ್ಲಿ ಬಾಗಿಲುಕಾಯುತ್ತಿದ್ದ ಜಯ ವಿಜಯರು ಪ್ರಭುವಿನ ಅಪ್ಪಣೆಯಿಲ್ಲದೆ ಪ್ರವೇಶಿಸಕೂಡದೆಂದು ಮುನಿಗಳನ್ನು ತಡೆದರು. ಇದರಿಂದ ಸನಕಾದಿಗಳಿಗೆ ಕೋಪ ಬಂದು ನಿಮ್ಮಲ್ಲಿ ತಮೋಗುಣ ತುಂಬಿರುವುದರಿಂದ ನೀವು ಭೂಲೋಕದಲ್ಲಿ ರಕ್ಕಸರಾಗಿ ಜನಿಸಿ ಎಂದು ಶಾಪವಿತ್ತರು. ಆ ದ್ವಾರಪಾಲಕರು ಭಯಗ್ರಸ್ತರಾಗಿ ಋಷಿಗಳನ್ನು ಕುರಿತು ನಮ್ಮ ಗತಿಯೇನೆಂದು ಬೇಡಿಕೊಳ್ಳಲು ಅವರು ವಿಷ್ಣುವಿನಿಂದ ನಿಮಗೆ ಕ್ಷೇಮವಾಗುವುದು ಆತನನ್ನು ಸ್ತೋತ್ರಮಾಡಿ ಬೇಡಿಕೊಳಿ



ರೆಂದು ಹೇಳಿ ಹೋಗಿ ಶ್ರೀ ಲಕ್ಷ್ಮೀಪತಿಯಾದ ನಾರಾಯಣಮೂರ್ತಿಯ ದರ್ಶನಮಾಡಿ ಕೊಂಡು ತಮ್ಮ ಲೋಕಕ್ಕೆ ಹೊರಟುಹೋದರು. ತರುವಾಯ ದ್ವಾರಪಾಲಕರಾದ ಜಯ ವಿಜಯರು ಶ್ರೀಮನ್ನಾರಾಯಣನ ಬಳಿಗೆ ಹೋಗಿ ತಮಗೆ ಬಂದ ಋಷಿಶಾಪದ ಸಂಗತಿ ಯನ್ನು ಹೇಳಿಕೊಂಡು ಚಿಂತಾಕ್ರಾಂತರಾಗಿ ನಿಂತಿರಲು ಆಗ ಮಹಾವಿಷ್ಣುವು ಅವರ ಚಿಂತೆ ಯನ್ನು ಕಂಡು ಕನಿಕರಪಟ್ಟು ಎಲೈ ದ್ವಾರಪಾಲಕರೇ ನಿಮಗುಂಟಾದ ಋಷಿಶಾಪವು ತಪ್ಪುವು ದಿಲ್ಲ ನನಗೆ ಸ್ನೇಹಿತರಾಗಿದ್ದು ಏಳುಜನ್ಮಗಳನ್ನೆತ್ತಿ ತರುವಾಯ ನನ್ನ ಬಳಿಗೆ ಬರುವಿರೋ ನನಗೆ ಶತ್ರುಗಳಾಗಿ ಮೂರುಜನ್ಮಗಳನ್ನೆತ್ತಿ ನನ್ನ ಸೇವೆಗೆ ಬರುವಿರೋ ಹೇಳಿ ಎಂದು ಕೇಳಲು ಜಯ ವಿಜಯರು ಸ್ನೇಹಿತರಾಗಿ ಏಳು ಜನ್ಮಗಳು ತಮ್ಮ ಸೇವೆಯನ್ನು ಬಿಟ್ಟಿರಲಾರೆವು ಶತ್ರುಗಳಾ ದರೂ ಚಿಂತೆಯಿಲ್ಲ ನಮಗೆ ಮೂರು ಜನ್ಮವೇ ಸಾಕು ಎಂದು ಹೇಳಿಕೊಳ್ಳಲು ನಾರಾಯಣನು ಹಾಗೆಯೇ ಆಗಲಿ ಎಂದು ಹೇಳಿ ಅವರನ್ನು ಕಳುಹಿಸಿದನು.

## ಜಯವಿಜಯರು ಹಿರಣ್ಯಾಕ್ಷ ಹಿರಣ್ಯಕಶಿಪರಾಗಿ ಹುಟ್ಟಿದುದು.

ಬಳಿಕ ಜಯವಿಜಯರು ಮೊದಲು ಕಶ್ಯಪನ ಮಡದಿಯಾದ ದಿತಿಯ ಗರ್ಭದಿಂದ ಜನಿಸಿ ಹಿರಣ್ಯಾಕ್ಷ ಹಿರಣ್ಯಕಶ್ಯಪರೆಂಬ ಹೆಸರು ಪಡೆದು ದೊಡ್ಡವರಾಗಿ ಶಿವನನ್ನು ಮೆಚ್ಚಿಸಿ ವರಂಗಳಂ ಪಡೆದು ಲೋಕಕಂಟಕರಾಗಿದ್ದರು. ಅವರಲ್ಲಿ ಹಿರಣ್ಯಾಕ್ಷನೆಂಬವನು ಭೂಮಿಯನ್ನು ಚಾಪೆ ಯಂತೆ ಸುತ್ತಿ ದಿಗ್ವಿಜಯಮಾಡಲು ದೇವತೆಗಳು ಅವನ ಬಾಧೆಯನ್ನು ತಾಳಲಾರದೆ ನಾರಾಯ

ಣನಿಗೆ ಮೊರೆಯಿಟ್ಟರು. ಶ್ರೀಮಹಾವಿಷ್ಣುವು ವರಾಹಾವತಾರವನ್ನೆತ್ತಿ ರಾಕ್ಷಸರನ್ನು ಕೊಂದು ಭೂಮಿಯನ್ನೂ ವೇದಗಳನ್ನೂ ತಂದುಕೊಟ್ಟು ಲೋಕವನ್ನು ರಕ್ಷಿಸಿದನು. ತನಗೆ ಶತ್ರುವಾಗಿ ತನ್ನ ಭಕ್ತನಿಗೆ ಹಗೆಯಾಗಿ ಲೋಕಕಂಟಕನಾದ ಹಿರಣ್ಯಕಶಿಪುವನ್ನು ನೃಸಿಂಹಾವತಾರಮಾಡಿ ಬಗೆದು ಕೊಂದು ಲೋಕವನ್ನು ಪಾಲಿಸಿದನು ಹೀಗೆ ಜಯವಿಜಯರು ಮೊದಲನೆಯ ಜನ್ಮವನ್ನು ಕಳೆದುಕೊಂಡರು ತರುವಾಯ ಬ್ರಹ್ಮಮಾನಸಪುತ್ರನಾದ ಪುಲಸ್ತ್ಯಬ್ರಹ್ಮನ ಮಗನಾದ ವಿಶ್ರವಸ್ಸೆಂಬವನ ಹೆಂಡತಿಯ ಬಸಿರಿನಲ್ಲಿ ವೈಶ್ರವಣನೆಂಬ ಮಗನೊಬ್ಬನು ಹುಟ್ಟಿ ತನ್ನ ಮುತ್ತಜ್ಜನಾದ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಮೆಚ್ಚಿಸಿ ಉತ್ತರದಿಕ್ಕಿನ ಅಧಿಕಾರ, ಧನಾಧಿಪತ್ಯ ಕಾಮಗಾಮಿಯಾದ ವಿಮಾನ ಶಿವನ ಸಖ್ಯವೆಂಬ ನಾಲ್ಕು ವರಗಳನ್ನು ಪಡೆದುಕೊಂಡು, ತಂದೆಯ ಬಳಿಗೆ ಬಂದು ನಮಸ್ಕಾರಮಾಡಿ ತಾನು ವರಗಳನ್ನು ಪಡೆದ ಬಗೆಯನ್ನು ಹೇಳಿ ವಾಸಮಾಡುವುದಕ್ಕೆ ಸ್ಥಾನವನ್ನು ಕೇಳಲು ತಂದೆಯಾದ ವಿಶ್ರವಸ್ಸು ಮಗನ ಮಾತಿಗೆ ಸಂತೋಷಪಟ್ಟು ಮಗನೇ, ನಿನ್ನ ಸಹೋದರರಾದ ಮಾಲಿ, ಸುಮಾಲಿ, ಮಾಲ್ಯವಂತರೆಂಬವರು ಲವಣಸಮುದ್ರದ ದಕ್ಷಿಣಕಡೆ ನೂರುಯೋಜನದಗಲವಾದ ಮೂರು ಶಿಖರಗಳುಳ್ಳ ತ್ರಿಕೂಟಾಚಲವೆಂಬ ಪರ್ವತ ಮಧ್ಯದಲ್ಲಿ ಅಮರಾವತಿಗಿಂತಲೂ ಅಂದಚಂದವಾದ ಲಂಕೆಯೆಂಬ ಒಂದು ಪಟ್ಟಣವನ್ನು ಕಟ್ಟಿಕೊಂಡು ಇದ್ದರು. ಶ್ರೀಮಹಾವಿಷ್ಣುವು ದೇವತೆಗಳಿಗಾಗಿ ಯುದ್ಧದಲ್ಲಿ ಅವರನ್ನು ಗೆದ್ದುದರಿಂದ ಅವರು ಭಯಪಟ್ಟು ಆ ಲಂಕೆಯನ್ನು ಬಿಟ್ಟು ಸಕುಟುಂಬರಾಗಿ ಓಡಿಹೋಗಿ ರಸಾತಲದಲ್ಲಿ ಅವಿತುಕೊಂಡಿರುವರು, ಆ ಪಟ್ಟಣವು ನೀನಿರುವದಕ್ಕೆ ಯೋಗ್ಯವಾಗಿದೆ ನೀನು ಅಲ್ಲಿರು ಎನಲು, ವೈಶ್ರವಣನು ವರಲಬ್ಧವಾದ ಪುಷ್ಪಕವಿಮಾನವನ್ನೇರಿ ತನ್ನ ಪರಿವಾರದೊಡನೆ ಉತ್ತರದಿಕ್ಕಿನಿಂದ ಬಂದು ಲಂಕಾಪಟ್ಟಣವನ್ನು ಸೇರಿ ಅಲ್ಲಿ ಸುಖವಾಗಿ ರಾಜ್ಯವನ್ನಾಳುತ್ತಿದ್ದನು. ಲಕ್ಷ್ಮೀಪತಿಯಿಂದ ಪರಾಜಿತರಾಗಿ ಓಡಿಹೋಗಿದ್ದವರಲ್ಲಿ ಸುಮಾಲಿಯೆಂಬವನು ರಸಾತಲದಿಂದ ಕೈಕಸೆ ಎಂಬ ತನ್ನ ಮಗಳನ್ನು ಕರೆದುಕೊಂಡು ಭೂಸಂಚಾರ ಮಾಡಬೇಕೆಂದು ಹೊರಟು ಸಂಚರಿಸುತ್ತಿದ್ದಾಗ ಭೂಮಿಯಲ್ಲಿ ವೈಶ್ರವಣನೊಂದುದಿನ ತನ್ನ ತಂದೆಯಾದ ವಿಶ್ರವಸ್ಸನ್ನು ನೋಡಲಪೇಕ್ಷಿಸಿ ಲಂಕೆಯಿಂದ ವಿಮಾನದಲ್ಲಿ ಕುಳಿತುಕೊಂಡು ಹೊರಟು ಗಗನಮಾರ್ಗದಲ್ಲಿ ಬಂದು ತಂದೆಯನ್ನು ಕಂಡು ವಂದಿಸಿ ಮರಳಿ ಲಂಕೆಗೆ ಪೋಗುವದನ್ನು ನೋಡಿ ಆಹಾ ನಮ್ಮ ಲಂಕಾಪಟ್ಟಣವನ್ನು ಇವನು ಆಕ್ರಮಿಸಿಕೊಂಡನಲ್ಲಾ ಇವನನ್ನು ಹೇಗಾದರೂ ಜಯಿಸಿ ಲಂಕೆಯನ್ನು ಕಿತ್ತುಕೊಂಡು ನಾವೇ ವಾಸಮಾಡಬೇಕು. ಇದಕ್ಕೆ ಏನು ಉಪಾಯ ಮಾಡೋಣವೆಂದು ಸ್ವಲ್ಪಹೊತ್ತು ಯೋಚಿಸಿ ತನ್ನ ಬಳಿಯಲ್ಲಿದ್ದ ಕೈಕಸೆಯನ್ನು ಕುರಿತು ಮಗಳೇ ವಿಶ್ರವಸ್ಸೆಂಬ ಮಹಾಮುನಿಯು ಈ ಆಶ್ರಮದಲ್ಲಿರುವನು ನೀನು ಹೋಗಿ ಆತನನ್ನು ವರಿಸಿ ಮದುವೆಯಾಗಿ ಆ ಮಹರ್ಷಿಯಿಂದ ನೀನು ಮಕ್ಕಳನ್ನು ಪಡದರೆ ಆ ಮಕ್ಕಳಿಂದ ನಾವು ಯಥಾಪ್ರಕಾರ ನಮ್ಮ ಲಂಕಾಪಟ್ಟಣವನ್ನು ಸೇರಿ ಸಂತೋಷದಿಂದಿರಬಹುದು ಎಂದು ಹೇಳಿ ಮಗಳನ್ನು ಆ ಋಷ್ಯಾಶ್ರಮಕ್ಕೆ ಕಳುಹಿಸಿದನು.

ಆ ರೂಪುರೇಖಾ ಲಾವಣ್ಯಯುಕ್ತಳಾದ ಕೈಕಸಿಯೆಂಬ ಆ ರಕ್ಕಸಿಯು ರತಿಸುಖಾಪೇಕ್ಷೆಯುಳ್ಳವಳಾಗಿ ಸಂಜೆಯ ಹೊತ್ತಿನಲ್ಲಿ ಆ ಮುನಿಯ ಬಳಿಗೆ ಹೋಗಿ ತಲೆಯನ್ನು ಬಗ್ಗಿಸಿಕೊಂಡು ಕುಡಿನೋಟದಿಂದ ನೋಡುತ್ತಾ ಮುಗುಳ್ನಗೆ ನಕ್ಕು ಕಾಲುಂಗುಟದಿಂದ ನೆಲವನ್ನು ಕೆರೆಯುತ್ತ ನಿಂತಿರಲು ಸುದತಿಯ ಸೊಬಗನ್ನು ನೋಡಿ ದಿವ್ಯದೃಷ್ಟಿಯಿಂದಾ ಮುನಿಯು ಅವಳ ಬಯಕೆಯನ್ನು ತಿಳಿದವನಾಗಿ ಎಲೈ ಕಾಂತೆಯೇ ನಿನ್ನ ಇಂಗಿತವನ್ನು ತಿಳಿದುಕೊಂಡೆನು ಆದರೆ ನೀನು ರಾಕ್ಷಸಸಂಚಾರಕ್ಕೆ ಯೋಗ್ಯವಾದ ಸಂಧ್ಯಾಕಾಲದಲ್ಲಿ ಮಕ್ಕಳನ್ನು ಬಯಸಿದವಳಾಗಿ ಬಂದದ್ದರಿಂದ ನಿನ್ನ ಬಸುರೊಳು ಮಹಾಭಯಂಕರರಾಗಿಯೂ ಲೋಕಕಂಟಕರಾಗಿಯೂ ಇರುವ

ಇಬ್ಬರು ಗಂಡುಮಕ್ಕಳೂ ಒಬ್ಬಳು ಹೆಣ್ಣುಮಗಳೂ ಹುಟ್ಟುವರು ಎನಲು ಆಕೆಯು ದುಃಖದಿಂದ ಕಣ್ಣೀರು ಸುರಿಸುತ್ತ ಮುನಿಯನ್ನು ನೋಡಲು ಆತನು ಕರುಣೆಯುಳ್ಳವನಾಗಿ ಎಲೈ ಹೆಣ್ಣೆ ಕಡೆಗೆ ವಿಷ್ಣುಭಕ್ತನಾದ ಮತ್ತೊಬ್ಬ ಮಗನು ಹುಟ್ಟುವನು ಹೋಗೆನಲು ಅವಳು ಬಹಳ ಸಂತೋಷದಿಂದ ಮುನಿಗೆ ನಮಸ್ಕಾರಮಾಡಿ ತಂದೆಯಬಳಿಗೆ ಹೋಗಿ ನಡೆದ ಸುದ್ದಿಯನ್ನು ಹೇಳಿದಳು ಅದನ್ನು ಕೇಳಿ ಸುಮಾಲಿಯು ಸಂತೋಷಿಸಿ ಆಮುನಿಯ ಆಶ್ರಮದಲ್ಲೇ ಇರುತ್ತ ಮೊಮ್ಮಕ್ಕಳು ಜನಿಸುವದನ್ನು ನಿರೀಕ್ಷಿಸಿಕೊಂಡಿದ್ದನು.

## ರಾವಣ, ಕುಂಭಕರ್ಣ, ಶೂರ್ಪಣಖಿ, ವಿಭೀಷಣರ, ಜನನ.

ಹೀಗಿರುವಲ್ಲಿ ಆ ಕೈಕಸೆಯು ಕೆಲವು ಕಾಲದಮೇಲೆ ಹತ್ತು ತಲೆಗಳೂ ಇಪ್ಪತ್ತು ಭುಜಗಳೂ ಉಳ್ಳ ಮಹಾಘೋರರೂಪಿನ ಒಬ್ಬ ಮಗನನ್ನು ಹೆತ್ತಳು. ಆಗ ಅನೇಕ ಭಯಂಕರಗಳಾದ ಉತ್ಪಾತಗಳುಂಟಾಗಿ ಇಂದ್ರಾದಿ ದೇವತೆಗಳೆಲ್ಲರೂ ಮಹಾಭಯದಿಂದ ಕಂಪಿಸಿದರು. ಮೇಘಗಳಿಂದ ರಕ್ತದಮಳೆ ಸುರಿಯಿತು ನಕ್ಷತ್ರಗಳು ನೆಲಕ್ಕೆ ಉದಿರಿದವು, ಹತ್ತುತಲೆಸಹಿತ ಹುಟ್ಟಿದವನಾದಕಾರಣ ವಿಶ್ರವಸ್ಸು ದಶಮುಖನೆಂದು ನಾಮಕರಣ ಮಾಡಿದನು. ತರುವಾಯ ಕೆಲವು ಕಾಲದಮೇಲೆ ಅವಳು ಮಹಾಘೋರವಾದ ಆಕಾರವುಳ್ಳ ಮಗನನ್ನು ಹಡೆದಳು, ಅವನಿಗೆ ಕುಂಭಕರ್ಣನೆಂದು ಹೆಸರಾಯಿತು ಬಳಿಕ ಕೈಕಸೆಯು ಮತ್ತೆ ಬಸುರಾಗಿ ನವಮಾಸ ತುಂಬಲೂ ಸೌಮ್ಯನಾಗಿಯೂ ಸುಂದರನಾಗಿಯೂ ಪೂರ್ಣಚಂದ್ರನಂತೆ ಪ್ರಕಾಶಿಸುವ ಮುಖವುಳ್ಳವನಾಗಿಯೂ, ವಿಶಾಲನೇತ್ರನಾಗಿಯೂ ವಿಶಾಲಫಾಲವುಳ್ಳವನಾಗಿಯೂ, ಅಗಲವಾದ ಎದೆಯುಳ್ಳವನಾಗಿಯೂ ನೀಳವಾದ ತೋಳುಗಳುಳ್ಳವನಾಗಿಯೂ, ರಾಜಲಕ್ಷಣಗಳಿಂದ ಕೂಡಿ ಸುಂದರನಂತೆ ಪ್ರಕಾಶಿಸುವ ಮತ್ತೊಬ್ಬ ಮಗನನ್ನು ಪಡೆದಳು, ವಿಶ್ರವಸ್ಸು ಮಗುವನ್ನು ನೋಡಿ ಬಹಳ ಸಂತೋಷಪಟ್ಟು ಅವನಿಗೆ ವಿಭೀಷಣನೆಂದು ಹೆಸರಿಟ್ಟನು. ತರುವಾಯ ಕೆಲವು ದಿವಸಗಳಾದನಂತರ ಒಂದು ಹೆಣ್ಣು ಮಗುವನ್ನು ಹೆತ್ತಳು. ಆ ಮಗುವಿಗೆ ಮೊರಗಳಂತೆ ಅಗಲವಾದ ಉಗುರುಗಳು ಜೋಲಾಡುವ ಮೂಗೂ ವಿಕಾರವಾದ ರೂಪವೂ ಇದ್ದದ್ದರಿಂದ ಅವಳಿಗೆ ಶೂರ್ಪಣಖಿಯೆಂದು ಹೆಸರಿಟ್ಟು ಮಕ್ಕಳನ್ನು ನೋಡಿ ಸಂತೋಷಿಸುತ್ತಿದ್ದು ತರುವಾಯ ದಶಮುಖ ಕುಂಭಕರ್ಣ ವಿಭೀಷಣರೆಂಬ ಮೂವರು ಮಕ್ಕಳಿಗೂ ಚೌಲೋಪನಯನಾದಿ ಸಂಸ್ಕಾರಗಳನ್ನು ಮಾಡಿ ವಿದ್ಯಾಭ್ಯಾಸವನ್ನು ಮಾಡಿಸಿದನು, ಬಳಿಕ ಜ್ಯೇಷ್ಠಕುಮಾರನಾದ ದಶಕಂಠನು ಜನರನ್ನು ಪೀಡಿಸುತ್ತಾ ಅವರಿಗೆ ಸಂಕಟವನ್ನು ಉಂಟುಮಾಡುತ್ತಿದ್ದನು, ಎರಡನೆಯವನಾದ ಕುಂಭಕರ್ಣನು ಜನಗಳನ್ನು ಹಿಡಿದು ತಿನ್ನುತ್ತಾ ಬಂದನು, ಮೂರನೆಯವನಾದ ವಿಭೀಷಣನು ವೇದಶಾಸ್ತ್ರಗಳನ್ನು ಅಭ್ಯಾಸಮಾಡುತ್ತಾ ವಿದ್ಯಾವಂತನಾಗಿ, ಶಾಂತಹೃದಯನಾಗಿ, ಧರ್ಮಗುಣವುಳ್ಳವನಾಗಿ, ಪರರಿಗೆ ಉಪಕಾರಿಯಾಗಿದ್ದನು. ಹೀಗಿರಲು ಒಂದುದಿನ ಎಂದಿನಂತೆ ಲಂಕೆಯಿಂದ ವೈಶ್ರವಣನು ತಂದೆಯ ದರ್ಶನಕ್ಕೆ ವಿಮಾನಾರೂಢನಾಗಿ ಬಂದು ತಂದೆಯ ದರ್ಶನವನ್ನು ಮಾಡಿಕೊಂಡು ಮರಳಿ ಹಿಂತಿರುಗಿ ಹೋಗುತ್ತಿರುವ ಕಾಲದಲ್ಲಿ ಸುಮಾಲಿಯ ಮಗಳಾದ ಕೈಕಸಿಯು ತನ್ನ ಹಿರಿಯ ಮಗನಾದ ದಶಮುಖನನ್ನು ಕರೆದು ಮಗನೇ ನೀನು ಈ ಕುಬೇರನ ಹಾಗೆ ತುಂಬಾ ಐಶ್ವರ್ಯವಂತನಾಗು ಆಗದಿದ್ದರೆ ಈ ಬ್ರಹ್ಮಕುಲದಲ್ಲಿ ಹುಟ್ಟಿದುದಕ್ಕೇನು ಫಲ ಎಂದು ಹೇಳಿ ಅವನನ್ನು ಅವನಿಗೆ ತೋರಿಸಿದಳು ದಶಮುಖನು ಅಮ್ಮಾ, ಬಾಯಿಮಾತುಗಳಿಂದ ಫಲವೇನು ನಾನು ತಪಸ್ಸುಮಾಡಿ ಮುತ್ತಜ್ಜನಾದ ಬ್ರಹ್ಮನನ್ನು ಮೆಚ್ಚಿಸಿ ನನಗೆ ಬೇಕಾದ ವರಗಳನ್ನು ಪಡೆದುಕೊಂಡು ನಮ್ಮಣ್ಣನಾದ ಕುಬೇರನಿಗಿಂತಲೂ ಹೆಚ್ಚಾದ ಐಶ್ವರ್ಯವಂತನೆನ್ನಿಸಿ

ಕೊಳ್ಳುವೆನು, ಆಶೀರ್ವಾದ ಮಾಡಮ್ಮಾ ಎಂದು ತಾಯಿಯನ್ನು ಬೆಸಗೊಂಡು ತಮ್ಮಂದಿರನ್ನೂ ಕರೆದುಕೊಂಡು ಪಶ್ಚಿಮ ಸಮುದ್ರತೀರದಲ್ಲಿರುವ ಗೋಕರ್ಣವೆಂಬ ಪುಣ್ಯಾಶ್ರಮಕ್ಕೆ ಬಂದನು.

## ರಾವಣಾದಿಗಳು ತಪಸ್ಸುಮಾಡಿ ವರ ಪಡೆದುದು.

ಅಲ್ಲಿ ಮೂವರೂ ಒಬ್ಬೊಬ್ಬರು ಒಂದೊಂದು ಕಡೆಯಲ್ಲಿ ಬಹಳ ನೇಮಗಳಿಂದ ಶಾಸ್ತ್ರೋಕ್ತವಾಗಿ ಬ್ರಹ್ಮನನ್ನು ಕುರಿತು ನಿಶ್ಚಲಚಿತ್ತರಾಗಿ ತಪಸ್ಸುಮಾಡಿದರು. ಅವರೊಳು ದಶವದನನು ಮಳೆಗಾಲದಲ್ಲಿ ನೀರಿನಲ್ಲಿಯೂ ಬೇಸಗೆಯಲ್ಲಿ ಪಂಚಾಗ್ನಿ ಮಧ್ಯದಲ್ಲಿಯೂ ನಿಂತು ಘೋರವಾದ ತಪಸ್ಸುಮಾಡಿದನು. ಕುಂಭಕರ್ಣನು ಒಂದೇ ಕಾಲಿನಲ್ಲಿ ನಿಂತು ತಪಸ್ಸುಮಾಡಿದನು, ವಿಭೀಷಣನು ಸೂರ್ಯಾಭಿಮುಖನಾಗಿ ಅವನನ್ನು ನೋಡುತ್ತಾ ತಪವಂಗೈದನು. ಹೀಗೆ ಬಹುಕಾಲ ತಪಸ್ಸು ಮಾಡಿದರೂ ಬ್ರಹ್ಮನು ಪ್ರತ್ಯಕ್ಷನಾಗದೇ ಇದ್ದುದ್ದರಿಂದ ದಶಕಂಠನು ವರುಷಕ್ಕೊಂದು ಶಿರಸ್ಸನ್ನು ಕಡಿದು ಅಗ್ನಿಯಲ್ಲಿ ಪೂರ್ಣಾಹುತಿ ಕೊಡುತ್ತಾ ಒಂಭತ್ತು ವರುಷಗಳಲ್ಲಿ ಒಂಭತ್ತು ಶಿರಸ್ಸುಗಳನ್ನು ಕಡಿದು ಹೋಮಮಾಡಿ ಹತ್ತನೇ ವರುಷದಲ್ಲಿ ತನ್ನ ಹತ್ತನೆಯ ತಲೆಯನ್ನು ಕಡಿಯಲು ಯತ್ನಿಸಲು ಬ್ರಹ್ಮನಿಗೆ ಕರುಣಹುಟ್ಟಿ ಪ್ರತ್ಯಕ್ಷನಾಗಿ ಬಂದು ರಾವಣನನ್ನು ಕುರಿತು ಎಲೈ ಕುಮಾರನೇ ನಿನ್ನ ತಪಸ್ಸಿಗೆ ಮೆಚ್ಚಿದೆನು ನಿನಗೆ ಬೇಕಾದ ವರಗಳನ್ನು ಬೇಡು ಎಂದು ಹೇಳಲು ದಶಮುಖನು ಕಣ್ದೆರೆದು ಬ್ರಹ್ಮನನ್ನು ನೋಡಿ ಕಾಲ್ಗೆರಗಿ ಮುತ್ತಜ್ಜ ನರರು ಉರಗರು ಯಕ್ಷರು ರಾಕ್ಷಸರು ಗರುಡರು ಗಂಧರ್ವರು ಸಿದ್ಧರು ಸಾಧ್ಯರು ಮೊದಲಾದ ದೇವದಾನವರಿಂದ ನನಗೆ ಮರಣ ಉಂಟಾಗದಂತೆ ವರವನ್ನು ಕೊಡಬೇಕು ಮನುಷ್ಯರೂ ಮೃಗಪಕ್ಷಿಗಳೂ ನನಗೆ ಸಮಾನರಲ್ಲವೆಂದು ನುಡಿಯಲು ಬ್ರಹ್ಮನು ಹಾಗೆಯೆ ಆಗಲೆಂದು ವರವನ್ನು ಕೊಟ್ಟು ಕಡಿದು ಹೋಮ ಮಾಡಿದ ನಿನ್ನ ತಲೆಗಳು ತಾನಾಗಿಯೇ ಹುಟ್ಟಲಿ ನಿನ್ನ ತಲೆಯನ್ನು ಯಾರು ಕಡಿದರೂ ಮೊಳೆಯುತ್ತಿರಲಿ ಎಂದು ಹೇಳಿ ಅವನ ಹೃದಯದಲ್ಲಿ ಅಮೃತಕಲಶವನ್ನಿರಿಸಿ ವಿಭೀಷಣನು ತಪಸ್ಸು ಮಾಡುತ್ತಿದ್ದ ಕಡೆಗೆ ಹೋಗಿ ಅವನನ್ನು ಕುರಿತು ಎಲೈ ಕುಲಶಿರೋಮಣಿಯೇ ಘೋರತಪಸ್ಸಿನಿಂದ ತೃಪ್ತನಾದೆನು ಕಂದನೇ ಮಂತ್ರೋದ್ಧಾರಕನೇ ವರಗಳನ್ನು ಬೇಡೆನಲು ಅವನು ಕರುಣಾಳುವಾದ ಬ್ರಹ್ಮನ ಪಾದಗಳಿಗೆರಗಿ ಮುಕುಳಿತ ಹಸ್ತನಾಗಿ ಮುತ್ತಜ್ಜನೇ ನಿನ್ನ ಪಾದದರ್ಶನದಿಂದ ನಾನು ಅತ್ಯಂತ ಕೃತಕೃತ್ಯನಾದೆನು. ಎಲೈ—ಬ್ರಹ್ಮನೇ ಎಂಥಾ ಆಪತ್ತು ಪ್ರಾಪ್ತವಾದರೂ ನಾನು ಧರ್ಮವನ್ನು ಬಿಡದಂತೆಯೂ, ಬ್ರಹ್ಮಾಸ್ತ್ರಾದಿ ಸಕಲದೇವತಾಸ್ತ್ರ ಮಂತ್ರಾಸ್ತ್ರಗಳೂ ನನಗೆ ಅಭ್ಯಾಸವಿಲ್ಲದೆ ಲಭಿಸುವಹಾಗೂ ವರಗಳನ್ನು ಕರುಣಿಸಬೇಕೆಂದು ಬೇಡಿಕೊಳ್ಳಲು ಬ್ರಹ್ಮನು ಅವನು ಕೇಳಿದ ಎರಡು ವರಗಳನ್ನೂ ಕೊಟ್ಟು ನೀನು ಚಿರಂಜೀವಿಯಾಗಿರು ಎಂಬ ವರವನ್ನೂ ಕರುಣಿಸಿ ಕುಂಭಕರ್ಣನಿಗೆ ವರವನ್ನು ಕೊಡಲೋಸುಗ ಅವನು ತಪಸ್ಸುಮಾಡುತ್ತಿದ್ದ ತಪೋವನಕ್ಕೆ ಬರುತ್ತಿದ್ದನು. ಆಗ ಇಂದ್ರಾದಿ ದೇವತೆಗಳೆಲ್ಲರೂ ಬಂದು ಬ್ರಹ್ಮನನ್ನುನೋಡಿ ಸ್ವಾಮಿಾ ಕುಂಭಕರ್ಣನು ಈಗಲೇ ಲೋಕವನ್ನೆಲ್ಲಾ ನುಂಗುತಿದ್ದಾನೆ ಅವನಿಗೆ ವರವನ್ನೂ ಕೊಟ್ಟರೆ ಜಗತ್ತೇ ಉಳಿಯುವದಿಲ್ಲವೆಂದು ಕೈಮುಗಿದು ನೀನು ಇಂಥವನಿಗೆ ಪುನಃ ವರವನ್ನು ಕೊಡುವದು ಯುಕ್ತವಲ್ಲವೆಂದು ಬೇಡಿಕೊಳ್ಳಲು ಬ್ರಹ್ಮನು ಸರಸ್ವತಿಯನ್ನು ಕರೆದು ಎಲೈ—ಪ್ರಿಯಳೇ ನೀನು ಕುಂಭಕರ್ಣನ ಹೃದಯದೊಳಗಿದ್ದು ಅವನಿಗೆ ಕಳಂಕವನ್ನುಂಟುಮಾಡಿ ದೇವತೆಗಳಿಗೆ ಹಿತವಾಗುವಂತೆ ವರವನ್ನು ಬೇಡುವಹಾಗೆ ಅವನನ್ನು ಪ್ರೇರಿಸು ಎಂದನು. ಆಕೆ ಆ ಕುಂಭಕರ್ಣನ ಹೃದಯವನ್ನು ಸೇರಿಕೊಂಡಿದ್ದು ಅವನ ಬುದ್ಧಿ ವಿಕಲ್ಪವಾಗುವಂತೆ ಮಾಡಿದಳು. ಬ್ರಹ್ಮನು ಕುಂಭಕರ್ಣನ ತಪೋವನಕ್ಕೆ ಹೋಗಿ ಎಲೈ—ಕುಂಭಕರ್ಣನೇ ನೀನು ನನ್ನನ್ನು ಕುರಿತು ಮಾಡಿದ

ಘೋರವಾದ ತಪಸ್ಸಿಗೆ ನಾನು ಬಹಳ ಸಂತುಷ್ಟನಾಗಿದ್ದೇನೆ, ವರವನ್ನು ಬೇಡು ಕೊಡುವೆನೆನಲು ಕುಂಭಕರ್ಣನು ಮುತ್ತಜ್ಜನ ಕಾಲುಗಳಿಗೆರಗಿ ಸ್ವಾಮಿ ನಾನು ಯಾವಾಗಲೂ ನಿದ್ರಾಸುಖವನ್ನನುಭವಿಸುವಂತೆ ವರವನ್ನು ಅನುಗ್ರಹಿಸಬೇಕೆಂದು ಬೇಡಿಕೊಳ್ಳಲು ಬ್ರಹ್ಮನು ಹಾಗೆಯೇ ಆಗಲಿ ಎಂದು ವರವನ್ನು ಕೊಟ್ಟು ಆಶೀರ್ವದಿಸಿ ತನ್ನ ಸತಿಯೊಡನೆ ಸತ್ಯಲೋಕವನ್ನೈದಿದನು. ಸರಸ್ವತಿಯಿಂದ ಬಿಡಲ್ಪಟ್ಟು ಕುಂಭಕರ್ಣನು ಕಳವಳವಿಲ್ಲದವನಾಗಿ ತಾನು ಪಡೆದುಕೊಂಡ ವರವನ್ನು ಕುರಿತು ಇದು ದೇವತೆಗಳ ಮೋಸದಿಂದುಂಟಾಯಿತೆಂದು ತನ್ನ ದುಷ್ಕೃತ್ಯವನ್ನು ಬೈದುಕೊಂಡು ಚಿಂತಿಸಿ ತನ್ನನ್ನು ತಾನೇ ನಿಂದಿಸಿಕೊಂಡನು.

## ದಶಕಂಠನು ವೈಶ್ರವಣನನ್ನು ಓಡಿಸಿ ಲಂಕೆಯನ್ನು ಆಕ್ರಮಿಸಿದುದು.

ಅನಂತರದಲ್ಲಿ ಮೂರುಮಂದಿ ಸಹೋದರರು ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಮುಂದೆ ಏನುಮಾಡಬೇಕೋ ಗೊತ್ತಾಗದೆ ಚಿಂತಿಸುತ್ತಾ ಶ್ಲೇಷ್ಮಾತಕವೆಂಬ ವನದಲ್ಲಿದ್ದರು. ಆಗ ರಸಾತಲದಲ್ಲಿದ್ದ ಸುಮಾಲಿಯೆಂಬವನು ತನ್ನ ಮಗಳಾದ ಕೈಕಸಿಯ ಮಕ್ಕಳಾದ ದಶವದನ, ಕುಂಭಕರ್ಣ, ವಿಭೀಷಣರು ತಪಸ್ಸುಮಾಡಿ ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಕಾರ್ಯಾಂತರವನ್ನು ತಿಳಿಯದೆ ಯೋಚಿಸುತ್ತಿರುವದನ್ನು ಕೇಳಿ, ಸಂತೋಷಭರಿತನಾಗಿ ರಸಾತಲದಲ್ಲಿದ್ದ ತನ್ನ ಮಕ್ಕಳು ಮತ್ತು ಮೊಮ್ಮಕ್ಕಳಾದ ಮಹೋದರ, ವಜ್ರದಂಷ್ಟ್ರ, ಸುಪಾರ್ಶ್ವ, ಮಾರೀಚ, ಪ್ರಹಸ್ತ, ಅಕಂಪ, ಧೂಮ್ರಾಕ್ಷ, ವಿಕಟ, ಸಂಪಾತಿ, ಶುಕ, ಸಾರಣರನ್ನು ಕರೆದುಕೊಂಡು ಬಂದು ತನ್ನ ದೌಹಿತ್ರರನ್ನು ಕಾಣಿಸಿಕೊಳ್ಳಲು ಅವರು ತಮ್ಮ ಮಾತಾಮಹನಾದ ಸುಮಾಲಿಗೆ ನಮಸ್ಕಾರವನ್ನು ಮಾಡಿ ನಿಂತಿರಲು ಆತನು ಸಂತೋಷವೆಂಬ ಸಮುದ್ರಹಳ್ಲಿ ಮುಳುಗಿದವನಾಗಿ ಅವರನ್ನು ಅಪ್ಪಿ ಮುದ್ದಾಡಿ ಆಶೀರ್ವದಿಸಿ ಹಿರಿಯವನಾದ ದಶಕಂಠನನ್ನು ನೋಡಿ ಕುಮಾರನೇ ನೀನು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಅವನನ್ನು ಮೆಚ್ಚಿಸಿ ಅವನಿಂದ ವರಗಳನ್ನು ಪಡೆದು ಭಯವೆಂಬ ಮಹಾಸಮುದ್ರದೋಳ್ ಮುಳುಗಿ ಪಾರವನ್ನು ಕಾಣದೆ ಶ್ರಮಪಡುತ್ತಿದ್ದ ನಮ್ಮ ಕುಲಸ್ಥರಾದ ರಾಕ್ಷಸಸಮೂಹವನ್ನು ಮೇಲಕ್ಕೆ ಎತ್ತಿ ಪಾರವನ್ನು ಕಾಣಿಸಿ ಕುಲವನ್ನು ಉದ್ಧರಿಸಿದವನಾಗಿ ನನ್ನಸಂಗಡ ಬಂದಿರುವ ಮಹೋದರ, ಪ್ರಹಸ್ತ, ಮಾರೀಚ, ಸುಪಾರ್ಶ್ವ, ವಜ್ರದಂಷ್ಟ್ರರೆಂಬರೈವರೂ ನನ್ನ ಮಕ್ಕಳು, ನಿನಗೆ ಸೋದರ ಮಾವಂದಿರಾಗಬೇಕು, ಇವರು ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯಗಳಲ್ಲಿಯೂ ರಾಜ್ಯತಂತ್ರಗಳಲ್ಲಿಯೂ, ರಾಜನೀತಿಯಲ್ಲಿಯೂ ಬಹಳ ಸಮರ್ಥರು, ಇವರೆಲ್ಲರೂ ನಿನಗೆ ಆಪ್ತರಾಗಿ ನಡೆದುಕೊಳ್ಳುವರು, ಅವರೊಂದಿಗೆ ಸೇರಿ ನೀನು ಪೂರ್ವದಲ್ಲಿ ನಾವು ಕಟ್ಟಿ ವಾಸಮಾಡುತ್ತಿದ್ದ ಲಂಕಾಪಟ್ಟಣವನ್ನು ಜಯಿಸಿ ಅಲ್ಲಿ ರಾಜ್ಯಭಾರ ಮಾಡುತ್ತಿರು, ನಾವು ವಿಷ್ಣುವಿನ ಭಯದಿಂದ ಲಂಕೆಯನ್ನು ಬಿಟ್ಟು ರಸಾತಲದಲ್ಲಿ ವಾಸಮಾಡಿಕೊಂಡಿರುವೆವು ಆ ಲಂಕಾಪಟ್ಟಣವು ನಿಮ್ಮ ಬಲತಾಯಿಯ ಮಗನಾದ ಕುಬೇರನಿಂದ ಆಳಲ್ಪಡುತ್ತಿರುವದು, ನೀನು ನನಗೆ ದೌಹಿತ್ರನಾದುದರಿಂದ ಆತನನ್ನು ಅಲ್ಲಿಂದ ಹೊರಡಿಸಿ ನನ್ನದಾಗಿದ್ದ ಲಂಕೆಯನ್ನು ಸ್ವಾಧೀನಮಾಡಿಕೊಂಡು ರಾಜ್ಯಭಾರ ಮಾಡು ಎಂದನು. ಆ ಮಾತಿಗೆ ದಶವದನನು ಎಲೈ ತಾತನೇ ನೀನು ಹೇಳಿದುದು ನಿಜವೇಸರಿ ಆದರೆ ಕುಬೇರನನ್ನು ಜಯಿಸು ಎನ್ನುವಿಯಲ್ಲಾ ಅವನು ನಮ್ಮಣ್ಣನಲ್ಲವೇ ಆತನೊಂದಿಗೆ ನಾವು ಯುದ್ಧಮಾಡಿದರೆ ಆತನಿಗೆ ಕ್ಷೇಮಂಟಾಗಿ ನಮಗೆ ಭ್ರಾತೃದ್ರೋಹವು ಬರುವದಿಲ್ಲವೇ ನಿರಪರಾಧಿಯಾದ ನಮ್ಮಣ್ಣನು ವಾಸ ಮಾಡಿಕೊಂಡು ಸುಖವಾಗಿರುವದನ್ನು ತಪ್ಪಿಸಿ ಅವನನ್ನು ಅಲ್ಲಿಂದ ಹೊರಡಿಸಿ ನಾವು ಇಲ್ಲಿ ವಾಸಮಾಡುವದು ಯಾವ ನ್ಯಾಯ ಎಂದು ಕೇಳಲು

ಆ ಮಾತಿಗೆ ಸುಮಾಲಿಯು ದೌಹಿತ್ರನ ಮಾತನ್ನು ಕೇಳಿ ನಸುನಗುತ್ತಾ ಎಲೈ—ಕಂದಾ ಹಾಗಲ್ಲ ಈ ಕಾಲದಲ್ಲಿ ಅಣ್ಣನಾರು ತಮ್ಮನಾರು, ಇಷ್ಟಕ್ಕೂ ಅವನು ಬಲತಾಯಿಯ ಮಗ ವಯಸ್ಸಿನಲ್ಲಿ ಅಣ್ಣನಾದರೂ ಗುಣದಲ್ಲಿ ಅಣ್ಣನಾದಾನೆ, ಹುಟ್ಟಿದಾಗ ಅಣ್ಣನಾದರೆ ಬೆಳೆದಾಗ ಶತ್ರುವಲ್ಲದೆ ಅಣ್ಣನಾದಾನೆ ಸವತಿಮಕ್ಕಳಿಗೆ ಸ್ವಭಾವವೈರವಿರುವದು, ಕಶ್ಯಪಬ್ರಹ್ಮನ ಮಡದಿಯರಾದ ದಿತಿ ಅದಿತಿ ಎಂಬವರಲ್ಲಿ ದೈತ್ಯರು ಆದಿತ್ಯರು ಹುಟ್ಟಲಿಲ್ಲವೆ ಅವರು ಪರಸ್ಪರ ಭ್ರಾತೃಗಳಲ್ಲವೇ ಆದರೂ ಈಗ ರಾಕ್ಷಸರಿಗೂ ದೇವತೆಗಳಿಗೂ ನೈಸರ್ಗಿಕ ಶತ್ರುತ್ವವಿರುವುದರಿಂದಲ್ಲವೇ ನಮ್ಮ ತಲೆಕಂಡರೆ ದೇವತೆಗಳಿಗಾಗದು ಅವರ ತಲೆಕಂಡರೆ ನಮಗಾಗದು, ಹೀಗಿರುವಲ್ಲಿ ಸವತಿತಾಯ ಮಗನಾದ ವೈಶ್ರವಣನಮೇಲೆ ಯಾತರ ವಿಶ್ವಾಸ ಇಷ್ಟಕ್ಕು ನಾವು ಕಟ್ಟಿದ ಲಂಕಾಪಟ್ಟಣಕ್ಕೆ ಹಕ್ಕುದಾರರು ಸಹೋದರಾದಿಗಳು ನೀವೇ ಅಲ್ಲದೆ ವೈಶ್ರವಣನಲ್ಲ ನಿಮ್ಮ ಸ್ವತ್ತನ್ನು ನೀವು ಸಾಧಿಸಿಕೊಳ್ಳುವದ ರಲ್ಲಿ ಯಾವ ನೀತಿ ಶಾಸ್ತ್ರವಿರೋಧವೂ ಇಲ್ಲ ಈಗ ನೀನು ಕರುಣೆಯಿಂದ ಅಣ್ಣನೆಂದು ಬಿಟ್ಟರೆ ಮಹಾ ಬಲಶಾಲಿಯಾದ ಕುಬೇರನು ನಿನ್ನನ್ನು ನಾಶಮಾಡದೆ ಬಿಡನು ಆದ್ದರಿಂದ ನಾನು ಹೇಳು ವದನ್ನು ಕೇಳಿದರೆ ನಿನಗೆ ಕ್ಷೇಮ ಉಂಟಾಗುವದು ಎಂದು ಹೇಳಲು ದಶಕಂಠನು ಆಮಾತಿಗೆ ಒಪ್ಪಿ ತನ್ನ ಸೋದರಮಾವನಾದ ಪ್ರಹಸ್ತನನ್ನು ಕುರಿತು ನೀನು ನಮ್ಮಣ್ಣನಾದ ಕುಬೇರನ ಬಳಿಗೆ ಹೋಗಿ ಈ ಲಂಕಾಪಟ್ಟಣವು ನಮ್ಮ ಮಾತಾಮಹನದು ಅದಕ್ಕೆ ನಾವು ಬಾಧ್ಯರೇ ಹೊರತು ನೀನು ಬಾಧ್ಯನಲ್ಲ ನಮ್ಮ ಸ್ವತ್ತನ್ನು ನಮಗೆ ಕೊಟ್ಟುಬಿಡಬೇಕೆಂದು ಹೇಳು ಎನಲು ಅದರಂತೆ ಪ್ರಹಸ್ತನು ಲಂಕಾಪಟ್ಟಣಕ್ಕೆ ಹೋಗಿ ಕುಬೇರನನ್ನು ಕಂಡು ದಶಕಂಠನು ಹೇಳಿದ ಮಾತು ಗಳನ್ನು ತಿಳಿಸಿದನು, ಅದನ್ನು ಕೇಳಿ ಸ್ವಲ್ಪ ಹೊತ್ತು ಆಲೋಚಿಸಿ ಪ್ರಹಸ್ತನನ್ನು ಲಂಕೆಯಲ್ಲಿಯೇ ನಿಲ್ಲಿಸಿ ತಾನು ತಂದೆಯ ಬಳಿಗೆ ಬಂದು ದಶಮುಖನು ಹೇಳಿ ಕಳುಹಿದ ಸುದ್ದಿಯನ್ನು ತಿಳಿಸಲು, ಆ ಮುನಿಯು ಮಗನೇ ಅದು ದಿಟವೇ ಸರಿ ಆ ದಶವದನನು ಮಹಾದುಷ್ಟನು ಲಂಕೆಯನ್ನು ಅವನಿಗೆ ಬಿಟ್ಟುಬಿಟ್ಟು ನೀನು ಕೈಲಾಸಕ್ಕೆ ಹೋಗಿ ಅಲ್ಲಿರು ನಿನಗೆ ಪರಮೇಶ್ವರನ ಸ್ನೇಹವುಂಟಾ ಗುವದು ಎಂದು ಹೇಳಿ ಕಳುಹಲು ವೈಶ್ರವಣನು ಲಂಕೆಗೆ ಬಂದು ಪ್ರಹಸ್ತನನ್ನು ಕುರಿತು, ಎಲೈ ಪ್ರಹಸ್ತನೇ ದಶಕಂಠನು ಹೇಳಿಕಳುಹಿಸಿದುದು ಯುಕ್ತವೇಸರಿ ಅವನ ಸ್ವತ್ತಿಗೆ ಅವನು ಬರಲು ನನ್ನ ಅಭ್ಯಂತರವೇನೂ ಇಲ್ಲ, ಬಂದು ಸುಖವಾಗಿರಲಿ ನಾನು ಹೊರಟುಹೋಗುತ್ತೇನೆ ಎಂದು ಹೇಳಿ ತನ್ನ ಪರಿವಾರದೊಡನೆ ವಿಮಾನಾರೂಢನಾಗಿ ಕೈಲಾಸಪರ್ವತಕ್ಕೆ ಹೋಗಿ ಅಲ್ಲಿ ದೇವ ಶಿಲ್ಪಿಯಾದ ವಿಶ್ವಕರ್ಮನಿಂದ ಅಳಕಾಪಟ್ಟಣವನ್ನು ನಿರ್ಮಾಣ ಮಾಡಿಸಿಕೊಂಡು ಆ ಪಟ್ಟಣ ದಲ್ಲಿ ತನ್ನ ಪರಿವಾರದೊಡನೆ ಉತ್ತರ ದಿಗ್ರಾಜ್ಯಾಧಿಪತ್ಯವನ್ನು ವಹಿಸಿ ಈಶ್ವರಸ್ನೇಹವನ್ನು ಸಂಪಾದಿಸಿಕೊಂಡು ಸುಖದಿಂದಿದ್ದನು. ಕುಬೇರನ ವಾಕ್ಯವನ್ನು ಕೇಳಿದ ಪ್ರಹಸ್ತನು ದಶವದ ನನ ಬಳಿಗೆ ಬಂದು ಕುಬೇರನ ಮಾತುಗಳನ್ನು ಹೇಳಿ ಅವನು ನಿನಗೆ ಹೆದರಿಕೊಂಡು ಓಡಿ ಹೋದನು ಎಂದನು. ರಾವಣನು ಸಂತೋಷಭರಿತನಾಗಿ ತನ್ನ ರಾಕ್ಷಸ ಪರಿವಾರದೊಡನೆ ಹೊರಟು ಹಿಮವತ್ಪರ್ವತದ ಗುಹೆಯನ್ನು ಸಿಂಹವು ಹೊಗುವಂತೆ ಲಂಕಾಪಟ್ಟಣವನ್ನು ಪ್ರವೇಶಿಸಿ ಅಲ್ಲಿ ಸುಮಾಲಿ ಮಾಲ್ಯವಂತರಿಂದ ಕೂಡಿಕೊಂಡು ಪ್ರಹಸ್ತ ಮಾರೀಚಾದಿ ಮಂತ್ರಿ ಗಳು ರಾಕ್ಷಸರಾಜ್ಯಕ್ಕೆ ದಶಮುಖನನ್ನು ಪಟ್ಟಾಭಿಷೇಕಮಾಡಿದರು. ಲಂಕಾಪುರಿ ರಾಜ್ಯಾಧಿ ಪತ್ಯವನ್ನು ವಹಿಸಿದ ಆ ದಶಮುಖನು ತನ್ನ ತಂಗಿಯಾದ ಶೂರ್ಪಣಖಿಯನ್ನು ಕಾಲಕೇಯರಲ್ಲಿ ಅತಿಬಲಿಷ್ಠನಾದ ವಿದ್ಯುಜ್ಜಿಹ್ವನೆಂಬವನಿಗೆ ಕೊಟ್ಟು ಬಹಳ ಸಂಭ್ರಮದೊಡನೆ ವಿವಾಹ ಮಾಡಿ ತಾನು ಸುಖವಾಗಿ ಲಂಕಾರಾಜ್ಯವನ್ನು ಆಳುತ್ತಿದ್ದನು.

## ರಾವಣನು ಮಂಡೋದರಿಯನ್ನು ಮದುವೆಯಾದುದು.

ಹೀಗಿರುವಲ್ಲಿ ಒಂದುದಿನ ದಶಕಂಠನು ಬೇಟೆಯಾಡಬೇಕೆಂದು ಆಲೋಚಿಸಿ ಪರಿವಾರ ದೊಡನೆ ಕಾಡಿಗೆಹೋಗಿ ನಾನಾವಿಧವಾದ ಮೃಗಗಳನ್ನು ಕೊಲ್ಲುತ್ತಾ ಬರುತ್ತಿರಲು ಅಲ್ಲಿ ಒಂದು





ಕಡೆ ಒಬ್ಬ ಕನ್ಯೆಯೊಡನೆ ಕುಳಿತಿರುವ ಪುರುಷನನ್ನು ನೋಡಿ ಸಮೀಪಕ್ಕೆ ಬಂದು ಅಯ್ಯಾ ಪುರುಷನೇ ನೀನು ಯಾರು ಜನಸಂಚಾರವಿಲ್ಲದ ಈ ಅರಣ್ಯದಲ್ಲಿ ಈ ಕನ್ಯೆಯೊಡನೆ ಏನುಕಾರಣ ಕುಳಿತಿರುವೆ ಈ ಹೆಣ್ಣು ಯಾರದು ನಿನ್ನ ಕೆಲಸವೇನು ವಿವರವಾಗಿ ಹೇಳು ಎನಲು ಆ ಪುರುಷನು ಎಲೈ—ಶೂರನೇ ನಿನ್ನನ್ನು ನೋಡಿದರೆ ಮಹಾ ಪುರುಷನಾಗಿ ಕಾಣುವೆ ನಾನು ಮಯನೆಂಬ ಶಿಲ್ಪಿಯು ಭಾರ್ಯಾವಿಯೋಗ ದುಃಖದಿಂದ ಪೀಡಿತನಾಗಿ ಇಲ್ಲಿಗೆ ಬಂದೆ ನನ್ನ ದುಃಖವನ್ನು ಕೇಳುವರೊಡನೆ ಹೇಳಿದರೆ ಸಮಾಧಾನವಾದೀತೇನೋ ಅಯ್ಯಾ! ಮಹಾತ್ಮನೇ ಅಪ್ಸರಸ್ತ್ರೀಯ ರಲ್ಲಿ ಶ್ರೇಷ್ಠಳಾದ ಹೇಮೆಯನ್ನು ನನಗೆ ಕೊಟ್ಟು ಪ್ರೀತಿಯಿಂದ ದೇವತೆಗಳು ಮದುವೆಮಾಡಿ ದರು, ಅಪ್ಸರಸ್ತ್ರೀಯೊಡನೇ ಸಂಸಾರಮಾಡಿಕೊಂಡು ಐನೂರು ವರ್ಷಕಾಲ ಸುಖವಾಗಿ ಬಾಳಿ ದೆನು. ಆಕೆಯಲ್ಲಿ ದುಂದುಭಿ ಮಾಯಾವಿ ಎಂಬ ಇಬ್ಬರು ಗಂಡು ಮಕ್ಕಳನ್ನು ಮಂಡೋದರಿ ಎಂಬ ಹೆಣ್ಣುಮಗಳನ್ನೂ ಪಡೆದನು ತರುವಾಯ ದೈವವಶದಿಂದಲೂ ನನ್ನ ದೌರ್ಭಾಗ್ಯದಿಂ ದಲೂ ಆಕೆ ಸತ್ತಳು. ಅಂಥಾ ಪ್ರಿಯಳಾದ ಸತಿಯನ್ನು ಕಳೆದುಕೊಂಡು ಯಾವನು ತಾನೇ ಜೀವಿಸಿರುವನು ಹೇಮೆಯನ್ನು ನಾನು ಮದುವೆಯಾದಾಗ ಮಾಯೆಯಿಂದ ಹೇಮೆಯೆಂಬ ಪುರ ವನ್ನು ನಿರ್ಮಿಸಿಕೊಂಡು ಸುಖವಾಗಿದ್ದೆನು. ಈಗ ಆ ಪಟ್ಟಣವನ್ನು ಬಿಟ್ಟು ಸತ್ಕುಲಪ್ರಸೂತ ನಾದ ಪುರುಷನು ದೊರೆತರೆ ಈ ಮಗಳನ್ನು ಕೊಟ್ಟು ವಿವಾಹವಮಾಡಿ ನನ್ನ ಗತಿಯನ್ನು ನೋಡಿ ಕೊಳ್ಳಲು ವರನನ್ನು ಹುಡುಕುತ್ತಾ ಇದ್ದೆನು ಪುಣ್ಯವಶದಿಂದ ನೀನು ನನಗೆ ದೊರಕಿದೆ ಮಹಾ ಪುರುಷನಾಗಿ ಕಾಣುತ್ತೀಯೇ ನೀನು ಯಾರು ಹೇಳುವೆಯಾ ಎನಲು ದಶಾಸ್ಯನು ಮಯನನ್ನು ಕುರಿತು ಎಲೈ, ನಾನು ಪುಲಸ್ತ್ಯಬ್ರಹ್ಮನ ಮಗನಾದ ವಿಶ್ರವಸ್ಸಿನ ತನೂಭವನು ನನ್ನನ್ನು ದಶಕಂ ಠನೆಂದು ಕರೆಯುವರು ಎಂದು ಹೇಳಲು ಮಯನು ಆ ಮಾತನ್ನು ಕೇಳಿ ಸಂತೋಷಯುಕ್ತನಾಗಿ ಈಗ ನನ್ನ ಮನೋರಥವು ಸಫಲವಾಯಿತು ನನ್ನ ಮಗಳಿಗೆ ಅನುರೂಪನಾದ ಪುರುಷನು ಸಿಕ್ಕಿದ ನೆಂದು ಅವನನ್ನು ಕುರಿತು ಎಲೈ ದಶವದನನೇ ಬ್ರಹ್ಮಕುಲೋತ್ಪನ್ನನಾದ ನಿನಗಿಂತಲೂ ಯೋಗ್ಯ ನಾದ ವರನು ನನ್ನ ಮಗಳಿಗೆ ಸಿಕ್ಕುವದುಂಟೆ, ಇಲ್ಲ ಆದ್ದರಿಂದ ಈ ಸರ್ವಾಂಗ ಸುಂದರಿಯಾದ

ಮಂಡೋದರಿಯನ್ನು ನೀನು ಮದುವೆ ಮಾಡಿಕೊಳ್ಳಬೇಕೆಂದು ಹೇಳಲು, ದಶಗ್ರೀವನು ಸಮ್ಮತಿಪಟ್ಟನು. ಆ ಕ್ಷಣದಲ್ಲಿಯೇ ಮಯನು ತನ್ನ ಮಾಯೆಯಿಂದ ಒಂದು ದಿವ್ಯವಾದ ವಿವಾಹ ಮಂಟಪವನ್ನು ಸಕಲವಾದ ಪದಾರ್ಥಗಳೊಂದಿಗೆ ರಚಿಸಿ ಅನೇಕ ಬ್ರಾಹ್ಮಣರನ್ನು ಕರೆಯಿಸಿ ವೈದಿಕವಿಧಾನದಿಂದ ಅಗ್ನಿಸಾಕ್ಷಿಯಾಗಿ ಬ್ರಾಹ್ಮ್ಯ ವಿವಾಹವನ್ನು ಮಾಡಿಕೊಟ್ಟು ಅಳಿಯನಿಗೆ ದಕ್ಷಿಣೆಯಾಗಿ ಒಂದು ಶಕ್ತಿಯನ್ನು ಕೊಟ್ಟು ಮಗಳನ್ನು ಅವನಿಗೆ ಒಪ್ಪಿಸಿ ತಾನು ಆಕಾಶ ಮಾರ್ಗವಾಗಿ ಹೊರಟುಹೋದನು.






## ರಾವಣನು ಕುಂಭಕರ್ಣ ವಿಭೀಷಣರಿಗೆ ಮದುವೆಮಾಡಿದುದು.

ತರುವಾಯ ದಶವದನನು ಮಡದಿಯಾದ ಮಂಡೋದರಿಯನ್ನು ಕರೆದುಕೊಂಡು ಅತಿ ಸಂಭ್ರಮದೊಡನೆ ಲಂಕಾಪಟ್ಟಣವನ್ನು ಪ್ರವೇಶಿಸಿದನು. ಕೂಡಲೇ ತನ್ನ ಹಿರಿಯ ತಮ್ಮನಾದ ಕುಂಭಕರ್ಣನಿಗೆ ಪುರೋಚನನ ಮಗಳಾದ ಜ್ವಾಲೆಯೆಂಬವಳನ್ನೂ ಕಿರಿಯ ತಮ್ಮನಾದ ವಿಭೀಷಣನಿಗೆ ಶೈಲೂಷನೆಂಬ ಗಂಧರ್ವನ ಮಗಳಾದ ಸರಮೆಯೆಂಬವಳನ್ನೂ ತಂದು ಬಹು ಸಂಭ್ರಮದಿಂದ ವಿವಾಹಮಾಡಿದನು. ಕೆಲವು ಕಾಲದಮೇಲೆ ತನ್ನ ಮಡದಿಯಾದ ಮಂಡೋದರಿ ಬಸುರಾಗಿ ಗಂಡು ಕೂಸನ್ನು ಹಡೆದಳು ಆ ಕೂಸು ಅಳುವ ಧ್ವನಿಯು ಗುಡುಗಿನ ಹಾಗಿರಲು ಆ ಕೂಸಿಗೆ ಮೇಘನಾದನೆಂದು ಹೆಸರಿಟ್ಟರು. ಕುಂಭಕರ್ಣನು ಬ್ರಹ್ಮನಿಂದ ಕೊಡಲ್ಪಟ್ಟ ವರದ ಮಹಾತ್ಮ್ಯದಿಂದ ಉಂಟಾದ ನಿದ್ರೆಯನ್ನು ಸಹಿಸಲಾರದೆ ಅಣ್ಣನ ಬಳಿಗೆ ಬಂದು ಎಲೈ ಅಣ್ಣಾ ನಾನು ನಿದ್ರೆಯನ್ನು ತಡೆಯಲಾರೆ ನನಗೆ ಮಲಗಿಕೊಳ್ಳುವದಕ್ಕೆ ಒಂದು ಮನೆಯನ್ನು ಮಾಡಿಸಿ ಕೊಡಬೇಕೆಂದು ಕೇಳಲು, ದಶಮುಖನು ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆಸಿ ವಿಶಾಲವಾಗಿಯೂ, ಚಿನ್ನದ ಸ್ತಂಭಗಳೇ ಮುಂತಾದ ದಿವ್ಯಾಲಂಕಾರದಿಂದ ಕೂಡಿದ ಮನೆಯನ್ನು ನಿರ್ಮಾಣ ಮಾಡಿಸಿಕೊಟ್ಟನು. ಕುಂಭಕರ್ಣನು ಅದನ್ನು ನೋಡಿ ಬಹಳ ಸಂತೋಷಪಟ್ಟು ಸುಖನಿದ್ರೆಯಲ್ಲಿ ಸಾವಿರಾರು ವರುಷಕಾಲ ಮಲಗಿದ್ದನು. ಇತ್ತ ದಶಕಂಠನು ತನ್ನ ಕೊಬ್ಬಿನಿಂದ ಸಕಲ ಋಷಿಗಳನ್ನೂ ಮುನಿಜನರನ್ನೂ ಕೊಲ್ಲುತ್ತಾ ದೈತ್ಯದಾನವ ಗಂಧರ್ವ ಸುರನರೋರಗ ಕಿನ್ನರ ಕಿಂಪುರುಷರನ್ನು ಪೀಡಿಸುತ್ತಾ ಜಲಾಶಯಗಳನ್ನೆಲ್ಲಾ ಒಡೆದು ಹಾಳುಮಾಡುತ್ತಾ ಮದ್ದಾನೆಗಳಂತೆ ಪರ್ವತಾದಿಗಳನ್ನು ಹೊಡೆದು ಕೆಡಹುತ್ತಾ, ಪುರಗೋಪುರಗಳನ್ನು ಹಾಳುಮಾಡುತ್ತಾ ತನಗೆ ಯಾರೂ ಎದುರಿಲ್ಲದೆ ಮದೋನ್ಮತ್ತನಾಗಿರುತ್ತಿದ್ದನು.

## ರಾವಣನು ಯುದ್ಧದಲ್ಲಿ ವೈಶ್ರವಣನನ್ನು ಜಯಿಸಿದುದು.

ಇಂತಿರಲೊಂದುದಿನ ವೈಶ್ರವಣನು ಇವನ ದುರ್ಮಾರ್ಗತನವನ್ನು ಕೇಳಿ ಉತ್ತಮವಾದ ನಮ್ಮ ಬ್ರಹ್ಮಕುಲದಲ್ಲಿ ಇಂಥಾ ದುಷ್ಟನು ಹುಟ್ಟಿದನಲ್ಲಾ ಎಂದು ವ್ಯಸನಪಟ್ಟು ಪರಿಚಾರಕ ನೊಬ್ಬನನ್ನು ಕರೆದು ಎಲೈ ಪರಿಚಾರಕನೇ ನೀನು ಲಂಕಾಪಟ್ಟಣಕ್ಕೆ ಹೋಗಿ, ಸತ್ಕುಲಪ್ರಸೂತ ನಾದ ನೀನು ಕೆಟ್ಟಸ್ವಭಾವವನ್ನು ತ್ಯಜಿಸಿ ಒಳ್ಳೇ ಹೆಸರನ್ನು ಹೊಂದು, ದೇವತೆಗಳನ್ನೂ ಋಷಿಗ ಳನ್ನೂ ಹಿಂಸೆಮಾಡಬೇಡ ಅದರಿಂದ ನಿನಗೆ ಶ್ರೇಯಸ್ಸುಂಟಾಗಲಾರದು ದುರ್ಮಾರ್ಗತನವನ್ನು ಬಿಟ್ಟುಬಿಡು, ಎಂದು ನಿಮ್ಮ ಅಣ್ಣನಾದ ಕುಬೇರನು ಹೇಳಿದನೆಂದು ರಾವಣನಿಗೆ ಹೇಳಿಬಾ ಎಂದು ಆಜ್ಞಾಪಿಸಲು, ಅವನು ಅದೇಮೇರೆಗೆ ಬಂದು ದಶಾನನಿಗೆ ವಂದನೆಯನ್ನು ಮಾಡಿ, ಸ್ವಾಮಿ ನಿಮ್ಮಣ್ಣನಾದ ಕುಬೇರನು ಕೈಲಾಸಪರ್ವತದಲ್ಲಿ ಅಳಕಾನಗರದೊಳು ಉತ್ತರ ದಿಗ್ರಾಜ್ಯಾಧಿಪತ್ಯ ವನ್ನು ವಹಿಸಿ ಶಿವನ ಸ್ನೇಹದಿಂದ ಸುಖನಾಗಿದ್ದಾನೆ, ಆತನು ನಿಮಗೆ ಹೇಳಿಕಳುಹಿಸಿರುವ ಬುದ್ಧಿವಾದಗಳನ್ನು ಕೇಳಿರೆಂದು ಎಲ್ಲವನ್ನು ಹೇಳಿದಮೇಲೆ ದಶಾಸ್ಯನು ಕೇಳಿ ಕುಪಿತನಾಗಿ ಅಟ್ಟ ಹಾಸದಿಂದ ಆ ದೂತನನ್ನು ಕುರಿತು ಏನೆಲಾ, ತಾನು ಶಿವನ ಸ್ನೇಹಿತನಾಗಿದ್ದೇನೆಂಬ ಗರ್ವದಿಂದ ಈ ಮಾತು ಹೇಳಿಕಳುಹಿಸಿದನೇ, ಅಣ್ಣನಾದರಾಗಲಿ ಮೊದಲು ಅವನ ಗರ್ವವನ್ನು ಮುರಿದು ಉಳಿದ ಕೆಲಸಮಾಡುವೆನು ದಿಕ್ಪಾಲಕರೆಲ್ಲರನ್ನೂ ಕೊಂದು ಯಮನ ಮನೆಗೆ ಕಳುಹಿಸುವೆನು ಮುಂದೆ ನನಗೆ ದೇವತೆಗಳಿಂದಲೂ ಮುನಿಗಳಿಂದಲೂ ಮರಣವುಂಟಾದೀತೆ, ಸುರನರೋರಗ, ಯಕ್ಷರು, ಮೊದಲಾಗಿ ಇಂದ್ರ, ಚಂದ್ರ, ಸೂರ್ಯರನ್ನೂ ಹಿಡಿದು ಲೋಕವೆಲ್ಲವನ್ನೂ ಸುಟ್ಟು ಬೂದಿಮಾಡುವೆನು ಎಂದು ಘರ್ಜಿಸುತ್ತಾ ರಥವನ್ನು ಹತ್ತಿ ಉತ್ತರ ಮುಖವಾಗಿ ಹೊರಟನು. ಶುಕಸಾರಣಾದಿ ಮಂತ್ರಿಗಳೂ ಸೇನಾಧಿಪತಿಗಳೂ ತದ್ಮತ್ತಮ್ಮ ಚತುರಂಗಬಲ ಸಮೇತರಾಗಿ ನೆಲದಮೇಲೆ ಸ್ಥಳವೇ ಇಲ್ಲದಂತೆ ಸೇನೆಯು ಹೊರಟಿತು, ಆ ಸೇನೆಯ ಪಾದಘಾತದಿಂದುಂಟಾದ ಧೂಳಿಯು ಭೂವ್ಯಾಕಾಶಗಳಿಗೆ ಏಕವಾಗಿ ತುಂಬಿಕೊಂಡು ಸೂರ್ಯನನ್ನು ಮುಚ್ಚಿ ಕಗ್ಗತ್ತಲೆ ಯಂತೆ ಕಾಣಿಸುತ್ತಿತ್ತು, ಹೀಗೆ ಸಕಲ ಸನ್ನಾಹದಿಂದ ಚತುರಂಗಬಲ ಸಮೇತನಾಗಿ ಬೆಟ್ಟ ಗುಡ್ಡ ವನ ಊರು ನದಿ ಮುಂತಾದ ಅನೇಕ ಪ್ರದೇಶಗಳನ್ನು ದಾಟಿಹೋಗಿ ಕೈಲಾಸ ಪರ್ವತ ದಲ್ಲಿರುವ ಅಳಕಾನಗರಿಯ ಮಹಾದ್ವಾರದ ಸಮೀಪಕ್ಕೆ ಬಂದು ಅಲ್ಲಿ ದ್ವಾರಪಾಲಕರಾಗಿದ್ದ ಯಕ್ಷ ರಲ್ಲೊಬ್ಬನನ್ನು ಕರೆದು ನಿಮ್ಮೊಡೆಯನಾದ ಕುಬೇರನ ಬಳಿಗೆ ಹೋಗಿ, ದಶಾಸ್ಯನು ಯುದ್ಧಕ್ಕೆ ಬಂದು ಇದ್ದಾನೆ ನಿನ್ನನ್ನು ಬರಹೇಳಿದನು ಎಂದು ತಿಳಿಸು ಎನಲು ಅವನು ಅದೇಮೇರೆಗೆ ಹೋಗಿ ಒಡೆಯನಿಗೆ ಮಣಿದು ಸ್ವಾಮಿ ಏಳಿ ದಶಾಸ್ಯನೊಡನೆ ಯುದ್ಧಮಾಡಿ ನಡೆಯಿರಿ ಅವನು ತನ್ನ ತೋಳತೀಟೆಯನ್ನು ತಮ್ಮಲ್ಲಿ ತೀರಿಸಿಕೊಳ್ಳಬೇಕಂತೆ ಅವನು ಹೇಳಿದ ಕೊಬ್ಬಿನ ಮಾತುಗಳನ್ನು ತಮ್ಮೆದುರಿಗೆ ಹೇಳಲಾರೆ ಬೇಗ ಯುದ್ಧಕ್ಕೆ ಹೊರಡಿ ಎಂದನು ಅದನ್ನು ಕೇಳಿ ಕುಬೇರನು ಶಿವ ಶಿವಾ ರಾವಣನು ನನ್ನೊಡನೆ ಕಾದಾಡಲು ಬಂದನೇ ಅಣ್ಣತಮ್ಮಂದಿರಿಗೆ ಕಾಳಗವೇ ಕಾಲಗತಿ ಕೆಟ್ಟದ್ದು ಎಂದುಕೊಂಡು ನಮ್ಮಾಳುಗಳನ್ನು ಕರೇ, ಕಾಳಕ್ಕೆ ಸಿದ್ಧವಾಗಲಿ ಎನಲು ಯಕ್ಷಕಿನ್ನರ ಸೈನ್ಯವು ದಶಾಸ್ಯನೊಡನೆ ಯುದ್ಧಕ್ಕೆ ಸಿದ್ಧವಾಗಿ ನಿಂತಿತು ರಾಕ್ಷಸ ಸೈನ್ಯವು ಯಕ್ಷರ ಕಡೆಗೆ ತಿರಿಗಿ ನಿಂತು ಪರಸ್ಪರ ವೀರಾಲಾಪಗಳಿಂದ ಬೊಬ್ಬಿರಿಯುತ್ತಿದ್ದಿತು ಆಗ ರಾಕ್ಷಸರ ಬಲವು ಯಕ್ಷ ಬಲವನ್ನು ಕುರಿತು ಎಲಾ ನಮ್ಮೊಡೆಯನೂ ನಿಮ್ಮೊಡೆಯನೂ ಅಣ್ಣತಮ್ಮಂದಿರೆಂದು ನಾವು ಮನ್ನಿಸಿ ಬಿಟ್ಟಿದ್ದರೆ ಇಷ್ಟು ಕೊಬ್ಬಿದಿರಾ ಎಂದು ಆರ್ಭಟಿಸುತ್ತಾ ಮುಂಬರಿದು ಯಕ್ಷಬಲವನ್ನು ಕೆಡಹುತ್ತಾ ನಾಶಮಾಡುತ್ತಿರಲು, ಆಗ ರಣರಂಗವು ನೋಡುವದಕ್ಕೆ ಭಯಂಕರವಾಗಿಯೂ,

ಅಸಹ್ಯವಾಗಿಯೂ, ಕತ್ತರಿಸಲ್ಪಟ್ಟ ತಲೆಗಳಿಂದಲೂ, ಕೈಕಾಲುಗಳಿಂದಲೂ, ಮುಂಡಗಳಿಂದಲೂ ರಕ್ತಮಾಂಸಗಳಿಂದಲೂ, ನರಗಳಿಂದಲೂ, ಮೂಳೆಗಳಿಂದಲೂ ಕೂಡಿ ಬಹಳ ಹೊಲಸಾಗಿತ್ತು ಯಕ್ಷಬಲವು ಹಿಂಜರಿಯದೆ ರಾಕ್ಷಸಬಲವನ್ನು ಚಿತ್ರವಿಚಿತ್ರವಾಗಿ ಕೊಲ್ಲುತ್ತಾ ನಾಶಗೊಳಿಸುತ್ತಿರಲು, ದಶಕಂಠನು ಕಂಡು ಕುಪಿತನಾಗಿ ಯಕ್ಷರ ಬಲವಮೇಲೆ ಬಾಣಗಳ ಮಳೆಯನ್ನು ಸುರಿಸಲು ಅವುಗಳಿಂದ ಯಕ್ಷಸೈನಿಕರನೇಕರಿಗೆ ಅಂಗಭಂಗಗಳಾಗಿ ಬಾಣಗಳ ಪೆಟ್ಟನ್ನು ಸಹಿಸಲಾರದೆ ಚೆದರಿ ದಿಕ್ಕುದಿಕ್ಕಿಗೆ ಓಡಿಹೋಗುತ್ತಿದ್ದರು. ಅದನ್ನು ಕಂಡು ಕುಬೇರನು ಮಹಾಕೋಪವನ್ನು ತಾಳಿ ಮಣಿಭದ್ರನೆಂಬ ಸೇನಾಧಿಪತಿಯೊಡನೆ ಕೂಡಿ ಯುದ್ಧಕ್ಕೆ ನಿಲ್ಲಲು ದಶವದನನು ಕುಬೇರನೆದುರಿಗೂ, ಪ್ರಹಸ್ತನು ಮಣಿಭದ್ರನೆದುರಿಗೂ ನಿಂತು ಯುದ್ಧಮಾಡುತ್ತಿದ್ದರು. ಮಣಿಭದ್ರನು ಪ್ರಹಸ್ತನ ಗದಾಪ್ರಹಾರವನ್ನು ತಾಳಲಾರದೆ ಮೂಗು ಬಾಯಿಗಳಲ್ಲಿ ರಕ್ತವನ್ನು ಸುರಿಸಿಕೊಂಡು ನೆಲದಮೇಲೆ ಬಿದ್ದು ಮೈಮರೆದನು. ದಶವದನನು ತನಗೆ ಬ್ರಹ್ಮನು ಕೊಟ್ಟಿದ್ದ ವರದ ಬಲದಿಂದ ವೈಶ್ರವಣನನ್ನು ಸೋಲಿಸಿ ಆತನಿಗೆ ಬ್ರಹ್ಮನು ಕೊಟ್ಟಿದ್ದ ವಿಮಾನವನ್ನೇ ಕಿತ್ತುಕೊಂಡು ತನ್ನ ಸೈನ್ಯದೊಡನೆ ಅದರಮೇಲೆ ಕುಳಿತು ಗಗನಮಾರ್ಗದಲ್ಲಿ ಲಂಕಾಪುರಿಗಾಗಿ ಹೊರಟು ಶರವಣವೆಂಬ ಸ್ಥಲವನ್ನು ನೋಡಿ ಕೈಲಾಸ ಸಮೀಪಕ್ಕೆ ಬರುವಾಗ್ಗೆ ಕಾಲುಮುರಿದ ಕೋಳಿಯಹಾಗೆ ವಿಮಾನವುಮುಂದಕ್ಕೆ ಹೋಗದೆ ಅಲ್ಲೇ ನಿಂತಿತು. ಆಗ ದಶಗ್ರೀವನು ಇದೇನು ವಿಮಾನವು ಹೀಗೆ ನಿಲ್ಲುವುದಕ್ಕೆ ಕಾರಣವೇನು ಇದಕ್ಕೆ ಗತಿಯುಡುಗಿತೋ, ಕಾಲಗತಿಯಂಥಾದ್ದೋ ಎಂದು ಕಳವಳಪಡುತ್ತಾ ಮಂತ್ರಿಯಾದ ಮಾರೀಚನನ್ನು ಕರೆದು ಎಲೈ— ಮಂತ್ರಿಯೇ ಇದರ ಸಂಗತಿಯೇನು ಎಂದು ಕೇಳುತ್ತಿರುವಲ್ಲಿ ನಂದಿಕೇಶನು ಬಂದು ಎಲೈ— ದಶಾಸ್ಯನೇ, ಈ ಕೈಲಾಸಾಗ್ರದಲ್ಲಿ ಬ್ರಹ್ಮೇಂದ್ರರೇ ಮೊದಲಾದ ಸುರರು ಯಕ್ಷ ರಾಕ್ಷಸ ಕಿನ್ನರ ಕಿಂಪುರುಷರೇ ಮೊದಲಾದ ಕಾಮಚಾರರು ಹೋಗಲು ಮಹಾದೇವನ ಕಟ್ಟಳೆಯಿಂದ ಅಸಾಧ್ಯವಾಗಿದೆ ನೀನು ಹಿಂತಿರುಗು ಮುಂದಕ್ಕೆ ಹೋದರೆ ನಿನಗೆ ಕೇಡು ಬರುವದು ಎಂದು ಹೇಳಲು ಹತ್ತುತಲೆಯವನು ಶಂಕರನ ಅಪರಾವತಾರವಾದ ನಂದಿಕೇಶನನ್ನು ನೋಡಿ ಅವನ ಮುಖವು ಮಂಗನ ಮುಖದಂತಿದ್ದುದರಿಂದ ನಗುತ್ತಾ ಹಾಸ್ಯಮಾಡಿದನು. ನಂದಿಕೇಶನು ಕೋಪಗೊಂಡು ಎಲವೋ ಖೂಳನೆ ನೀನು ಹತ್ತುತಲೆಯ ಹುಳವಾಗಿದ್ದೀಯೆ ನಿನ್ನ ಶೌರ್ಯವೆಷ್ಟು ನಿನ್ನ ದುರಹಂಕಾರವೆಷ್ಟು ನಿನ್ನನ್ನು ಕೊಲ್ಲುವದೆಷ್ಟರ ಕೆಲಸ ನಿನ್ನ ದುರ್ಗಡತೆಗಳಿಂದಲೇ ನೀನು ನಿರ್ಮೂಲವಾಗಿ ನಾಶವಾಗಿ ಹೋಗುತ್ತೀಯೆ ಮಂಗಕುಲಾರಿಯೆ ನನ್ನ ಮುಖವನ್ನು ನೋಡಿ ನೀನು ಹಾಸ್ಯಮಾಡಿದಕಾರಣ ನನ್ನ ಆಕಾರದಂತೆ ಆಕಾರವುಳ್ಳ ಕೋತಿಗಳಿಂದಲೇ ನಿನಗೆ ಪರಾಭವವುಂಟಾಗಲಿ ಎಂದು ಶಾಪ ಕೊಟ್ಟು ಹೊರಟುಹೋದನು ಅನಂತರದಲ್ಲಿ ದಶಕಂಧರನು ನನ್ನ ವಿಮಾನವನ್ನು ತಡೆದದ್ದು ಈ ಕೈಲಾಸಪರ್ವತವಷ್ಟೇ, ಇದರ ಅಹಂಕಾರವನ್ನು ಮುರಿಯುವೆನು ಶಿವನ ಸಾಮರ್ಥ್ಯವನ್ನು ಪರೀಕ್ಷಿಸುವೆನು ಎಂದು ವಿಮಾನದಿಂದ ಕೆಳಕ್ಕಿಳಿದು ತನ್ನ ಇಪ್ಪತ್ತು ತೋಳುಗಳಿಂದಲೂ ಆದಿಶೇಷನು ಮಂದರವನ್ನು ಬಿಗಿವಂತೆ ಕೈಲಾಸಗಿರಿಯನ್ನು ಬಿಗಿದಪ್ಪಿ ಅಲ್ಲಾಡಿಸಿ ಎತ್ತಿದನು ಆಗ ಊರ್ಧ್ವಲೋಕಗಳೆಲ್ಲವೂ ಅಲ್ಲಾಡಿದವು ದಿಕ್ಕುಗಳು ಬಿರಿದುವು ಭೂಮಿ ರಸಾತಲಕ್ಕೆ ಇಳಿಯಿತು, ಅವನ ಬಾಹುಬಲವಿನ್ನೆಷ್ಟೋ ತಿಳಿಯದು. ಪರ್ವತವು ಪುಟನೆಗೆದು ಬಿದ್ದಿತು, ಅವನ ಸಾಮರ್ಥ್ಯಕ್ಕೆ ಅಖಿಲಲೋಕದ ಜನರು ಗಡಗಡನೆ ನಡುಗುತ್ತಾ ನಮಗಿನ್ನೇನು ಗತಿಯೆಂದು ಭಯಪಡುತ್ತಿದ್ದರು ಪಾರ್ವತಿಯು ಭಯಗೊಂಡು ಹರನನ್ನು ಅಪ್ಪಿಕೊಂಡಳು ಆಗ ಶಿವನು ಇದು ದಶಾಸ್ಯನ ಚೇಷ್ಟೆಯೆಂದು ತಿಳಿದು ಉಂಗುಷ್ಟದಿಂದ ಮೆಟ್ಟಿದನು, ರಾಕ್ಷಸನು ಮತ್ತೆ ಎತ್ತಿದನು, ಶಿವನು ತಿರುಗಿ ತುಳಿದನು, ಹೀಗೆ ಬಹಳಹೊತ್ತು ಅವರಿಬ್ಬರೂ ಮೆಟ್ಟಿ ಎತ್ತು

ತ್ತಿರಲು ಪರ್ವತವು ಮೇಲಕ್ಕೂ ಕೆಳಕ್ಕೂ ಹಾರಿಬೀಳುತ್ತಿದ್ದುದರಿಂದ ಭೂದೇವಿಯು ತಿರಿಕಲ್ಲಾಡುವಳೋ ಎಂಬಂತೆ ಕಾಣಿಸುತ್ತಿತ್ತು. ಆಗ ಖಳನು ತನ್ನ ನೀಳವಾದ ಇಪ್ಪತ್ತು ತೋಳುಗಳನ್ನು ಒಳನೂಕಿ ಪರ್ವತವನ್ನು ಮೇಲಕ್ಕೆ ಎತ್ತಲು ಶಿವನು ಭೀತಿಗೊಂಡು ಬಲವಾಗಿ ಮೆಟ್ಟಿದನು. ಆಗ ದಶಕಂಧರನ ಇಪ್ಪತ್ತು ತೋಳುಗಳೂ ಬೆಟ್ಟದ ಬುರುಬಿನಲ್ಲಿ ಸಿಕ್ಕಿಕೊಂಡಿತು ಖಳನಿಗೆ ಧೈರ್ಯಕೆಟ್ಟಿತು, ಬುದ್ಧಿ ಹಾಳಾಯಿತು, ವ್ಯಥೆಗೆ ಗುರಿಯಾದನು, ಭೂಮಿಯು ಬಿರಿಯುವಂತೆ ಖಳನು ಘಟ್ಟಿಯಾಗಿ ಕೂಗಲು ಆ ಶಬ್ದಕ್ಕೆ ಮೂರು ಲೋಕದವರೂ ನಡುಗಿದರು ಹೀಗೆ ಅಹಂಕಾರ ಅಡಗಿ ಅಳುತ್ತಾಯಿರಲು, ಆ ಕೂಗನ್ನು ಕೇಳಿ ಅವನ ಮಂತ್ರಿಗಳು ಬಂದು ಅವನ ಕಷ್ಟವನ್ನು ನೋಡಿ ಪಶ್ಚಾತ್ತಾಪಗೊಂಡು ಅಯ್ಯೋ ದಶಕಂಠನೇ ನಿನ್ನ ಬುದ್ಧಿ ಏನಾಯಿತು ನಿನ್ನ ಧೈರ್ಯವೆಲ್ಲಡಗಿತು, ನಿನ್ನ ಪರಾಕ್ರಮವೆಲ್ಲಿಗೆ ಹೋಯಿತು, ಜಗದೀಶ್ವರನೊಡನೆ ನಿನಗೆ, ಛಲವೇ, ಕಾಲರುದ್ರನನ್ನು ಕೆಣಕಿ ಬದುಕುವವರುಂಟೆ, ಬೇಗ ಜಗದೀಶ್ವರನಾದ ಈಶ್ವರನನ್ನು ಸ್ತೋತ್ರಮಾಡು ವೇದಗಳಿಂದ ಹೊಗಳು, ಸಾನಕಾರ ಸಹಿತ ಕೇಶವೆಂದು ಮಂತ್ರಿಗಳು ಹೇಳಲು ಅವನಿಗೆ ಜ್ಞಾನೋದಯವಾಗಿ ಹಾಗೆಯೇ ಆಗಲೆಂದು ಒಪ್ಪಿಕೊಂಡು ಅನೇಕ ಸಾವಿರ ವರುಷಗಳು ಸಾಮಗಾನದಿಂದ ಶಿವನನ್ನು ಸ್ತುತಿಸಿ ಅವನನ್ನು ಮೆಚ್ಚಿಸಿದನು. ಆಗ ಪಾರ್ವತೀಸಹಿತನಾದ ಪರಮೇಶ್ವರನು ಒಂದು ದಶವದನನನ್ನು ಮನ್ನಿಸಿ ಬಿಡುಗಡೆ ಮಾಡಿ - ದಶಕಂಧರನೇ ನಿನ್ನ ಭುಜಬಲಕ್ಕೆ ನಾನು ಮೆಚ್ಚಿದೆನು ನಿನ್ನ ಕೂಗಿನಿಂದ ಮೂರುಲೋಕಗಳು ಭಯಪಡುವಂತೆ ಮಾಡಿದ ಆದಕಾರಣ ಇನ್ನು ಮೇಲೆ ನಿನಗೆ ರಾವಣನೆಂಬ ಹೆಸರಾಗಲಿ ಎಂದು ಹೇಳಿದನು. ಆ ಮಾತನ್ನು ಕೇಳಿ ರಾವಣನು ಜಗದೀಶ್ವರನ ಮನಸ್ಸನ್ನು ತಿಳಿದು ಒಡನೆಯೇ ನನಗೆ ಅಪೂರ್ವವಾದ ಒಂದು ಕತ್ತಿಯನ್ನು ಅನುಗ್ರಹಿಸಬೇಕೆಂದು ಬೇಡಲು, ಶಿವನು ಚಂದ್ರಹಾಸವೆಂಬ ಕತ್ತಿಯನ್ನು ಕೊಟ್ಟು ಅಂತರ್ಧಾನವಾದನು.

## ರಾವಣನು ವೇದವತಿಯನ್ನು ಬಂಧಿಸಿ ಶಾಪವನ್ನು ಪಡೆದುದು.

ಆಗ ರಾವಣಾಸುರನು ಅಲ್ಲಿಂದ ತೆರಳಿ ಸ... ಭೂಲೋಕದಲ್ಲಿ ಬಲಿಷ್ಠರಾದ ಅರಸುಗಳನ್ನು ಯುದ್ಧದಲ್ಲಿ ಕೊಲ್ಲುತ್ತಾ ಹಿಮವತ್ಪರ್ವತದ ತಪ್ಪಲಿಗೆ ಬರಲು ಅಲ್ಲಿ ಅರಣ್ಯಮಧ್ಯದಲ್ಲಿ ಸರ್ವಾಂಗಸುಂದರಿಯಾದ ಚಲುವೆಯೊಬ್ಬಳು ವಿಷ್ಣುವನ್ನು ಕುರಿತು ತಪಸ್ಸು ಮಾಡುತ್ತಿದ್ದಳು ಅವಳನ್ನು ಕಂಡು ಎಲೈ ಚಂದ್ರವದನೆಯೇ ಈ ಮಹಾರಣ್ಯದಲ್ಲಿ ನೀನೊಬ್ಬಳೇ ತಪಸ್ಸು ಮಾಡಿಕೊಂಡಿರಲು ಕಾರಣವೇನು ನೀನು ಯಾರು? ನೀನೊಬ್ಬಳೇ ಇರುವದು ಬಹಳ ಆಶ್ಚರ್ಯವಾಗಿದೆ ವಿವರವಾಗಿ ಹೇಳು ಎನಲು ಆ ಸುಂದರಿಯಾದ ಸುಶೀಲೆಯು ರಾವಣನನ್ನು ಪ್ರೀತಿಯಿಂದ ಪೂಜಿಸಿ ಅಯ್ಯಾ ಕೇಳು, ಬೃಹಸ್ಪತಿಯ ಮಗನಾದ ಕುಶಧ್ವಜನೆಂಬುವನು ವೇದವನ್ನು ಓದುತ್ತಿದ್ದಾಗ ಆತನ ಬಾಯೊಳಗಿನಿಂದ ನಾನು ಹುಟ್ಟಿಬಂದೆನು. ನನಗೆ ವೇದವತಿಯೆಂಬ ಹೆಸರು ಲೋಕದಲ್ಲಿ ಬಳಿಕೆಯಾಗಿದೆ. ನನ್ನ ತಂದೆಯು ನನ್ನನ್ನು ಬಹುಪ್ರೀತಿಯಿಂದ ಸಲಹುತ್ತಿರಲು ಸುರರು, ಮುನಿಗಳು, ಯಕ್ಷರು, ಗಂಧರ್ವರುಗಳಲ್ಲಿ ಸುಂದರರಾದವರು ನನ್ನನ್ನು ವಿವಾಹ ಮಾಡಿಕೊಳ್ಳಲಿಕ್ಕೆ ಕೇಳಲು ಇವಳು ಅಯೋನಿಜೆಯಾದ್ದರಿಂದ ಅಯೋನಿಜನಾದ ಶ್ರೀಮಹಾವಿಷ್ಣುವಿಗೆ ಕೊಟ್ಟು ಮದುವೆ ಮಾಡುವೆನಲ್ಲದೆ ಮತ್ತಾರಿಗೂ ಕೊಡುವದಿಲ್ಲವೆಂದು ಹೇಳಿದನು. ಒಂದು ದಿನ ಶಂಭುವೆಂಬ ರಾಕ್ಷಸನೊಬ್ಬನು ಬಂದು ನನ್ನನ್ನು ಕೇಳಲು ನನ್ನ ತಂದೆ ಅವನಿಗೆ ನನ್ನನ್ನು ಕೊಡದೇಹೋದುದರಿಂದ ಆ ದುರುಳರಕ್ಕಸನು ಕುಪಿತನಾಗಿ ನನ್ನ ತಂದೆಯನ್ನು ಕಡಿದುಹಾಕಿದನು, ನನ್ನ ತಂದೆ ಸಾಯಲು ನನ್ನ ತಾಯಿ ಅವನೊಂದಿಗೆ ಸಹಗಮನ

ಮಾಡಿದಳು. ನಾನು ನನ್ನ ತಂದೆತಾಯಿಗಳಿಗೆ ಉತ್ತರಕ್ರಿಯೆಗಳನ್ನು ಮಾಡಿ ತಂದೆಯ ಸಂಕಲ್ಪವನ್ನು ಈಡೇರಿಸಬೇಕೆಂದು ವಿಷ್ಣುವನ್ನು ಕುರಿತು ತಪಸ್ಸುಮಾಡುತ್ತ ಇದ್ದೇನೆ ಎನಲು, ರಾವಣನು ಅಯ್ಯೋ ಮೂಢಳೆ ಹರಿಯೆಲ್ಲಿ ನೀನೆಲ್ಲಿ ನಿನ್ನ ಯೌವನಕಾಲವನ್ನು ಸುಖವಾಗಿ ಕಳೆಯದೆ ವ್ಯರ್ಥಮಾಡಿಕೊಳ್ಳುತ್ತೀಯಲ್ಲಾ, ರತಿಸುಖಕ್ಕಿಂತಲೂ ಅತಿಶಯವಾದದ್ದು ಬೇರೆ ಯಾವುದು, ನಾನು ಜಗದೇಕವೀರನಾಗಿ ಸಮಸ್ತ ದೇವತೆಗಳಿಗೂ ಒಡೆಯನಾಗಿದ್ದೇನೆ ನನ್ನನ್ನು ಮದುವೆಯಾಗಿ ಸುಖದಿಂದ ಬಾಳು ಎಂದು ಹೇಳಲು ಆಕೆ ಇವನ ಮಾತಿಗೆ ಒಪ್ಪದೆ ಇರಲು ಬಲಾತ್ಕಾರವಾಗಿ ಆಕೆಯನ್ನು ಮದುವೆಯಾಗಬೇಕೆಂದು ಪ್ರಯತ್ನಪಟ್ಟನು. ವೇದವತಿಯು ರೋಷದಿಂದ ಜ್ವಾಜ್ವಲ್ಯಮಾನಳಾಗಿ ಎಲವೊ—ಮೂಢನೇ ಪಾಪಾತ್ಮನಾದ ನಿನ್ನನ್ನು ಕೊಲ್ಲುವದು ನನಗೆ ಅಸಾಧ್ಯವಲ್ಲ, ನನ್ನ ತಪಸ್ಸು ನಿಷ್ಫಲವಾಗುವದೆಂದು ಬಿಟ್ಟಿರುವೆನು ಪುರುಷನನ್ನು ಹೆಂಗಸು ಕೊಲ್ಲುವದು ನ್ಯಾಯವಲ್ಲ ಆದಕಾರಣ ನಾನು ಜನ್ಮಾಂತರದಲ್ಲಿ ಸೀತೆಯಾಗಿ ಹುಟ್ಟಿ ರಾಮನಾಗಿ ಹುಟ್ಟುವ ವಿಷ್ಣುವನ್ನು ಮದುವೆಯಾಗಿ ಅವನಿಂದ ನಿನ್ನನ್ನು ಕೊಲ್ಲಿಸುವೆನೆಂದು ಶಾಪಕೊಟ್ಟು ಅಗ್ನಿಪ್ರವೇಶಮಾಡಿ ದೇಹತ್ಯಾಗ ಮಾಡಿದಳು, ಆ ಬಳಿಕ ರಾವಣನು ಆ ವನದಿಂದ ಹೊರಟುಬಂದು ಪುಷ್ಪಕವನ್ನೇರಿ ಭೂಮಂಡಲದಲ್ಲಿ ಸಂಚರಿಸುತ್ತಿದ್ದನು.

## ರಾವಣನು ಮರತ್ತನನ್ನು ಯಜ್ಞಕಾಲದಲ್ಲಿ ಜಯಿಸಿದುದು.

ಮರುತರಾಯನು ಯಜ್ಞಮಾಡುತ್ತಾ ಇರುವ ಸಮಾಚಾರವನ್ನು ಕೇಳಿ ರಾವಣನು ಅಲ್ಲಿಗೆ ಬರಲು ದುಷ್ಟನಾದ ರಾವಣನು ಬರುವುದನ್ನು ಕಂಡು ಯಜ್ಞಕ್ಕಾಗಿ ಬಂದಿದ್ದ ಇಂದ್ರನು ನವಿಲಾದನು ಯಮನು ಕಾಗೆಯಾದನು ವರುಣನು ಹಂಸೆಯಾದನು ಕುಬೇರನು ಗೋಸುಂಬೆಯಾದನು ಇನ್ನೂ ಅನೇಕರು ನಾನಾವಿಧವಾದ ರೂಪಾಂತರವಂ ವಹಿಸಿ ಕಣ್ಮರೆಯಾದರು. ಋಷಿಗಳೆಲ್ಲರೂ ಓಡಿಹೋದರು ಖಳನಾದ ರಾವಣನು ಬಂದು ಯಜ್ಞದೀಕ್ಷಿತನಾಗಿರುವ ಮರುತ್ತನನ್ನು ಕುರಿತು ಎಲೈ ರಾಜನೇ! ನೀನು ಶೂರನಾದರೆ ಕಾಳಗಕ್ಕೆ ಬಾ ದುರ್ಬಲನಾದರೆ ಸೋತೆನೆಂದು ಹೇಳಿ ಬದುಕಿಕೊ ಎಂದು ಹೇಳಲು ರಾಜನು ನೀನು ಯಾರು ಇಲ್ಲಿಗೆ ಏಕೆ ಬಂದೆ ಎಂದು ಕೇಳಲು ರಾವಣನು ನಾನು ಕುಬೇರನ ತಮ್ಮ ಕುಬೇರನನ್ನು ಜಯಿಸಿ ಅವನ ಪುಷ್ಪಕವನ್ನು ತೆಗೆದುಕೊಂಡು ಬಂದಿರುವೆನು ನನ್ನ ಹೆಸರು ರಾವಣನೆಂದು ಲೋಕದಲ್ಲಿ ಪ್ರಸಿದ್ಧವಾಗಿರುವುದು ನೀನು ಅರಿಯೆಯಾ? ಆಶ್ಚರ್ಯವಾಗಿದೆ ಎಂದು ಹೇಳಿದನು. ಅದಕ್ಕೆ ಮರುತ್ತರಾಯನು ಅಯ್ಯಾ ನೀನು ಮಹಾಯೋಗ್ಯನು ಅಣ್ಣನ ಸಂಗಡ ಯುದ್ಧಮಾಡಿ ಗೆದ್ದವನು ಧರ್ಮಮಾರ್ಗವನ್ನು ತುಸವಾದರೂ ತಪ್ಪುವನಲ್ಲ ಎಂದು ಕಠೋರವಾಗಿ ಮಾತನಾಡುತ್ತ ಒಳ್ಳೆಯದು ಯುದ್ಧಕ್ಕೆ ನಿಲ್ಲು ಎಂದು ಸಿದ್ಧನಾಗುತ್ತಿದ್ದನು. ಆಗ ಬೃಹಸ್ಪತಿಯ ತಮ್ಮನಾದ ಸಂವರ್ತನೆಂಬ ಪುರೋಹಿತನು ಬಂದು ಯುದ್ಧಮಾಡದಂತೆ ತಡೆದು ಅಯ್ಯಾ ಧೊರೆಯೆ, ನೀನು ಯಜ್ಞದೀಕ್ಷಿತನಾಗಿದ್ದೀಯೆ ಇವನು ಖೂಳ ಇವನೊಡನೆ ಈ ಸಮಯದಲ್ಲಿ ಯುದ್ಧಮಾಡುವುದು ನ್ಯಾಯವಲ್ಲ ಎಂದು ಹೇಳಲು ಮರುತ್ತರಾಯನು ಧನುರ್ಬಾಣಗಳನ್ನು ಬಿಸಾಡಿ ರಾವಣನ ಬಳಿಗೆ ಬಂದು, ಅಯ್ಯಾ ವೀರನೇ ನಾನು ಸೋತೆನೆಂದನು ಆ ಮಾತಿಗೆ ರಾವಣನು ಅತಿಸಂತುಷ್ಟನಾಗಿ ಅವನನ್ನು ಬಿಟ್ಟು ಮುಂದಕ್ಕೆ ಹೊರಟುಹೋದನು ಆ ಮೇಲೆ ಯಜ್ಞಶಾಲೆಗೆ ಯಥಾ ಪ್ರಕಾರವಾಗಿ ಇಂದ್ರಾದಿಗಳೆಲ್ಲರು ನಿಜರೂಪದಿಂದ್ದ ಬಂದು ತಮಗೆ ಬಂದಿದ್ದ ಅಪಮೃತ್ಯು ತೊಲಗಿಹೋಯಿತೆಂದು ಸಂತೋಷಪಟ್ಟು ನವಿಲಾಗಿದ್ದ ಇಂದ್ರನು ನಿನಗೆ ಮೈಯಲ್ಲ ನನ್ನ ಮೈಯಂತೆ ಕಣ್ಣುಗಳಾಗಲಿ ವರ್ಷಾಕಾಲದಲ್ಲಿ ನಿನಗೆ ಬಹು ಸಂತೋಷವುಂಟಾಗಲಿ ಎಂದು ವರವನ್ನು ಕೊಟ್ಟನು ಕಾಗೆ

ಯಾಗಿದ್ದ ಯಮನು ಅದಕ್ಕೆ ಆ ದಿನ ಮೊದಲು ಮರಣವಿಲ್ಲದೆ ಬಹುಕಾಲ ಜೀವಿಸುವಂತೆಯೂ, ಅಂದು ಮೊದಲು ಲೋಕದಲ್ಲಿ ಪಿತೃಕಾರ್ಯಗಳನ್ನು ಮಾಡುವರು ನಿನ್ನ ಮೂಲಕವಾಗಿ ಪಿತೃಗಳಿಗೆ ಪಿಂಡವನ್ನು ಹಾಕಿದರೆ ನಾನು ತೃಪ್ತನಾಗುವೆನು ಎಂದು ವರವನ್ನಿತ್ತನು. ಹಂಸಪಕ್ಷಿಯಾಗಿದ್ದ ವರುಣನು ಕಪ್ಪಾಗಿದ್ದ ಅದರ ರೆಕ್ಕೆಗಳೆಲ್ಲ ಬಿಳುಪಾಗಲೆಂದು ವರವನ್ನು ಕೊಟ್ಟನು. ಗೋಸುಂಬೆಯಾಗಿದ್ದ ಕುಬೇರನು ಅದಕ್ಕೆ ಯಾವಾಗಲೂ ಕಂಠದಲ್ಲಿ ಭಂಗಾರದ ರೇಖೆಯಿರಲೆಂದು ವರವನ್ನು ಕೊಟ್ಟನು. ಬಳಿಕ ಮರುತ್ತರಾಯನ ಯಾಗಶಾಲೆಯಲ್ಲಿ ಯಜ್ಞದ ಹವಿರ್ಭಾಗಗಳನ್ನು ತೆಗೆದುಕೊಂಡು ಸಂತುಷ್ಟರಾಗಿ ಎಲ್ಲರೂ ತಮ್ಮತಮ್ಮ ಸ್ಥಳಗಳಿಗೆ ಹೊರಟುಹೋದರು.

## ದಶಕಂಠನು ಅನರಣ್ಯಕನನ್ನು ಕೊಂದು ಶಾಪಗ್ರಸ್ತನಾದುದು.

ಆ ಬಳಿಕ ರಾವಣನು ಅಯೋಧ್ಯಾನಗರಿಗೈತಂದು ಘೋರಿಯಾದ ಅನರಣ್ಯಕನನ್ನು ನೋಡಿ ಎಲೈ ಅರಸನೆ ನನ್ನೊಡನೆ ಕಾಳಗಕ್ಕೆ ಬರುವೆಯೋ ಅಥವಾ ಸೋತೆನೆಂದು ಹೇಳಿ ಪ್ರಾಣಗಳನ್ನು ಉಳಿಸಿಕೊಳ್ಳುವೆಯೋ ಎಂದು ಕೇಳಲು ಆ ರಾಯನು ಧನುರ್ಧರನಾಗಿ ಅವನೊಡನೆ ಬಹುಕಾಲ ಕಾಳಗವಾಡಿ ಕಡೆಗೆ ಅವನ ಬಾಣದ ಪೆಟ್ಟನ್ನು ತಿಂದು ಸಾಯುವ ಸಮಯದಲ್ಲಿ ರಾವಣನು ಅವನ ಸಮೀಪಕ್ಕೆ ಬಂದು ಎಲಾ ಮೊದಲು ನಾನು ಬಂದು ಕೇಳಿದಾಗ ಸೋತೆನೆಂದು ಹೇಳಿದ್ದರೆ ಈಗ ಸಾಯದೇ ಇರುತ್ತಿದ್ದೆ ಬೆಂಕಿಯೊಡನೆ ಜಗಳಕ್ಕೆ ಬಂದ ಮಿಡಚೆಯಂತೆ ಸಾಯುತ್ತಿರುವೆಯಲ್ಲಾ ಎಂದು ಹಾಸ್ಯಮಾಡಲು ಆ ರಾಯನು ಎಲೈ ಮೂರ್ಖನೇ ಯುದ್ಧದಲ್ಲಿ ಜಯಪರಾಜಯಗಳು ದೈವಾಧೀನಗಳು ಶೂರರಾದರಿಗೆ ಯುದ್ಧದಲ್ಲಿ ಸಾಯುವುದರಿಂದ ಅವಮಾನವಿಲ್ಲ ಗೆಲ್ಲುವುದರಿಂದ ಬಹುಮಾನವೂ ಇಲ್ಲ ಕ್ಷತ್ರಿಯರಿಗೆ ಇದು ಸಹಜವಾದ ಧರ್ಮ ನೀನು ಮೂಢನಾಗಿ ನನ್ನನ್ನು ಹಾಸ್ಯಮಾಡಿದ್ದರಿಂದ ನನ್ನ ವಂಶದಲ್ಲಿ ಮುಂದೆ ರಾಮನೆಂಬವನು ಹುಟ್ಟಿ ನಿನ್ನನ್ನು ಕೊಲ್ಲುವನೆಂದು ಶಪಿಸಿ ಪ್ರಾಣಬಿಟ್ಟನು. ರಾವಣನ ವಿನಾಶಕ್ಕೆ ಕಾರಣಭೂತವಾದ ಈ ಶಾಪಕ್ಕೆ ದೇವತೆಗಳೆಲ್ಲರೂ ಬಹು ಸಂತೋಷಪಟ್ಟರು ದೇವದುಂದುಭಿಗಳು ಮೊಳಗಿದವು ರಾವಣನು ಈ ಶಾಪಕ್ಕೆ ಹೆದರಲೇ ಇಲ್ಲ ರಾಯನು ಸತ್ತಮೇಲೆ ಅಲ್ಲಿಂದ ಹೊರಟು ಆಕಾಶಮಾರ್ಗವಾಗಿ ಬರುತ್ತಾ ಮನಸ್ಸಿನಲ್ಲಿ ಮನುಷ್ಯರಮೇಲೆ ಬಿದ್ದರೆ ತನ್ನ ತೋಳತೀಟೆ ತೀರುವುದಿಲ್ಲವೆಂದು ಯೋಚಿಸಿ ನಾರದಮುನಿಯನ್ನು ಕಂಡು ತಲೆಬಾಗಿ ನಿಂತುಕೊಳ್ಳಲು ನಾರದಮುನಿಯು ಅವನನ್ನು ಆಶೀರ್ವದಿಸಿ ಎಲಯ್ಯಾ ಲಂಕಾಧೀಶ್ವರ ಸುಖವಾಗಿದ್ದೀಯಾ ಎಂದು ವಿಚಾರಿಸಿ ಈಗ ನಿನ್ನ ಶೌರ್ಯದಲ್ಲಿ ಭೂಲೋಕವು ಬೆಂದುಹೋಯಿತು ದುರ್ಬಲರಾದ ಅಲ್ಪಾಯುಷ್ಯರಾಗಿರುವ ಈ ಮನುಷ್ಯರನ್ನು ಕೊಂದರೆ ನಿನಗೆ ಕೀರ್ತಿ ಬರಲಾರದು ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ ಎಂಬ ಗಾದೆಗೆ ಸರಿಯಾಗಿ ಅವರು ನಿನಗೆಷ್ಟುಮಾತ್ರದವರು ವ್ಯಾಧಿ ರೋಗಗಳಿಂದಲೂ ಬಸವಳಿದು ತಾವಾಗಿಯೇ ಮೃತ್ಯುವಶರಾಗುವ ಈ ನರಕುರಿಗಳನ್ನು ಹಿಂಸಿಸುವುದು ನಿನ್ನಂಥಾ ಪರಾಕ್ರಮಶಾಲಿಗೊಂದು ಮಹತ್ತೆ ? ಇದರಿಂದ ನಿನಗೆಂದಿಗೂ ಒಳ್ಳೇ ಹೆಸರು ಬರಲಾರದು ನಿನಗೆ ಸಮಾನ ಬಲಶಾಲಿಗಳಾದ ಸ್ವರ್ಗಮರ್ತ್ಯ ಪಾತಾಳಲೋಕಗಳಲ್ಲಿರುವ ಪ್ರಾಣಿಗಳನ್ನು ಹಿಂಸೆಮಾಡುತ್ತಿರುವ ಯಮ ಮುಂತಾದವರನ್ನು ಜಯಿಸಿದರೆ ನಿನಗೆ ಯಶಸ್ಸುಂಟು ಎಂದು ಹೇಳಲು ರಾವಣನು ಸ್ವಾಮಿ ನಾನು ಹಾಗೆಯೇ ಯೋಚಿಸಿರುವೆನು ಮೊದಲು ದಿಕ್ಪಾಲಕರಲ್ಲೊಬ್ಬನಾದ ಕುಬೇರನನ್ನು ಜಯಿಸಿದ್ದೇನೆ ಎಂದು ಹೇಳಿ ಯಮನನ್ನು ಜಯಿಸಬೇಕೆಂಬ ಆಸೆಯಿಂದ ಹೊರಟನು. ನಾರದಮುನಿಯು ರಾವಣನು ಹೋಗಿ ಸೇರುವುದಕ್ಕೆ ಮೊದಲೆ ತಾನು ಯಮನ ಬಳಿಗೆ ಹೋಗಿ ಸತ್ಕಾರಮಾಡಿಸಿಕೊಂಡು ಎಲೈ ಯಮನೇ ನಿನ್ನೊಡನೆಯುದ್ಧಮಾಡು

ವುದಕ್ಕೆ ರಾವಣಾಸುರನು ಬರುತ್ತಿರುವನು 'ಅವನನ್ನು ನಿನ್ನ ಕಾಲದಂಡದಿಂದ ಕೊಂದುಹಾಕಿ ಲೋಕಕ್ಕೆ ಉಂಟಾಗಿರುವ ಬಾಧೆಯನ್ನು ತಪ್ಪಿಸು ಎಂದು ಹೇಳಿ ಹೊರಟುಹೋದನು.

## ರಾವಣನು ಯಮನೊಡನೆ ಯುದ್ಧಮಾಡಿದುದು.

ಆ ತರುವಾಯ ಮತ್ತೊಂದು ದಿವ್ಯಸಭೆಯಲ್ಲಿ ಹಸಿವು ಬಾಯಾರಿಕೆಗಳನ್ನು ಕಳೆದು ದಿವ್ಯ ದೇಹದ ಆಯಾಸವನ್ನು ತೀರಿಸಿ ನವರತ್ನಖಚಿತವಾದ ಆಭರಣಗಳನ್ನು ಧರಿಸಿ ಪೀತಾಂಬರವನ್ನುಟ್ಟು ದಿವ್ಯ ಪರಿಮಳ ಗಂಧವನ್ನು ಲೇಪಿಸಿಕೊಂಡು ಹುಷ್ಪಿನ ಹಾರವನ್ನು ಧರಿಸಿ ಭರತಸಾಟ್ಯಾದಿ ಸಂಗೀತ ಸಾಹಿತ್ಯ ಸುಖದಿಂದ ಸ್ವಲ್ಪಹೊತ್ತು ಕಳೆದು ಯಮಲೋಕಕ್ಕೆ ಯುದ್ಧಸನ್ನದ್ಧನಾಗಿ ಹೊಗಟು ಯಮನಗರವನ್ನು ಹೊಕ್ಕು ಅಲ್ಲಿ ನರಕಗಳಲ್ಲಿ ಯಮಭಟರು ಪಾಪಿಗಳನ್ನು ಶೂಲಕ್ಕೆ ಹಾಕುವದನ್ನೂ, ಕೆಲವರನ್ನು ಕಾಗೆಗಳಿಂದ ಕುಚ್ಚಿಸುವುದನ್ನೂ, ಕೆಲವರನ್ನು ಬೆಂಕಿಯಲ್ಲಿ ಕಾಯಿಸುವದನ್ನೂ, ಕೆಲವರನ್ನು ಬೇಯಿಸುವುದನ್ನೂ, ಕೆಲವರ ಬಾಯಿಗೆ ಕಾದ ಸೀಸವನ್ನು ಸುರಿಯುವದನ್ನೂ, ಕೆಲವರನ್ನು ಕಾದ ಮರಳಮೇಲೆ ಮಲಗಿಸುವುದನ್ನೂ ನೋಡಿ ರಾವಣಗೆ ಕನಿಕರಹುಟ್ಟಿ ಯಮಭಟರನ್ನು ಬಾಣಗಳಿಂದ ಹೊಡೆದು ಓಡಿಸಲು ಪಾಪಿಗಳೆಲ್ಲರೂ ಮುಕ್ತರಾಗಿ ತಮ್ಮ ಬಾಧೆಗಳೆಲ್ಲ ತಪ್ಪಿತೆಂದು ಸಂತೋಷಪಟ್ಟು ರಾವಣನಬಳಿಗೆ ಬಂದು ನಮಸ್ಕರಿಸಿ ಮಹಾನುಭಾವನೇ ನಿನ್ನ ದೆಸೆಯಿಂದ ನಮ್ಮ ಕಷ್ಟ ತಪ್ಪಿತು ನಾವು ನಿನ್ನೊಡನೆ ಯಮನಮೇಲೆ ಯುದ್ಧಕ್ಕೆ ಬರುವೆವು ಎಂದು ಬೊಬ್ಬಿರಿದು ಕೂಗುತ್ತಿರಲು ಆ ಪ್ರೇತಗಳೊಂದಿಗೆ ಕೂಡಿ ಮತ್ತೊಂದು ಕಡೆ ದಿವ್ಯಾಲಂಕಾರ ಭೂಷಿತರಾಗಿ ಸುಗಂಧವನ್ನು ಪೂಸಿ ವಿನೋದದಿಂದ ಗಾನ ಮಾಡುತ್ತಿರುವ ಪುಣ್ಯಶಾಲಿಗಳನ್ನು ನೋಡುತ್ತಾ ಆತನ ಅರಮನೆಯ ಬಳಿಗೆ ಬಂದು ನಿಂತು ಗರ್ಜಿಸಿದನು ಆಗ ಯಮನು ಆ ಧ್ವನಿಯನ್ನು ಕೇಳಿ ರಾವಣನು ಯುದ್ಧಕ್ಕೆ ಬಂದನೆಂದು ತಿಳಿದು ಕಾಲದಂಡ ಮೊದಲಾದ ದಿವ್ಯಾಯುಧಗಳನ್ನು ಧರಿಸಿ ಕೋಣನನ್ನೇರಿ ರೂಪಧಾರಿಗಳಾದ ರಾಜಯಕ್ಷ್ಮಾದಿಗಳನ್ನು ಕಾಲಮೃತ್ಯುವನ್ನು ಜೊತೆಯಲ್ಲಿ ಕರೆದುಕೊಂಡು ರಾವಣನೆದುರಿಗೆ ನಿಂತು ಧನುವನ್ನೇರಿಸಿ ಅಂಬಿನ ಮಳೆಯನ್ನು ಸುರಿಸುತ್ತಾ ಮಹೋದರ ಪ್ರಹಸ್ತ ಮಾರೀಚಾದಿ ರಾಕ್ಷಸಭಟರನ್ನು ಹೊಡೆಯಲು ಅವರು ಯಮನ ಬಾಣಘಾತಕಕ್ಕೆ ತಾಳಲಾರದೆ ಕೆಳಗೆಬಿದ್ದು ಮೂರ್ಛೆಹೋದರು ಲೋಕದ ಸರ್ವ ಪ್ರಾಣಿಗಳನ್ನೂ ಪ್ರಳಯ ಕಾಲದಲ್ಲಿ ಸಂಹರಿಸುವ ಯಮನೇ ಯುದ್ಧಕ್ಕೆ ಬಂದು ನಿಂತರೆ, ಅವನೆದುರಿಗೆ ಯುದ್ಧಮಾಡುವರು ಯಾರು, ಯಮನೊಡನೆ ಕಾಳಗಕ್ಕೆ ಬಂದಿರುವ ರಾವಣನ ಧೈರ್ಯವೆಷ್ಟಿರಬಹುದು ರಾವಣನು ಗದೆ, ಶಕ್ತಿ, ತೋಮರ, ಮುದ್ಗರ, ಮುಸಲ, ಕುಂತ ಮುಂತಾದ ಆಯುಧಗಳನ್ನು ಯಮನಮೇಲೆ ಪ್ರಯೋಗಿಸಲು, ಅವನು ಲಕ್ಷ್ಯವಿಡದೆ ಪುಡಿಪುಡಿಯಾಗಿ ಕಡಿದು ಹಾಕಿ ತನ್ನ ತೀಕ್ಷ್ಣವಾದ ಬಾಣಗಳಿಂದ ಪುಷ್ಪಕವನ್ನು ಪುಡಿಪುಡಿಯಾಗುವಂತೆ ಕತ್ತರಿಸುತ್ತಿದ್ದರೂ ಬ್ರಹ್ಮನ ವರಬಲದಿಂದ ರಾವಣನ ಶೌರ್ಯವು ಮೊದಲಿನಂತೆಯೆ ಬೆಳೆಯುತ್ತಿದ್ದಿತು ಆಗ ರಾವಣನು ಬಹಳ ಕೋಪವನ್ನು ತಾಳಿ ಯಮನ ವಾಹನವನ್ನು ಹತ್ತು ಬಾಣಗಳಿಂದ ಹೊಡೆದು ಬೊಬ್ಬಿರಿದನು. ಆ ಕೋಣನು ಆ ಪೆಟ್ಟನ್ನು ಸಹಿಸಲಾರದೆ ಯಮನನ್ನು ಹೊತ್ತುಕೊಂಡು ಒಂದು ಯೋಜನ ದೂರಕ್ಕೆ ಓಡಿಹೋಯಿತು, ಯಮನು ಅತ್ಯಂತ ರೋಷದಿಂದ ಜ್ವಾಲೆಯುಳ್ಳವನಾಗಿ ಕೋಣನ ಹಗ್ಗವನ್ನು ಸೆಳೆದು ರಾವಣನ ಸಮೀಪಕ್ಕೆ ಬಂದು ನಿಲ್ಲಲು ಕಾಲಮೃತ್ಯುವು ನನಗೆ ಅಪ್ಪಣೆ ಕೊಡು ಇಂದ್ರಾದಿಗಳೆಲ್ಲರೂ ನನಗೆ ವಶವಾಗಿರುವಲ್ಲಿ ಈ ಹತ್ತುತಲೆಯ ಹುಳುವನ್ನು ಸ್ವಾಧೀನಪಡಿಸಿಕೊಳುವುದೇನು ಕಷ್ಟ, ಎನಲು ಯಮನು ಸ್ವಲ್ಪಹೊತ್ತು ಸುಮ್ಮನಿರು ಎಂದು ಹೇಳಿ, ಕಾಲದಂಡವನ್ನು ಕೈಕೊಂಡು

ಎಲವೊ ಮೂರ್ಖ ಇಗೊ ನಿನ್ನನ್ನು ಈಕ್ಷಣ ಕೊಂದುಹಾಕುವೆನು ಎಂದು ಘರ್ಜಿಸಲು ಆಗ ಸ್ವರ್ಗಾದಿ ಸಮಸ್ತಲೋಕಗಳೂ ಹೆದರಿ ಮಹಾಭಯವನ್ನು ತಾಳಿತು ಇಂದ್ರಾದಿ ದೇವತೆಗಳು ಓಹೋ ಯಮನು ಕಾಲದಂಡವನ್ನು ಹಿಡಿದನು ಇನ್ನು ಪ್ರಳಯವಾಗುವುದು ದಿಟ ಈಗ ನಾವು ಸುಮ್ಮನಿರಬಾರದು ಎಂದು ಬ್ರಹ್ಮನಬಳಿಗೆ ಓಡಿಹೋಗಿ ಮಣಿದು ಮುಕುಳಿತಹಸ್ತರಾಗಿ ಸ್ವಾಮಿ ಈಗ ಯಮನಿಗೂ ರಾವಣನಿಗೂ ಘೋರವಾದ ಯುದ್ಧ ನಡೆಯುತ್ತಿದೆ ರಾವಣನನ್ನು ಕೊಲ್ಲುವೆನೆಂದು ಯಮನು ಕಾಲದಂಡವನ್ನು ಧರಿಸಿದನು, ನಮ್ಮ ಗತಿಯೇನು ಎಂದು ಮೊರೆಯಿಟ್ಟರು ಪಿತಾಮಹನು ಕೂಡಲೆ ಯಮಲೋಕಕ್ಕೆ ಬಂದು ರಹಸ್ಯವಾಗಿ ಯಮನನ್ನು ಕಾಣಿಸಿಕೊಂಡು ಎಲೈ—ಯಮನೇ ಕಾಲದಂಡವನ್ನು ಹಿಡಿಯಬೇಡ ನನ್ನ ವರಬಲದಿಂದ ಯಾರು ಮೇಲೆಬಿದ್ದರೂ ಅವರೆ ಸಾಯುವರು ಮತ್ತು ರಾವಣನಿಗೆ ನನ್ನವರಬಲದಿಂದ ನಿಮ್ಮಿಂದ ಸಾವಿಲ್ಲ ಅವನು ಸತ್ತರೆ ನನ್ನ ಮಾತು ಸುಳ್ಳಾಗಿ ನನಗೆ ಅಪಕೀರ್ತಿ ಬರುತ್ತದೆ. ನನ್ನ ಮಾತನ್ನು ಕಾಪಾಡಬೇಕು ನನ್ನ ಮಾತು ಸುಳ್ಳಾದರೆ ಲೋಕಗಳೆಲ್ಲ ಹಾಳಾಗುವುವು ಆದ್ದರಿಂದ ಅವನಿಗೆ ಕಾಣಿಸಿಕೊಳ್ಳದೆ ಮರೆಯಾಗಿಹೋಗು ಎಂದು ಹೇಳಿ ಬ್ರಹ್ಮಲೋಕಕ್ಕೆ ಹೊರಟುಹೋದನು ಯಮನು ಬ್ರಹ್ಮನಮಾತನ್ನು ಮೀರಲಾರದೆ ರಾವಣನಿಗೆ ಮರೆಯಾಗಿ ನಿಂತನು ಆಗ ರಾವಣನು ಯಮನೂ ತನಗೆ ಹೆದರಿ ಸೋತು ಓಡಿಹೋದನು ಎಂದು ಸಂತೋಷದಿಂದ ಜಯಭೇರಿಯನ್ನು ಹೊಡಿಸಿ ಅಲ್ಲಿಂದ ರಸಾತಲಕ್ಕೆ ಹೋದನು.

## ದಶಕಂಠನು ಯುದ್ಧಮಾಡಿ ನಿವಾತಕವಚರೊಡನೆ ಸ್ನೇಹಮಾಡಿದುದು.

ಅಲ್ಲಿ ನಿವಾತಕವಚರೆಂಬ ರಾಕ್ಷಸರೊಡನೆ ಒಂದು ವರುಷದವರೆಗೂ ಯುದ್ಧಮಾಡಿ ಸೋಲು ಗೆಲವುಗಳಿಲ್ಲದೆ ಇದ್ದುದ್ದರಿಂದ ಬ್ರಹ್ಮದೇವರ ಅಪ್ಪಣೆ ಮೇರೆಗೆ ಇಬ್ಬರೂ ಅಗ್ನಿಸಾಕ್ಷಿಕವಾಗಿ ಸಖ್ಯವನ್ನು ಮಾಡಿಕೊಂಡರು. ರಾವಣನು ಸ್ನೇಹಿತರ ಅಪ್ಪಣೆಯನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಅಶ್ಮಪುರಕ್ಕೆ ಹೋದನು.

## ರಾವಣನು ಕಾಲಕೇಯಾದಿಗಳನ್ನು ಜಯಿಸಿದುದು.

ಅಲ್ಲಿ ಕಾಲಕೇಯರೆಂಬ ದೈತ್ಯರೊಡನೆ ಕಾಳಗಮಾಡಿ ತನ್ನ ಭಾವಮೈದನಾದ ವಿದ್ಯುಜ್ಜಿಹ್ವನೆಂಬವನನ್ನೂ ಕಾಲಕೇಯಾದಿ ಅನೇಕಮಂದಿ ದೈತ್ಯರನ್ನೂ ಯಮನ ಪಟ್ಟಣಕ್ಕೆ ಕಳುಹಿಸಿ, ಅವರ ಪಟ್ಟಣವನ್ನು ಸೂರೆಮಾಡಿ, ಅಲ್ಲಿಂದ ವರುಣಲೋಕಕ್ಕೆ ಹೋದನು

## ರಾವಣನು ವರುಣನನ್ನು ಗೆದ್ದು ಸ್ತ್ರೀಯರನ್ನು ಅಪಹರಿಸಿದುದು.

ಅಲ್ಲಿ ವರುಣನ ಮಕ್ಕಳನ್ನು ಯುದ್ಧದಲ್ಲಿ ಮೂರ್ಛಾಗತರಾಗುವಂತೆ ಮಾಡಿ ವರುಣನ ಬೊಕ್ಕಸದಲ್ಲಿದ್ದ ಅನರ್ಘ್ಯಗಳಾದ ರತ್ನಾಭರಣಗಳನ್ನು ತೆಗೆದುಕೊಂಡು ಅಲ್ಲಿದ್ದ ಯೌವನಭರಿತರಾದ ನಾಗಕನ್ನಿಕೆ, ದೇವಕನ್ನಿಕೆ, ದೈತ್ಯಕನ್ನಿಕೆಯರನ್ನೂ ಅಪಹರಿಸಿ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಜಯಭೇರಿಯನ್ನು ಹೊಡೆಯುತ್ತಾ ಹಿಂತಿರುಗಿ ಲಂಕಾನಗರಕ್ಕೆ ಬರಲು ಇವನ ಆಗಮನವನ್ನು ಕಂಡು ಪುರನಾರಿಯರೆಲ್ಲರೂ ಮಂಗಳವಾದ್ಯಗಳೊಡನೆ ಆರತಿಗಳನ್ನೆತ್ತಿ ಸಂಭ್ರಮದೊಡನೆ ಬರಮಾಡಿಕೊಂಡರು. ಆಗ ರಾವಣನು ಪುರಪ್ರವೇಶಮಾಡಿ ತಂದಿದ್ದ ಪದಾರ್ಥಗಳೆಲ್ಲವನ್ನೂ ಯುಕ್ತಸ್ಥಾನಗಳಲ್ಲಿಡಿಸಿ ಓಲಗದ ಚಾವಡಿಯಲ್ಲಿ ಕುಳಿತು ವಿಭೀಷಣ ಕುಂಭಕರ್ಣ ಮಾಲ್ಯವಂತ ಮುಂತಾದವರ ಯೋಗಕ್ಷೇಮವನ್ನು ವಿಚಾರಿಸಿ ತಾನುಮಾಡಿದ ದಿಗ್ವಿಜಯದ ವೃತ್ತಾಂತವನ್ನು ಹೇಳಿ ಅಂತಃಪುರಕ್ಕೆ ಹೋಗಿ ಮಡದಿಯಾದ ಮಂಡೋದರಿಯೊಡನೆ ಸರಸಸಲ್ಲಾಪಗಳನ್ನಾಡುತ್ತಾ ತಾನು ಹೋಗಿ ಜಯಪ್ರದಮಾಡಿದ ವೃತ್ತಾಂತವನ್ನು ಹೇಳುತ್ತಾ

ಕೆಲವುಕಾಲ ಸುಖಿಸುತ್ತಿರಲು ಶೂರ್ಪನಖಿಯು ಅಣ್ಣನಾದ ರಾವಣನ ಬಳಿಗೆ ಬಂದು ಎಲೈ—ಅಣ್ಣಾ ಮುತ್ತೈದೆಯಾಗಿ ಸುಖವಾಗಿ ಬಾಳುತ್ತಿದ್ದ ನನಗೆ ಮಾಂಗಲ್ಯವೂ ಓಲೆಗಳೂ ಬಳೆಗಳೂ ಇರಬಾರದೆಂದು ನನ್ನ ಗಂಡನನ್ನು ಕೊಂದು ನನ್ನನ್ನು ಮುಂಡೆಯಾಗಿ ಮಾಡಿದೆಯಾ ಅಯ್ಯೋ ದೇವರೇ ನನಗೇಕೆ ಈ ಅವಸ್ಥೆಯನ್ನುಂಟುಮಾಡಿದೆ ಹರಹರಾ ಗಂಡನಿಲ್ಲದಮೇಲೆ ಹೆಂಗಸಿನ ಬಾಳು ವ್ಯರ್ಥ. ನಾನು ಈ ವೈಧವ್ಯವನ್ನು ಅನುಭವಿಸಲಾರೆ ಮುಂಚೆ ನನ್ನನ್ನು ಕೊಂದುಬಿಡು ನನ್ನ ಗಂಡನ ಬಳಿಗೆ ನಾನೂ ಹೊರಟುಹೋಗುತ್ತೇನೆ. ಎಂದು ಪ್ರಲಾಪಿಸುತ್ತ ಅಣ್ಣನ ಕಾಲುಗಳಮೇಲೆ ಬಿದ್ದು ಹೊರಳಾಡುತ್ತಿರಲು ರಾವಣನಿಗೆ ಮನಸ್ಸುಕರಗಿ ವ್ಯಥೆಪಡುತ್ತಾ ಅವಳನ್ನು ಮೇಲಕ್ಕೆಎತ್ತಿ ಕಣ್ಣೀರನ್ನು ಒರಸುತ್ತಾ ಅಮ್ಮಾ ತಂಗಿ ಯುದ್ಧದಲ್ಲಿ ಕಾಲಕೇಯರನ್ನು ಕೊಲ್ಲುವಾಗ ಮದದಿಂದ ನಿನ್ನ ಗಂಡನನ್ನೂ ಕೊಂದೆನು. ನಿನಗೆ ಯಾವದೊಂದು ಕೊರತೆಯೂ ಇಲ್ಲದಂತೆ ಸಲಹುವೆನು. ನನ್ನ ಸಕಲೈಶ್ವರ್ಯವೂ ನಿನ್ನದಾಗಿಯೇ ಇದೆ. ಮೀರಿಹೋದ ಕೆಲಸಕ್ಕೆ ದುಃಖಿಸಿ ಪ್ರಯೋಜನವಿಲ್ಲ, ಆದದ್ದು ಆಗಿಹೋಯಿತು, ಇನ್ನೇತಕ್ಕೆ ವ್ಯಸನಪಡುವೆ ಅಳಬೇಡ ಇನ್ನು ವ್ಯಸನವನ್ನು ಬಿಟ್ಟು ಸುಖವಾಗಿರು, ನೀನು ಯಾವದಕ್ಕೂ ಯೋಚನೆ ಮಾಡಬೇಡ ಎಂದು ಸಮಾಧಾನ ಹೇಳಿ, ಖರದೂಷಣ ತ್ರಿಶಿರಾದಿ ರಾಕ್ಷಸರನ್ನು ಕರೆಯಿಸಿ ಅವರಿಗೆ ಹದಿನಾಲ್ಕು ಸಾವಿರ ರಾಕ್ಷಸರೊಡನೆ ಈ ಶೂರ್ಪಣಖಿಯನ್ನು ದಂಡಕಾರಣ್ಯದಲ್ಲಿರುವ ಲಂಕಾಪಟ್ಟಣದ ಉಕ್ಕಡವಾದ ಜನಸ್ಥಾನದಲ್ಲಿರುವಂತೆ ಕಟ್ಟುಮಾಡಿ ಎಲ್ಲರನ್ನೂ ಕಳುಹಿಸಲು ಅವರೆಲ್ಲರೂ ಅಲ್ಲಿಗೆ ಹೋಗಿ ಸುಖವಾಗಿದ್ದರು.

## ರಾವಣನು ಯಾಗಮಾಡುವ ಮಗನನ್ನು ನೋಡಿದುದು.

ಅನಂತರದಲ್ಲಿ ರಾವಣಾಸುರನು ರಾಕ್ಷಸರ ಕುಲದೇವತೆಯಾದ ನಿಕುಂಭಿಳೆ ಎಂಬ ದೇವತೆಯ ವನಕ್ಕೆ ಹೋಗಿ ಅಲ್ಲಿ ಯಾಗಶಾಲೆಯಲ್ಲಿ ನೂರು ಯೂಪಸ್ತಂಭಗಳಿಂದ ಕೂಡಿ ಅನೇಕ ಮಂದಿ ಋತ್ವಿಕ್ಕುಗಳು ಅನುಮಂತ್ರವನ್ನು ಹೇಳುತ್ತಿರಲು ಕೃಷ್ಣಾಜಿನದಲ್ಲಿ ಕುಳಿತು ಜಟಾಧರ ದೀಕ್ಷಿತನಾಗಿ ಯಜ್ಞಮಾಡುತ್ತಿರುವ ತನ್ನ ಕುಮಾರನಾದ ಮೇಘನಾದನನ್ನು ನೋಡಿ ಬಹಳ ಆಶ್ಚರ್ಯಪಟ್ಟು ಸಂತೋಷದಿಂದ ಬಿಗಿದಪ್ಪಿ ಇದೇನು ನೀನು ಮಾಡುವದು ಎಂದು ಕೇಳಿದನು. ರಾಕ್ಷಸಗುರುವಾದ ಶುಕ್ರಾಚಾರ್ಯನು ರಾವಣನನ್ನು ಕುರಿತು ಎಲೈ ದಶಕಂಠನೇ ! ಸಮರ್ಥನಾದ ನಿನ್ನ ಮಗನು ಅಶ್ವಮೇಧ ಮೊದಲಾದ ಅನೇಕ ಯಾಗಗಳನ್ನು ಮಾಡಿ ಕಡೆಯಲ್ಲಿ ಮಹೇಶ್ವರಯಜ್ಞವನ್ನೂ ಮಾಡಿ ಪೂರೈಸಲು ಶಿವನು ಪ್ರತ್ಯಕ್ಷನಾಗಿ ಬಂದು, ಬಿಲ್ಲು ಅಂಬು ಗದೆ ಕತ್ತಿ ಶಕ್ತಿ ಮುಂತಾದ ಆಯುಧಗಳನ್ನೂ ವೈರಿಗಳಿಗಜೇಯವಾದ ರಥವನ್ನು ಅದೃಶ್ಯವಾಗಿದ್ದುಕೊಂಡು ಬಾಣವರ್ಷವನ್ನು ಸುರಿಸುತ್ತಾ ಶತ್ರುಗಳನ್ನು ನಾಶಮಾಡಲು ಸಹಾಯಕರವಾದ ತಾಮಸೀ ವಿದ್ಯೆಯನ್ನು ಕೊಟ್ಟು ಆಶೀರ್ವದಿಸಿ ಅದೃಶ್ಯನಾದನು ಈ ಮಗನಿಂದ ನಿನಗೆ ಬಹು ಪ್ರಯೋಜನವಾಯಿತು ಎಂದನು. ಅದಕ್ಕೆ ರಾವಣನು ನಗುತ್ತಾ ಕುವರನೇ ನಮಗೆ ಹಗೆಗಳಾದ ಇಂದ್ರಾದಿಗಳನ್ನು ಭಜಿಸಿದೆಯಾ ನೀನು ಆ ಪ್ರಬುದ್ಧನು ಅವರೆಲ್ಲಾ ನನಗೆ ವಿಧೇಯರು ಎಂದು ಮಗನ ಕೈಯನ್ನು ಹಿಡಿದುಕೊಂಡು ವಿಭೀಷಣಾದಿಗಳೊಡನೆ ತನ್ನ ಪಟ್ಟಣಕ್ಕೆ ಬಂದು ಎಲ್ಲರನ್ನೂ ತಮ್ಮ ತಮ್ಮ ಮನೆಗಳಿಗೆ ಹೋಗುವಂತೆ ಅಪ್ಪಣೆಮಾಡಿ ಕಳುಹಿಸಿದನು.

## ಮಧುವಿನಮೇಲೆ ದಶಕಂಠನು ಯುದ್ಧಕ್ಕೆ ಹೊರಡುವುದು.

ಒಂದು ದಿನ ವಿಭೀಷಣನು ಅಣ್ಣನಿಗೆ ಏಕಾಂತದಲ್ಲಿ ಎಲೈ—ಅಗ್ರಜನೇ ನೀನು ದಿಗ್ವಿಜಯು ಮಾಡಿದುದು ಸರಿ ಆದರೆ ಪರರವರ ಹೆಂಗಸರನ್ನು ಬಲಾತ್ಕಾರದಿಂದ ಹಿಡಿದು ತಂದದ್ದು ಬಹು

ಅನ್ಯಾಯ ಮಹಾಪಾಪಕಾರ್ಯಕ್ಕೆ ಗುರಿಯಾದೆ ಆ ಪತಿವ್ರತೆಯರ ದುಃಖಜ್ವಾಲೆಯು ನಿನ್ನ ಪರಾಕ್ರಮವನ್ನು ಸುಟ್ಟು ಬೂದಿಮಾಡುವದು. ಈಗ ಅವರ ನಿಟ್ಟುಸುರಿನಿಂದ ನಿನಗಾಗಿರುವ ಕೇಡನ್ನು ಹೇಳುವೆನು ಕೇಳು, ಎಲೈ—ನಮ್ಮ ಕೈಕಸಿಯ ತಂಗಿಯಾದ ಕುಂಭಿನಿಯು ನಮ್ಮ ಅಂತಃಪುರದಲ್ಲಿರುವಾಗ ಮಧುವೆಂಬ ರಾಕ್ಷಸನು ಅಂತಃಪುರಕ್ಕೆ ಕಾವಲಾಗಿದ್ದ ರಾಕ್ಷಸ ಸೈನ್ಯ ವನ್ನು ಬಡಿದು ಕೊಂದು ಒಳನುಗ್ಗಿ ಆಕೆಯನ್ನು ಹಿಡಿದುಕೊಂಡು ಹೋದನು ತಾನು ಮಾಡಿದುದು ತನಗೆ ಮೂಲ ಎಂಬ ಗಾದೆಗೆ ನೀನು ಗುರಿಯಾದೆ ಮಾಡತಕ್ಕದ್ದೇನು ಎಂದನು. ಅದಕ್ಕೆ ರಾವ ಣನು ಪುನಃ ಏನಂದ ಇದೇನಾಶ್ಚರ್ಯ ನೀನೂ ಕುಂಭಕರ್ಣನೂ ಮೇಘನಾದನೂ ಆಗ ಏನುಮಾ ಡುತ್ತಿದ್ದಿರಿ ಎಲ್ಲಿಗೆ ಹೋಗಿದ್ದಿರಿ ಯಾರು ದಿಕ್ಕಿರಲಿಲ್ಲವೆ ಎಂದು ಕೇಳಿದನು. ವಿಭೀಷಣನು ಅಣ್ಣಾ ನಾನು ನೀರಿನಲ್ಲಿ ಮುಳುಗಿಕೊಂಡು ಅಘಮರ್ಷಣ ಮಂತ್ರ ಜಪವನ್ನು ಮಾಡುತ್ತಿದ್ದೆ ಕುಂಭಕ ರ್ಣನು ನಿದ್ರೆಮಾಡುತ್ತಿದ್ದನು, ಮೇಘನಾದನು ಯಾಗಮಾಡುತ್ತಾ ನಿಕುಂಭಿಳೆಯಲ್ಲಿದ್ದನು, ಮಿಕ್ಕ ರಕ್ಷಕರ ಮಕ್ಕಳೇನು ಮಾಡಲಾಪರು ಎಂದು ಹೇಳಲು, ರಾವಣನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಘರ್ಜಿಸುತ್ತಾ, ಲಂಕಾಸಂರಕ್ಷಣೆಗೆ ವಿಭೀಷಣನನ್ನೂ ಕೆಲವು ರಾಕ್ಷಸ ಸೇನಾಧಿ ಪತಿಗಳನ್ನೂ ನಿಲ್ಲಿಸಿ ತಾನು ತನ್ನ ಪರಿವಾರದೊಡನೆ ಹೊರಟು ಮಧುವೆಂಬ ದನುಜನನ್ನು ಕೊಂದು ಇಂದ್ರನನ್ನು ಮುರಿದು ದೇವತೆಗಳ ರಾಜ್ಯವನ್ನು ಹಿಂಡುವೆನೆ ದು ಹಲ್ಲುಗಳನ್ನು ಕಚ್ಚುತ್ತ ಕಣ್ಣುಗಳಲ್ಲಿ ಕಿಡಿಗಳನ್ನು ಸುರಿಸುತ್ತಾ ಮೂರುಲೋಕಗಳು ಅದಿರುವಂತೆ ಘರ್ಜಿಸುತ್ತಾ ಹೊರ ಟನು. ಆಗ ಕುಂಭಕರ್ಣ ಮೇಘನಾದ ಮೊದಲಾದ ಸಮಸ್ತ ರಾಕ್ಷಸ ಸಮೂಹವೂ ಸಂಗಡ ಹೊರಟರು. ಕುದುರೆ, ರಥ, ಕೋಣ, ಕತ್ತೆ, ಒಂಟೆ, ದೇಸರಕತ್ತೆ, ಹುಲಿ, ತೋಳ, ಹಂದಿ, ನಾಯಿ ಮುಂತಾದವುಗಳ ಮೇಲೇರಿ ರಾಕ್ಷಸಸೈನ್ಯವು ಬರುತ್ತಿರಲು ಇದೇನು ಪ್ರಳಯದ ಸೈನ್ಯವೋ ಎಂಬಂತೆ ರಾವಣನ ಸೈನ್ಯವೂ ಹೊರಟಿತು. ಆಗ ಸೈನ್ಯದ ಮುಂಭಾಗದಲ್ಲಿ ಮೇಘನಾದನೂ ಹಿಂಭಾಗದಲ್ಲಿ ಕುಂಭಕರ್ಣನೂ ಮಧ್ಯಭಾಗದಲ್ಲಿ ರಾವಣನೂ ನಿಂತು ನಾಲ್ಕು ಅಕ್ಷೋಹಿಣಿಸೈನ್ಯವು ಪ್ರಳಯಕಾಲದ ಸಮುದ್ರವು ಉಕ್ಕಿ ಬರುವಂತೆ ಬಂದು ಮಧುದನುಜನ ಊರನ್ನು ಮುತ್ತಿತು. ಆ ಮಧುವೆಂಬ ದನುಜನು ಶಿವನನ್ನು ಕುರಿತು ತಪಸ್ಸುಮಾಡಿ ಶಿವನನ್ನು ಮೆಚ್ಚಿಸಿ ಆತನಿಂದ ಅಜೇಯವಾದ ಒಂದು ತ್ರಿಶೂಲವನ್ನು ಪಡೆದು ಅದರ ಬಲದಿಂದ ಹರನೊಬ್ಬನುಹೊರತು ಯಾರನ್ನೂ ಲಕ್ಷ್ಯಮಾಡದವನಾಗಿ ರಾವಣನ ಬಲವನ್ನು ಕಿಂಚಿತ್ತಾಗಿ ತಿಳಿದು ಅಲಕ್ಷ್ಯವಾಗಿದ್ದನು.

## ಮಧುವಿಗೂ ರಾವಣನಿಗೂ ಸ್ನೇಹವಾದುದು.

ಹೀಗಿರಲು ರಾವಣನ ಚಿಕ್ಕಮ್ಮನಾದ ಕುಂಭಿನಿಯು ಬೇಗನೆ ಸೈನ್ಯಮಧ್ಯದಲ್ಲಿರುವ ಕುಮಾ ರನ ಬಳಿಗೆ ಬಂದು ಎಲೈ—ಮಗನೇ ನನ್ನಲ್ಲಿ ಕೃಪೆಯಿಡು. ಕುಲಸ್ತ್ರೀಯರಿಗೆ ವೈಧವ್ಯಕ್ಕಿಂತಲೂ ಹೆಚ್ಚಾದ ದುಃಖವಿಲ್ಲ ನನ್ನ ಗಂಡನನ್ನು ಕಾಪಾಡು ನನ್ನ ಮಾತನ್ನು ಮೀರದೆ ನಡೆಸು ಎನಲು, ರಾವಣನು ತಾಯಿ ಹೆದರಬೇಡ ನಿನ್ನ ಗಂಡನನ್ನು ಕರೆಯಿಸು ಎಂದನು. ಈ ಮಾತನ್ನು ಕೇಳಿ ಸಂತೋಷಭರಿತಳಾಗಿ ಮನೆಗೆ ಹೋಗಿ ಮಲಗಿರುವ ಪತಿಯನ್ನು ತಕ್ಕ ಉಪಚಾರಮಾಡಿ ಎಬ್ಬಿಸಿ ಪ್ರಿಯವಾದ ಮಾತುಗಳಿಂದ ಗಂಡನನ್ನು ಕುರಿತು, ಎಲೈ—ಪ್ರಾಣವಲ್ಲಭನೇ ದೇವೇಂದ್ರನನ್ನು ಜಯಿಸುವದಕ್ಕೋಸ್ಕರ ನಿಮ್ಮ ಮಗನಾದ ರಾವಣನು ಸೇನೆಯೊಡನೆ ಬಂದಿರುವನು ಆತನನ್ನು ಆದರಿಸಿ ಯುದ್ಧದಲ್ಲಿ ಆತನಿಗೆ ನಿಮ್ಮ ಭುಜಬಲ ಸಹಾಯವನ್ನು ಕೊಡಬೇಕೆಂದು ಹೇಳಿದಳು. ಆ ಮಾತನ್ನು ಕೇಳಿ ದೈತ್ಯನು ರಾವಣನೆಡೆಗೆ ಹೋಗಿ ಯಥಾಯೋಗ್ಯವಾಗಿ ಉಪಚರಿಸಿ ತನ್ನ ಮನೆಗೆ ಕರೆದುತಂದು ಒಂದುದಿನ ಇರಿಸಿಕೊಂಡಿದ್ದು ಬಹಳವಾಗಿ ಊಟವುಪಚಾರಂಗಳನ್ನು

ಮಾಡಿಸಿದನು. ಮಾರನೇದಿನ ಬೆಳಿಗ್ಗೆ ರಾವಣನು ಎದ್ದು ತನ್ನ ಚಿಕ್ಕಪ್ಪನಾದ ಮಧುವನ್ನು ಸಂಗಡ ಕರೆದುಕೊಂಡು ಅಮರಾವತಿಯನ್ನು ಕುರಿತು ಬರುತ್ತಾಯಿರಲು ಸೂರ್ಯನು ಅಸ್ತಂಗತನಾದನು. ಆಗ ರಾವಣನು ತನ್ನ ಸೇನೆಯೊಡನೆ ಕೈಲಾಸದ ಕಿಬ್ಬಿಯಲ್ಲಿ ನಿಂತು ತಳಿರ ಹಾಸಿಗೆಯನ್ನು ಮಾಡಿಸಿಕೊಂಡು ತಂಗಾಳಿಗೆ ಮೈಯೊಡ್ಡಿ ಮಲಗಿಕೊಂಡಿದ್ದನು.

## ನಳಕೂಬರರಿಂದ ದಶಕಂಠನಿಗೆ ಶಾಪಬಂದುದು.

ಆ ಸಮಯದಲ್ಲಿ ದೇವಗಣಿಕೆಯರಾದ ಅಪ್ಸರಸ್ತ್ರೀಯರೊಳಗೆ ಚಲುವೆಯಾದ ರಂಭೆಯು ಹೋಗುತ್ತಿರಲು ಅವಳನ್ನು ನೋಡಿ ರಾವಣನು ಅವಳ ಬಳಿಗೆ ಹೋಗಿ ತಡೆಯಲು ಅವಳು ಅದೃಶ್ಯಳಾಗಿ ತಾನು ವರಿಸಿದ್ದ ಕುಬೇರನ ಕುಮಾರನಾದ ನಳಕೂಬರನ ಬಳಿಗೆ ಹೋಗಿ ತನಗೆ ದಾರಿಯಲ್ಲಿ ರಾವಣಾಸುರನಿಂದ ಉಂಟಾದ ನಿರ್ಬಂಧವನ್ನು ತಿಳಿಸಲು, ಆ ನಳಕೂಬರನು ಮಹಾ ಕೋಪಿಷ್ಠನಾಗಿ ಇದು ಮೊದಲ್ಗೊಂಡು ಅವನು ಪರಸ್ತ್ರೀಯರನ್ನು ಬಲಾತ್ಕರಿಸಿ ಹಿಡಿದರೆ ಅವನ ಹತ್ತುತಲೆಗಳೂ ಸೀಳಿಹೋಗಿ ಸಾಯಲಿ ಎಂದು ಶಾಪಕೊಟ್ಟನು. ಇತ್ತ ದಶಾನನು ಆಕಾಶವಾಣಿಯಿಂದ ತನಗೆ ನಳಕೂಬರನು ಕೊಟ್ಟ ಶಾಪದ ಸುದ್ದಿಯನ್ನು ಕೇಳಿದರೂ ಲಕ್ಷಿಸದೆ ಆ ರಾತ್ರಿಯನ್ನು ಅಲ್ಲಿಯೇ ಕಳೆದನು.

## ರಾವಣನು ಇಂದ್ರನಮೇಲೆ ಯುದ್ಧಕ್ಕೆ ಹೊರಟದ್ದು.

ರಾವಣನು ಆ ತರುವಾಯ ಮಾರನೇದಿನ ಬೆಳಗಾಗುತ್ತಲೆ ಸೇನೆಯೊಡನೆ ಅಮರಾವತಿ ಪಟ್ಟಣದ ಬಳಿಗೆ ಬರಲು, ದೇವತೆಗಳು ಇದೇನು ಸೇನೆಸಹಿತ ರಾವಣನು ಬಂದನಾಗಿದೆ ಇವನ ಬಾಧೆಯನ್ನು ಯಾರು ತಡೆದಾರು ಮುಂದೆ ಗತಿಯೇನು ಎಂದು ಗಡಗಡನೆ ನಡುಗುತ್ತಾ ದೇವತೆಗಳೆಲ್ಲರೂ ವ್ಯಸನದಿಂದ ಇಂದ್ರನ ಬಳಿಗೆ ಓಡಿಹೋಗಿ, ರಾವಣನು ಬಂದಿರುವ ಸಂಗತಿಯನ್ನು ತಿಳಿಸಿ ಈಗ ನಮ್ಮನ್ನು ಕಾಪಾಡಬೇಕಾದರೆ ಹರಿಹರಬ್ರಹ್ಮರಲ್ಲದೆ ಇನ್ನಾರು? ನಮಗುಂಟಾಗಿರುವ ಭಯವು ಅವರಿಂದಲೇ ತೀರಬೇಕು ಎಂದು ಹೇಳಿದರು. ಆಗ ಇಂದ್ರನು ಚಿಂತಿಸುತ್ತಿರಲು, ಅಲ್ಲಿದ್ದ ಏಕಾದಶರುದ್ರರು ದ್ವಾದಶಾದಿತ್ಯರು ಸಪ್ತಮರುತ್ತುಗಳು ಅಷ್ಟವಸುಗಳು ಚತುರ್ದಶ ಮನುಗಳು ವಿಶ್ವದೇವರು ಸಿದ್ಧರು ಸಾಧ್ಯರು ವಿದ್ಯಾಧರರು ಅಪ್ಸರರು ಗುಹ್ಯಕರು ಮೊದಲಾದ ದೇವಸಮೂಹಗಳು ಕೂಡಿ ಸಂಘಮಾಡಿ ನಾವೆಲ್ಲರು ಇರುವಾಗ ಭಯವೇನು ಆ ಖೂಳನಾದ ರಾವಣನನ್ನು ಲಕ್ಷ್ಯವಿಡದೆ ಅವನ ದಂಡನ್ನು ಮುರಿದು ಬಂದದಾರಿ ಹಿಡಿಸುವೆವು ಎಂದು ಆಯುಧಪಾಣಿಗಳಾಗಿ ಹುಂಕರಿಸುತ್ತಾ ರಭಸದಿಂದ ಹೋಗಲು ಇಂದ್ರನು ಓಹೋ ಇದೇನು ಸ್ವಸ್ಥ ಸುದಾರಿಸಿ ಆ ಖೂಳನಾದ ರಾವಣನೊಡನೆ ನಮಗೆ ಯುದ್ಧವು ಸಾಗುವದಿಲ್ಲ ಎಂದು ಅವರೆಲ್ಲರನ್ನೂ ಸಮಾಧಾನಮಾಡಿ ಆ ರಾತ್ರಿ ತಾನೊಬ್ಬನೇ ಗೋಪ್ಯವಾಗಿ ನಾರಾಯಣನ ಬಳಿಗೆ ಹೋಗಿ ತನ್ನ ಕಿರೀಟದಿಂದ ಅವನ ಚರಣಕಮಲಗಳನ್ನು ಅಲಂಕರಿಸಿ ಮುಕುಳಿತ ಹಸ್ತನಾಗಿ ನಮ್ರಭಾವದಿಂದ ನಿಂತುಕೊಂಡು ಭಕ್ತತ್ರಾಣನೇ ಖೂಳರಕ್ಕಸನಾದ ರಾವಣನೆಂಬುವನು ಬ್ರಹ್ಮನ ವರಬಲದಿಂದ ಗರ್ವಿತನಾಗಿ ನಮ್ಮ ದೇವಲೋಕವನ್ನು ನಾಶಮಾಡಬೇಕೆಂದು ತನ್ನ ಸೈನ್ಯದೊಡನೆ ಯುದ್ಧಕ್ಕೆ ಬಂದು ನನ್ನ ರಾಜಧಾನಿಯಾದ ಅಮರಾವತಿಯನ್ನು ಮುತ್ತಿಗೆ ಹಾಕಿದ್ದಾನೆ, ಅವನನ್ನು ನಿಗ್ರಹಿಸುವದಕ್ಕೆ ಯಾರಿಂದಲೂ ಆಗಲಾರದು ಜಗತ್ಕರ್ತನಾದ ನೀನೇ ನಮ್ಮಲ್ಲಿ ಕರುಣಿಸಿ ಬಂದು ಅವನನ್ನು ನಿಗ್ರಹಿಸಿ ನಮ್ಮನ್ನು ಕಾಪಾಡಬೇಕೆಂದು ಬೇಡಿಕೊಳ್ಳಲು ಶ್ರೀಮಹಾವಿಷ್ಣುವು ಎಲೈ ಇಂದ್ರನೇ ಈಗ ನಾನು ಬರಕೂಡದು ಅವನಿಗೆ ಮನುಷ್ಯರು ಕಪಿಗಳು ಇವರುಗಳಿಂದಲ್ಲದೆ ಬೇರೆ ಯಾರಿಂದಲೂ ಮರಣವಿಲ್ಲದಂತೆ ಬ್ರಹ್ಮನ ವರವುಂಟು, ಆದುದರಿಂದ ಬ್ರಹ್ಮನ ವರವನ್ನು

ಮನ್ನಿಸಿ ನಾನು ಮನುಷ್ಯನಾಗಿಯೂ, ನೀವೆಲ್ಲರೂ ಕಪಿಗಳಾಗಿಯೂ ಭೂಮಿಯಲ್ಲಿ ಅವತಾರ ಮಾಡಿ ಅವನನ್ನು ನಿಮ್ಮ ಸಹಾಯದಿಂದ ನಾನೇ ನಿಗ್ರಹಿಸುತ್ತೇನೆ ಬಳಿಕ ಸುಖವಾಗಿರುವೆಯಂತೆ ಸದ್ಯಕ್ಕೆ ಅವನ ಬಾಧೆಯನ್ನು ಸಹಿಸಿಕೊಳ್ಳಿ ಎಂದು ಹೇಳಲು ಇಂದ್ರನು ಖಿನ್ನನಾಗಿ ಹಿಂತಿರುಗಿ ಬಂದು ಅಮರಾವತಿಯನ್ನು ಸೇರಿದನು.

## ದೇವತೆಗಳಿಗೂ ದಶಾನನಿಗೂ ಯುದ್ಧವಾದದ್ದು.

ಆ ತರುವಾಯ ಬೆಳಿಗ್ಗೆ ಉದಯವಾಗುವುದಕ್ಕಿಂತ ಮೊದಲೇ ಭೇರಿ ಮೊದಲಾದ ರಣವಾದ್ಯ ಧ್ವನಿಗಳೊಡನೆ ರಾವಣನ ಬಲವು ಅಮರಾವತಿಯನ್ನು ಮುತ್ತಿತು, ಆಗ ದೇವತೆಗಳು ಭಯದಿಂದ ಓಡಿಹೋಗುತ್ತಿದ್ದರು. ದೇವೇಂದ್ರನು ಅವರನ್ನು ನೋಡಿ ಓಹೋ ನಿಲ್ಲಿ, ಎಲ್ಲರೂ ಯುದ್ಧಕ್ಕೆ ಸಿದ್ಧರಾಗಿ ನಮ್ಮ ಬಲಗಳನ್ನು ಬರಹೇಳಿ ಎಂದು ಕೈಬೀಸಲು ದೇವತೆಗಳಲ್ಲಿ ಸಮರ್ಥ ರಾದವರು ಹೊರಟು ಸಮುದ್ರವೂ ಆಕಾಶವೂ ಕೂಡಿದಂತೆ ರಾಕ್ಷಸಸೈನ್ಯವನ್ನು ಎದುರಿಸಿದರು. ಆಗ ಉಭಯ ಬಲಗಳೂ ಮುಸಲ, ಮುದ್ಗರ, ತೋಮರ, ಬಿಂಡಿವಾಳ, ಖಡ್ಗ, ಪಟ್ಟಿಸ ಮುಂತಾದ ನಾನಾವಿಧ ಆಯುಧಗಳನ್ನು ಹಿಡಿದು ಒಬ್ಬರನ್ನೊಬ್ಬರು ಹೊಡೆದು ಬಡಿದು ತಿವಿದು ಕಡಿದು ಕಳೆದು ತುಳಿದು, ಹಲವು ಬಗೆಯಾಗಿ ಹಿಂಸೆಗೋಳಿಸುತ್ತಿರಲು ಆಗ ರಕ್ತಮಯವಾದ ವ್ರಣಗಳೂ, ಹೊರಬಿದ್ದ ಕರುಳ್ಗಳೂ, ತುಂಡುತುಂಡಾದ ಕೈಕಾಲ್ಗಳೂ ಉಳ್ಳವರಾಗಿ ರಾಕ್ಷಸ ರಲ್ಲಿಯೂ ದೇವತೆಗಳಲ್ಲಿಯೂ ಬಹಳ ಮಂದಿ ಘಾಯಪಟ್ಟರು. ಬಲಿಷ್ಠವಾದ ದೇವಬಲದಿಂದ ರಾಕ್ಷಸಬಲವು ನಂದಿ ಕುಂದಿ ಬಾಯಾರಿ ಬಸವಳಿದು ಕಂಗೆಟ್ಟು, ದಿಕ್ಕುದಿಕ್ಕಿಗೆ ಪ್ರಾಣಾವ ಶಿಷ್ಟರಾಗಿ ಓಡಿಹೋಗುತ್ತಿರಲು ಅದನ್ನು ಕಂಡು ರಾವಣನು ಪ್ರಹಸ್ತ, ಮಾರೀಚ, ನಿಕುಂಭ, ತ್ರಿಶಿರ, ಯಜ್ಞಾಂತಕ. ಸುರಾಂತಕ, ನರಾಂತಕ, ಧೂಮ್ರಾಕ್ಷ, ದುರ್ಮುಖ, ಶುಕ, ಸಾರಣ, ಖರ, ಮಹಾಪಾರ್ಶ್ವ, ದೂಷಣ, ವನಮಾಲಿ, ಸೂರ್ಯರಿಪು, ವಿಕಟ, ಸುಷೇಣ, ದುರ್ಧರ ಮೊದಲಾದ ರಾಕ್ಷಸ ವೀರರನ್ನು ಕಾಳಗಕ್ಕೆ ನಿಯಮಿಸಿದನು. ಬಳಿಕ ಸುಮಾಲಿಯೆಂಬುವನು ರಾಕ್ಷಸ ಬಲವನ್ನು ಕೂಡಿಕೊಂಡು ಬಂದು ದೇವಸೈನ್ಯದ ಮೇಲೆ ಶರವರ್ಷವನ್ನು ಸುರಿಸಿ ದೆಸೆದೆಸೆಗೆ ಓಡಿಸಲು, ಅದನ್ನು ಕಂಡು ಅಷ್ಟವಸುಗಳಲ್ಲಿ ಎಂಟನೆಯವನಾದ ಸಾವಿತ್ರನೆಂಬುವನು ತೇರನ್ನೇರಿ ಬಂದು ಸುಮಾಲಿಯನ್ನು ಎದುರಿಸಿ ನಿಂತು, ಅವನ ಮೇಲೆ ಅನೇಕ ಬಾಣಗಳ ನ್ನೆಸೆಯಲು ಅವನು ಆ ಬಾಣಗಳನ್ನೆಲ್ಲ ಕತ್ತರಿಸಿ ಸಾವಿತ್ರನ ಮೇಲೆ ನೂರು ಬಾಣಗಳನ್ನು ಹಾಕಿ ಅವನ ತೇರಿನ ಅಚ್ಚನ್ನು ಕತ್ತರಿಸಲು ಸಾವಿತ್ರನು ಮತ್ತೊಂದು ರಥವನ್ನೇರಿ ಹತ್ತು ಬಾಣಗಳಿಂದ ಸುಮಾಲಿಯ ಸಾರಥಿಯ ತಲೆಯನ್ನು ಕತ್ತರಿಸಿ, ಮುವ್ವತ್ತು ಬಾಣಗಳಿಂದ ರಥಾಶ್ವಗಳನ್ನು ಸಾಗಿಸಿ, ನಾಲ್ಕು ಬಾಣಗಳಿಂದ ತೇರಿನ ಧ್ವಜವನ್ನು ಮುರಿದು ಐವತ್ತು ಸರಳುಗಳಿಂದ ತೇರನ್ನು ಪುಡಿಮಾಡಿ, ನೂರು ಕೂರ್ಗಣೆಗಳಿಂದ ಬಿಲ್ಲನ್ನು ತುಂಡಿಸಿ ಬೊಬ್ಬಿರಿದನು. ಆಗ ಸುಮಾಲಿಯು ವೀರನಾದರೂ ಧೃತಿಗೆಡದೆ ಕೆಳಕ್ಕೆ ಧುಮುಕಿ ಗದೆಯನ್ನು ತೆಗೆದುಕೊಂಡು ವೇಲ್ವಾಯ್ದು ಬರುತ್ತಿರಲು ಸಾವಿತ್ರನೂ ಗದೆಯನ್ನು ಕೈಕೊಂಡು, ಎದುರಿಗೆ ನಿಂತು ಗದಾಯುದ್ಧ ಮಾಡು ತ್ತಿರುವಾಗ ಶೂರನಾದ ಸಾವಿತ್ರನು ಸುಮಾಲಿ ಹೊಡೆದ ಗದಾಪ್ರಹಾರವನ್ನು ತಪ್ಪಿಸಿಕೊಂಡು ಸುಮಾಲಿಯು ಮೇಲಕ್ಕೆ ಹಾರುವ ಸಮಯದಲ್ಲಿ ಸಾವಿತ್ರನು ಅವನ ಮರ್ಮವನ್ನರಿತು ತನ್ನ ಗದೆಯಿಂದ ಹೊಡೆದು ಅವನ ನಡುವನ್ನು ಮುರಿದನು. ಆಗ ಸುಮಾಲಿಯು ಭೂಮಿಯಲ್ಲಿ ಬಿದ್ದು ಪಂಚತ್ವವನ್ನೈದಿದನು. ಅದನ್ನು ಕಂಡು ಪ್ರಹಸ್ತ, ಮಾರೀಚರೇ ಮೊದಲಾದ ರಾಕ್ಷಸ ದಳಪತಿಗಳು ಸಾವಿತ್ರನನ್ನು ಸುತ್ತಲೂ ಸುತ್ತಿಕೊಂಡು ಅವನ ಮೇಲೆ ಬಾಣಗಳನ್ನು ಸುರಿಸಲು,

ಆ ಕಾಲದಲ್ಲಿ ಮಿಕ್ಕ ಏಳು ಮಂದಿ ವಸುಗಳೂ, ಸಾವಿತ್ರನಿಗೆ ಸಹಾಯಕರಾಗಿ ಬಂದು ಶತ್ರುಗಳ ಮೇಲೆ ಬಾಣಗಳನ್ನು ಹೊಡೆದು ಅವರನ್ನು ಮೂರ್ಛಾಗತರಾಗುವಂತೆ ಮಾಡಿದನು.

## ಮೇಘನಾದ ಜಯಂತರ ಯುದ್ಧ.

ಅವನ್ನು ಕಂಡು ಆಗ ರಾವಣನು ಯುದ್ಧಸನ್ನದ್ಧನಾಗಿ ಬರುತ್ತಿರಲು ಪ್ರಳಯರುದ್ರನಂತೆ ಮೇಘನಾದನು ರಾವಣನನ್ನು ತಡೆದು ಧನುರ್ಬಾಣಗಳನ್ನು ತೆಗೆದುಕೊಂಡು ಕಾಲಕಾಲನಂತೆ ಅಷ್ಟವಸುಗಳನ್ನೂ ದ್ವಾದಶಾದಿತ್ಯರನ್ನೂ ಸಪ್ತಮರುತ್ತರನ್ನೂ ತೀಕ್ಷ್ಣವಾದ ಬಾಣಗಳಿಂದ ಹೊಡೆದು ದಿಕ್ಕುದಿಕ್ಕಿಗೆ ಓಡಿಸುತ್ತಿದ್ದನು. ದೇವೇಂದ್ರನು ಅದನ್ನು ನೋಡಿ, ಐರಾವತದ ಮೇಲೇರಿ ವಜ್ರಾಯುಧವನ್ನು ಧರಿಸಿ ಯುದ್ಧಕ್ಕೆ ಹೊರಡುವಷ್ಟರಲ್ಲಿಯೇ ಅವನ ಮಗನಾದ ಜಯಂತನು ತಂದೆಯನ್ನು ತಡೆದು ರಥಾರೂಢನಾಗಿ ಬಂದು ಮೇಘನಾದನನ್ನು ಬೆದರಿಸಿ ಎಲವೋ ಖೂಳನೇ ! ಬಾ ಎದುರಿಗೆ ನಿಲ್ಲು ನಿನ್ನನ್ನು ಕಡಿದು ನಿನ್ನ ಮಾಂಸವನ್ನು ನಾಯಿ, ನರಿ, ಗೃಧ್ರ, ಕಾಗೆಗಳಿಗೆ ಹಾಕುವೆನು ಎನಲು, ಮೇಘನಾದನು ನಕ್ಕು ಎಲೈ —ಜಯಂತನೇ ನೀನು ಶೂರನಾದರೆ ಕೈಯಿಂದ ತೋರಿಸು, ಸುಮ್ಮನೆ ಜೊಗಳಿದರೆ ಫಲವೇನು ಎಂದು ಹೇಳಿ, ಕಠಿನವಾದ ಕ್ರೂರ ಬಾಣಗಳಿಂದ ಜಯಂತನ ಎದೆ ಬಿರಿಯುವಂತೆ ಹೊಡೆಯಲು ಅವನು ಆ ಸರಳುಗಳನ್ನು ಮಧ್ಯದಲ್ಲಿಯೇ ಖಂಡಿಸಿ, ನೂರು ಬಾಣಗಳಿಂದ ರಾವಣಿಯ ತೇರನ್ನು ಪುಡಿ ಪುಡಿಯಾಗಿ ಕತ್ತರಿಸಿ ವಿರಥನನ್ನಾಗಿ ಮಾಡಿದನು. ಆಗ ರಾವಣಿಯು ಕೋಪಗೊಂಡು ಕಾಲಾಗ್ನಿಯೋಪಾದಿಯಲ್ಲಿ ಉರಿಯುತ್ತಾ ಶಿವನು ಕೊಟ್ಟ ಶಕ್ತಿಯನ್ನು ಆತನ ಮೇಲೆ ಉಪಯೋಗಿಸಲು ಜಯಂತನು ಅದರ ಪೆಟ್ಟನ್ನು ಸಹಿಸಲಾರದೆ ಕೆಳಗೆ ಬಿದ್ದು ಮೂರ್ಛೆ ಹೋಗಲು ಅವನ ಮಾತಾಮಹನಾದ ಪುಲೋಮನು ಬಂದು ಮೊಮ್ಮಗನನ್ನು ಎತ್ತಿಕೊಂಡು ಓಡಿಹೋದನು.

## ಇಂದ್ರ ರಾವಣ ಯುದ್ಧ.

ದೇವೇಂದ್ರನು ಮಗನನ್ನು ಕಾಣದೆ ತಾನೆ ಯುದ್ಧಕ್ಕೆ ಬರಲು ರಾವಣನು ಮಗನನ್ನು ಹಿಂದಕ್ಕೆ ಕಳುಹಿಸಿ ತಾನೇ ಬಂದು ಎದುರಾಗಿ ನಿಂತು ಹತ್ತು ಕೈಗಳಿಂದಲೂ ಹತ್ತು ಬಿಲ್ಲುಗಳನ್ನು ತೆಗೆದುಕೊಂಡು ಹೆದೆಗಳನ್ನೇರಿಸಿ ಬಾಣಗಳನ್ನು ಹೂಡಿ ಕಿವಿಯವರೆಗೆ ಸೆಳೆದು ಇಂದ್ರನ ಮೇಲೆ ಎಸೆಯುತ್ತಿರಲು, ದೇವೇಂದ್ರನು ಆ ಬಾಣಗಳೆಲ್ಲವನ್ನೂ ತುಂಡು ತುಂಡಾಗಿ ಕತ್ತರಿಸಿ ರಾವಣನ ತಲೆಗಳೇ ಕಾಣದಂತೆ ಬಾಣಪಂಜರದಿಂದ ಮುಚ್ಚಲು ದಶಕಂಧರನು ಇಂದ್ರನ ಬಾಣಗಳನ್ನು ಕತ್ತರಿಸಿ ನಾನಾ ಸರಳುಗಳನ್ನು ಸುರಿಸುತ್ತಿದ್ದನು. ಆಗ ಇಂದ್ರನು ಸರಲ್ಗಳಸುಗೆಯಿಂದ ರಾವಣನ ಸಾರಥಿಯನ್ನು ಕಡಿದು ರಥವನ್ನು ಕೊಚ್ಚಿ ಹತ್ತು ಕೈಗಳಲ್ಲಿದ್ದ ಹತ್ತು ಬಿಲ್ಲುಗಳನ್ನು ಕತ್ತರಿಸಿ, ಅವನ ಛತ್ರಧ್ವಜವನ್ನು ಛೇದಿಸಿ ಅವನನ್ನು ಹೊಡೆದು ವಿರಥನನ್ನಾಗಿ ಮಾಡಿ ನೋಯಿಸಿದನು. ಆಗ ರಾವಣನು ಮಹಾಕೋಪದಿಂದ ಗದೆಯನ್ನು ಹಿಡಿದು ಇಂದ್ರನನ್ನು ಹೊಡೆಯುವದಕ್ಕೆ ಮೇಲೆ ಬಿದ್ದು ಬರಲು, ಇಂದ್ರನು ತನ್ನ ವಜ್ರಾಯುಧದಿಂದ ರಾವಣನನ್ನು ಅಪ್ಪಳಿಸಿದನು. ಆ ಪೆಟ್ಟನ್ನು ಸಹಿಸಲಾರದೆ ರಾವಣನು ಕೆಳಗೆ ಬಿದ್ದು ಮೂರ್ಛೆಯನ್ನು ಹೊಂದಿದನು.

## ಮೇಘನಾದನು ಇಂದ್ರನನ್ನು ಜಯಿಸಿದುದು.

ಆಗ ರಾವಣಿಯು ತಂದೆ ಮೂರ್ಛೆಹೋದುದನ್ನು ಕಂಡು ಓಹೋ ಇನ್ನೇನುಗತಿ ಎಂದು ಬೇಗನೆ ಬಂದು ಇಂದ್ರನನ್ನು ಎದುರಿಸಿ, ಈಶ್ವರನು ಕೊಟ್ಟಿದ್ದ ತಾಮಸೀವಿದ್ಯದ ಪ್ರಭಾವದಿಂದ ತಾನು ಇಂದ್ರನಿಗೆ ಕಾಣಿಸಿಕೊಳ್ಳದೆ ಬಾಣಗಳನ್ನು ಸುರಿಸುತ್ತಾ ಮಾಯಾಯುದ್ಧ ಮಾಡುತ್ತಿರಲು ಇಂದ್ರನು ಯಾರನ್ನು ಕಾಣದೆ ದಿಗ್ಭ್ರಮೆಹತ್ತಿ ಸ್ತಬ್ಧನಾಗಿ ನಿಂತನು. ಆಗ ರಾವಣಿಯು ಬಂದು

ಇಂದ್ರನನ್ನು ಬಿಗಿದು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು ಜಯಭೇರಿಯನ್ನು ಹೊಡಿಸಿಕೊಂಡು ಬರುತ್ತಿರಲು ರಾವಣನು ಮೂರ್ಛೆತಿಳಿದೆದ್ದು ಇಂದ್ರನೊಡನೆ ಯುದ್ಧ ಮಾಡುವದಕ್ಕೆ ಬರುತ್ತಿರುವಾಗ ತನ್ನೆದುರಾಗಿ ಜಯವಾದ್ಯದೊಡನೆ ಬರುತ್ತಿರುವ ಮಗನನ್ನು ನೋಡಿ ಸಂತೋಷದಿಂದವನನ್ನು ಬಿಗಿದು ಅಪ್ಪಿಕೊಂಡು ಇಂದ್ರ ಲೋಕವನ್ನು ಸೂರೆಮಾಡಿ ಸಕಲ ರಾಕ್ಷಸಬಲ ಸಮೇತನಾಗಿ ಲಂಕಾಪಟ್ಟಣಕ್ಕೆ ಬಂದು ಇಂದ್ರನನ್ನು ಸೆರೆಯಲ್ಲಿಟ್ಟು ಸುಖವಾಗಿದ್ದನು.

## ಬ್ರಹ್ಮನು ಲಂಕೆಗೆ ಹೋಗಿ ಇಂದ್ರನನ್ನು ಬಿಡಿಸಿಕೊಂಡು ಬಂದುದು.

ಆಗ ಈ ಸುದ್ದಿಯನ್ನು ಕೇಳಿ ಚತುರ್ಮುಖನು ಲಂಕೆಗೆ ಬಂದು, ರಾವಣನನ್ನು ಕರೆದು, ಎಲೈ—ಮಗನೇ ಮೂರು ಲೋಕಗಳನ್ನೂ ಗೆದ್ದ, ಲೋಕೈಕವೀರನಾದ ನಿನಗಿಂತಲೂ ನಿನ್ನ ಮಗನು ಶೌರ್ಯಾಧಿಕನು, ಆತನ ಪರಾಕ್ರಮಕ್ಕೆ ಮೆಚ್ಚಿದೆನು, ಇದು ಮೊದಲ್ಗೊಂಡು ಅವನಿಗೆ ಇಂದ್ರಜಿತುವೆಂಬ ಹೆಸರು ಬಳಕೆಯಾಗಲಿ, ಇಂದ್ರನು ನನ್ನ ಅಪ್ಪಣೆಯಮೇರೆಗೆ ದೇವ ಲೋಕವನ್ನು ಪಾಲಿಸುವನು, ಇಷ್ಟುಜಯಿಸಿದ್ದೆ ಸಾಕು ಅವನನ್ನು ಬಿಟ್ಟುಬಿಡು, ನನ್ನ ಮಾತನ್ನು ನಡೆಸು ಎಂದು ಹೇಳಲು ಆಗ ಇಂದ್ರಜಿತುವು ಬ್ರಹ್ಮನಿಗೆ ನಮಸ್ಕಾರಮಾಡಿ ಎಲೈ ಪಿತಾಮಹನೇ ನಿನ್ನ ಅಪ್ಪಣೆಯುಪ್ರಕಾರ ನಡೆದುಕೊಳ್ಳುವೆನು, ನನಗೆ ಇಂದ್ರಜಿತುವೆಂಬ ಹೆಸರಾದುದು ಸರಿಯೇ ನನ್ನಲ್ಲಿ ನಿನಗೆ ಪ್ರೀತಿಯುಂಟಾಗಿದ್ದರೆ ನನಗೆ ಅಮರತ್ವವನ್ನು ಕೊಡಬೇಕೆಂದು ಬೇಡಲು ಬ್ರಹ್ಮನು ಕುಮಾರನೇ ಈ ಲೋಕದಲ್ಲಿ ಚರಾಚರಗಳಿಂದ ಅಮರತ್ವದ ಒಳಕೆಯಿಲ್ಲ ಸುರನರೋರಗ ದೈತ್ಯರಿಗೂ ಕೂಡ ಸಾವು ತಪ್ಪದು, ಅದನ್ನು ಬಿಟ್ಟು ಇನ್ನೇನಾದರೂ ಕೇಳು ಕೊಡುವೆನು ಎಂದನು. ಆದಕ್ಕೆ ಅವನು ತಾತನೇ ನಾನು ಯುದ್ಧಕ್ಕಾಗಿ ಹೊರಡುವದಕ್ಕೆ ಮುಂಚೆ ಯಾಗದಲ್ಲಿ ಹೋಮಮಾಡಿ ಯಜ್ಞೇಶ್ವರನನ್ನು ಪೂಜಿಸುವೆನು ಆಗ ಅದರಿಂದ ಒಂದು ರಥಬರಲಿ ಅದರಲ್ಲಿ ನಾನು ಕುಳಿತುಕೊಂಡು ಯುದ್ಧಮಾಡಿದರೂ ನನಗೆ ಮರಣವಾಗಬಾರದೆಂದು ವರವನ್ನು ಕೊಡು ಎನಲು ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ಇಂದ್ರನನ್ನು ಕರೆದುಕೊಂಡು ಅಮರಾವತಿಗೆ ಹೋಗಿ, ಅವನನ್ನು ಕುರಿತು ಎಲೈ ಇಂದ್ರನೇ ನೀನು ಗೌತಮಪತ್ನಿಯಾದ ಅಹಲ್ಯೆಯನ್ನು ಕಾಮಿಸಿದ್ದರಿಂದ ನಿನಗೆ ಇಂಥಾ ಪರಾಜಯವುಂಟಾಯಿತು ಎಂದು ಹೇಳಿ ಆ ಪಾಪ ಪರಿಹಾರಕ್ಕೆ ವೈಷ್ಣವ ಯಾಗವನ್ನು ಮಾಡಿಸಿ ಸಂತೋಷ ಪಡಿಸಿ ಇಂದ್ರನನ್ನು ಸ್ವರ್ಗದಲ್ಲಿ ಬಿಟ್ಟು ತಾನು ಸತ್ಯಲೋಕಕ್ಕೆ ಹೊರಟುಹೋದನು.

## ದಶಕಂಠನು ಸಭೆಯಲ್ಲಿ ಯೋಚಿಸಿದುದು.

ಒಂದುದಿನ ರಾವಣನು ಮಂತ್ರಿಪರಿವಾರ ಸಹಿತನಾಗಿ ಒಡ್ಡೋಲಗದಲ್ಲಿ ಕುಳಿತುಕೊಂಡು ದಿಕ್ಪಾಲಕರನ್ನೂ ದೈತ್ಯ ದಾನವಾದಿಗಳನ್ನೂ, ಜಯಿಸಿದ ಕೊಬ್ಬಿನಿಂದ ಪ್ರಹಸ್ತ, ಮಾರೀಚಾದಿ ಮಂತ್ರಿಗಳನ್ನು ಕುರಿತು ಹೀಗೆ ಹೇಳಿದನು. ನಾವು ಇನ್ನು ಯಾರನ್ನು ಜಯಿಸಬೇಕು ತ್ರಿಮೂರ್ತಿಗಳಲ್ಲಿ ಬ್ರಹ್ಮನು ಮುತ್ತಜ್ಜನು ಮತ್ತು ಅನೇಕ ವರಗಳನ್ನು ಕೊಟ್ಟಿರುವನು, ಶಿವನ ರಜತಾದ್ರಿಯನ್ನು ಎತ್ತಿ ಅಲ್ಲಾಡಿಸಲು ಆತನು ನನ್ನ ಪರಾಕ್ರಮಕ್ಕೆ ಮೆಚ್ಚಿ ಚಂದ್ರಹಾಸವೆಂಬ ಕತ್ತಿಯನ್ನು ಕೊಟ್ಟು ಸಂತೋಷಪಡಿಸಿದನು, ವಿಷ್ಣು ಒಬ್ಬನೇ ಉಳಿದಿರುವನು, ಆತನು ಕ್ಷೀರಸಮುದ್ರದಲ್ಲಿ ಲಕ್ಷ್ಮೀಸಮೇತನಾಗಿ ಶೇಷಶಾಯಿಯಾಗಿ ಮಲಗಿದ್ದಾನೆ, ಆತನನ್ನು ಜಯಿಸಿದರೆ ಈ ಚತುರ್ದಶ ಭುವನಗಳಲ್ಲಿ ನನ್ನನ್ನು ಎದುರಿಸುವವರು ಯಾರೂ ಇಲ್ಲ ಎಂದು ಹೇಳುತ್ತಿರಲು, ಶಾಂತನಾಗಿಯೂ ತಮ್ಮನಾಗಿಯೂ ಮಂತ್ರಿಯಾಗಿಯೂ ಪರಮ ಭಾಗವತನಾಗಿಯೂ ಇರುವ ವಿಭೀಷಣನು ಎದ್ದು ಕೈಮುಗಿದ, ಎಲೈ ರಾವಣಾಗ್ರಜನೇ ಲೋಕದಲ್ಲಿ ಶೂರರು ಯಾರೂ

ಇಲ್ಲವೆಂದು ಹೇಳಬೇಡ ಒಬ್ಬರಿಗಿಂತಲೂ ಮತ್ತೊಬ್ಬರು ಸಮರ್ಥರಾಗಿಯೇ ಇರುವರು, ಸಾವಿರ ತೋಳುಗಳುಳ್ಳ ಮಾಹಿಷ್ಮತೀಪಟ್ಟಣದ ದೊರೆಯಾದ ಕಾರ್ತವೀರ್ಯಾರ್ಜುನನು ಸಾಮಾನ್ಯನೆ ಚಕ್ರವರ್ತಿಯೆನಿಸಿಕೊಂಡು ಜಗದೇಕವೀರನಾಗಿರುವದಿಲ್ಲವೇ, ಅವನ ಪ್ರತಾಪವನ್ನು ಹೇಳುವುದಕ್ಕೆ ಸಾಧ್ಯವಿಲ್ಲ ಅಲ್ಲದೆ ಇಂದ್ರನ ಮಗನಾದ ವಾಲಿಯೆಂಬ ವಾನರನು ಕಿಷ್ಕಿಂಧಾರಾಜ್ಯಕ್ಕೆ ಅಧಿಪತಿಯಾಗಿ ಮಹಾಶೂರನೆನಿಸಿಕೊಂಡಿಲ್ಲವೆ, ಅಪರಿಮಿತ ಪರಾಕ್ರಮಶಾಲಿಗಳಾದ ದುಂದುಭಿ ಮಾಯಾವಿಗಳನ್ನು ಲೀಲೆಯಿಂದ ಗೆದ್ದ ಮಹಾಶೂರನಲ್ಲವೆ ವಾಲಿ, ಇವನಂತೆ ಲೋಕದಲ್ಲಿ ಶೂರರು ಇನ್ನೂ ಎಷ್ಟೋಮಂದಿ ಇರುವರು ಎಂದನು.

## ಪ್ರಸೂದನು ವಿಷ್ಣುಚಕ್ರದಿಂದ ಮೃತನಾದುದು.

ವೈಕುಂಠದಲ್ಲಿ ಶ್ರೀಮನ್ನಾರಾಯಣನು ಲಕ್ಷ್ಮೀಸಮೇತನಾಗಿ ಸಮಸ್ತ ಲೋಕಗಳನ್ನು ಲೀಲಾಮಾತ್ರದಿಂದ ಸಂರಕ್ಷಿಸುತ್ತಿರಲು, ಮಹಾಲೋಹವತಿಯೆಂಬ ಪಟ್ಟಣವಲ್ಲಿದ್ದ ಶತ್ರುಪ್ರಸೂದನನೆಂಬ ರಕ್ಕಸನೋರ್ವನು ಸಕಲ ದೇವತೆಗಳನ್ನು ಮನುಷ್ಯರನ್ನೂ, ನಾನಾವಿಧವಾಗಿ ಬಾಧಿಸುತ್ತಿದ್ದನು, ಇಂದ್ರಾದಿ ದೇವತೆಗಳೆಲ್ಲರೂ ಚಿರಕಾಲ ಅವನ ಬಾಧೆಯನ್ನನುಭವಿಸಿ ತಾಳಲಾರದೆ ಕಡೆಗೊಂದುದಿನ ಬ್ರಹ್ಮನ ಬಳಿಗೆ ಬಂದು ಸಾಷ್ಟಾಂಗವೆರಗಿ ಶತ್ರುಪ್ರಸೂದನನ ಬಾಧೆಯನ್ನು ಸಹಿಸಲಾರೆವು, ಅವನ ಬಾಧೆಯಿಂದ ತಪ್ಪಿಸಿ ನಮ್ಮನ್ನು ಕಾಪಾಡಬೇಕೆಂದು ಬೇಡಿಕೊಳ್ಳಲು, ಬ್ರಹ್ಮನು ಇಂದ್ರಾದಿಗಳನ್ನು ತನ್ನೊಡನೆ ಕರೆದುಕೊಂಡು ಶ್ರೀಮಹಾವಿಷ್ಣುವಿನ ಬಳಿಗೆ ಹೋಗಿ ಎಲ್ಲರೊಡನೆ ಪಾದವಂದನವನ್ನು ಮಾಡಿ, ಕೈ ಮುಗಿದುಕೊಂಡು ಅನೇಕ ವಿಧವಾಗಿ ಸ್ತೋತ್ರಮಾಡಿ ಎಲೈ ಭಗವಂತನೇ! ಈ ದೇವತೆಗಳಿಗೆ ಶತ್ರುಸೂದನನು ಬಹಳವಾಗಿ ಬಾಧೆ ಕೊಡುತ್ತಿದ್ದಾನೆ ಅವನನ್ನು ನಿಗ್ರಹಿಸಿ ದೇವತೆಗಳನ್ನು ಸಲಹಬೇಕೆಂದು ಬೇಡಿಕೊಳ್ಳಲು, ಜಗದೊಡೆಯನು ಎಲೈ ಬ್ರಹ್ಮನೇ, ಎಲೈ ದೇವತೆಗಳಿರಾ! ನೀವು ಭಯಪಡಬೇಡಿ ಧೈರ್ಯವಾಗಿರಿ ನನ್ನ ತೇಜೋಬಲದಿಂದಲೇ ಅವನು ಸಂಹರಿಸಲ್ಪಡುವನು ನಿಮ್ಮ ಸ್ಥಾನಗಳಿಗೆ ನೀವು ಹೋಗಿ ಎಂದು ದೇವತೆಗಳಿಗೆ ಧೈರ್ಯವನ್ನು ಹೇಳಿ ಕಳುಹಿಸಿ ಸ್ಮರಣಮಾತ್ರದಿಂದ ಬಂದು ಸಿದ್ಧವಾಗಿ ತನ್ನ ಗರಿಗಳ ಗಾಳಿಯಿಂದ ಅಷ್ಟದಿಕ್ಪಾಲಕರನ್ನೂ ದಿಗ್ಗಜಗಳನ್ನು ಅಲ್ಲಾಡಿಸುತ್ತಿರುವ ವೈನತೇಯನು ನಿಂತಿರಲು ಸ್ವಾಮಿಯು ಗರುಡಾರೂಢನಾಗಿ, ಕೋಟಿಸೂರ್ಯಪ್ರಕಾಶಮಾನವಾದ ಚಕ್ರಾಯುಧವನ್ನು ಧರಿಸಿ ಪೊರಮಟ್ಟು ಲೋಹವತೀ ನಗರಿಗೈತಂದು ಪಾಂಚಜನ್ಯವನ್ನು ಊದಿದನು ಆ ಶಬ್ದವನ್ನು ಕೇಳಿದ ಮಾತ್ರದಿಂದಲೇ ಆ ಪಟ್ಟಣದೊಳಗಿದ್ದ ಪ್ರಜೆಗಳಲ್ಲಿ ಕೆಲವರು ಪ್ರಾಣವನ್ನು ನೀಗಿದರು, ಕೆಲವರು ಮೂರ್ಛೆಯನ್ನೈದಿದರು, ಕೆಲವರು ಭಯದಿಂದೋಡಿದರು ಅದನ್ನು ಕಂಡು ಶತ್ರುಸೂದನನು ಮಹಾ ಕೋಪವನ್ನು ತಾಳಿ ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತಾ, ಚತುರಂಗಬಲ ಸಮೇತನಾಗಿ ಸಾವಿರ ಕುದುರೆಗಳಿಂದ ಕಟ್ಟಲ್ಪಟ್ಟು ಸುವರ್ಣ ಪತಾಕೆಗಳಿಂದಲೂ, ರತ್ನಮಯವಾದ ಘಂಟೆಗಳಿಂದಲೂ ಹೊಳೆಯುತ್ತಿರುವ ಸುಂದರವಾದ ಅಗ್ನಿವರ್ಷಿ ಎಂಬ ರಥವನ್ನೇರಿ ಬಂದು ಶ್ರೀಮಹಾವಿಷ್ಣುವಿನೆದುರಿಗೆ ನಿಂತು ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ! ಬಹುಕಾಲದಿಂದ ಕದನವಿಲ್ಲದೆ ತೋಳು ತೀಟೆ ಹೆಚ್ಚಿರುವದು ಅದನ್ನು ಈಗ ಹೋಗಲಾಡಿಸಿಕೊಳ್ಳಬಹುದು ನೀನು ಯುದ್ಧಕ್ಕೆ ಬಂದದ್ದು ಬಹಳ ಸಂತೋಷವಾಯಿತು ಇತರ ರಾಕ್ಷಸರನ್ನು ಅಲಕ್ಷ್ಯಮಾಡಿದಂತೆ ನನ್ನನ್ನು ಅಲಕ್ಷ್ಯಮಾಡದೆ ಯುದ್ಧಮಾಡು ನೀನು ಕಲಿತಿರುವ ಶಸ್ತ್ರಾಸ್ತ್ರ ವಿದ್ಯವನ್ನು ಮರೆಯದಂತೆ ನನ್ನಮೇಲೆ ಪ್ರಯೋಗಿಸು ಎನಲು, ಶ್ರೀಮಹಾವಿಷ್ಣುವು ಎಲೈ ದೈತ್ಯಾಧಮನೇ! ನೀನಿದುವರೆಗೂ ದೇವತೆಗಳನ್ನೂ ನರರನ್ನೂ ಬಾಧಿಸುತ್ತಿದ್ದೆ ಈಗ

ನಿನ್ನನ್ನು ಸಂಹರಿಸುವದಕ್ಕೆ ಬಂದಿರುವೆನು ಮನೆಗೆ ಹೋಗಿ ಇನ್ನೊಮ್ಮೆ ಮಡದಿ ಮಕ್ಕಳನ್ನು ನೋಡಿಕೊಂಡು ಬಾ ಅವರನ್ನು ಇನ್ನು ನೋಡಲಾರೆ ಎಂದು ಹೇಳಲು ಅವನು ಆ ಮಾತುಗಳನ್ನು ಕೇಳಿ ಬಹಳ ಸಿಟ್ಟಿನಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಕಿಡಿಗಳನ್ನು ದಿರಿಸುತ್ತಾ ತುಟಿಗಳನ್ನು ಕಡಿದು ಶ್ರೀ ಮಹಾವಿಷ್ಣುವಿನ ಮೇಲೆ ಶರವರ್ಷವನ್ನು ಸುರಿಸಿದನು. ಶ್ರೀ ವಿಷ್ಣುವು ಅವನನ್ನು ಬಾಣಗಳಿಂದ ನೋಯಿಸಿ ಆವನ ತೇರನ್ನು ಹತ್ತು ಬಾಣಗಳಿಂದ ಹೊಡೆಯಲು, ಅದು ಒಂದು ಯೋಜನ ಹಿಂದಕ್ಕೆ ಹೋದರೂ ಖಳನು ಮತ್ತೆ ಬಂದು ಶ್ರೀಹರಿಯ ಮುಂದೆ ನಿಂತು ತಪೋಬಲದಿಂದ ಸಂಪಾದಿಸಿದ್ದ ಶಕ್ತ್ಯಾಯುಧವನ್ನು ಶ್ರೀವಿಷ್ಣುವಿನಮೇಲೆ ಪ್ರಯೋಗಿಸಿ ಅಂಧಕಾರವನ್ನುಂಟುಮಾಡಲು ಶ್ರೀಹರಿಯು ಸೌರಾಸ್ತ್ರವನ್ನು ಪ್ರಯೋಗಿಸಿ ಅಂಧಕಾರವನ್ನು ನಾಶಗೊಳಿಸಿ ದೈತ್ಯನನ್ನು ಹೊಡೆದು ಬಹಳವಾಗಿ ನೋಯಿಸಿದನು ಹೀಗೆ ಬಹುಕಾಲ ಯುದ್ಧ ಮಾಡಿದರೂ ಪರಮೇಶ್ವರನು ಆವನಿಗೆ ಅನುಗ್ರಹಿಸಿದ ವರಬಲದಿಂದ ದೇವದಾನವ ಗಂಧರ್ವಾದಿಗಳಿಂದಲೂ ಮನುಷ್ಯಪಕ್ಷಿಗಳಿಂದಲೂ ಸಾವು ಉಂಟಾಗದೆಂದು ಅರಿತು ಶ್ರೀಮಹಾವಿಷ್ಣುವು ಅಂತರ್ಧಾನನಾಗಿ ಸ್ವಸ್ಥಾನವನ್ನು ಸೇರಿ ಈ ಖಳನನ್ನು ಯಾವ ಬಗೆಯಿಂದ ಸಂಹರಿಸಬೇಕೆಂದು ಯೋಚಿಸುತ್ತಿರುವಾಗ ಸುದರ್ಶನವೆಂಬ ಚಕ್ರಾಯುಧವು ನಿಜರೂಪವನ್ನು ತಾಳಿ ಶ್ರೀಮಹಾವಿಷ್ಣುವಿನ ಎದುರಿಗೆ ಬಂದು ಸಾಷ್ಟಾಂಗವೆರಗಿ ನಿಂತು ಮುಕುಳಿತಹಸ್ತನಾಗಿ ಶ್ರೀಹರಿಯನ್ನು ಕುರಿತು ಎಲೈ ಪ್ರಭುವೇ ನಿನ್ನ ಸೇವಕನಾದ ನಾನು ಸಿದ್ಧವಾಗಿರಲು ನೀನೇಕೆ ಚಿಂತಿಸುವೆ ನನಗೆ ಅಪ್ಪಣೆಯನ್ನು ಕೊಟ್ಟುಕಳುಹು ಆ ಖಳನನ್ನು ಸಂಹರಿಸಿ ಬರುವೆನು ಎಂದು ಬೇಡಿಕೊಳ್ಳಲು ಆಗ ಶ್ರೀಮಹಾವಿಷ್ಣುವು ಹಾಗೆಯೇ ಆಗಲೆಂದು ಹೇಳಿ ಶತ್ರುಸೂದನನನ್ನು ಸಂಹರಿಸಿ ಬಾ ಎಂದು ಅಪ್ಪಣೆಕೊಟ್ಟು ಕಳುಹಿಸಿದನು. ಆ ಸುದರ್ಶನವು ಶ್ರೀ ಲಕ್ಷ್ಮೀನಾರಾಯಣನಿಗೆರಗಿ ಅಪ್ಪಣೆ ಪಡೆದು ಹೊರಟು ಮಹಾಭಯಂಕರವಾದ ತೇಜೋರೂಪವನ್ನು ತಾಳಿ ಲೋಹವತೀ ನಗರದ ಬಳಿಗೆ ಬಂದು ಕೋಟೆಗಳನ್ನೂ ಪಟ್ಟಣವನ್ನೂ ದಹಿಸುತ್ತಿರಲು ಆ ಪಟ್ಟಣದಲ್ಲಿರುವ ದೈತ್ಯರು ಈ ಚಕ್ರದ ಜನ ಜ್ವಾಲೆಗಳ ವೇಗವನ್ನು ತಡೆಯಲಾರದೆ ಹಾಹಾಕಾರ ಮಾಡುತ್ತ ತಮ್ಮ ಮಡದಿಮಕ್ಕಳನ್ನು ಬಿಟ್ಟು ತಮ್ಮರಸನಾದ ಶತ್ರುಸೂದನನ ಬಳಿಗೆ ಓಡಿಹೋಗಿ ಮರೆಹೊಕ್ಕು ಎಲೈ ದೈತ್ಯೇಶನೇ! ಅಪೂರ್ವವಾದ ಬೆಂಕಿಯ ಜ್ವಾಲೆಗಳು ಎಲ್ಲರನ್ನೂ ದಹಿಸುತ್ತಿದೆ ಈ ಕಷ್ಟದಿಂದ ಬಿಡಿಸಿ ನಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಳ್ಳಲು, ದೈತ್ಯರಾಜನು ಆ ಮಾತುಗಳನ್ನು ಕೇಳಿ ಬಹಳ ಕೋಪವನ್ನು ತಾಳಿ, ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತ ರಥಾರೂಢನಾಗಿ ತನ್ನವರನ್ನೂ ಊರಿಗೆ ಕಳುಹಿಸಿ ಬಂದು ಈ ತೇಜೋರೂಪವನ್ನು ಕುರಿತು ಎಲೈ ತೇಜೋಮೂರ್ತಿಯೇ ನನ್ನ ಪಟ್ಟಣದ ಜನರೆಲ್ಲರೂ ನಿನ್ನ ಬಾಧೆಯನ್ನು ತಾಳಲಾರದೆ ಬಹಳ ಭಯಪಡುತ್ತಿದ್ದಾರೆ ತೇಜೋರೂಪನಾದ ನೀನು ಯಾರು? ಏತಕ್ಕೆ ಬಂದಿರುವೆ ನಿನಗೆ ಏನು ಬೇಕು ಎಂದು ಕೇಳಲು ಆ ಚಕ್ರವು ದೈತ್ಯನನ್ನು ಕುರಿತು ಎಲೈ ಖಳನೆ! ನಾನು ಅನೇಕ ಮಂದಿ ಮಹಾವೀರ ರಕ್ಕಸರನ್ನು ಲೀಲಾಮಾತ್ರದಿಂದ ಸಂಹರಿಸಿ ಇಂದ್ರಾದಿಗಳನ್ನು ಸಲಹುವ ಶ್ರೀಲಕ್ಷ್ಮೀಕಾಂತನಾದ ಶ್ರೀಮಹಾವಿಷ್ಣುವಿನ ಬಲಗೈಯನ್ನು ಅಲಂಕರಿಸುವ ಚಕ್ರಾಯುಧವು ನಿನ್ನನ್ನು ಸಂಹರಿಸಿ ಬರುವಂತೆ ಶ್ರೀಹರಿಯು ಅಪ್ಪಣೆಮಾಡಲು ಬಂದಿರುವೆನು ಎಂದು ಹೇಳಲು, ಆ ದೈತ್ಯನು ಎಲೈ ಚಕ್ರವೇ! ಇಂಥಾ ಮಹಾನುಭಾವನಾದ ನಿನ್ನನ್ನು ಕೈಯಲ್ಲಿ ಹಿಡಿಯುವ ನಿನ್ನೊಡೆಯನೇ ನನ್ನ ಸಂಗಡ ದಿವ್ಯ ಸಹಸ್ರವರುಷಗಳು ಯುದ್ಧಮಾಡಿ ಜಯಿಸಲಾರದೆ ಕಣ್ಮರೆಯಾಗಿ ಅವಿತುಕೊಂಡನು, ನೀನು ನನ್ನನ್ನು ಜಯಿಸುವದು ನಿಜವೆ ಬರಿಯಮಾತುಗಳಿಂದೇನೂ ಪ್ರಯೋಜನವಿಲ್ಲ ನೀನು ಈಗಲೇ ಹಿಂದಕ್ಕೆ ಹೋಗಿ ನಿನ್ನೊಡೆಯನನ್ನೇ ಕಳುಹಿಸು ಎನಲು, ಚಕ್ರವು

ಎಲೈ ದೈತ್ಯನೇ ಮಹಾಪರಾಕ್ರಮಿಯಾದ ನಮ್ಮೊಡೆಯನ ಪ್ರಭಾವವು ನನ್ನೊಡನೆ ಯುದ್ಧಮಾಡು ವದರಿಂದಲೇ ತಿಳಿಯುವದು, ಆತನಲ್ಲಿರುವ ಮಹಾ ಆಯುಧಗಳಲ್ಲಿ ನಾನೊಂದು ನನಗಿಂತಲೂ ಕಡಿಮೆಯಾದ ಆಯುಧವಿಲ್ಲ, ಈಗ ನನ್ನ ಸಂಗಡ ಯುದ್ಧಮಾಡಿ ನನ್ನನ್ನು ಜಯಿಸಿದರೆ ಅವರು ತಾನಾಗಿಯೇ ಬರುವರು ಎಂದು ಹಿಯ್ಯಾಳಿಸಲು ಖಳನು ನಾನಾವಿಧವಾದ ದಿವ್ಯಾಸ್ತ್ರಗಳನ್ನೆಲ್ಲ ಪ್ರಯೋಗಿಸಿದರೂ ನಿಷ್ಪ್ರಯೋಜನವಾಗಿ ಕಡೆಗೆ ಚಕ್ರವು ಅವನನ್ನು ಸಂಹರಿಸಿದ ಬಳಿಕ ದೇವತೆಗಳಿಂದಲೂ, ಋಷಿಗಳಿಂದಲೂ ಸ್ತುತಿಸಲ್ಪಟ್ಟು, ಇಂದ್ರಾದಿಗಳಿಂದ ಸನ್ಮಾನಿತನಾಗಿ ಸಂತೋಷದಿಂದುಬ್ಬಿ, ವೈಕುಂಠವನ್ನು ಕುರಿತು ಬರುತ್ತಿರುವ ದಾರಿಯಲ್ಲಿ ತಾನು ಸಂತೋಷ ಪಡುತ್ತಾ ಶ್ರೀಮಹಾವಿಷ್ಣುವಿನಿಂದಲೂ ಜಯಿಸಲಾಗದೆ ಇದ್ದ ಶತ್ರುಸೂದನನ್ನು ತಾನೇ ಸಂಹರಿಸಿದೆನೆಂದು ಗರ್ವಪಡುತ್ತಾ ತನ್ನ ಪರಾಕ್ರಮವನ್ನು ಹೊಗಳಿಕೊಳ್ಳುತ್ತಾ ಶ್ರೀಮನ್ನಾರಾಯಣನ ಸಮೀಪಕ್ಕೆ ಬಂದಿತು. ಆಗ ಶ್ರೀವಿಷ್ಣುವು ಈ ಚಕ್ರದ ಗರ್ವಭಾವವನ್ನು ತಿಳಿದವನಾಗಿ ಇದರ ಗರ್ವವನ್ನು ಮುರಿಯಬೇಕೆಂದು ಯೋಚಿಸಿ ಅದನ್ನು ನೋಡಿ ಮಾತನಾಡಿಸದೆ ಸುಮ್ಮನಿದ್ದನು. ಆಗ ಸಮೀಪದಲ್ಲಿದ್ದ ಲಕ್ಷ್ಮಿಯೂ ನಾರದನೂ, ದೇವದೇವನನ್ನು ಕುರಿತು ಎಲೈ ಭಗವಂತನೇ! ನಿನ್ನ ಆಯುಧವಾದ ಸುದರ್ಶನವು ಬಹು ಶ್ರಮಪಟ್ಟು ದೇವದಾನವರಿಂದಲೂ ಅಜೇಯನಾದ ಶತ್ರುಸೂದನನ್ನು ಸಂಹರಿಸಿ ಬಂದು ನಿಂತಿರುವುದು ನೀನು ಇದನ್ನು ಆದರಿಸಿ ಎಂದಿನಂತೆ ಹಸ್ತದಲ್ಲಿ ಧರಿಸದೆ ಇರಲು ಕಾರಣವೇನು ಎಂದು ಕೇಳಲು ಅವರಿಗೆ ಚಕ್ರದ ಗರ್ವವನ್ನು ಹೇಳಿ, ಚಕ್ರವನ್ನು ಕುರಿತು ಎಲೈ ಸುದರ್ಶನನೇ! ನಿನ್ನ ಮನೋಭಾವವು ನನಗೆ ತಿಳಿಯಿತು, ಗರ್ವಿಸಿರುವ ನಿನಗೂ ನನಗೂ ಇರುವ ಪರಾಕ್ರಮದ ತಾರತಮ್ಯವು ಯುದ್ಧದಲ್ಲಿಯೇ ತಿಳಿಯ ಬರುವುದು, ನೀನು ಭೂಮಿಯಲ್ಲಿ ಮನುಷ್ಯನಾಗಿ ಅವತರಿಸು ಎಂದನು. ಅದಕ್ಕೆ ಸುದರ್ಶನವು ಎಲೈ ದೇವನೇ! ನಾನು ಮನುಷ್ಯನಾಗಿ ಹುಟ್ಟಿ ನಿನ್ನೊಡನೆ ಯುದ್ಧಮಾಡುವದು ಹೇಗೆ, ನನಗೆ ಧನುರ್ವಿದ್ಯವನ್ನು ಕಲಿಸುವರು ಯಾರು ಎಂದು ಬೆಸಗೊಳ್ಳಲು ಶ್ರೀವಿಷ್ಣುವು ಎಲೈ ಸುದರ್ಶನನೇ! ನಾನು ಭೂಮಿಯಲ್ಲಿ ದತ್ತಾತ್ರೇಯನಾಗಿ ಹುಟ್ಟಿ ಮನುಷ್ಯನಾದ ನಿನಗೆ ಸಮಸ್ತ ವಿದ್ಯೆಗಳನ್ನೂ ಉಪದೇಶಿಸಿ ಮತ್ತೊಂದು ರೂಪದಿಂದ ಬಂದು ನಿನ್ನೊಡನೆ ಯುದ್ಧಮಾಡುವೆನು ಹೊರಡು ಎಂದು ಹೇಳಿ ಅಪ್ಪಣೆಕೊಟ್ಟು ಕಳುಹಿಸಿ ತಾನು ಮುಂಚಿತವಾಗಿಯೇ ದತ್ತಾತ್ರೇಯಾವತಾರವನ್ನು ಮಾಡಿ ಸಹ್ಯಾದ್ರಿಯಲ್ಲಿ ವಾಸಮಾಡಿಕೊಂಡಿದ್ದನು.

## ಚಕ್ರವು ಕಾರ್ತವೀರ್ಯಾರ್ಜುನನಾಗಿ ಹುಟ್ಟಿದುದು.

ತರುವಾಯ ಮಾಹಿಷ್ಮತೀನಗರಕ್ಕೆ ಅಧಿಪತಿಯಾದ ಕೃತವೀರ್ಯನಿಗೆ ಸಹಸ್ರಾರಗಳಿಂದ, ಕೂಡಿದ ವಿಷ್ಣುಚಕ್ರವು ಸಹಸ್ರಬಾಹು ಯುಕ್ತನಾದ ಮಗನಾಗಿ ಜನಿಸಲು, ಆಗ ಕೃತವೀರ್ಯನು ಮಗನನ್ನು ನೋಡಿ ಸಂತುಷ್ಟಹೃದಯನಾಗಿ ಜಾತಕರ್ಮ ನಾಮಕರಣಗಳನ್ನು ಮಾಡಿ ಕಾರ್ತವೀರ್ಯಾರ್ಜುನನೆಂದು ಹೆಸರನ್ನಿಟ್ಟು ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ವೈಶ್ಯರಿಗೂ ಶೂದ್ರರಿಗೂ ಯಥಾಯೋಗ್ಯವಾಗಿ ಸನ್ಮಾನಮಾಡಿ ಸಂತೋಷದಿಂದ ದಿನದಿನಕ್ಕೆ ವೃದ್ಧಿಯನ್ನೈದುತ್ತಿರುವ ಕುಮಾರನ ಬಾಲಲೀಲಾದಿಗಳನ್ನು ನೋಡಿ ಬಹು ಸಂತೋಷಿಸುತ್ತಾ ಐದನೇವರ್ಷದಲ್ಲಿ ಅಕ್ಷರಾಭ್ಯಾಸಮಾಡಿಸಿ ವಿದ್ಯಾಭ್ಯಾಸಕ್ಕೆ ಬಿಟ್ಟು ಎಂಟನೆಯ ವರುಷದಲ್ಲಿ ಉಪನಯನವನ್ನು ಮಾಡಿ ತರುವಾಯ ವಿವಾಹವನ್ನು ಮಾಡಿ ಕೆಲವು ಕಾಲದಮೇಲೆ ಮಗನಿಗೆ ಪಟ್ಟಾಭಿಷೇಕವನ್ನು ಮಾಡ ಬೇಕೆಂದು ಯೋಚಿಸಿದ್ದನು. ಆಗ ಓಲಗದಲ್ಲಿರುವ ತಂದೆಯ ಅಭಿಪ್ರಾಯವನ್ನರಿತು ಕಾರ್ತವೀರ್ಯಾರ್ಜುನನು ಮಹಾಮುನಿಯಾದ ಗರ್ಗಾಚಾರ್ಯರೊಡನೆ ಕೂಡಿದ ಮಂತ್ರಿಗಳನ್ನೂ ಕುರಿತು ಎಲೈ ಅಮಾತ್ಯರೇ ಮಹಾರಾಜನಾದ ನಮ್ಮ ಪಿತನು ನನಗೆ ಪಟ್ಟಾಭಿಷೇಕ ಮಾಡಬೇಕೆಂದಿದ್ದು

ವನು ರಾಜ್ಯಾಧಿಕಾರವನ್ನು ಮಾಡುವಾಗ ಅನೇಕ ತೊಂದರೆಗಳು ಸಂಭವಿಸುವುವು, ದಿವ್ಯಾಸ್ತ್ರಗಳನ್ನು ತಿಳಿಯದ ನನಗೆ ರಾಜ್ಯಾಧಿಕಾರವನ್ನು ವಹಿಸುವ ಶಕ್ತಿಯು ಹೇಗುಂಟಾದೀತು ನಾನು ಹೇಗೆ ಅಧಿಕಾರವನ್ನು ವಹಿಸಿಕೊಳ್ಳಲಿ ಎಂದು ಕೇಳಲು, ಮಂತ್ರಿಗಳೂ ಪ್ರಜೆಗಳೂ ಎಲೈ ರಾಜಕುಮಾರನೇ! ಕೃತವೀರ್ಯಮಹಾರಾಜನು ಮಹಾ ತೇಜಸ್ವಿಯಾದ ನಿನಗೆ ರಾಜ್ಯವನ್ನು ಕೊಟ್ಟು ತಾನು ವಿಶ್ರಾಂತಿ ಸುಖವನ್ನನುಭವಿಸುತ್ತ ತಪಸ್ಸು ಮಾಡಬೇಕೆಂದು ಅಪೇಕ್ಷಿಸಿರುವನು ಆದುದರಿಂದ ನೀನು ರಾಜ್ಯವನ್ನು ವಹಿಸಿ ವೃದ್ಧನಾದ ರಾಜನಿಗೆ ಸಂತೋಷವನ್ನುಂಟುಮಾಡಬೇಕು ಇಲ್ಲದಿದ್ದರೆ ರಾಜ್ಯವು ಅನ್ಯಾಯವಾಗಿ ಶತ್ರುಗಳ ಪಾಲಾಗುವುದು ಪ್ರಜೆಗಳು ಬಹಳ ಕಷ್ಟಕ್ಕೆ ಗುರಿಯಾಗುವರು ನೀನೇ ಪಟ್ಟಾಭಿಷೇಕವನ್ನು ಮಾಡಿಕೊಳ್ಳಬೇಕು ಎನಲು, ಕಾರ್ತ್ಯವೀರ್ಯನು ಮಂತ್ರಿಗಳನ್ನು ಕುರಿತು ಕೆಲವು ದಿನಗಳವರೆಗೆ ರಾಜ್ಯವನ್ನು ಸುಧಾರಿಸಿಕೊಂಡಿರಿ ನಾನು ರಾಜ್ಯವನ್ನಾಳುವ ಶಕ್ತಿಯನ್ನು ಸಂಪಾದಿಸಿಕೊಂಡು ಬರುವೆನೆಂದು ಒಡಂಬಡಿಸಲು ಆಗ ಗರ್ಗಾಚಾರ್ಯನು ಅವನನ್ನು ನೋಡಿ ಎಲೈ ಧೊರೆಯೆ! ಮಹಾನುಭಾವನಾಗಿ ವಿಷ್ಣುವಿಗೆ ಸಮಾನವಾದ ಪರಾಕ್ರಮಶಾಲಿಯಾದ ನೀನು ರಾಜ್ಯವನ್ನು ಬಿಟ್ಟು ಹೊರಡುವುದುಚಿತವಲ್ಲ. ಪುಣ್ಯಕರವಾದ ಸಹ್ಯಾದ್ರಿಯಲ್ಲಿ ನಾರಾಯಣಾಂಶ ಸಂಭೂತನಾದ ದತ್ತಾತ್ರೇಯ ಮಹಾಮುನಿಯು ಇರುವನು ಅಲ್ಲಿಗೆ ಹೋಗಿ ಆತನನ್ನು ಸೇವಿಸಿದರೆ ನಿನ್ನ ಇಷ್ಟಾರ್ಥ ಕೈಗೂಡುವುದು ಆದುದರಿಂದ ನೀನು ಆ ಮುನಿಯನ್ನು ಸೇವಿಸು ನಿನ್ನ ತಂದೆಯಾದ ಕೃತವೀರ್ಯನೂ ಆತನನ್ನು ಸೇವಿಸಿ ಆತನ ಕೃಪೆಯಿಂದ ನಿನ್ನನ್ನು ಪಡೆದನೆಂದು ಹೇಳಲು ಅದನ್ನು ಕೇಳಿ ಕಾರ್ತವೀರ್ಯಾರ್ಜುನನು ಬಹು ಸಂತೋಷದಿಂದ ದತ್ತಾತ್ರೇಯ ಮುನಿಯ ಬಳಿಗೆ ಹೊರಟುಹೋದನು.

## ಕಾರ್ತವೀರ್ಯಾರ್ಜುನನು ಶ್ರೀ ದತ್ತಾತ್ರೇಯನಿಂದ ವರ ಪಡೆದುದು.

ಆಗ ಕಾರ್ತವೀರ್ಯಾರ್ಜುನನು ಆಚಾರ್ಯನಿಗೆ ನಮಸ್ಕರಿಸಿ ತನ್ನ ಪಟ್ಟಣವನ್ನು ಬಿಟ್ಟು ಹೊರಟು ಸಹ್ಯಾದ್ರಿಯನ್ನು ಸೇರಿ ಅಲ್ಲಿ ಸರ್ವಾಭರಣ ಭೂಷಿತಳಾಗಿ ದಿವ್ಯದುಕೂಲವನ್ನು ಧರಿಸಿ ಗಂಧ ಪುಷ್ಪಾದಿಗಳಿಂದಲಂಕೃತಳಾಗಿ ಸಾಕ್ಷಾತ್ ಲಕ್ಷ್ಮೀದೇವಿಯಂತೆ ಸರ್ವಾಂಗ ಸುಂದರಿಯಾದ ಸುರಸ ಎಂಬ ಮಧುಮತೀಶಕ್ತಿ ಕಾಂತೆಯನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಆಕೆಯೊಡನೆ ಸರಸಸಲ್ಲಾಪಗಳನ್ನಾಡುತ್ತಾ ತಾಂಬೂಲವನ್ನು ಮೆಲ್ಲುತ್ತಾ ಕೇಳೀವಿಲಾಸದಿಂದಿರುವ ದತ್ತಾತ್ರೇಯ ಮುನಿಯನ್ನು ಕಂಡು ಸಂತೋಷಭರಿತನಾಗಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಸಮೀಪಕ್ಕೆ ಬಂದು ಕೈಗಳನ್ನು ಜೋಡಿಸಿಕೊಂಡು ತಾನು ಬಂದಿರುವ ಕಾರ್ಯವನ್ನು ಬಿನ್ನೈಸಿದನು ಆ ಮುನಿಯು ಇವನ ಮನಸ್ಸನ್ನು ಪರೀಕ್ಷಿಸಬೇಕೆಂದು ಎಲೈ ರಾಜಪುತ್ರನೇ! ಸ್ತ್ರೀಸಮೇತನಾಗಿರುವ ನನ್ನಲ್ಲಿ ನೀನು ಹೇಗೆ ವಿದ್ಯಾಭ್ಯಾಸ ಮಾಡುವೆ ಎಂದು ಕೇಳಲು ಅವನು ಮಹಾನುಭಾವನೇ ಸಕಲ ದೇವಸ್ವರೂಪನಾದ ನೀನೇ ಮಹಾವಿಷ್ಣುವು ನಿನ್ನ ತೊಡೆಯಮೇಲಿರುವ ಈಕೆಯೇ ಮಹಾಲಕ್ಷ್ಮಿಯು ಇದನ್ನು ತಿಳಿದೇ ನಾನು ಬಂದಿರುವೆನು ಆದ್ದರಿಂದ ನನ್ನಲ್ಲಿ ಕೃಪೆಯಿಟ್ಟು ಕಾಪಾಡಬೇಕೆಂದು ಬೇಡಿಕೊಂಡನು ಆಗ ಆ ಮುನಿಯು ಸಂತೋಷಪಟ್ಟು ಆಗಲಿ ಎಂದು ಹೇಳಿದನು. ಈ ರಾಜಪುತ್ರನು ಆ ಯೋಗೀಂದ್ರನಿಗೆ ಬೇಕಾದ ಸಮಸ್ತ ವಸ್ತುಗಳನ್ನೂ ಒದಗಿಸಿಕೊಟ್ಟು ಅನೇಕವರ್ಷಕಾಲ ಅವಿಚ್ಛಿನ್ನವಾಗಿ ಬಹಳ ಭಕ್ತಿಯಿಂದ ಅವನ ಸೇವೆಮಾಡುತ್ತಿದ್ದನು. ದತ್ತಾತ್ರೇಯನು ಅವನ ಭಕ್ತಿಗೆ ಮೆಚ್ಚಿದವನಾಗಿ ಅವನಿಗೆ ಯೋಗ ಮೊದಲಾದ ಸಕಲ ವಿದ್ಯೆಗಳನ್ನು ಉಪದೇಶಿಸಿ ಅಣಿಮಾದಿ ಅಷ್ಟಸಿದ್ಧಿಗಳನ್ನೂ ಸಕಲ ದಿವ್ಯಾಸ್ತ್ರಗಳನ್ನು ಹೇಳಿಕೊಟ್ಟು ನೀನು ಊರಿಗೆ ಹೋಗಿ ರಾಜ್ಯಪರಿಪಾಲನೆಯನ್ನು ಮಾಡು ಎಂದು ಹೇಳಲು ರಾಜನು ಎಲೈ ಗುರುವರ್ಯನೇ! ನನಗೆ ಯುದ್ಧದಲ್ಲಿ ಜಯವೂ, ಅತಿಥಿಗಳಲ್ಲಿ ಭಕ್ತಿಯೂ,

ಸರ್ವೋತ್ತಮ ಪುರುಷನಿಂದ ನಿಗ್ರಹವೂ ಉಂಟಾಗುವಂತೆ ವರವನ್ನು ಕೊಡಬೇಕೆಂದು ಬೇಡಿಕೊಳ್ಳಲು ಮುನಿವರ್ಯನು ಹಾಗೆಯೇ ವರಗಳನ್ನು ಕೊಟ್ಟು ಆಶೀರ್ವದಿಸಿ ಕಳುಹಿಸಿದನು.

## ಕಾರ್ತವೀರ್ಯನ ರಾಜ್ಯಭಾರಕ್ರಮ.

ಕಾರ್ತವೀರ್ಯಾರ್ಜುನನು ಗುರುವಿನ ಅಪ್ಪಣೆಯನ್ನು ಪಡೆದು ಅತ್ಯಂತ ಸಂತುಷ್ಟನಾಗಿ ಮಾಹಿಷ್ಮತೀ ನಗರಕ್ಕೆ ಬಂದು ಸೇರಲು, ಮಂತ್ರಿ ಪುರೋಹಿತಾದಿ ಸಕಲ ಜನರು ಅರ್ಜುನನನ್ನು ನೋಡಿ ಸಂತೋಷ ಸಮುದ್ರದಲ್ಲಿ ಮುಳುಗಿದವರಾಗಿ ಪಟ್ಟಾಭಿಷೇಕವನ್ನು ಮಾಡಿದರು ಆಗ ಕಾರ್ತವೀರ್ಯಾರ್ಜುನನು ತನ್ನ ಯೋಗಮಹಿಮೆಯಿಂದ ವಿಶ್ವರೂಪವನ್ನು ತಾಳಿ ಸಮಸ್ತ ಜನಗಳನ್ನು ಸುಖವಾಗಿ ಸಂರಕ್ಷಿಸಿ ಚೋರರ ಉಪದ್ರವಗಳನ್ನು ನಿಲ್ಲಿಸಿ ಯಾರಿಗಾದರೂ ತಾನೇ ಸಹಾಯವಾಗುತ್ತಾ ತನ್ನನ್ನು ನೆನೆದವರಿಗೆ ಸಕಲ ಇಷ್ಟಾರ್ಥಗಳನ್ನು ಕೊಡುತ್ತಾ ಭೂಲೋಕದಲ್ಲಿ ತಾನೊಬ್ಬನೇ ಶಸ್ತ್ರಧಾರಿಯಾಗಿರಬೇಕೇ ಹೊರತು ಮತ್ತು ಯಾರೂ ಶಸ್ತ್ರವನ್ನು ಧರಿಸಲಾಗದೆಂದು ಆಜ್ಞಾಪಿಸಿ ತನ್ನ ರಾಜ್ಯದಲ್ಲಿ ಚೋರಬಾಧೆ ಎಂಬುದನ್ನು ಸ್ವಪ್ನದಲ್ಲಿಯೂ ಅರಿಯದಂತೆ ಪ್ರಜೆಗಳನ್ನು ಕಾಪಾಡುತ್ತ ಸಪ್ತದ್ವೀಪಗಳನ್ನು ತನ್ನ ವಶದಲ್ಲಿಟ್ಟುಕೊಂಡು ಏಕಚಕ್ರಾಧೀಶ್ವರನಾಗಿ ರಾಜ್ಯವಾಳುತ್ತಿದ್ದನು. ಒಂದು ದಿನ ಜಲಕ್ರೀಡೆಯನ್ನು ಮಾಡಲಿಚ್ಛಿಸಿ ಅನೇಕ ಸ್ತ್ರೀಯರೊಡನೆ ರೇವಾನದಿಗೆ ಹೋಗಿ ಆ ನದಿಯಲ್ಲಿ ನೀರು ಸಾಲದೆ ಇರುವುದನ್ನು ನೋಡಿ ತನ್ನ ಬಾಹುಗಳ ಬಲವನ್ನು ಪರೀಕ್ಷಿಸಬೇಕೆಂದು ಐನೂರು ಬಾಹುಗಳಿಂದ ರೇವಾನದಿಯ ಜಲವನ್ನು ತಡೆದು ಉಳಿದ ಐನೂರು ಬಾಹುಗಳಿಂದ ಸ್ತ್ರೀಯರಮೇಲೆ ನೀರೆರೆಚುತ್ತಾ ನಾನಾಬಗೆಯಾಗಿ ಜಲವಿಹಾರವನ್ನು ಮಾಡುತ್ತಿದ್ದನು.

## ಕಾರ್ತವೀರ್ಯಾರ್ಜುನನ ಮೇಲೆ ದಶಕಂಠನು ಯುದ್ಧಕ್ಕೆ ಬಂದುದು.

ಅನಂತರ ರಾವಣನು ಮೊದಲು ಅವರಿಬ್ಬರನ್ನೂ ಜಯಿಸಿ ಆಮೇಲೆ ವಿಷ್ಣುವನ್ನು ಜಯಿಸಬೇಕೆಂದು ಆಲೋಚಿಸಿಕೊಂಡು ಪ್ರಹಸ್ತಾದಿ ಮಂತ್ರಿಗಳೊಳಗೂಡಿ ಮಾಹಿಷ್ಮತೀನಗರಕ್ಕೆ ಹೋಗಲು ದೊರೆಯಾದ ಕಾರ್ತವೀರ್ಯಾರ್ಜುನನು ಮಡದಿಯರೊಡನೆ ರೇವಾನದಿಗೆ ಹೋಗಿರುವದಾಗಿ ತಿಳಿಯಬಂದದ್ದರಿಂದ ಅವನ್ನು ಕಂಡು ಶಿವಪೂಜೆಯನ್ನು ಮಾಡಲೆಳಸಿ ವಿಮಾನವನ್ನು ನಿಲ್ಲಿಸಿ ತಾವೆಲ್ಲರೂ ಕೆಳಗಿಳಿದು ಮಂತ್ರಿಗಳನ್ನು ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸುವಂತೆ ನಿಯಮಿಸಿ ನೆರಳಿರುವಕಡೆ ನೀರಿಗಿಳಿದು ಸ್ನಾನವನ್ನು ಮಾಡಿ ಮಾಧ್ಯಾಹ್ನಿಕಾದಿ ನಿತ್ಯಕರ್ಮಗಳನ್ನು ನೆರವೇರಿಸಿ ಮಳಲಿನಲ್ಲಿ ಲಿಂಗವನ್ನು ಮಾಡಿಟ್ಟು ಪೂಜಿಸುತ್ತಾ ಶಿವ ಸಹಸ್ರನಾಮಗಳನ್ನು ಹೇಳುತ್ತಾ ಬಿಲ್ವಾರ್ಚನೆಯನ್ನು ಮಾಡುತ್ತಿರಲು ಆಗ ಆ ನದಿಯನೀರು ಉಕ್ಕಿಬಂದು ತನ್ನ ಪೂಜಾಸಾಮಗ್ರಿಗಳೊಡನೆ ಲಿಂಗವನ್ನೂ ತನ್ನನ್ನೂ ಒಂದು ನೂರು ಯೋಜನ ದೂರಕ್ಕೆ ಕೊಚ್ಚಿಕೊಂಡು ಹೋಗಲು ರಾವಣನು ದಿಗ್ಭ್ರಮೆಹಿಡಿದು ಕಂಗೆಟ್ಟು ಸುಧಾರಿಸಿಕೊಂಡು ಮೇಲಕ್ಕೆ ಬಂದು ಈ ನದಿಯಲ್ಲಿ ಇದ್ದಕ್ಕಿದ್ದಹಾಗೆ ಇಷ್ಟು ನೀರು ಉಕ್ಕಿಬರುವದಕ್ಕೇನು ಕಾರಣ ಎಂದು ಚಿಂತಿಸಿ ಮೊದಲಿದ್ದ ಸ್ಥಳಕ್ಕೆ ಬಂದು ವ್ಯಾಜ್ಯಾಂತರದಿಂದ ನಸುನಗುತ್ತಿರುವ ಸೇನಾಜನರನ್ನು ಕಂಡು ಲಜ್ಜಿತನಾಗಿ ತನ್ನ ಭಾವವನ್ನು ತೋರಿಸದೆ ಪರಿಚಾರಕರನ್ನು ಕರೆದು ನದಿಯಲ್ಲಿ ನೀರು ಉಕ್ಕಿಬರುವದಕ್ಕೆ ಕಾರಣವೇನು ವಿಚಾರಿಸಿಕೊಂಡು ಬನ್ನಿ ಎಂದು ಹೇಳಿದನು. ಅವರು ಮಹಾಪ್ರಸಾದವೆಂದು ಆ ನದೀತೀರದಲ್ಲಿಯೇ ಕೆಲವುದೂರ ಹೋಗಿ ಅಲ್ಲಿ ಆಗತಾನೇ ಜಲಕ್ರೀಡೆಯಾಡಿ ಮರಳೊಡ್ಡಿನಲ್ಲಿ ಕುಳಿತುಕೊಂಡಿರುವ ಸ್ತ್ರೀಯರನ್ನು ನೋಡಿ ಕಳಂಕಿಯಾದ ಚಂದ್ರನ ಸಹವಾಸದಿಂದ ತಮಗುಂಟಾಗಿರುವ ದೋಷವನ್ನು ಹೋಗಲಾಡಿಸಿಕೊಳ್ಳಲು ಮೂರ್ತೀಭವಿಸಿ ರೇವಾತೀರದಲ್ಲಿ ಮೇಯುವದಕ್ಕೆ ಬಂದಿರುವ ನಕ್ಷತ್ರಗಳೋ ಅಲ್ಲದಿದ್ದರೆ ಕಾಲಮೇಘವು ತನ್ನಲ್ಲಿರುವ ಮಾಲಿ

ನ್ಯವನ್ನು ಕಳೆದುಕೊಳ್ಳಲು ಈ ರಾಯನನ್ನು ಬೇಡಿಕೊಳ್ಳುವದಕ್ಕೆ ಕಳುಹಿಸಿರುವ ಮಿಂಚುಗಳೋ ಹಾಗೂ ಇಲ್ಲವಾದರೆ ನದಿಯ ಮಾರ್ಗದಿಂದ ಮೇಲಕ್ಕೆ ಬಂದಿರುವ ಆದಿಶೇಷನ ಫಣಾಮಣಿಗಳ ಪ್ರಭೆಗಳೋ, ಅಥವಾ ಕಾರ್ತವೀರ್ಯಾರ್ಜುನನನ್ನು ಸೇವಿಸಲೋಸುಗ ದೇವೇಂದ್ರನಿಂದ ಕಳುಹಿಸಲ್ಪಟ್ಟ ಅಪ್ಸರಸ್ತ್ರೀಯರ ಸಮೂಹವೋ ಎಂಬಂತೆ ಭ್ರಾಂತಿಯನ್ನು ಉಂಟುಮಾಡುತ್ತಿರುವ ರಮಣಿಯರಿಂದೊಡಗೂಡಿ ವಸ್ತ್ರಾಭರಣಾದಿಗಳನ್ನೂ ಗಂಧಪುಷ್ಪಾದಿಗಳನ್ನೂ ಧರಿಸುತ್ತಲಿರುವ ಸಹಸ್ರಬಾಹುಸಹಿತನಾದ ಆ ಮಹಾಪುರುಷನನ್ನು ಕಂಡು ತಾನು ಸಹಿಸಲಶಕ್ಯನಾದ ಭೂಭಾರವನ್ನು ಈತನೇ ಕಡಿಮೆಮಾಡಿ ನಮಗೆ ಸುಖವನ್ನುಂಟುಮಾಡುವವನಾಗಿದ್ದಂತೆ ಈ ಮಹಾನುಭಾವನನ್ನು ನೋಡಬೇಕೆಂದು ಬಂದಿರುವ ಆದಿಶೇಷನ ಸಹಸ್ರಫಣಗಳೋ ಅಲ್ಲದೊಡೆ ಈತನನ್ನು ಆಶ್ರಯಿಸಿ ಅತ್ಯಂತ ಪ್ರತಾಪವನ್ನು ಪಡೆಯಬೇಕೆಂದು ಬಂದಿರುವ ಸೂರ್ಯಕಿರಣಗಳೋ ಎಂಬಂತೆ ಸಾವಿರ ತೋಳುಗಳುಳ್ಳ ಆ ಮಹಾಪುರುಷನನ್ನು ನೋಡಿ ಅನನ ತೇಜೋವಿಶೇಷದಿಂದ ಕಣ್ಣುಗಳನ್ನು ಮುಚ್ಚಿಕೊಂಡು ಒಂದು ಮುಹೂರ್ತ ಸ್ತಬ್ಧನಾಗಿ ನಿಂತಿದ್ದು ಅಲ್ಲಿಂದ ಮೆಲ್ಲಗೆ ಹೊರಟು ರಾವಣನ ಬಳಿಗೆ ಬಂದು ಸ್ವಾಮಿಾ ಕಾರ್ತವೀರ್ಯಾರ್ಜುನನು ತನ್ನ ಮಡದಿಯರೊಡನೆ ಜಲಕ್ರೀಡೆಯಾಡುತ್ತಾ ಇದ್ದು ಮುಳುಗಿ ನೀರಾಟವಾಡಲೆಣಿಸಿ ನೀರು ಸಾಲದ್ದರಿಂದ ತನ್ನ ಐನೂರು ತೋಳುಗಳನ್ನು ಪ್ರವಾಹಕ್ಕೆ ಅಡ್ಡವಾಗಿಟ್ಟು ಮಿಕ್ಕ ಐನೂರು ಕೈಗಳಿಂದ ವಿನೋದವಾಗಿ ಜಲಕ್ರೀಡೆಯನ್ನಾಡುತ್ತಾ ಇದ್ದು ಥಟ್ಟನೆ ಮೇಲಕ್ಕೆ ಬಂದದ್ದರಿಂದ ನೀನು ಒಂದೇಸಲ ನುಗ್ಗಿ ಉಕ್ಕಿತೆಂದು ಹೇಳಿದರು.

## ದಶಕಂಠನು ಕಾರ್ತವೀರ್ಯಾರ್ಜುನನಮೇಲೆ ಯುದ್ಧಕ್ಕೆ ಹೊರಟುದು.

ರಾವಣಾಸುರನು ಆ ಮಾತುಗಳನ್ನು ಕೇಳಿ ರೋಷಾತಿಶಯದಿಂದ ಕಣ್ಣುಗಳಿಂದ ಕಿಡಿಗಳನ್ನು ಉದರಿಸುತ್ತಾ ಕತ್ತಿಯನ್ನು ಝಳಪಿಸಿ ಗದೆಯನ್ನು ತಿರುಗಿಸುತ್ತಾ ತನ್ನ ಸಂಗಡ ಬಂದಿದ್ದ ಹಸ್ತ್ಯಶ್ವ ರಥಪದಾತಿಗಳೆಂಬ ಚತುರಂಗಬಲ ಸಮೇತನಾಗಿ ಮಾಹಿಷ್ಮತೀ ನಗರವನ್ನು ಕುರಿತು ಹೊರಟು ಕೋಟೆಯನ್ನು ಮುತ್ತಿಗೆಹಾಕಿ, ಕಾಳಗಕ್ಕೆ ಪ್ರಾರಂಭಿಸಿ ನಾಗರೀಕರನ್ನು ನಾನಾಬಗೆಯಾಗಿ ಪೀಡಿಸುತ್ತಿರಲು ಕಾರ್ತವೀರ್ಯಾರ್ಜುನನ ಮಂತ್ರಿಗಳಲ್ಲಿ ಕೆಲವರು ಸೈನ್ಯ ಸನ್ನಾಹದೊಡನೆ ಬಂದಿರುವ ಲಂಕಾಧಿಪತಿಯಾದ ರಾವಣಾಸುರನನ್ನು ನೋಡಿ ನೀನು ಜಗದೇಕವೀರನಾಗಿದ್ದು ನಮ್ಮ ದೊರೆಯಾದ ಕಾರ್ತವೀರ್ಯಾರ್ಜುನನು ನಾರಿಯರೊಡನೆ ನೀರಾಟಕ್ಕೆ ಹೋಗಿರುವ ನದಿಗೆ ಹೋಗಿ ಯುದ್ಧಮಾಡದೇ ಶಂಕರನನ್ನು ಪೂಜಿಸುತ್ತಾ ಇದ್ದವನು ನಮ್ಮ ರಾಜನು ನೀರಾಟಕ್ಕೆ ಸಾಲದೆಂದು ಐನೂರು ಹಸ್ತಗಳಿಂದ ತಡೆದ ನೀರನ್ನು ಬಿಟ್ಟಾಗಲೇ ನೂರುಯೋಜನ ಹೊಡೆದುಕೊಂಡು ಹೋದೆಯಲ್ಲ! ಈಗ ನಮ್ಮ ದೊರೆಯನ್ನು ಜಯಿಸಬೇಕೆಂದು ನಮ್ಮೊಡನೆ ನಿಂತು ಯುದ್ಧಮಾಡುವೆಯಾ? ಎಂದು ಧನುರ್ಬಾಣಗಳಿಂದಲೂ ನಾನಾ ವಿಧವಾದ ಆಯುಧಗಳಿಂದಲೂ ರಾಕ್ಷಸರಾಜನನ್ನು ನೋಯಿಸಿದರು. ಕೆಲವರು ಹೋಗಿ ರಾವಣನು ಮಾಹಿಷ್ಮತಿಯನ್ನು ಮುತ್ತಿಗೆಹಾಕಿ ಮಂತ್ರಿಗಳೊಡನೆ ಯುದ್ಧಮಾಡುತ್ತಿದ್ದಾನೆಂದು ಒಡೆಯನಾದ ಕಾರ್ತವೀರ್ಯಾರ್ಜುನನಿಗೆ ತಿಳಿಸಲು ಆ ಮಹಾರಾಜನು, ಆ ಮಾತುಗಳನ್ನು ಕೇಳಿ ನನ್ನೊಡನೆ ಯುದ್ಧಮಾಡಿ ಜಯಿಸಲಿಕ್ಕೆ ಬಂದನೊ ಆಗಬಹುದು, ಒಳ್ಳೆಯದು ಹತ್ತುತಲೆಯ ಹುಳುವನ್ನು ಈಗಲೆ ಹಿಡಿದುತರುವೆನು ಎಂದು ಹೇಳಿ ಸ್ತ್ರೀಯರನ್ನೂ ಅಂತಃಪುರಕ್ಕೆ ಕಳುಹಿಸಿ ನಾನು ಐನೂರು ಬಾಹುಪ್ರಮಾಣವಾದ ಒಂದು ಮಹಾಗದೆಯನ್ನು ತೆಗೆದುಕೊಂಡು ಬಂದು ನಿಂತನು. ಆಗ ಲಂಕಾಧಿಪನಾದ ರಾವಣನು ಮಾಹಿಷ್ಮತೀಪುರದೊಡೆಯನಾದ ಕಾರ್ತವೀರ್ಯನನ್ನು ಕುರಿತು ಎಲೈ ಕಾರ್ತವೀರ್ಯಾರ್ಜುನನೇ ನೀನು ರಾತ್ರಿಯಾಗಲು ಸ್ತ್ರೀಯರೊಡನೆ ವಿಹರಿಸುವ ಹಾಗೆ ನನ್ನೊಡನೆ ಯುದ್ಧ

ಮಾಡುವದು ಸುಲಭವೆಂದು ತಿಳಿದುಕೊಂಡೆಯಾ ಇನ್ನು ನಿನಗಿರುವ ಆಯುಧಗಳನ್ನೆಲ್ಲಾ ತೆಗೆದುಕೊಂಡು ಬಾ ಎಂದು ಕೇಳಲು, ಕಾರ್ತವೀರ್ಯಾರ್ಜುನನು ನಕ್ಕು ಎಲೈ—ರಾಕ್ಷಸಾಧಮನೇ ನೀನು ಧರ್ಮಾತ್ಮರಾದ ದಿಕ್ಪಾಲಕರನ್ನೂ ಅಣ್ಣನಾದ ಕುಬೇರನನ್ನೂ ಜಯಿಸಿದೆನೆಂಬ ಗರ್ವದಿಂದ ಮನಸ್ಸು ಬಂದಂತೆ ಜೊಗಳುತ್ತಿರುವೆ ಸಾಕು ಸಮುದ್ರನೀರು ನಿನ್ನ ಪರಾಕ್ರಮವನ್ನು ಯಾರೂ ಅರಿಯರೋ ನಾನು ತಡೆದು ಬಿಟ್ಟ ನೀರಿಗೆ ನೂರುಯೋಜನದ ದೂರ ಕೊಚ್ಚಿಕೊಂಡು ಹೋದಾಗಲೆ ನಿನ್ನ ಪರಾಕ್ರಮವು ವ್ಯಕ್ತವಾಯಿತು ನಿನ್ನ ತಾಯಿಗೆ ನಿಷ್ಕಾರಣವಾಗಿ ಪುತ್ರಶೋಕವನ್ನುಂಟುಮಾಡದೆ ಸುಮ್ಮನಾಗಿ ಮನೆಗೆ ಹೋಗಿ ಮುದದಿಂದ ಬದುಕಿಕೊ ಕೆಟ್ಟುಹೋಗಬೇಡ ಬೇಗ ಹೋಗಿ ಮನೆಯನ್ನು ಸೇರಿಕೋ ಎನಲು, ರಾವಣನು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ತುಟಿಗಳನ್ನು ಕಚ್ಚುತ್ತಾ ಹಲ್ಲುಗಳನ್ನು ಕಡಿದು ಎಲವೋ ನರಾಧಮನೇ ನಿನಗೆ ಸಾವಿರ ಭುಜಗಳುಂಟೆಂಬ ಗರ್ವದಿಂದ ಹೀಗೆ ದುರಹಂಕಾರದ ಮಾತುಗಳನ್ನು ಆಡುತ್ತೀಯೆ ಪರಾಕ್ರಮಶಾಲಿಯಾದರೆ ಯುದ್ಧಮಾಡಿ ಶಕ್ತಿಯನ್ನು ತೋರಿಸು ಬರೀ ಮಾತುಗಳಿಂದೇನು ಪ್ರಯೋಜನ ನಿನ್ನ ಸಾವಿರ ಭುಜಗಳ ಬಲವೆಲ್ಲ ನನ್ನ ಒಂದು ಭುಜಬಲಕ್ಕೆ ಈಡಾಗಲಾರದು ಎಂದು ನುಡಿದನು. ಅದಕ್ಕೆ ಅರ್ಜುನನು ಎಲವೋ ರಾಕ್ಷಸಾಧಮನೇ ನಿನ್ನ ಇಪ್ಪತ್ತು ತೋಳುಗಳನ್ನೂ ನನ್ನ ಒಬ್ಬ ಭಟನೇ ಛೇದಿಸುವನು ಕೀಟವಾದ ನಿನ್ನ ಪರಾಕ್ರಮವೆಷ್ಟು ನೀನೆಷ್ಟು ಎಂದು ಹೇಳಿದನು. ಅದಕ್ಕೆ ರಾವಣಾಸುರನು ಅತ್ಯಂತ ಕೋಪವನ್ನು ತಾಳಿ ಕಣ್ಣುಗಳಿಂದ ಕಿಡಿಗಳನ್ನು ಉದುರಿಸುತ್ತಾ ತನ್ನ ಇಪ್ಪತ್ತು ಕೈಗಳಲ್ಲಿ ಹಿಡಿದಿರುವ ಕೆಲವು ಆಯುಧಗಳನ್ನೂ ಒಂದೇ ಸಲ ಕಾರ್ತವೀರ್ಯಾರ್ಜುನನ ಮೇಲೆ ಪ್ರಯೋಗಿಸಿ ಹೊಡೆದನು. ಆಗ ಕಾರ್ತವೀರ್ಯಾರ್ಜುನನು ರಾವಣಾಸುರನು ಪ್ರಯೋಗಿಸಿದ ಆಯುಧಗಳೆಲ್ಲ ತನ್ನ ಮೇಲೆ ಬೀಳುವದನ್ನು ಕಂಡು ನಸುನಗುತ್ತಾ ರಾವಣಾಸುರನು ನನ್ನನ್ನು ಪುಷ್ಪಗಳಿಂದ ಪೂಜಿಸುವಂತಿದೆ ಎಂದು ರಾವಣನನ್ನು ಅಪಹಾಸ್ಯಮಾಡತೊಡಗಿದನು. ಆಗ ರಾವಣಾಸುರನು ತನ್ನನ್ನು ಕಾರ್ತವೀರ್ಯಾರ್ಜುನನು ಪರಿಹಾಸ್ಯ ಮಾಡುತ್ತಿರುವದನ್ನು ನೋಡಿ ಮಹಾ ಕೋಪವನ್ನು ತಾಳಿ ತನ್ನ ನೇತ್ರಜ್ವಾಲೆಗಳಿಂದಲೆ ಕಾರ್ತವೀರ್ಯಾರ್ಜುನನನ್ನು ಸುಡುವಂತೆ ನೋಡುತ್ತಾ ಪ್ರಹಸ್ತಾದಿ ಮಂತ್ರಿಗಳನ್ನೂ ಹಸ್ತಿ ಅಶ್ವ ರಥ ಪದಾತಿಗಳೆಂಬ ತನ್ನ ಚತುರಂಗಸೈನ್ಯವನ್ನೂ ಸಜ್ಜುಮಾಡಿಕೊಂಡು ತಾನು ಬಹುಕಾಲ ತಪಸ್ಸು ಮಾಡಿ ಸಂಪಾದಿಸಿಕೊಂಡಿದ್ದ ದಿವ್ಯಾಸ್ತ್ರಗಳನ್ನೆಲ್ಲಾ ಕಾರ್ತವೀರ್ಯಾರ್ಜುನನ ಮೇಲೆ ಪ್ರಯೋಗಿಸಿ ಅವನನ್ನು ಪೀಡಿಸಿದನು. ಆಗ ಕಾರ್ತವೀರ್ಯಾರ್ಜುನನು ಒಂದು ಕೈಯಿಂದ ಐನೂರು ಬಾಹು ಪ್ರಮಾಣವುಳ್ಳ ಗದೆಯನ್ನು ತೆಗೆದುಕೊಂಡು ಗಿರಗಿರನೆ ತಿರುಗಿಸಿದನು. ಆಗ ಆ ಗದೆಯ ವೇಗದಿಂದ ಹುಟ್ಟಿದ ಗಾಳಿಯಿಂದಲೇ ಕೆಲವರು ರಾಕ್ಷಸರು ತೂರಿಕೊಂಡು ಹೋಗಿ ಸಮುದ್ರದಲ್ಲಿ ಬಿದ್ದು ಮುಳುಗಿದರು. ಆ ಗದಾವೇಗದಿಂದುಂಟಾದ ಗಾಳಿಯ ಹೊಡೆತದಿಂದ ಸೆಳೆಯಲ್ಪಟ್ಟ ಪೇರ್ಮರಗಳಿಂದಲೂ ಬೆಟ್ಟಗಳಿಂದಲೂ ಹೊಡೆಯಲ್ಪಟ್ಟು ಕೆಲವು ಮಂದಿ ರಾಕ್ಷಸರು ಪ್ರಾಣವನ್ನು ನೀಗಿದರು ಕೆಲವರು ನೆಲದಲ್ಲಿ ಬಿದ್ದು ಹೊರಳಿ ಸತ್ತುಹೋದರು. ದಿಕ್ಕುಗಳೆಲ್ಲ ಭ್ರಮಣಗೊಂಡು ಆಕಾಶದಲ್ಲಿ ಗುಂಪಾಗಿ ಕವಿದಿದ್ದ ಮೇಘಗಳು ಚದರಿಹೋದವು, ಗಗನದಲ್ಲಿ ಸಂಚರಿಸುತ್ತಿದ್ದ ಖೇಚರ ವಿಮಾನಗಳು ಗಾಳಿಯ ಹೊಡೆತದಿಂದ ಕೊಚ್ಚಿಹೋಗಿ ಒಂದಕ್ಕೊಂದು ತಗುಲಿ ಪುಡಿಯಾಗಿ ಭೂಮಿಗೆ ಬೀಳುತ್ತಿರಲು ಖೇಚರರೆಲ್ಲ ದಿಕ್ಕುಪಾಲಾಗಿ ಓಡಿಹೋಗುತ್ತಿದ್ದರು ಕಾರ್ತವೀರ್ಯ ರಾವಣರ ಯುದ್ಧವನ್ನು ನೋಡುವದಕ್ಕೆ ಬಂದಿದ್ದ ದೇವತೆಗಳ ವಿಮಾನಗಳೆಲ್ಲ ವಾಯುಮಂಡಲದಲ್ಲಿ ಸುತ್ತಿ ಎತ್ತಲೂ ಹೋಗುವದನ್ನೂ ಯತ್ನಪಡದೆ ಸಿಕ್ಕಿಕೊಂಡು ವಿಮಾನಗಳಲ್ಲಿ ಕುಳಿತುಕೊಂಡಿದ್ದ ದೇವತೆಗಳು ಇನ್ನೇನು ಅನರ್ಥವಾದೀತೋ ಎಂದು ಭಯಪಡುತ್ತಿದ್ದರು ಇಂಥ

ಭಯಂಕರವಾದ ಗದೆಯಿಂದ ರಾವಣನನ್ನು ಬಲವಾಗಿ ಹೊಡೆದರೆ ಸಾಯುವನೆಂದು ಮೆಲ್ಲಗೆ ಹೊಡೆಯಲು ಆ ಪೆಟ್ಟು ರಾವಣಾಸುರನ ವಕ್ಷಸ್ಥಳಕ್ಕೆ ಬಿದ್ದದ್ದರಿಂದ ರಾವಣನು ತಲೆತಿರಿಗಿ ಕೆಳಗೆಬಿದ್ದು ಮೂರ್ಛಿತನಾದನು ಬ್ರಹ್ಮನ ವರಬಲದಿಂದಲೂ ಕಾರ್ತವೀರ್ಯಾರ್ಜುನನು ಗಟ್ಟಿಯಾಗಿ ಹೊಡೆದರೆ ಎಲ್ಲಿ ಸಾಯುವನೋ ಎಂದು ದಯೆಯುಳ್ಳವನಾಗಿ ಮೆಲ್ಲಗೆ ಹೊಡೆದಕಾರಣ ರಾವಣಾಸುರನು ಸಾಯದೇ ಉಳಿದನು. ಆಗ ಪ್ರಹಸ್ತಾದಿ ಮಂತ್ರಿಗಳೆಲ್ಲರೂ ಓಡಿಬಂದು ರಾವಣಾಸುರನಿಗೆ ಶೈತ್ಯೋಪಚಾರ ಮಾಡುತ್ತಿರಲು, ಬಹಳ ಹೊತ್ತಿನಮೇಲೆ ಚೇತರಿಸಿಕೊಂಡು ಮರಳಿ ಯುದ್ಧಸನ್ನದ್ಧನಾಗಿ ಕೋಪವನ್ನು ತಾಳಿ ಕಾರ್ತವೀರ್ಯಾರ್ಜುನನಮೇಲೆ ಬೀಳಲು ಅವನನ್ನು ನೋಡಿ ಬಡಬಾಗ್ನಿಯನ್ನುಗುಳುವನೋ ಅಲ್ಲವೇ ಕಾಡ್ಗಿಚ್ಚನ್ನು ಎರಚುವನೋ ಎಂಬಂತೆ ಕಣ್ಣುಗಳಿಂದ ಕಿಡಿಗಳನ್ನು ಉದುರಿಸುತ್ತಾ ಜ್ವಾಲೆಗಳಿಂದ ಕೂಡಿ ಧಗಧಗನೆ ಉರಿಯುತ್ತಿರುವ ಅಷ್ಟಘಂಟಾಶಕ್ತಿಯೆಂಬ ಮಹಾಭಯಂಕರವಾದ ಆಯುಧವನ್ನು ತೆಗೆದುಕೊಂಡು ಎಲವೋ ಅರ್ಜುನನೇ ನೀನೇ ಮಹಾಪರಾಕ್ರಮಶಾಲಿಯೆಂದು ಗರ್ವಪಡುತ್ತಿದ್ದೀಯೆ ನೀನು ಶಕ್ತನಾದರೇ ಈ ಶಕ್ತಿಯ ವೇಗವನ್ನು ತಡೆದುಕೋ ನೋಡೋಣ ಎಂದು ಹೇಳಿ ಅರ್ಜುನನನ್ನೂ ಆ ಶಕ್ತಿಯಿಂದ ಅಪ್ಪಳಿಸಿದನು. ಅರ್ಜುನನು ಅದನ್ನು ಲಕ್ಷ್ಯಮಾಡದೆ ತನ್ನ ಗದೆಯಿಂದ ಆ ಶಕ್ತಿಯನ್ನು ಹೊಡೆದು ಚೂರ್ಣಮಾಡಿದನು ತರುವಾಯ ರಾವಣನು ತಾನೂ ಒಂದು ಬಲವಾದ ಗದೆಯನ್ನು ತೆಗೆದುಕೊಂಡು ಕಾರ್ತವೀರ್ಯಾರ್ಜುನನ ಮೇಲೆ ಪ್ರಯೋಗಿಸಿದನು. ಹೀಗೆ ಗದೆಗಳಿಂದ ಹೊಡೆಯುತ್ತಾ ಹೊಡೆದ ಪೆಟ್ಟನ್ನು ತಪ್ಪಿಸಿಕೊಂಡು ಪುನಃ ಒಬ್ಬರನ್ನೊಬ್ಬರು ಗದೆಯಿಂದಪ್ಪಳಿಸುತ್ತಾ ವಿನೋದಕ್ಕಾಗಿ ಮದ್ದಾನೆಗಳು ಒಂದರೊಡನೊಂದು ಹೆಣಗಾಡುವಂತೆ ಹೊಡೆದಾಡುತ್ತ ಒಬ್ಬರನ್ನೊಬ್ಬರು ಗದೆಯಿಂದ ಹಾರಿಸಿ ಬಡಿಯುತ್ತ ಹೊಡೆದ ಪೆಟ್ಟುಗಳನ್ನು ತಪ್ಪಿಸಿಕೊಳ್ಳುತ್ತಾ ಬಹುಕಾಲ ಇಬ್ಬರು ಹೊಡೆದಾಡುತ್ತಿದ್ದು ಕಾರ್ತವೀರ್ಯಾರ್ಜುನನು ರಾವಣಾಸುರನನ್ನು ಗದೆಯಿಂದ ಬಲವಾಗಿ ಹೊಡೆಯಲು ನಡುಮುರಿದು ಕೆಳಗೆ ಬಿದ್ದನು ಮದದಾನೆಯು ಪದ್ಮಾಕರವನ್ನು ಕವಡಿ ನಾಶಮಾಡುವಂತೆ ಕಾರ್ತವೀರ್ಯಾರ್ಜುನನು ರಾವಣನ ಸೈನ್ಯಕ್ಕೆ ನುಗ್ಗಿ ಸೈನಿಕರನ್ನು ಮಂತ್ರಿಗಳನ್ನು ಬಡಿದು ನಾಶಮಾಡಿ ಕೆಲವರನ್ನು ಓಡಿಸಿ ರಾವಣನೆಡೆಗೆ ಬಂದು ಚೇತರಿಸಿಕೊಂಡು ಮತ್ತೆ ಯುದ್ಧಕ್ಕೆ ಸಿದ್ಧವಾದ ರಾವಣನನ್ನು ಹಿಡಿದುಕೊಂಡು ಮಾಹಿಷ್ಮತಿಗೆ ಹೋಗಿ ಮಂತ್ರಿಗೆ ಹೇಳಿ ರಾವಣನಿಗೆ ಚಿನ್ನದ ಸಂಕೋಲೆಗಳ್ನು ಹಾಕಿಸಿ ಸಾವಿರವರ್ಷಕಾಲ ಬಂಧನದಲ್ಲಿಡಬೇಕೆಂದು ಹೇಳಿ ಕಾರಾಗೃಹದಲ್ಲಿ ಇಡಿಸಿದನು.

## ಕಾರ್ತವೀರ್ಯನು ರಾವಣನನ್ನು ಪುಲಸ್ತ್ಯನಿಗೆ ಒಪ್ಪಿಸಿದುದು.

ಒಂದುದಿನ ರಾವಣನ ಅಜ್ಜನಾದ ಪುಲಸ್ತ್ಯನು ಈ ಸುದ್ದಿಯನ್ನು ಕೇಳಿ ಮಾಹಿಷ್ಮತೀ ನಗರಕ್ಕೆ ಬಂದು ಕಾರ್ತವೀರ್ಯಾರ್ಜುನನಿಂದ ಮಾಡಲ್ಪಟ್ಟ ಸತ್ಕಾರಂಗಳನ್ನು ಕೈಕೊಂಡು ಆತನನ್ನು ಅನೇಕವಿಧವಾಗಿ ಹೊಗಳಿ ನೀನು ಇಂದ್ರಾದಿ ದಿಕ್ಪಾಲಕರನ್ನು ಜಯಿಸಿದ ಈ ದುರುಳನನ್ನು ಜಯಿಸಿ ಇಂದ್ರಾದಿಗಳಿಗೂ ದೇವತೆಗಳಿಗೂ ಮುನಿಗಳಿಗೂ ಸಂತೋಷವನ್ನುಂಟುಮಾಡಿದೆ ಇವನಿಗೆ ಇಷ್ಟು ಮಾನಭಂಗ ಮಾಡಿದ್ದೆ ಸಾಕು ಇವನು ನನ್ನ ಮೊಮ್ಮಗನಾದಕಾರಣ ನನ್ನ ವಶಕ್ಕೆ ಕೊಡಬೇಕೆಂದು ಕೇಳಲು ಚಕ್ರವರ್ತಿಯು ಕಾರಾಗೃಹದಲ್ಲಿದ್ದ ಲಂಕಾಧಿಪನನ್ನು ಕರೆತರಿಸಿ ಸಂಕೋಲೆಯನ್ನು ತೆಗೆಯಿಸಿ ಮಂಗಳಸ್ನಾನಮಾಡಿಸಿ ವಸ್ತ್ರಾದ್ಯಾಭರಣಗಳನ್ನು ತೊಡಿಸಿ ಅಲಂಕಾರ ಮಾಡಿಸಿ ತನ್ನ ಮನೆಗೆ ಕರೆಯಿಸಿಕೊಂಡು, ಅವನನ್ನು ನೋಡಿ ಎಲೈ ರಾವಣನೇ ಶೂರರಾದವರಿಗೆ ಜಯಾಪಜಯುಗಳು ಸಮವಲ್ಲ ಒಂದುಕಡೆ ಜಯ ಮತ್ತೊಂದುಕಡೆ ಅಪಜಯ ಅದಕ್ಕೆ ವ್ಯಸನಪಡಬಾರದೆಂದು ಸಮಾಧಾನಗೊಳಿಸಿ ಪುಲಸ್ತ್ಯಮುನಿಯ ವಶಕ್ಕೆ

ಒಪ್ಪಿಸಿದನು, ಆಗ ಪುಲಸ್ತ್ಯಬ್ರಹ್ಮನು ಮೊಮ್ಮಗನನ್ನು ಲಂಕಾಪಟ್ಟಣಕ್ಕೆ ಕರೆತಂದು ಎಲೈ—ರಾವಣನೇ ಇನ್ನುಮೇಲಾದರೂ ಅಹಂಕಾರಪಡದೆ ತಗ್ಗಿನಡೆಯುತ್ತಾ ಒಳ್ಳೆಯವನೆನಿಸಿಕೊಂಡು ಸೌಖ್ಯವಾಗಿ ಬಾಳು ಎಂದು ಬುದ್ಧಿವಾದವನ್ನು ಹೇಳಿ ತನ್ನ ಆಶ್ರಮಕ್ಕೆ ಹೊರಟುಹೋದನು. ತರುವಾಯ ಮೂರ್ಖನಾದ ಲಂಕಾಧಿಪನು ಕಾರ್ತವೀರ್ಯಾರ್ಜುನನಿಂದ ತನಗಾದ ಅವಮಾನವನ್ನು ಮರೆತು ಕಿಷ್ಕಿಂದಾಧಿಪತಿಯಾದ ವಾಲಿಯನ್ನು ದ್ವಂದ್ವಯುದ್ಧದಲ್ಲಿ ಜಯಿಸಬೇಕೆಂದು ಯೋಚಿಸಿ ಒಂಟಿಗನಾಗಿ ಲಂಕೆಯಿಂದ ಹೊರಟು ಅರುಣೋದಯಕ್ಕೆ ಮುಂಚೆಯೇ ಕಿಷ್ಕಿಂಧೆಯನ್ನು ಸೇರಿ ವಾಲಿಯ ಮಂತ್ರಿಯಾದ ತಾರಕನೆಂಬ ಕಪಿಯನ್ನು ಕಂಡು ಎಲೈ—ಮಂಗನೇ ನಿನಗರಸಾದ ವಾಲಿಯೆಲ್ಲಿ ಎಂದು ಕೇಳಲು ಅವನು ನೀನು ಯಾರು ಏತಕ್ಕೆ ಬಂದೆ ಎಂದು ವಿಚಾರಿಸಲು ಅವನು ನಾನು ಲಂಕಾಧಿಪನಾದ ರಾವಣನು ಆತನೊಡನೆ ದ್ವಂದ್ವಯುದ್ಧ ಮಾಡಬೇಕೆಂದು ಬಂದಿರುವೆನು. ಈ ಮಾತನ್ನು ನಿನ್ನ ದೊರೆಗೆ ತಿಳಿಸು ಎನಲು ಅವನು ಬಹು ಪರಾಕ್ರಮಶಾಲಿಯಾದ ನಮ್ಮ ದೊರೆಯಾದ ವಾಲಿಯು ಪೂರ್ವಸಮುದ್ರಕ್ಕೆ ಸ್ನಾನಕ್ಕೆ ಹೋಗಿದ್ದಾನೆ ಒಂದು ಘಳಿಗೆ ಕಾದು ಇದ್ದರೆ ಬರುತ್ತಾನೆ ಎನಲು ರಾವಣನು ನಾನು ಅಲ್ಲಿಗೇ ಹೋಗುವೆನು ಎಂದು ಹೇಳಿ ಕಿಷ್ಕಿಂಧೆಯನ್ನು ಬಿಟ್ಟು ಪೂರ್ವಸಮುದ್ರತೀರಕ್ಕೆ ಬಂದು ವಾಲಿಯು ಸ್ನಾನಮಾಡಿ ಸಮುದ್ರ ದಡದಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡು ಜಪವಾಡುತ್ತಿರುವುದನ್ನು ಕಂಡು ತನ್ನ ಇಪ್ಪತ್ತು ತೋಳುಗಳಿಂದಲೂ ಇವನನ್ನು ಚೆನ್ನಾಗಿ ಬಿಗಿದು ಹಿಡಿದು ಜಯಿಸುವೆನೆಂದು ಮನಸ್ಸಿನಲ್ಲಿ ಅಂದುಕೊಂಡು ಹೆಜ್ಜೆಯಮೇಲೆ ಹೆಜ್ಜೆಯಿಡುತ್ತಾ ಹಿಂದುಗಡೆಯಿಂದಲೇ ಮೆಲ್ಲಗೆ ಬಂದು ಕಂಡುಕಾಣದಹಾಗೆ ಕಪಲದೆ ಕುಳಿತಿರುವ ವಾಲಿಯ ಎರಡು ಕಂಕಳ ಸಂದುಗಳಲ್ಲಿಯೂ ತನ್ನ ಇಪ್ಪತ್ತು ತೋಳುಗಳನ್ನೂ ನೀಡಿ ಹಿಡಿಯಲು ವಾಲಿಯು ತನ್ನ ಎರಡು ಕಂಕಳಲ್ಲಿಯೂ ರಾವಣನ ಇಪ್ಪತ್ತು ತೋಳುಗಳೂ ಚೆನ್ನಾಗಿ ಹೊಕ್ಕುಬಂದಿರುವುದನ್ನು ಕಂಡು ಹಾಗೆಯೇ ಘಟ್ಟಿಯಾಗಿ ಇರುಕಿಸಿ ಅಮುಕಿ ಬಾಲದಿಂ ಬಿಗಿದು ಗರುಡನು ಹಾವನ್ನು ಕಾಲಿನಿಂದ ಹಿಡಿದುಕೊಂಡು ನೆಗೆದು ಹಾರುವಂತೆ ಆಕಾಶಕ್ಕೆ ಹಾರಿ ಅಲ್ಲಿಂದ ದಕ್ಷಿಣಸಮುದ್ರಕ್ಕೆ ಹೋಗಿ ಹಿಂದೆ ಜೋಲಾಡುತ್ತಿರುವ ರಾವಣನನ್ನು ಅದರೊಳದ್ದಿ ಅಲ್ಲಿಂದ ಪಶ್ಚಿಮಸಮುದ್ರಕ್ಕೆ ಹೋಗಿ ಅಲ್ಲಿಯೂ ಅವನನ್ನು ಅದ್ದಿ ಅಲ್ಲಿಂದ ಉತ್ತರಸಮುದ್ರಕ್ಕೆ ಹೋಗಿ ಅದರಲ್ಲಿಯೂ ಅವನನ್ನು ಅದ್ದಿ ಅಲ್ಲಿಂದ ಕಿಷ್ಕಿಂಧಾನಗರದ ಉದ್ಯಾನವನದ ಪ್ರಾಂತ್ಯಕ್ಕೆ ಬಂದು ಮೇಲಕ್ಕೆ ಹೋಗಿ ನಿಂತು ತನ್ನ ವೇಗವನ್ನು ತಡೆಯಲಾರದೆ ಬಳಲಿರುವ ರಾವಣನನ್ನು ಕೆಳಕ್ಕೆ ಇಳಿಸಿ ತಾನು ಅಂತಃಪುರಕ್ಕೆ ಹೋಗಿ ಭೋಜನಾದಿಗಳನ್ನು ತೀರಿಸಿಕೊಂಡು ತನ್ನ ಸಕಲ ಪರಿವಾರದೊಡನೆ ದಶವದನನು ಬಿದ್ದಿರುವ ಸ್ಥಳಕ್ಕೆ ಬಂದನು. ಆಗ ದಶವದನನು ಆಕಾಶದಿಂದ ಕೆಳಗೆಬಿದ್ದ ಪೆಟ್ಟಿಗೆ ಮೂರ್ಛೆಹೋಗಿ ಬಹಳ ಹೊತ್ತಿನಮೇಲೆ ಸ್ವಲ್ಪ ಚೇತರಿಸಿಕೊಳ್ಳುತ್ತಾ ಇರಲು ವಾಲಿಯು ಏನೂ ಅರಿಯದವನಹಾಗೆ ಓಹೋ ಇದೇನಯ್ಯ ರಾಕ್ಷಸರಾಜ ನಿನ್ನ ಸಂಗಡ ಯಾರೂ ಇಲ್ಲದೆ ಒಬ್ಬನೇ ಈ ಉದ್ಯಾನವಲ್ಲಿ ಬಳಲಿ ಬಿದ್ದು ಇದ್ದೀಯೆ ಇಂಥಾ ಪರಿಭವವು ನಿನಗೆ ಯಾರಿಂದುಂಟಾಯಿತು ನೀನು ಮೂರುಲೋಕಗಳನ್ನು ಗೆದ್ದು ದಿಕ್ಪಾಲಕರನ್ನೂ ಜಯಿಸಿದ ಮಹಾಶೂರನು, ಜಗದೇಕ ವೀರನೆನಿಸಿಕೊಂಡಿದ್ದೀಯೆ, ನನಗೆ ಸ್ವಲ್ಪ ತಿಳಿಸಿದ್ದರೆ ನಾನು ನಿನಗೆ ಸಹಾಯವಾಗಿ ಬರುತ್ತಿದ್ದೆನಲ್ಲಾ ಎಂದು ಕುಚೇಷ್ಟೆಯ ಮಾತನ್ನಾಡಲು, ರಾವಣನು ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡು ಎಲೈ—ಮಹಾವೀರಾದಿವೀರನೇ ಲೋಕದಲ್ಲಿ ನಿನ್ನ ಪರಾಕ್ರಮಕ್ಕೂ, ಶಕ್ತಿಗೂ, ಸಾಹಸಕ್ಕೂ, ವೇಗಕ್ಕೂ ಸರಿಯಾದವರನ್ನು ಕಾಣೆ, ನಾನು ನಿನ್ನಿಂದ ಪರಾಜಿತನಾದೆನು, ನನ್ನನ್ನು ಮನ್ನಿಸಬೇಕೆಂದು ಬೇಡಿಕೊಳ್ಳಲು ವಾಲಿಯು ತನ್ನ ಅರಮನೆಗೆ ಆತನನ್ನು ಕರೆದುಕೊಂಡು

ಹೋಗಿ, ಅಗ್ನಿಸಾಕ್ಷಿಯಾಗಿ ಸ್ನೇಹವನ್ನು ಮಾಡಿಕೊಂಡು ಒಂದು ತಿಂಗಳವರೆಗೂ ತನ್ನ ಮನೆಯಲ್ಲಿಟ್ಟುಕೊಂಡಿದ್ದು ಬಹುಮಾನಮಾಡಿ ಲಂಕಾಪಟ್ಟಣಕ್ಕೆ ಹೋಗಿ ಸುಖವಾಗಿರೆಂದು ಹೇಳಲು ರಾವಣನು ಲಂಕೆಗೆ ಬಂದನು.

## ರಾವಣನು ಬಲಿಯನ್ನು ಜಯಿಸಬೇಕೆಂದು ರಸಾತಲಕ್ಕೆ ಹೋದುದು.

ತರುವಾಯ ದಶಕಂಠನು ಬಲಿಚಕ್ರವರ್ತಿಯನ್ನು ಜಯಿಸಬೇಕೆಂದು ರಸಾತಲವನ್ನು ಕುರಿತು ಹೋಗಿ ಅಲ್ಲಿ ಬಲಿಚಕ್ರವರ್ತಿಯ ಅರಮನೆಯನ್ನು ನೋಡಿ ಅದನ್ನು ನಿರ್ಮಿಸಿರುವ ಶಿಲ್ಪಿಯ ವಿದ್ಯಾಚಮತ್ಕಾರಕ್ಕೆ ಆಶ್ಚರ್ಯಪಟ್ಟು ಒಳಹೋಗಲು ದಾರಿಯನ್ನು ಕಾಣದೆ ಊರ ಹೊರಗೆ ನಿಂತು ತನ್ನ ಸೇನಾನಾಯಕನನ್ನು ಕುರಿತು ಈ ಅರಮನೆಯು ಯಾರದು ನೋಡಿಬಾ! ಎಂದು ಹೇಳಲು ಅವನು ಹೋಗಿ ಒಂದು ದ್ವಾರದೊಳಹೊಕ್ಕು ಅಲ್ಲಿ ಯಾರನ್ನೂ ಕಾಣದೆ ಮತ್ತೊಂದು ದ್ವಾರದೊಳಗೆ ಹೊಕ್ಕು ಅಲ್ಲಿಯೂ ಯಾರನ್ನೂ ಕಾಣದೆ ಹೀಗೆ ಹೋಗಿ ಹೋಗಿ ಆರುದ್ವಾರಗಳನ್ನು ನೋಡಿ ಕಡೆಗೆ ಏಳನೆಯ ದ್ವಾರದಲ್ಲಿ ಏಳುಮಂದಿ ದ್ವಾರಪಾಲಕರು ಕಾವಿರುವದನ್ನು ಕಂಡು ಅಲ್ಲಿ ದೇದೀಪ್ಯಮಾನವಾದ ಕಾಂತಿಯಿಂದಲೂ, ನವಮೇಘದಂತೆ ನೀಲಗಾತ್ರದಿಂದಲೂ, ಕಮಲನೇತ್ರದಿಂದಲೂ ಕೂಡಿ ಆಜಾನುಬಾಹುವಾಗಿ ದಿವ್ಯ ಪೀತಾಂಬರವನ್ನುಟ್ಟು, ದಿವ್ಯತೇಜಃಪುಂಜನಾದ ಮಹಾಪುರುಷನು ಕಾಣಿಸಲು ರಾಕ್ಷಸಮಂತ್ರಿ ಒಳಹೋಗುವಷ್ಟರಲ್ಲಿ ಅವನ ಅಟ್ಟಹಾಸವನ್ನು ನೋಡಿ ಮಂತ್ರಿಯು ಭಯಪಟ್ಟು ಹಿಂತಿರುಗಿ ಬಂದು ನಡೆದ ವೃತ್ತಾಂತವನ್ನು ರಾವಣನಿಗೆ ಹೇಳಿದನು ಆಗ ಆ ದಿವ್ಯಪುರುಷನನ್ನು ನೋಡಬೇಕೆಂದು ತಾನೇ ಹೊರಟು ಆರು ಬಾಗಿಲುಗಳನ್ನೂ ದಾಟಿಹೋಗಿ ಏಳನೆಯಬಾಗಿಲಲ್ಲಿ ಮಹಾಭಯಂಕರನಾದ ಪೀತಾಂಬರಧಾರಿಯನ್ನು ನೋಡಿ ಕಳವಳನಾಗಿ ಗಡಗಡನೆ ನಡುಗುತ್ತ ನಿಂತಿರಲು, ಆ ಮಹಾಪುರುಷನು ನೀನು ಯಾರು, ಎಲ್ಲಿಂದ ಬಂದೆ, ಏತಕ್ಕೆ ಬಂದೆ ಎಂದು ಕೇಳಿದನು, ಆದಕ್ಕೆ ರಾವಣನು ಭಯದಿಂದ ತುಟಿಗಳು ಒಣಗುತ್ತಿರಲು ನಾಲಿಗೆಯಿಂದ ತುಟಿಗಳನ್ನು ಸವರಿಕೊಳ್ಳುತ್ತಾ ಸ್ವಲ್ಪ ಧೈರ್ಯವನ್ನು ತಾಳಿ ನಾನು ಲಂಕಾಧಿನಾಥ ರಾವಣನು ಇಲ್ಲಿ ಬಲಿಚಕ್ರವರ್ತಿಯೊಡನೆ ಯುದ್ಧಮಾಡುವದಕ್ಕೆ ಬಂದೆನೆಂದನು ಅದಕ್ಕೆ ದ್ವಾರಪಾಲಕನು ಪಕ್ಕನೆ ನಕ್ಕು ಎಲವೋ ರಕ್ಕಸನೇ ನನ್ನನ್ನು ನೋಡಿದಮಾತ್ರದಿಂದಲೆ ನಡುಗುತ್ತಿದ್ದೀಯೋ ನೀನು ಆ ಮಹಾತ್ಮನೊಡನೆ ಯುದ್ಧಮಾಡುವದು ನಿಜವೇ? ನೀನಷ್ಟು ಪೌರುಷವಂತನಾದರೆ ನಿನ್ನನ್ನು ತಡೆಯುವದಿಲ್ಲ ಹೋಗು ಎಂದು ಹೇಳಿ ಬಿಟ್ಟುಬಿಟ್ಟನು, ರಾವಣನು ಒಳಹೊಕ್ಕು ಅರಮನೆಯ ಬಾಗಿಲಲ್ಲಿ ನಿಂತು ಭುಜಗಳನ್ನು ತಟ್ಟಿಕೊಂಡು ಅಟ್ಟಹಾಸವನ್ನು ಮಾಡಿ ಯುದ್ಧಕ್ಕೆ ಬರಹೇಳು, ಎನಲು ಬಲಿಯು ರಾವಣನನ್ನು ಹಿಡಿದು ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವನ ಯೋಗಕ್ಷೇಮವನ್ನು ವಿಚಾರಿಸಿ ನೀನು ಪುಲಸ್ತ್ಯವಂಶದಲ್ಲಿ ಹುಟ್ಟಿ ಇಂಥಾ ಕೆಟ್ಟಕೆಲಸ ಮಾಡಬಹುದೆ ಸಾಕ್ಷಾದ್ವಿಷ್ಣುವೇ ಇಲ್ಲಿರುವನು, ನಿನ್ನೊಡನೆ ಮಾತನಾಡಿದವನೇ ವಿಷ್ಣುವು ಆತನು ಸರ್ವಾಂತರ್ಯಾಮಿಯಾದ ಮಹಾಪುರುಷನೆಂದು ಹೇಳಿ ಉಪಚಾರಮಾಡಿ ಕಳುಹಲು. ರಾವಣನು ಅಲ್ಲಿಂದ ಹೊರಟು ವಿಷ್ಣುವನ್ನು ಜಯಿಸುವೆನೆಂದು ಏಳು ಬಾಗಿಲಲ್ಲಿ ನೋಡಲು ಅವನನ್ನು ಕಾಣದೆ ಅಲ್ಲಿಂದ ಹೊರಗೆ ಬಂದು ಬಲಿಚಕ್ರವರ್ತಿಯನ್ನು ಗೆದ್ದೆನೆಂದು ವಿಷ್ಣುವು ಓಡಿಹೋದನೆಂದು ಸಂತೋಷಿಸಿ ಮಂತ್ರಿಗಳೊಡನೆ ವಿಮಾನವನ್ನೇರಿ ಲಂಕೆಗೆ ಹೋಗಿ ತನ್ನ ಸ್ತ್ರೀಯರೊಡನೆ ಹೇಳಿಕೊಂಡು ವಿನೋದದಿಂದ ಸುಖವಾಗಿ ಸಂಭ್ರಮದೊಡನೆ ಲಂಕಾಪಟ್ಟಣವನ್ನು ಆಳುತ್ತಿದ್ದನು.

ಇಂತು ರಾಮಾಯಣ ಕಥಾಸಂಗ್ರಹದಲ್ಲಿ ರಾವಣನ ದಿಗ್ವಿಜಯ ಮುಗಿದುದು.



SHREE RASTU

SHREE RAMA CHANDRA ಶ್ರೀರಸ್ತು. PARABRAHMANE N.

ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ.

# RAMAYANA ರಾಮಾಯಣ ಕಥಾಸಂಗ್ರಹ. KATHASUNGRAHA

## ಬಾಲಕಾಂಡ ಪ್ರಾರಂಭ. KANDA PRARUMBHA

ಪೀಠಿಕೆ.

ಶ್ಲೋ॥ ಗುರ್ವರ್ಥಂ ತ್ಯಕ್ತರಾಜ್ಯೋವ್ಯಚರದನುವನಂ ಪದ್ಮಪದ್ಭ್ಯಾಂ ಪ್ರಿಯಾಯಾಃ ।
ಪಾಣಿಸ್ಪರ್ಶಕ್ಷಮಾಭ್ಯಾಂ ಸೃಜತಿಪತಿರುಜೋಯೋ ಹರೀಂದ್ರಾನುಜಾಭ್ಯಾಂ ॥
ವೈರೂಪ್ಯಾತ್ ಶೂರ್ಪನಖ್ಯಾಃ ಪ್ರಿಯವಿರಹರುಷಾ ರೋಪಿತಭ್ರೂವಿಜೃಂಭ ।
ತ್ರಸ್ತಾಬ್ಧಿರ್ಬದ್ಧಸೇತುಃ ಖಲುದಶವದನದಹಃ ಕೋಸಲೇಂದ್ರೋವತಾನ್ಮಾಮ್ ॥

ದ್ವಾಪರಯುಗದಲ್ಲಿ ಪಾಂಡುರಾಜನ ಪುತ್ರರಾದ ಪಾಂಡವರು ಕೌರವರ ಕಪಟದ್ಯೂತದಲ್ಲಿ ಸರ್ವಸಾಮ್ರಾಜ್ಯವನ್ನು ಸೋತು ಪತ್ನಿಯಿಂದೊಡಗೂಡಿ ದ್ವಾದಶವರ್ಷ ಅರಣ್ಯವಾಸವನ್ನು ಅನುಭವಿಸುವುದಕ್ಕಾಗಿ ಕಾಮ್ಯಕವನಕ್ಕೆ ಬಂದು ಮುನಿಗಳಿಂದೊಡಗೂಡಿ ಆನಂದದಿಂದ ಕಾಲಹರಣ ಮಾಡುತ್ತಿದ್ದರು. ಒಂದು ದಿನ ಶಿವಭಕ್ತಾಗ್ರೇಸರನಾಗಿ ತಪೋನಿಧಿಯಾಗಿ ಇರುವ ಮೃಕಂಡು ಮಹರ್ಷಿಯ ಪುತ್ರನಾದ ಮಾರ್ಕಂಡೇಯ ಮುನಿವರನು ಪರಿವಾರದೊಡನೆ ಸಂಚರಿಸುತ್ತ ಅನಾಯಾಸವಾಗಿ ಕಾಮ್ಯಕವನಕ್ಕೆ ಬಿಜಯಮಾಡಿದನು. ಹಾಗೆ ಬಂದ ಬ್ರಹ್ಮಋಷಿಯನ್ನು ಕಂಡು ಯುಧಿಷ್ಠಿರನು ಭಯಭಕ್ತಿಯಿಂದ ಸಾಷ್ಟಾಂಗವೆರಗಿ ಉಚಿತಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ, ಸ್ವಾಮಿ ತಾವು ಸಂಚರಿಸುವುದು ನಮ್ಮಂಥ ಪಾಮರರ ಉದ್ಧಾರಕ್ಕಲ್ಲದೇ ಬೇರೆ ಅಲ್ಲ. ನನ್ನ ಪೂರ್ವ ಸುಕೃತದಿಂದಲೇ ತಮ್ಮ ದರ್ಶನವಾಯಿತು ನಾನು ಇಂದಿಗೆ ಧನ್ಯನಾದೆನು, ಇಂದಿಗೆ ನನ್ನ ದುಃಖಾಗ್ನಿಯು ಶಾಂತವಾಯಿತು, ಚಿಂತಾಂಬುಧಿಯು ಬತ್ತಿತು ಎಂದು ಹಲವು ತರದಿಂದ ಸ್ತೋತ್ರಮಾಡಿ ಕುಶಲಪ್ರಶ್ನೆ ಮಾಡಿದ ಬಳಿಕ, ಧರ್ಮಜನು ಕೈಮುಗಿದು ಮಹಾಮುನಿಯೇ ನನ್ನಂಥ ನೀಚಾತ್ಮರನ್ನು ಎಲ್ಲಿಯೂ ಕಾಣೆ, ನನ್ನ ಸಲುವಾಗಿ ಭೀಮಾರ್ಜುನ ನಕುಲ ಸಹದೇವರು ವನವಾಸ ದುಃಖವನ್ನನುಭವಿಸಬೇಕಾಯಿತು. ಜನ್ಮಾರಭ್ಯ ಸೂರ್ಯಕಿರಣವನ್ನು ಕಣ್ಣಿಂದ ನೋಡದಿದ್ದ ಪಾಂಚಾಲಿಯು ಘನವಾದ ಬಿಸಲಲ್ಲಿ ಬಳಲಬೇಕಾಯಿತು ನನ್ನಂಥ ದುಃಖಿಗಳು ಯಾರಿರುವರೆಂದು ಬಿನ್ನೈಸಲು ಮುನಿವರ್ಯನು ಎಲೈ ಧರ್ಮನಂದನಾ ನಿನಗಿಂತಲೂ ಹೆಚ್ಚಿನ ದುಃಖವನ್ನು ಅನುಭವಿಸಿದ ಮಹನೀಯರು ಅನೇಕರಿರುವರು, ನೀನು ಇದಕ್ಕಾಗಿ ಚಿಂತಿಸುವುದು ಯುಕ್ತವಲ್ಲ ಹರಿಶ್ಚಂದ್ರ ಮಹಾರಾಯನು ಯಾವ ದುಃಖಾಂಬುಧಿಯನ್ನು ಈಜಿ ದಾಟಿದನು, ನಳಮಹೀಪಾಲನು ಪಡೆದ ಸಂಕಟವೆಂತಹದ್ದು ಇವೆಲ್ಲವನ್ನು ವಿಚಾರಿಸಿದರೆ ನಿನ್ನ ಸಂಕಟವು ಕಡಿಮೆ ಎನ್ನುವುದು ತಾನೇ ವ್ಯಕ್ತವಾಗುವುದು. ಅಯ್ಯಾ ಕರ್ಮವನ್ನು ಮೀರುವುದು ಬ್ರಹ್ಮಾದಿಗಳಿಗೂ ಅಸದಳವಾದ ಬಳಿಕ ಉಳಿದವರ ಪಾಡೇನು, ಬಂದುದನ್ನು ಅನುಭವಿಸಲೇಬೇಕು. ಸಾಕ್ಷಾತ್ ಷಡ್ಗುಣೈಶ್ವರ್ಯ ಪರಿಪೂರ್ಣನಾದ ನಾರಾಯಣನು ರಾಮಾವತಾರವನ್ನು ವಹಿಸಿ ಎಷ್ಟು ಕಷ್ಟಗಳನ್ನು ಅನುಭವಿಸಿದನು ಎಂಬುದು ನಿನಗೆ ವಿದಿತವಾಗಿಯೇ ಇದೆ ಎನಲು, ಧರ್ಮರಾಜನು ಎಲೈ ತಪೋಧನನೇ।

ನಾನು ಹರಿಶ್ಚಂದ್ರ ನಳ ಮೊದಲಾದವರ ಇತಿಹಾಸವನ್ನು ಕೇಳಿರುವೆನು ಆದರೆ ಶ್ರೀರಾಮ ಚಂದ್ರನ ಪರಮ ಪವಿತ್ರವಾದ ಚರಿತ್ರೆಯನ್ನು ಕೇಳಬೇಕೆಂಬ ಲವಲವಿಕೆಯು ನನಗೆ ಬಹಳ ವಾಗಿರುವುದು ದಯಮಾಡಿ ಕರುಣವಿಟ್ಟು ನನ್ನ ಬಯಕೆಯನ್ನು ಪೂರ್ತಿಮಾಡಬೇಕೆಂದು ಬೆಸಗೊಳ್ಳಲು ಮಾರ್ಕಂಡೇಯನು ರಾಮ ಕಥಾಮೃತವನ್ನು ಹೇಳತೊಡಗಿದನು.

## ಶ್ರೀ ರಾ ಮ ಕ ಥಾ ಮೃ ತ ಪ್ರಾ ರ ೦ ಭ .

ಕೇಳೈ ರಾಜನೇ— ಆದಿಕಾಲದಲ್ಲಿ ಮನುವು ಉತ್ಪತ್ತಿಯಾದನು. ಆತನಿಗೆ ಸೂರ್ಯ ಚಂದ್ರ ಎಂಬ ಮಕ್ಕಳು ಹುಟ್ಟಿದರು. ಆ ಸೂರ್ಯನ ವಂಶದವರಿಗೆ ಸೂರ್ಯವಂಶದ ರಾಜರೆಂತಲೂ, ಚಂದ್ರವಂಶದವರಿಗೆ ಚಂದ್ರವಂಶದ ಅರಸರೆಂತಲೂ ಪ್ರಸಿದ್ಧಿಯಾಯಿತು. ಮಾಂಧಾತ, ಇಕ್ಷ್ವಾಕು, ತ್ರಿಶಂಕು, ದಿಲೀಪ, ಸಗರ, ಭಗೀರಥ, ರಘು, ಅಜ ಮೊದಲಾದ ಅನೇಕ ಸಾರ್ವಭೌಮರಿಂದ ಅಲಂಕೃತವಾದ ಸೂರ್ಯವಂಶದಲ್ಲಿ ಕೆಲವು ಕಾಲದಮೇಲೆ ದಶರಥ ರಾಯನು ಹುಟ್ಟಿ ಅಖಂಡ ಸಾಮ್ರಾಜ್ಯವನ್ನಾಳುತ್ತಾ ಕೌಸಲ್ಯ, ಸುಮಿತ್ರ, ಕೈಕಯಿ ಎಂಬ ಮೂರುಮಂದಿ ಹೆಂಡತಿಯರನ್ನು ವಿವಾಹಮಾಡಿಕೊಂಡನು. ಅರವತ್ತುಸಾವಿರ ವರ್ಷಕಾಲ ಬಾಳಿದರೂ ಆತನಿಗೆ ಗಂಡುಮಕ್ಕಳಿಲ್ಲವೆ ವ್ಯಾಕುಲಕ್ಕೆ ಕಾರಣವಾಯಿತು. ರಾವಣಾಸುರನ ವೃತ್ತಾಂತವನ್ನು ಕೇಳು, ಅಖಿಲ ಲೋಕಕರ್ತನಾದ ಚತುರ್ಮುಖ ಬ್ರಹ್ಮನಿಗೆ ಪುಲಸ್ತ್ಯನೆಂಬ ತನೂಜನು ಹುಟ್ಟಿದನು. ಆತನಿಗೆ ವೈಶ್ರವಣನೆಂದು ಪ್ರಸಿದ್ಧನಾದ ಕುಬೇರನೆಂಬ ನಾಮಾಂ ತರವುಳ್ಳ ಮಗನು ಹುಟ್ಟಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ನಲಕೂಬರನೆಂಬ ಮಗನನ್ನು ಹೆತ್ತನು. ಲೋಕಪಾಲಕತ್ವವನ್ನು ಧನೇಶ್ವರತ್ವವನ್ನು ಲಂಕೆ ಎಂಬ ಪಟ್ಟಣವನ್ನು ಸಾಂಬ ಮೂರ್ತಿಯ ವರದಿಂದ ಪಡೆದು, ಮಹಾ ವಿಭೂತಿಯಿಂದ ಸಂಚರಿಸುತ್ತಿದ್ದನು. ಆ ಪುಲಸ್ತ್ಯನಿಗೆ ಎರಡನೇ ಮಗನಾದ ವಿಶ್ರವಸ್ಸು ಎಂಬಾತನು ಪುಷ್ಪೋತ್ಕಟಿ, ಪಾಕೆ, ಮಾಲಿನಿ ಎಂಬ ಮೂರು ಮಂದಿ ಸ್ತ್ರೀಯರುಗಳಿಗೆ ಪುತ್ರದಾನವನ್ನು ಅನುಗ್ರಹಿಸಿದನು. ಅವರಲ್ಲಿ ಪುಷ್ಪೋತ್ಕಟಿ ಎಂಬವಳಿಗೆ ರಾವಣ ಕುಂಭಕರ್ಣರು, ಮಾಲಿನಿಗೆ ವಿಭೀಷಣನು, ಪಾಕೆಗೆ ಖರಾಸುರನೂ ಶೂರ್ಪನಖಿ ಎಂಬ ಹೆಣ್ಣು ಮಗುವು ಸಹಾ ಉತ್ಪನ್ನರಾದರು ಈ ಮಕ್ಕಳಿಗೆ ತಂದೆಯು ಜಾತಕರ್ಮಾದಿ ಸಂಸ್ಕಾರ ಗಳನ್ನು ಮಾಡಿ ಬಹಳ ಪ್ರೀತಿಯಿಂದ ಸಂರಕ್ಷಣೆ ಮಾಡಿದನು ಇವರಲ್ಲಿ ರಾವಣ ಕುಂಭಕರ್ಣರು ಲೋಕಭಯಂಕರರಾಗಿ ಯಾಗಾದಿಗಳಿಗೆ ವಿರೋಧಮಾಡುತ್ತಾ ಋಷಿಗಳನ್ನು ಸಂಹರಿಸುತ್ತಾ ಪರದಾರಾಪಹರಣ ಪ್ರವೀಣರಾಗಿ ಇಂದ್ರಾದಿ ಬೃಂದಾರಕಸಂಘಕ್ಕೆ ಶತ್ರುಗಳಾಗಿ ಇರುತ್ತಿದ್ದರು. ವಿಭೀಷಣನು ಭಗವದ್ಭಕ್ತನಾಗಿ ನ್ಯಾಯ ಪ್ರವರ್ತನೆಯುಳ್ಳವನಾಗಿ ಪರದಾರ ಪರಸ್ವಾಪ ಹರಣಗಳಲ್ಲಿ ಭೀತನಾಗಿ ಮಹಾ ಧಾರ್ಮಿಕನಾಗಿ ಸಮರ್ಥನಾಗಿ ಇದ್ದನು. ಖರಾಸುರನು ಶೂರ್ಪನಖಿಯೂ ಕ್ರೂರಕರ್ಮಿಗಳಾಗಿ ಧರ್ಮಕರ್ಮ ದೂಷಿತರಾಗಿ ಋಷಿಗಳಿಗೆ ಕರ್ಮ ವಿಘಾತವನ್ನು ಮಾಡುತ್ತ ಇದ್ದರು. ಈ ನಾಲ್ವರು ಮಕ್ಕಳು ತಂದೆಯಿಂದ ಸಕಲ ವೇದ ವೇದಾಂಗಾದಿಗಳನ್ನಭ್ಯಸಿಸಿ ಗಂಧಮಾಧನ ಗಿರಿಯಲ್ಲಿ ಸುಖವಾಗಿ ವಾಸಮಾಡುತ್ತಿದ್ದು ಒಂದಾ ನೊಂದು ದಿನದಲ್ಲಿ ಆ ಸ್ಥಳಕ್ಕೆ ಬಂದ ಕುಬೇರನ ವೈಭವಗಳನ್ನು ನೋಡಿ ಮತ್ಸರಯುಕ್ತರಾಗಿ ಬ್ರಹ್ಮದೇವರನ್ನು ಕುರಿತು ಮಹಾಘೋರವಾದ ತಪಸ್ಸನ್ನು ಮಾಡತೊಡಗಿದರು. ಆ ತಪಸ್ಸಿನ ಕ್ರಮ ಹೇಗೆಂದರೇ ಗ್ರೀಷ್ಮಕಾಲದಲ್ಲಿ ಬಿಸಲಿನೊಳಗೆ ಪಂಚಾಗ್ನಿ ಮಧ್ಯದಲ್ಲಿಯೂ, ಹಿಮಕಾಲ ದಲ್ಲಿ ನೀರಿನಲ್ಲಿಯೂ ಏಕಪಾದದಲ್ಲಿ ನಿಂತು ಸೂರ್ಯನಮೇಲೆ ದೃಷ್ಟಿಯನ್ನಿಟ್ಟು ಕೆಲವುಕಾಲ ಜಲಾಹಾರ, ಕೆಲವುಕಾಲ ಪರ್ಣಾಹಾರ, ಕೆಲವುಕಾಲ ವಾತಾಹಾರದಿಂದ ಕೆಲವುಕಾಲ ಸಾಧಿಸಿ

ಜಿತೇಂದ್ರಿಯರಾಗಿ ಧೀರರಾಗಿ ಈಶ್ವರಾನುರಕ್ತ ಚಿತ್ತರಾಗಿ ಇರುತ್ತಿದ್ದರು. ರಾವಣಾಸುರನು ಸಾವಿರವರ್ಷಗಳಿಗೆ ಒಂದು ತಲೆಯಪ್ರಕಾರ ಒಂಭತ್ತು ಶಿರಸ್ಸುಗಳನ್ನು ಖಂಡಿಸಿ ಪ್ರಜ್ವಲಿಸುತ್ತಿರುವ ಅಗ್ನಿಕುಂಡದಲ್ಲಿ ಹೋಮಮಾಡಿ ಹತ್ತನೇಶಿರಸ್ಸನ್ನು ಕತ್ತರಿಸಲುದ್ಯೋಗಿಸಿದನು ಆಗ ಭಕ್ತವತ್ಸಲನಾದ ಚತುರ್ಮುಖನು ಪ್ರತ್ಯಕ್ಷನಾಗಿ ಈ ಕೆಲಸವನ್ನು ನಿವಾರಿಸಿ ಸಿರಸ್ಸುಗಳನ್ನು ಯಥಾಪ್ರಕಾರವಾಗಿ ಹುಟ್ಟುವಹಾಗೆ ಅನುಗ್ರಹಿಸಿ ಅಮರತ್ವವನ್ನು ಬಿಟ್ಟು ಮಿಕ್ಕಾದ ವರಗಳನ್ನು ಬೇಡು ಕೊಡುವೆನೆನಲು ಸ್ವಾಮಿ! ನಾನು ಸಮಸ್ತ ದೇವ ಪಿತೃ ದೈತ್ಯೇಯಾದಿ ಗಂಧರ್ವರಕ್ಷೋವಿಧ್ಯಾಧರ ಯಕ್ಷರಿಂದ ಅಜೇಯನಾಗಿ ಹದಿನಾಲ್ಕು ಲೋಕಗಳಲ್ಲಿಯು ಇಚ್ಛಾನುಸಾರ ಗಮನವುಳ್ಳವನಾಗಿ ಸಂಚರಿಸುವಂತೆ ವರವನ್ನು ಕೊಡಬೇಕೆನಲು ಬ್ರಹ್ಮನು ದಯಾರಸ ಪರಿಪೂರ್ಣನಾಗಿ ಮನುಷ್ಯ ಜಾತಿಯನ್ನು ಬಿಟ್ಟು ನೀನು ಹೇಳಿದ ಇತರರಿಂದ ನಿನಗೆ ಮರಣವಿಲ್ಲವೆಂದು ಹೇಳಿ ಕುಂಭಕರ್ಣನನ್ನು ನೋಡಿ ನಿನಗೆ ಬೇಕಾದ ವರವನ್ನು ಕೇಳು ಎನಲು ಅವನು ದೈವಹತಕನಾಗಿ ಅತ್ಯಂತವಾದ ನಿದ್ರೆಯನ್ನು ಕೇಳಿದನು. ಬ್ರಹ್ಮನು ತಥಾಸ್ತು ಎಂದು ಹೇಳಿ ವಿಭೀಷಣನ ಬಳಿಗೆ ಬರಲು ಆತನು ಎದ್ದು ಕೃತಾಂಜಲಿಯಯಾಗಿ ಬ್ರಹ್ಮನನ್ನು ಸ್ತೋತ್ರಮಾಡಿ ಕೈಮುಗಿದುಕೊಂಡು ಎಂಥ ಕಷ್ಟಕಾಲಬಂದರೂ ನನ್ನ ಮನಸ್ಸು ಪಾಪಕಾರ್ಯದಲ್ಲಿ ಎರಗದಿರಬೇಕು ಅಲ್ಲದೆ ನನಗೆ ಸಕಲ ಮಂತ್ರಾಸ್ತ್ರಗಳು ಅಭ್ಯಾಸವಿಲ್ಲದೆ ಆಳವಡಬೇಕು. ಎಂಬೆರಡು ವರಗಳನ್ನು ಕರುಣಿಸು ಎನಲು ಬ್ರಹ್ಮನು ಹಾಗೆಯೇ ಆಗಲಿ ಎಂದು ಹೇಳಿ, ಎಲೈ ವಿಭೀಷಣನೇ ! ನೀನು ಮಹಾಧರ್ಮಾತ್ಮನಾಗಿ ಚಿರಾಯುವಾಗಿರು ಎಂದು ಆಶೀರ್ವದಿಸಿ ಅಂತರ್ಧಾನನಾದನು. ಅನಂತರ ದಶಾನನನು ವಿರಿಂಚಿದತ್ತ ವರಗರ್ವಿತನಾಗಿ ಕಿನ್ನರನಾಥನಾದ ಕುಬೇರನನ್ನು ಮನಸ್ಸಿನಲ್ಲಿ ನೆನೆದು ಯುದ್ಧಕ್ಕೆ ಬರಲು, ಕುಬೇರನು ಆತನ ಸಂಗಡ ಯುದ್ಧಮಾಡಲೊಲ್ಲದೆ ಕಿನ್ನರ ಕಿಂಪುರುಷ ಯಕ್ಷರಿಂದಕೂಡಿ ಲಂಕಾಪಟ್ಟಣವನ್ನುತ್ಯಜಿಸಿ ಪುಷ್ಪಕಾರೂಢನಾಗಿ ಹೊರಡುತ್ತಿರಲು ರಾವಣನು ಅವನನ್ನು ಹಿಂಬಾಲಿಸಿ ಯುದ್ಧಮಾಡಿ ಗೆದ್ದು ವಿಮಾನವನ್ನು ಅಪಹರಿಸಿದನು. ಆಗಆತನಿಗೆ ಕೋಪಬಂದು ಪೂಜ್ಯನಾಗಿರುವನನ್ನನ್ನು ಅವಮಾನಪಡಿಸಿದಕಾರಣ ನಿನ್ನವಿಮಾನವು ಶತ್ರುಗಳ ಪಾಲಾಗಲಿ ಎಂದು ಶಪಿಸಿದನು. ಆತರುವಾಯ ರಾವಣಾಸುರನು ಲಂಕಾಪಟ್ಟಣದಲ್ಲಿ ರಾಕ್ಷಸರಾಜನಾಗಿ ಅಭಿಷೇಕ ಮಾಡಲ್ಪಟ್ಟು ವಿಭೀಷಣ ಕುಂಭಕರ್ಣ ಮೊದಲಾದ ಮಂತ್ರಿಗಳಿಂದಲೂ, ಪ್ರಹಸ್ತ ಮೊದಲಾನ ಸೇನಾಪತಿಗಳಿಂದಲೂ, ಅಕ್ಷಕುಮಾರ ಮೊದಲಾದ ಪುತ್ರರಿಂದಲೂ, ಮಂಡೋದರಿ ಮೊದಲಾದ ಏಳುಸಾವಿರ ಪತ್ನಿಯರಿಂದಲೂ, ಐರಾವತ ಸಮಾನವಾದ ಗಜಗಳಿಂದಲೂ, ಉಚ್ಛೈಶ್ರವಸ್ಸಿಗೆ ಸಮವಾದ ಕುದುರೆಗಳಿಂದಲೂ, ಕುಂಭ, ನಿಕುಂಭ, ಮಹೋದರ, ಮಹಾಪಾರ್ಶ್ವ, ದೇವಾಂತಕ ಸುರಾಂತಕ, ನರಾಂತಕ, ಅತಿಕಾಯಮೊದಲಾದ ರಾಕ್ಷಸಶ್ರೇಷ್ಠರಿಂದೊಡಗೂಡಿ ಸಮಸ್ತ ದಿಕ್ಪಾಲಕರನ್ನು ಜಯಿಸಿ ತತ್ಪುರಗಳನ್ನಾಕ್ರಮಿಸಿ ಮಹಾಕ್ಷೋಭೆಯನ್ನು ಮಾಡತೊಡಗಿ ರಾವಣನೆಂಬಹೆಸರನ್ನು ಪಡೆದನು. ಬಳಿಕ ದೇವತೆಗಳೆಲ್ಲರೂ ಗುಂಪುಕೂಡಿ ಬ್ರಹ್ಮದೇವರ ಸನ್ನಿಧಿಗೆ ಹೋಗಿ ಈ ವೃತ್ತಾಂತವನ್ನು ವಿಜ್ಞಾಪಿಸಿದರು. ಆಗ ಬ್ರಹ್ಮದೇವರು ಆ ದೇವತೆಗಳೊಡನೆ ಕ್ಷೀರಸಮುದ್ರಕ್ಕೆ ಹೋಗಿ ಭಕ್ತವತ್ಸಲನಾಗಿಯೂ ಜಗತ್ಕಾರಣನಾಗಿಯೂ ಶೇಷಶಾಯಿಯಾಗಿಯೂ ಲಕ್ಷ್ಮೀಸಮೇತನಾಗಿಯೂ ಮಂದಸ್ಮಿತ ಸುಂದರನಾಗಿಯೂ ದಯಾರಸಪರಿಪೂರ್ಣನಾಗಿಯೂ ಸನಕಾದಿ ನಿತ್ಯಸೂರಿಗಳಿಂದ ಸ್ತುತಿಸಲ್ಪಟ್ಟವನಾಗಿಯೂ ಯೋಗಿಮಾನಸ ಹಂಸನಾಗಿಯೂ ಬ್ರಹ್ಮಾನಂದ ಭರಿತನಾಗಿಯೂ ಅನೇಕ ಬ್ರಹ್ಮಾಂಡನಾಯಕನಾಗಿಯೂ ಅಖಂಡ ವೈಭವದಿಂದಿರುವ ಶ್ರೀಮನ್ನಾರಾಯಣ ಮೂರ್ತಿಯನ್ನು ವೇದೋಕ್ತವಾಗಿ ಹೊಗಳಿ ಪ್ರತ್ಯಕ್ಷನಾದ ಭಕ್ತವತ್ಸಲನ ಪಾದಗಳಿಗೆರಗಿ ವಿನಮಿತ ಶಿರಸ್ಕನಾಗಿ ಭಗವಂತನಿಂದ ಕುಶಲಪ್ರಶ್ನಿತನಾಗಿ

ತಮ್ಮ ಆಗಮನ ವೃತ್ತಾಂತವನ್ನು ಹೇಳಲುಪಕ್ರಮಿಸಿದನು. ಭೂಲೋಕದಲ್ಲಿ ರಾವಣಾಸುರನೆಂದು ಪ್ರಸಿದ್ಧನಾದ ರಾಕ್ಷಸನು ಬ್ರಹ್ಮದತ್ತವರಗರ್ವಿತನಾಗಿ ಲೋಕಕಂಟಕನಾಗಿ ಲಂಕಾಪಟ್ಟಣದಲ್ಲಿ ನೆಲಗೊಂಡು ಇಂದ್ರಾದಿ ದೇವತೆಗಳ ಸಂಘವನ್ನು ನಾನಾವಿಧವಾಗಿ ಬಾಧೆಗೊಳಿಸುತ್ತಾ ಅಜೇಯನಾಗಿರುವನು, ಅಗ್ನಿದೇವನು ಅವನ ಮನೆಯಲ್ಲಿ ಬಾಣಸಿಗನಾಗಿಯೂ, ವರುಣನು ನೀರುತರುವವನಾಗಿಯೂ, ವಾಯುವು ಸುವಾಸನೆಯನ್ನುಂಟುಮಾಡತಕ್ಕವನಾಗಿ ಆ ರಾವಣಾಸುರನಿಗೆ ಕಿಂಕರರಾಗಿರುತ್ತಾರೆ. ದೇವತಾಸ್ತ್ರೀಯರನ್ನು ಅಪಹರಿಸಿಕೊಂಡು ಹೋಗಿ ಕಾರಾಗೃಹದಲ್ಲಿ ಇಟ್ಟುಕೊಂಡು ಅನೇಕ ಬಾಧೆಗಳನ್ನು ಕೊಡುತ್ತಾ ಕಾಮಚಾರಿಯಾಗಿರುವ ಆ ರಾವಣನನ್ನು ಸಂಹಾರಮಾಡಿ ನಮಗೆ ಕ್ಷೇಮವನ್ನುಂಟುಮಾಡಬೇಕೆಂದು ಅನೇಕ ವಿಧವಾಗಿ ಹೇಳಿಕೊಂಡಮೇಲೆ ಶ್ರೀ ಲಕ್ಷ್ಮೀಪತಿಯು ಅವರನ್ನು ಅತಿ ವಿಶ್ವಾಸದಿಂದ ನೋಡಿ, ಎಲೈ—ಬ್ರಹ್ಮಾದಿಗಳಿರಾ ನಾನು ದಶರಥಮಹಾರಾಜನಿಗೆ ಮಗನಾಗಿ ಉದ್ಭವಿಸಿ ರಾವಣ ಸಂಹಾರವನ್ನು ಮಾಡುವೆನು, ನನಗೆ ಸಹಾಯಕರಾಗಿ ನೀವು ನಿಮ್ಮ ಅಂಶಗಳಿಂದ ಕಪಿ ಕರಡಿ ಶಿಪಂಗಿಗಳ ರೂಪದಿಂದ ಭೂಲೋಕದಲ್ಲಿ ಜನಿಸಬೇಕು. ಬ್ರಹ್ಮನು ಕೊಟ್ಟಿರುವ ವರಗಳಲ್ಲಿ ಮನುಷ್ಯರಿಂದಲೂ ಮೃಗಾದಿಗಳಿಂದಲೂ ಆ ರಾವಣನಿಗೆ ಮರಣವೆಂಬದಾಗಿ ಕಾಣಬರುತ್ತಿದೆ ಆದಕಾರಣ ರಾವಣನ ಸಂಹಾರಕ್ಕೆ ಇದು ಕೋತು ಬೇರೆ ಯಾವ ಉಪಾಯವೂ ಇಲ್ಲವೆಂದು ಹೇಳಲು, ದೇವತೆಗಳು ಸಂತುಷ್ಟಚಿತ್ತರಾಗಿ ಹಿಂದಿರುಗಿ ಬಂದು ವಿಷ್ಣುವಿನ ಅಪ್ಪಣೆಯನ್ನು ನಡೆಸಿದರು. ತರುವಾಯ ಕೆಲವು ದೇವತೆಗಳು ಭಲ್ಲೂಕಗಳಾಗಿಯೂ, ಕೆಲವು ದೇವತೆಗಳು ವಾನರರಾಗಿಯೂ, ಕೆಲವು ದೇವತೆಗಳು ಗೋಪುಚ್ಛಗಳಾಗಿಯೂ, ಉತ್ಪನ್ನರಾಗಿ ಗಿರಿ, ವನ, ಪಟ್ಟಣಗಳಲ್ಲಿ ಅಸಂಖ್ಯಾತರಾಗಿ ತುಂಬಿ ಹೋಗಿ ನೆಲಗೊಂಡಿದ್ದರು.

## ದಶರಥರಾಯನು ಪುತ್ರಕಾಮೇಷ್ಟಿಯನ್ನು ಮಾಡಿದುದು.

ಬಳಿಕ ದಶರಥಮಹಾರಾಜನು ಅಯೋಧ್ಯಾಪುರದಲ್ಲಿ ಸಾಮ್ರಾಜ್ಯಯುಕ್ತನಾಗಿ ಮುವ್ವರು ಪತ್ನಿಯರಿಂದ ಕೂಡಿದವನಾಗಿ ಇದ್ದರೂ ಪುತ್ರರಿಲ್ಲದ ಕೊರತೆಯು ಬಹಳವಾಗಿ ಬಾಧಿಸುತ್ತಿತ್ತು (ಅಪುತ್ರಸ್ಯ ಗತಿರ್ನಾಸ್ತಿ) ಎಂಬಂತೆ ಪುತ್ರಹೀನನಾದವನಿಗೆ ಸ್ವರ್ಗವಿಲ್ಲವೆಂಬವಾಗಿ ಆಲೋಚಿಸಿ ಅದಕ್ಕಾಗಿ ಪುತ್ರಕಾಮೇಷ್ಟಿ ಎಂಬ ಯಾಗವನ್ನು ಮಾಡಬೇಕೆಂಬ ಆಲೋಚನೆಯುಳ್ಳವನಾಗಿ ದರಬಾರಿಗೆ ಬಂದು ಕುಳಿತು ವಶಿಷ್ಠಮುನೀಶ್ವರರಿಂದಲೂ ಅಶೋಕ, ವಿಜಯ ಮೊದಲಾದ ಮಂತ್ರಿಶ್ರೇಷ್ಠರಿಂದಲೂ ಕೂಡಿ ತನ್ನ ಆಲೋಚನೆಯನ್ನು ಹೇಳಲು ಅದಕ್ಕೆ ಎಲ್ಲರೂ ಸಂಭ್ರಮದೊಡನೆ ಸಮ್ಮತಿಸಿದರು. ತರುವಾಯ ಯಾಗಸಮಾರಂಭಗಳನ್ನು ಸಿದ್ಧಪಡಿಸಬೇಕೆಂಬ ಆಜ್ಞೆಯನ್ನು ಮಾಡಿ ಆದೇರೀತಿಯಾಗಿ ಎಲ್ಲರೂ ತಕ್ಕ ಪ್ರಯತ್ನಗಳನ್ನು ಮಾಡಿ ಸಿದ್ಧಿಸಲು ಯಜ್ಞಕ್ಕೆ ಪ್ರಾರಂಭಮಾಡಿದನು. ಆ ಯಜ್ಞಕ್ಕೆ ಋಷ್ಯಶೃಂಗಾದಿ ಮಹಾಋಷಿಗಳೂ ಬಂದಿದ್ದರು, ಆ ಕಾಲದಲ್ಲಿ ರಾಜನು ತನ್ನ ಪತ್ನಿಯರೊಡಗೂಡಿ ದೀಕ್ಷಾಬದ್ಧನಾಗಿ ಯಜ್ಞಶಾಲೆಯನ್ನು ಹೊಕ್ಕು ಬ್ರಹ್ಮ ಋತ್ವಿಕ್ಕುಗಳು ಮುಂತಾದವರನ್ನು ಹರಸಿ ಯಜ್ಞಪೂರ್ತಿ ಮಾಡುತ್ತಿರುವ ಕಾಲದಲ್ಲಿ ಯಜ್ಞೇಶ್ವರನಾದ ನಾರಾಯಣನು ಪ್ರತ್ಯಕ್ಷನಾಗಿ ಒಂದು ಸ್ವರ್ಣಪಾತ್ರೆಯಲ್ಲಿ ದಿವ್ಯವಾದ ಅಮೃತಸಮಾನವಾದ ಪಾಯಸವನ್ನು ತಂದು ದಶರಥರಾಯನ ಕೈಗೆ ಕೊಟ್ಟು ಇದನ್ನು ನಿನ್ನ ಸತಿಯರಿಗೆ ಕೊಡು ಅವರು ಗರ್ಭವತಿಯರಾಗಿ ಪುತ್ರರನ್ನು ಪಡೆಯುವರೆಂದು ಹೇಳಿ ಅಂತರ್ಧಾನನಾದನು.

## ಶ್ರೀ ರಾ ಮ ನ ಜ ನ ನ.

ಅನಂತರದಲ್ಲಿ ದಶರಥಮಹಾರಾಜನು ಅಗ್ನಿದತ್ತವಾದ ಆ ಪಾಯಸವನ್ನು ಎರಡು ಭಾಗ ಮಾಡಿ ತನ್ನ ಹತ್ತಿರದಲ್ಲಿದ್ದ ಕೌಸಲ್ಯಾ ಮತ್ತು ಕೈಕೇಯಿಯರಿಗೆ ಕೊಟ್ಟನು. ಅಷ್ಟರಲ್ಲಿ ಸುಮಿತ್ರೆ



ಎಂಬ ಮೂರನೆಯ ಹೆಂಡತಿಯು ಅಲ್ಲಿಗೆ ಬರಲು ಅದನ್ನು ಕಂಡು ಕೌಸಲ್ಯೆಯು ತನ್ನ ಭಾಗದ ಪಾಯಸದಲ್ಲಿ ನಾಲ್ಕನೆಯ ಒಂದು ಭಾಗವನ್ನೂ,, ಕೈಕಯಿಯು ತನ್ನ ಭಾಗದ ಚತುರ್ಥಾಂಶವನ್ನೂ ಸುಮಿತ್ರೆಗೆ ಕೊಟ್ಟರು ಆ ಪಾಯಸ ಭಕ್ಷಣದಿಂದ ಅವರು ಗರ್ಭಗಳನ್ನು ಧರಿಸಿ ದಿನಕ್ರಮವಾಗಿ ವೃದ್ಧಿಯಾಗಿ ನವಮಾಸ ಪೂರ್ತಿಯಾಗುವ ಸಮಯದಲ್ಲಿ ಚೈತ್ರ ಶುದ್ಧ ನವಮಿಯದಿನ ಪುನರ್ವಸೂ ನಕ್ಷತ್ರದಲ್ಲಿ ಅಭಿಜಿನ್ಮುಹೂರ್ತಕಾಲಕ್ಕೆ ಶುಭಗ್ರಹಗಳು ಅನುಕೂಲರಾಗಿ, ಸಲ್ಲಕ್ಷಣದಿಂದ ಕೂಡಿರುವ ಶುಭಲಗ್ನದಲ್ಲಿ ಕೌಸಲ್ಯಾದೇವಿಯ ಗರ್ಭಸಾಗರದಲ್ಲಿ ಶ್ರೀರಾಮಚಂದ್ರನು ಅವತರಿಸಿದನು. ತರುವಾಯ ಕೈಕಯಿ ದೇವಿಯ ಗರ್ಭದಲ್ಲಿ ಭರತನೂ ಸುಮಿತ್ರಾದೇವಿಯ ಹೊಟ್ಟೆಯಲ್ಲಿ ಲಕ್ಷ್ಮಣ ಶತ್ರುಘ್ನರೂ ಸಹ ಉದ್ಭವಿಸಿದರು. ಆ ಕಾಲದಲ್ಲಿ ದಿಕ್ಕುಗಳು ನಿರ್ಮಲವಾದುವು ಗಾಳಿಯು ತಣ್ಣಗೆ ಬೀಸಿತು ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು ರಂಭೆ ಮೊದಲಾದ ಅಪ್ಸರಾಂಗನೆಯರು ಸಂಭ್ರಮದಿಂದ ನಾಟ್ಯವಾಡಿದರು ಪುರನಿವಾಸಿಗಳು ಮಹಾ ಸಂತೋಷದಿಂದ ಅಯೋಧ್ಯಾಪುರವನ್ನು ತಳಿರು ತೋರಣಗಳಿಂದಲೂ ಧ್ವಜಪತಾಕೆಗಳಿಂದಲೂ ಕದಳೀಸ್ತಂಭಗಳಿಂದಲೂ ಕಳಶ ಕನ್ನಡಿಗಳಿಂದಲೂ ಪಟಗಳಿಂದಲೂ, ಅಲಂಕಾರಮಾಡಿ ದಿವ್ಯವಾದ ವಸ್ತ್ರಾದ್ಯಲಂಕಾರಗಳನ್ನು ಧರಿಸಿ ವಿನೋದವಾಗಿ ನಲಿಯುತ್ತಿದ್ದರು ಆಗ ದಶರಥಮಹಾರಾಜನು ವಿಧ್ಯುಕ್ತಪ್ರಕಾರದಿಂದ ಸ್ನಾನಮಾಡಿ ದಿವ್ಯದುಕೂಲಾದಿಗಳಿಂದಲಂಕೃತನಾಗಿ ಮಕ್ಕಳಿಗೆ ಜಾತಕರ್ಮವನ್ನು ಮಾಡಿ ಬ್ರಾಹ್ಮಣರಿಗೆ ಷೋಡಶ ಮಹಾದಾನಗಳನ್ನು ಕೊಟ್ಟು ಬ್ರಾಹ್ಮಣಾಶೀರ್ವಾದವನ್ನು ಪಡೆದು ಮಹಾಸಂತೋಷಮಗ್ನನಾಗಿ ಇದ್ದನು ಹೀಗೆ ಕೆಲವುಕಾಲ ಕಳೆದ ಮೇಲೆ ಮಕ್ಕಳಿಗೆ ಅನ್ನಪ್ರಾಶನ ಚೌಲೋಪನಯನಾದಿ ಕರ್ಮಗಳನ್ನು ನೆರವೇರಿಸಿ ಆ ಬಳಿಕ, ಆಯುರ್ವೇದ ಧನುರ್ವೇದ ಗಾಂಧರ್ವವೇದ ಮೊದಲಾದ ಸಕಲ ವೇದ ವೇದಾಂತಗಳನ್ನು ಅಭ್ಯಾಸಮಾಡಿಸಿದನು ಆಗ ರಾಜನು ವಿನಯಸಂಪನ್ನರಾಗಿ ಮಾತಾಪಿತೃಗಳಿಗೆ ಆನಂದಕರರಾಗಿ ರೂಪಜಿತಮನ್ಮಥರಾಗಿ ಇರುವ ಮಕ್ಕಳನ್ನು ನೋಡಿ ಹಿಗ್ಗುತ್ತ ಸಂತೋಷಸಾಗರದಲ್ಲಿ ಮುಳುಗಿ ತೇಲಾಡುತ್ತಿದ್ದನು.

## ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಅರಣ್ಯಕ್ಕೆ ಕೊಂಡೊಯ್ಯುವುದು.

ಹೀಗಿರುವಲ್ಲಿ ಒಂದಾನೊಂದುದಿನ ವಿಶ್ವಾಮಿತ್ರಮಹರ್ಷಿಯು ಅಯೋಧ್ಯಾಪುರಕ್ಕೆ ಬಂದು ಅರಮನೆಯ ಬಾಗಿಲಲ್ಲಿ ನಿಂತು ದ್ವಾರಪಾಲಕನನ್ನು ನೋಡಿ ಎಲೈ ಚಾರಕನೆ! ನಿಮ್ಮ ರಾಯನಿಗೆ ವಿಶ್ವಾಮಿತ್ರರು ಬಂದಿರುವರು ಎಂಬ ವಾರ್ತೆಯನ್ನು ತಿಳಿಸೆಸಲು ಆ ದ್ವಾರಪಾಲಕನು ಅತಿಶೀಘ್ರವಾಗಿ ರಾಯನ ಬಳಿಗೆ ಬಂದು ನಮಸ್ಕಾರಮಾಡಿ ಸ್ವಾಮಿಾ ವಿಶ್ವಾಮಿತ್ರರೆಂಬ ಮಹರ್ಷಿಗಳು ಬಂದು ಬಾಗಿಲಬಳಿಯಲ್ಲಿ ಕಾದಿರುವರೆಂದು ಬಿನ್ನವಿಸಿದರು. ಆ ಮಾತನ್ನು ಕೇಳಿ ರಾಯನು

ಅತ್ಯಂತ ಭಕ್ತಿಯಿಂದ ಅವರನ್ನು ಕರೆದುಕೊಂಡು ಬರಬೇಕೆನಲು ದ್ವಾರಪಾಲಕನು ಹಿಂತಿರುಗಿ ಬಂದು ಈ ಸಂಗತಿಯನ್ನು ಮಹಾಋಷಿಗೆ ತಿಳಿಸಿದನು. ಬಳಿಕಾ ಮಹಾನುಭಾವನಾದ ಗಾಧೇಯನು ಹೊರಟು ಬರುತ್ತಿರಲು ರಾಯನು ಪ್ರತ್ಯುತ್ಥಾನಮಾಡಿ ಎದುರಾಗಿ ಬಂದು ನಮಸ್ಕರಿಸಿ ಶಾಸ್ತ್ರೋಕ್ತರೀತಿಯಾಗಿ ಅರ್ಘ್ಯಾದಿಗಳಿಂದ ಸತ್ಕಾರಮಾಡಿ ಕರೆದುಕೊಂಡು ಹೋಗಿ ಉಚಿತವಾದ ಆಸನದಲ್ಲಿ ಕುಳರಿಸಿ ಭಕ್ತಿನಮ್ರಿತಶಿರಸ್ಕನಾಗಿ ಬದ್ಧಾಂಜಲಿಯಾಗಿ ನಿಂತು ಕುಶಲಪ್ರಶ್ನೆ ಮಾಡಲುಪಕ್ರಮಿಸಿದನು. ದೇವಾ, ಗಾಧೇಯನೇ! ನಿಮ್ಮ ಆಶ್ರಮದಲ್ಲಿ ಯಾಗಾದಿ ಕರ್ಮಗಳು ನಿರ್ವಿಘ್ನವಾಗಿ ನಡೆಯುತ್ತಿದೆಯೆ ಕ್ರೂರಮೃಗಗಳಿಂದ ನಿಮಗೇನು ಅಪಾಯವಿಲ್ಲವೇ ಪ್ರಜೆಗಳು ಸ್ವಕರ್ಮನಿರತರಾಗಿ ದೈವಭಕ್ತಿಯಿಂದ ಕೂಡಿದವರಾಗಿ ಇರುತ್ತಾರೆಯೇ ತಾವು ಇಲ್ಲಿಗೆ ಬಿಜಯಮಾಡಿದ:ದು ತಮ್ಮ ಅನುಗ್ರಹವಶದಿಂದಲೋ, ನನ್ನ ಪೂರ್ವಕೃತ ಸುಕೃತಪಾರಿಪಾಕದಿಂದಲೋ ನಾನರಿಯೆನೆಂದು ಹೇಳಲು, ಆ ಮಹರ್ಷಿಯು ಹೀಗೆ ಪ್ರತ್ಯುತ್ತರವನ್ನು ಹೇಳಿದನು. ಅಯ್ಯಾ ಆಶ್ರಿತದತ್ತ ಸಕಲ ಮನೋರಥನಾದ ದಶರಥನೇ ನಮ್ಮ ಆಶ್ರಮಗಳಲ್ಲಿ ಎಲ್ಲರೂ ಸುಖವಾಗಿ ಇರುತ್ತಾರೆ ನೀನು ದೊರೆಯಾಗಿರುವ ಕಾಲದಲ್ಲಿ ಅದಕ್ಕೆ ಸಂಶಯವೇನು, ರಾಜನೀತಿಯಿಂದಲೂ ವಿನಯಾದಿ ಗುಣಗಳಿಂದಲೂ ಔದಾರ್ಯದಿಂದಲೂ ಶೌರ್ಯಾತಿಶಯದಿಂದಲೂ ಮಾಂಧಾತ ಮೊದಲಾದ ನಮ್ಮ ಪೂರ್ವೀಕ ರಾಜರುಗಳನ್ನು ಅತಿಕ್ರಮಿಸಿರುವದಲ್ಲದೇ ದೇವೇಂದ್ರನಿಗೆ ಯುದ್ಧದಲ್ಲಿ ಸನ್ನದ್ಧನಾಗಿ ಸಹಾಯಮಾಡಿ ಇಂದ್ರನ ಅರ್ಧಸಿಂಹಾಸನದಲ್ಲಿ ಕುಳಿತು ಗಂಧರ್ವರಿಂದ ಗಾನಮಾಡಲ್ಪಟ್ಟ ಸ್ವಕೀಯವಾದ ಚರಿತ್ರೆಗಳನ್ನು ಕೇಳುತ್ತಾ ಊರುಜಿತ ರಂಭೆಯರಾದ ರಂಭಾದಿಕಾಂತೆಯರ ಗಂಭೀರವಾದ ಗೀತನಾಟ್ಯಗಳನ್ನು ಕೇಳುತ್ತಾ ಅಖಂಡವೈಭವದಿಂದ ಇರುತ್ತಿನುವ ನೀನು ನಮ್ಮಗಳಿಗೆ ಪ್ರಭುವಾಗಿ ಈ ರಘುವಂಶದಲ್ಲಿ ಉತ್ಪನ್ನನಾಗಿ ಇರುವದು ನಮ್ಮ ಸುಕೃತವೇ ಸರಿ ನಿನ್ನಿಂದಲೇ ಈ ಭೂಮಿಗೆ ರಾಜನ್ವತಿ ಎಂಬ ಹೆಸರು ಪ್ರಾಪ್ತವಾಯಿತು. ನಿನ್ನ ಅಶ್ವಮೇಧ ಯಾಗಗಳಲ್ಲಿ ಬಿಡಲ್ಪಟ್ಟ ಕುದುರೆಗಳ ಗೊರಸುಗಳಿಂದ ತುಳಿಯಲ್ಪಟ್ಟು ಈ ಭೂಮಿಯು ಹಳ್ಳದಿಣ್ಣೆಗಳಿಲ್ಲದೆ ಸಮನಾಗಿ ಆಗಿದೆ ಸಾಕ್ಷಾತ್ ಜಗತ್ಕರ್ತನಾದ ನಾರಾಯಣಮೂರ್ತಿಯು ಭೂಭಾರವನ್ನು ನಿನಗೆ ವಹಿಸಿ ತಾನು ಕ್ಷೀರಸಮುದ್ರದಲ್ಲಿ ಶೇಷಶಾಯಿಯಾಗಿ ಸುಖವಾಗಿ ನಿದ್ರಿಸುತ್ತಿರುವನಲ್ಲವೆ ಇಂಥಾ ನಿನ್ನ ರಾಜ್ಯದಲ್ಲಿ ಈತಿಬಾಧೆಗಳುಂಟೆ ಎಂದು ಹೇಳಿ ಸುಮ್ಮನಾದನು. ಋಷಿಯಮಾತುಗಳನ್ನು ಕೇಳಿ ರಾಯನು ಬಹಳ ಸಂತೋಷಪಟ್ಟು ತಮ್ಮ ಆಗಮನಕ್ಕೆ ಕಾರಣವೇನೆಂದು ಕೇಳಿದನು. ಗಾಧೇಯನು ಮತ್ತೆ ಕೆಲವು ವಚನಗಳನ್ನು ನುಡಿಯಲುಪಕ್ರಮಿಸಿದನು. ನನ್ನ ಮನೋರಥವನ್ನು ನೆರವೇರಿಸುವ ರಾಜನು ನಿನ್ನ ಹೊರತು ಇನ್ನಾರೂ ಇಲ್ಲ ಆದಕಾರಣ ನೀನು ದೊಡ್ಡವಂಶದಲ್ಲಿ ಹುಟ್ಟಿ ವಸಿಷ್ಠರಿಗೆ ಶಿಷ್ಯನಾಗಿ ಇರುವದರಿಂದ ನಿನ್ನೊಡನೆ ಯೋಚಿಸಬೇಕೆಂದು ತಿಳಿದು ನಾನು ನಿನ್ನ ಹತ್ತಿರಕ್ಕೆ ಬಂದೆನು ಏಕೆಂದರೆ ಸಿದ್ಧಾಶ್ರಮವೆಂದು ಪ್ರಸಿದ್ಧವಾದ ನಮ್ಮ ಆಶ್ರಮದಲ್ಲಿ ನಾನು ಒಂದು ಯಾಗವನ್ನು ಮಾಡಲು ಪ್ರಯತ್ನಿಸಿರುತ್ತೇನೆ ಅದಕ್ಕೆ ರಾಕ್ಷಸರು ವಿಘಾತಮಾಡಲಾರಂಭಿಸಿ ಅನೇಕ ಕ್ರೂರಕೃತ್ಯಗಳನ್ನು ಮಾಡುತ್ತಿದ್ದಾರೆ ನನ್ನ ಯಾಗಕ್ಕೆ ಸಹಾಯವಾಗಿ ನಿನ್ನ ಜ್ಯೇಷ್ಠ ಪುತ್ರನಾದ ರಾಮಚಂದ್ರನನ್ನು ಕಳುಹಿಸಬೇಕೆಂಬದಾಗಿ ಹೇಳಿದ ಕೂಡಲೇ ಆ ರಾಯನು ಮೂರ್ಛಾಕ್ರಾಂತನಾಗಿ ಕೆಲವುಕಾಲ ಸ್ಮೃತಿಯಿಲ್ಲದೆ ಇದ್ದು ಎಚ್ಚರಗೊಂಡು ಪುತ್ರವ್ಯಾಮೋಹ ಪೀಡಿತನಾಗಿ ಕಳವಳಪಡುತ್ತಾ ಗಡಗಡನೆ ನಡುಗುತ್ತಾ ಗುಹಾಂತರವನ್ನು ಹೊಕ್ಕು ಸಿಂಹಹನ್ನು ನೋಡಿದ ಆನೆಯೋಪಾದಿಯಲ್ಲಿ ಭೀತನಾಗಿ ಹೀಗೆ ಹೇಳತೊಡಗಿದನು. ಅಯ್ಯಾ ಗಾಧೇಯ ಮಹಾಋಷಿಯೇ ನಾನು ಅರವತ್ತು ಸಾವಿರ ವರ್ಷಕಾಲ ನಿರೀಕ್ಷಿಸಿ ಮಕ್ಕಳಿಲ್ಲದೇ ವ್ಯಾಕುಲವಾಗಿ ತಮ್ಮ ಆಶೀ

ಪ್ರಸಾದ ಬಲದಿಂದ ನಾಲ್ಕು ಮಂದಿ ಮಕ್ಕಳನ್ನು ಪಡೆದೆನು ಅವರಿಗೆ ೧೬ ವರ್ಷ ವಯಸ್ಸಾಗಿದೆ ಇನ್ನೂ ಚಿಕ್ಕವರಾದಕಾರಣ ರಾಕ್ಷಸರ ಸಂಗಡ ಯುದ್ಧ ಮಾಡುವದಕ್ಕೆ ಶಕ್ತರಲ್ಲಾ ಮಹಾ ಸುಕುಮಾರನಾದ ರಾಮಚಂದ್ರನನ್ನು ಕ್ರೂರರಾದ ರಾಕ್ಷಸ ಯುದ್ಧಕ್ಕೆ ಹೇಗೆ ಕಳುಹಲಿ ನಾನೇ ಬಂದು ರಾಕ್ಷಸರನ್ನು ಸಂಹಾರ ಮಾಡಿ ನಿಮ್ಮ ಯಾಗವು ಮುಗಿದ ಮೇಲೆ ಅಯೋಧ್ಯಾಪುರಕ್ಕೆ ಹಿಂತಿರುಗಿ ಬರುತ್ತೇನೆ ಅಲ್ಲದೇ ತಾವು ಏನು ಕೇಳಿದರೂ ಕೊಡಲು ಸಿದ್ಧನಾಗಿ ಇರುತ್ತೇನೆ ರಾಮಚಂದ್ರನನ್ನು ಮಾತ್ರ ಅನುಗ್ರಹಿಸಿ ಬಿಟ್ಟುಬಿಡಬೇಕೆಂದು ಅನೇಕ ರೀತಿಯಿಂದ ವಿಜ್ಞಾಪಿಸಿದನು ಬಳಿಕಾ ಮಹರ್ಷಿಯು ಆ ಮಾತುಗಳನ್ನು ಕೇಳಿ ಕೋಪೋದ್ರೇಕದಿಂದ ಘೋರವಾದ ಶಾಪವನ್ನೀಯುವನೋ ಎಂಬಂತೆ ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ ಕೋಪಾರುಣ ನೇತ್ರನಾಗಿ ತುಟಿಗಳನ್ನದರಿಸುತ್ತಾ ಹೀಗೆ ಹೇಳಿದನು ಎಲೈ ದಶರಥನೇ ! ಈ ರೀತಿಯಾಗಿ ಹೇಳಿದರೆ ನನ್ನ ಮನೋರಥವನ್ನು ಹೇಗೆ ಪೂರ್ತಿಮಾಡುವೆ ಇಂಥಾ ದೊಡ್ಡವಂಶದಲ್ಲಿ ನಿನ್ನಂಥಾ ಅಯೋಗ್ಯನು ಹುಟ್ಟಬಹುದೇ ಯಾಚಕನು ಬಂದು ಆಶಾಭಂಗಧಿಂದ ಹೊರಟುಹೋದ ಬಳಿಕ ನಿಮ್ಮ ಪೂರ್ವಿಕರಿಗೆ ಅಪಯಶಸ್ಸು ತಪ್ಪೀತೆ ನಿಮ್ಮ ಮಕ್ಕಳಿಗೂ ನಿನಗೂ ಏನು ಸಂಬಂಧ ಮಕ್ಕಳಾರು ನೀನಾರು, ನೀನು ಬ್ರಹ್ಮರ್ಷಿಯಾಗಿ ಯೋಗನಿಷ್ಠಾಗರಿಷ್ಠನಾದ ವಸಿಷ್ಠನಿಗೆ ಶಿಷ್ಯನಾಗಿ ಅವಿವೇಕಿಯಂತೆ ಆಡಿದರೆ ಆತನಿಗೆ ಅಪಕೀರ್ತಿಯಲ್ಲವೆ. ನಿನ್ನ ಪೂರ್ವಿಕನಾದ ಸತ್ಯವಾಂಗ್ನಿಯಮಿಯಾದ ಹರಿಶ್ಚಂದ್ರರಾಯನ ಚರಿತ್ರೆಯನ್ನು ಕೇಳಿದರೆ ನನ್ನ ಶಕ್ತಿ ತಿಳಿಯುತ್ತದೆ. ನಿಮ್ಮ ಪುರೋಹಿತನಾದ ವಸಿಷ್ಠಋಷಿಯನ್ನು ಕೇಳಿದರೂ ತಿಳಿಯುತ್ತದೆ, ಎಂಬದಾಗಿ ಮಹಾ ಕೋಪದಿಂದ ನುಡಿಯಲು ಆಗ ತ್ರಿಕಾಲವೇದಿಯಾದ ವಸಿಷ್ಠಮಹಾಋಷಿಯು ಈ ವೃತ್ತಾಂತವನ್ನು ತಿಳಿದು ಫಕ್ಕನೆನಕ್ಕು ಎಲೈ ರಾಜನೇ ! ವಿಶ್ವಾಮಿತ್ರಋಷಿಗೆ ವಿರುದ್ಧನಾದರೆ ನಿನ್ನ ಪರಿಣಾಮವು ಸಾಗಲಾರದು ರಾಮಚಂದ್ರನು ಸಾಕ್ಷಾತ್ ಲೋಕಕರ್ತನಾದ ಭಗವಂತನೆ ಹೊರತು ಮನುಷ್ಯಮಾತ್ರನಲ್ಲ ಆದ್ದರಿಂದ ಲಕ್ಷ್ಮಣಾನುಚರನಾಗಿ ರಾಮಚಂದ್ರನು ಇವರ ಹಿಂದೆ ಹೋಗಲಿ ಎಂದು ಆಜ್ಞಾಪಿಸಿದನು. ಬಳಿಕ ರಾಯನು ಸಮ್ಮತಿಪಟ್ಟು ನಯನಚಕೋರ ಚಂದ್ರಿಕಾಭನಾದ ರಾಮಚಂದ್ರನನ್ನು ಕರೆಸಿ ಎಲೈ ಪ್ರಿಯಪುತ್ರನಾದ ರಾಮಚಂದ್ರನೇ ! ರವಿವಂಶ ದುಗ್ಧಾಂಬುಧಿ ಪೂರ್ಣಿಮ ಚಂದ್ರನೇ ನೀನು ಲಕ್ಷ್ಮಣಾನುಚರನಾಗಿ ವಿಶ್ವಾಮಿತ್ರಋಷಿಯ ಸಂಗಡ ಹೋಗಿ ದುಷ್ಟರಾಕ್ಷಸ ಸಂಹಾರಮಾಡಿ ಸುಖದಿಂದ ಬಂದು ನನಗೆ ಆನಂದವನ್ನುಂಟುಮಾಡಬೇಕನಲು ರಾಮಚಂದ್ರನು ಮಹಾಸಂತೋಷದಿಂದ ಧನುರ್ಧಾರಿಯಾಗಿ ತಮ್ಮನಾದ ಲಕ್ಷ್ಮಣನೊಡನೆ ಪುರೋಹಿತನಾದ ವಸಿಷ್ಠಮಹಾಮುನೀಶ್ವರರಿಗೆ ಸಾಷ್ಟಾಂಗ ಪ್ರಣಾಮಮಾಡಿ ತಂದೆಯಾದ ದಶರಥ ಮಹಾರಾಜನಿಗೆ ನಮಸ್ಕಾರಮಾಡುವ ಕಾಲದಲ್ಲಿ ಆತನು ಕೈಹಿಡಿದು ಮೇಲಕ್ಕೆಯೆತ್ತಿ ತೊಡೆಯಮೇಲೆ ಕುಳ್ಳಿರಿಸಿ ಮುತ್ತಿಟ್ಟು ಶಿರಸ್ಸನ್ನು ಆಘ್ರಾಣಿಸಿ ಸುಖವಾಗಿ ಹೋಗಿಬನ್ನಿ ಎಂದು ಆಶೀರ್ವದಿಸಿ ಅವರನ್ನು ಕಳುಹಿಸಿದನು ಅನಂತರದಲ್ಲಿ ಆವಿಶ್ವಾಮಿತ್ರನು ದಶರಥಮಹಾರಾಜನಿಗೆ ಆಶೀರ್ವಾದ ಮಾಡಿ ಬ್ರಹ್ಮ ಸಮಾನನಾದ ವಸಿಷ್ಠನ ಅನುಮತಿಯನ್ನು ಪಡೆದು ರಾಮಚಂದ್ರನನ್ನು ಲಕ್ಷ್ಮಣ ಸಹಿತನಾಗಿ ಬಹಳ ಸಂಭ್ರಮದಿಂದ ಕರೆದುಕೊಂಡು ಹೊರಟನು ಬಳಿಕ ವಿಶ್ವಾಮಿತ್ರಋಷಿಯು ರಾಮಲಕ್ಷ್ಮಣ ಸಮೇತನಾಗಿ ರಾತ್ರಿಯಲ್ಲಿ ಸಕಲ ಲೋಕಪಾವನಿಯೂ ಮಂಗಳತರಂಗಿಣಿಯೂ ಭಗೀರಥಾನುಜೆಯೂ ಸಗರಾತ್ಮಜಾತ ಮುಕ್ತಿದಾಯಿನಿಯೂ ಆದ ಗಂಗಾನದಿಯಲ್ಲಿ ಸ್ನಾನ ಮಾಡಿ ಸಂಧ್ಯಾವಂದನಾದಿ ಕೃತ್ಯಗಳನ್ನು ನೆರವೇರಿಸಿ ತೀರದಲ್ಲಿ ತಳಿರುಗಳಿಂದ ಮಾಡಲ್ಪಟ್ಟ ಹಾಸಿಗೆಯಲ್ಲಿ ಮಲಗಿ ನಿದ್ರಿಸಿ ಅರ್ಧರಾತ್ರಿಯಲ್ಲಿ ಎಚ್ಚರಗೊಂಡು ರಾಮಚಂದ್ರನು ವಿಶ್ವಾಮಿತ್ರನನ್ನು ಕುರಿತು ಹೀಗೆ ಮಾತನಾಡಲಾರಂಭಿಸಿದನು.

## ರಾಮಲಕ್ಷ್ಮಣರಿಗೆ ವಿಶ್ವಾಮಿತ್ರರು ಹೇಳಿದ ಗಂಗಾಮಹಿಮೆ.

ಗುರುವರ್ಯನೇ ಈ ಗಂಗಾನದಿಯು ಎಲ್ಲಿ ಹುಟ್ಟಿತು ಎಲ್ಲಿಗೆ ಹೋಗುತ್ತದೆ ಇದಕ್ಕೆ ಬಾಗೀರಥಿ ಎಂಬದಾಗಿ ಹೆಸರು ಬರಲು ಕಾರಣವೇನು ಎನಲು ಆ ಮಹರ್ಷಿಯು ರಾಮಚಂದ್ರನನ್ನು ನೋಡಿ ಎಲೈ ಜಗದಭಿರಾಮನೆ! ಕಾಕುಸ್ಥಾನ್ವಯ ಸೋಮನೇ ಶ್ರೀರಾಮನೇ ಈ ಗಂಗೆಯ ವೃತ್ತಾಂತವನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು ನಿಮ್ಮ ಸೂರ್ಯವಂಶದಲ್ಲಿ ಸಗರ ಚಕ್ರವರ್ತಿ ಎಂಬ ಮಹಾ ಸಾರ್ವಭೌಮನು ಸಪ್ತದ್ವೀಪಾಧಿಪತಿಯಾಗಿ ಭಾರ್ಯಾದ್ವಯ ಸಮೇತನಾಗಿ ಮಹಾವೈಭದಿಂದಾಳಿದನು ದೊಡ್ಡ ಹೆಂಡತಿಗೆ ಅಸಮಂಜಸನೆಂಬ ಮಗನು ಉತ್ಪನ್ನನಾಗಿ ದುಷ್ಟನಾಗಿದ್ದು ತಂದೆಯಾದ ಸಗರಚಕ್ರವರ್ತಿಯಿಂದ ಜಯಿಸಲ್ಪಟ್ಟನು. ಆತನಿಗೆ ಅಂಶುಮಂತನೆಂಬ ಮಗನು ಹುಟ್ಟಿದನು. ದ್ವಿತೀಯ ಪತ್ನಿಗೆ ಅರವತ್ತು ಸಾವಿರ ಗಂಡುಮಕ್ಕಳುತ್ಪನ್ನರಾಗಿ ಮಹಾಪರಾಕ್ರಮಶಾಲಿಗಳಾಗಿ ಅತುಲತೇಜೋವಂತರಾಗಿ ಇದ್ದರು ಈ ಸಮಸ್ತ ಪರಿವಾರದಿಂದ ಕೂಡಿದವನಾಗಿ ಸಗರನು ಶತಾಶ್ವಮೇಧಗಳನ್ನು ಮಾಡಬೇಕೆಂಬ ಕುತೂಹಲದಿಂದ ತೊಂಭತ್ತೊಂಭತ್ತು ಅಶ್ವಮೇಧಗಳನ್ನು ಮಾಡಿದನು. ನೂರನೇ ಅಶ್ವಮೇಧವನ್ನು ಮಾಡಲು ದೀಕ್ಷಾಬದ್ಧನಾಗಿ ಅಶ್ವವನ್ನು ಬಿಟ್ಟನು ಆ ಅಶ್ವವು ದೇಶಾಟನ ಮಾಡುತ್ತಿರುವ ಕಾಲದಲ್ಲಿ ತ್ರಿಲೋಕೇಂದ್ರನಾದ ದೇವೇಂದ್ರನು ಭಯಪಟ್ಟು ಮಾಯೆಯಿಂದ ಆ ಅಶ್ವವನ್ನು ತೆಗೆದುಕೊಂಡು ಹೋಗಿ ಪಾತಾಳ ಲೋಕದಲ್ಲಿ ತಪಸ್ಸುಮಾಡುತ್ತಿರುವ ಸಾಕ್ಷಾದ್ಭಗವದಂಶ ಸಂಭೂತನಾದ ಕಪಿಲಮಹರ್ಷಿಯ ಹಿಂಭಾಗದಲ್ಲಿ ಕಟ್ಟಿ ಹೊರಟುಹೋದನು. ಬಳಿಕ ಸಗರಪುತ್ರರು ಆ ಅಶ್ವವನ್ನು ಹುಡುಕುವುದಕ್ಕೆ ಆರಂಭಿಸಿ ಭೂಲೋಕದಲ್ಲಿ ನೋಡಿ ಸಿಕ್ಕದೇಹೋದಕಾರಣ ತಮ್ಮ ಉಗುರುಗಳಿಂದ ಭೂಮಿಯನ್ನು ಅಗೆದುಕೊಂಡು ಪಾತಾಳಕ್ಕೆ ಹೋಗಿ ಅಲ್ಲಿ ಏಕಾಗ್ರಚಿತ್ತನಾಗಿ ಅಷ್ಟಾಂಗ ಯೋಗಾಸಕ್ತನಾಗಿ ಜಟಾಪಟಲಮಂಡಿತನಾಗಿ ಕುಳಿತಿರುವ ಆ ಕಪಿಲಮಹರ್ಷಿಯನ್ನು ನೋಡಿ ಆತನ ಪ್ರಭಾವವನ್ನು ತಿಳಿಯದೆ ತಮ್ಮ ಕುದುರೆಯನ್ನು ಕಟ್ಟಿಕೊಂಡು ಕಳ್ಳನಾಗಿ ಕುಳಿತಿರುವನೆಂದು ಕಠಿಣವಾಗಿ ಆಡುತ್ತಿರಲು ಆ ಕಪಿಲಋಷಿಯು ಅದನ್ನು ಕೇಳಿ ಕೋಪಗೊಂಡು ಕಣ್ಣು ತೆರೆದು ನೋಡಲು ಈ ಸಗರ ಪುತ್ರರೆಲ್ಲರೂ ಭಸ್ಮವಾಗಿ ಹೋದರು ತರುವಾಯ ಸಗರನ ಮೊಮ್ಮಗನಾದ ಅಂಶುಮಂತನು ಈ ವೃತ್ತಾಂತವನ್ನು ಕೇಳಿ ತಾನು ಪಾತಾಳಕ್ಕೆ ಹೋಗಿ ಆ ಮಹರ್ಷಿಯನ್ನು ಅನೇಕರೀತಿಯಿಂದ ಸ್ತುತಿಸಿ ಅವರ ಅನುಗ್ರಹದಿಂದ ಅಶ್ವವನ್ನು ತೆಗೆದುಕೊಂಡು ಬಂದು ತಾತನ ಯಾಗವನ್ನು ಪೂರ್ತಿಮಾಡಿದನು ಬಳಿಕ ಅಂಶುಮಂತನಿಗೆ ಭಗೀರಥನೆಂಬ ರಾಯನು ಜನಿಸಿದನು ಆತನು ಪ್ರಾಪ್ತವಯಸ್ಕನಾಗಿ ತನ್ನ ತಾತಂದಿರ ವೃತ್ತಾಂತವನ್ನು ಕೇಳಿ ಬಹಳ ವ್ಯಾಕುಲವಾಗಿ ಪಾತಾಳಕ್ಕೆ ಹೋಗಿ ಆ ಮಹರ್ಷಿಯ ಅನುಗ್ರಹಕ್ಕೆ ಪಾತ್ರನಾಗಿ ನಮ್ಮ ತಾತಂದಿರಿಗೆ ಹೇಗೆ ಸದ್ಗತಿಯಾಗುವುದೆಂದು ಕೇಳಲು ನೀನು ಸ್ವರ್ಗಕ್ಕೆ ಹೋಗಿ ದೇವಗಂಗೆಯನ್ನು ತಂದು ಈ ಬೂದಿಯಮೇಲೆ ಬಿಟ್ಟರೆ ಸದ್ಗತಿ ಪ್ರಾಪ್ತನಾಗುತ್ತದೆ ನಿನ್ನಂಥ ಸತ್ಪುರುಷನು ಜನಿಸಿ ಈ ಕೆಲಸಮಾಡದೆ ಹೋದರೆ ಅವರಿಗೆ ಸದ್ಗತಿಯಿಲ್ಲದೆ ಹೋಗುತ್ತದೆಂದು ಹೇಳಿದ ಬಳಿಕ ಭಗೀರಥರಾಯನು ಸ್ವರ್ಗಕ್ಕೆಹೋಗಿ ಗಂಗಾನದಿಯನ್ನು ಪ್ರಾರ್ಥಿಸಿ ಬೇಡಿದನು, ಆ ಗಂಗೆಯು ಭಕ್ತವತ್ಸಲೆಯಾಗಿ ಈತನ ಹಿಂದೆ ಹೊರಟು ಕೂರ್ಮ, ಮೀನ, ಕಚ್ಛಪ ಗ್ರಾಹಾದಿ ಜಲಚರಂಗಳಿಂದಲೂ, ಫೇನ ಸಮೂಹಗಳಿಂದಲೂ, ಸ್ತಂಭಗಳೋಪಾದಿಯಲ್ಲಿ ಇಳಿಯು ಬೀಳುತ್ತಿರುವ ನೀರಿನಹಾವುಗಳಿಂದಲೂ, ಜಲವೆಂಬುವ ಅರಣ್ಯದಲ್ಲಿ ಬೆಳೆದಿರುವ ಬಳ್ಳಿಗಳೋ ಎಂಬಂತೆ ನೇತಾಡುತ್ತಿರುವ ಶೈವಾಲಗಳಿಂದಲೂ ಭೂಲೋಕವನ್ನು ಮುಳುಗಿಸಿ ಪ್ರಳಯ ಮಾಡುತ್ತೇ

ನೆಂದು ಮೊರೆಯಿಡುವಳೋ ಎಂಬಂತೆ ಗಂಭೀರವಾಗಿ ಶಬ್ದಮಾಡುತ್ತಾ ಭೂಲೋಕಕ್ಕೆ ಇಳಿಯುತ್ತಾ, ಹಿಮಾಚಲದಲ್ಲಿ ಪಾರ್ವತೀಸಹಿತನಾಗಿಯೂ, ಅಣಿಮಾದ್ಯಷ್ಟೈಶ್ವರ್ಯಗಳಿಂದಲೂ, ಭೂತ, ಭೇತಾಳ, ಕೂಷ್ಮಾಂಡ, ಯಕ್ಷ, ರಾಕ್ಷಸ, ಪಿಶಾಚ ಮೊದಲಾದ ಗಣಂಗಳಿಂದಲೂ, ಚಂಡಿಕೇಶ, ವೃಷಭ, ಭೃಂಗಿ, ತಂಡು, ನಂದೀಶ, ಗರುಡ, ವಿದ್ಯಾಧರ, ಕಿನ್ನರ, ಕಿಂಪುರುಷ, ಸಿದ್ಧ, ಸಾಧ್ಯರುಗಳಿಂದಲೂ ಸೇವಿಸಲ್ಪಡುತ್ತಿರುವ ಶಂಭುಮೂರ್ತಿಯ ಜಟಾಜೂಟದಲ್ಲಿ ಬಿದ್ದು, ಕ್ಷೀಣಳಾಗಿ ಹೋದಳು. ಬಳಿಕ ಭಗೀರಥರಾಯನು ವ್ಯಾಕುಲಚಿತ್ತನಾಗಿ ಆ ಸಾಂಬಮೂರ್ತಿಯನ್ನು ಕುರಿತು ತಪಸ್ಸುಮಾಡತೊಡಗಿದನು. ಈ ತಪಸ್ಸಿನಿಂದ ಸಂತುಷ್ಟನಾಗಿ ಭಗವಂತನು ತನ್ನ ಜಡೆಗಳಿಂದ ಕೊಂಚವಾಗಿ ಬಿಟ್ಟರೂ, ಮತ್ತು ಪ್ರವಾಹರೂಪವಾಗಿ ಹಿಮಾಲಯದ ಶಿರಸ್ಸಿನಲ್ಲಿ ಬಿದ್ದು ಅಲ್ಲಿಂದ ಏಳು ಭಾಗಗಳಾಗಿ ಮೂರು ಭಾಗಗಳು ಪಡವಲದಿಕ್ಕಿಗೆ ಹೋದವು, ಮೂರು ಭಾಗಗಳು ಪೂರ್ವಕ್ಕೆ ಹೋದವು, ಒಂದು ಭಾಗ ಆ ರಾಯನ ಹಿಂದೆ ಬರುತ್ತಾ ದಾರಿಯಲ್ಲಿ ಜನ್ಹುಮಹಾಮುನೀಶ್ವರನು ಯಾಗಮಾಡುತ್ತಿದ್ದ ಯಜ್ಞಶಾಲೆಯಲ್ಲಿ ಬ್ರಹ್ಮ ಋತ್ವಿಕ್ಕು ಮೊದಲಾದವರುಗಳಿಂದ ಕೂಡಿರುವಾಗ ಅಲ್ಲಿಗೆ ನುಗ್ಗಲು, ಆ ಮಹರ್ಷಿಗೆ ಕೋಪಬಂದು ಕೈಗೆ ಆಕರ್ಷಣಮಾಡಿ ಆಪೋಶನದಂತೆ ಕುಡಿದುಬಿಟ್ಟನು. ಅನಂತರದಲ್ಲಿ ಈ ರಾಯನು ದುಃಖಿತನಾಗಿ ಆತನನ್ನು ತನ್ನ ಗುಣಗಳಿಂದ ತೃಪ್ತಿಪಡಿಸಿದ ಬಳಿಕ ಆ ಮಹಾತ್ಮನು ತನ್ನ ಕರ್ಣಮಾರ್ಗದಿಂದ ಹೊರಕ್ಕೆ ಬಿಟ್ಟನು. ಆಗ ಜಾನ್ಹವಿಯೆಂಬ ಹೆಸರುಳ್ಳವಳಾಗಿ ಮತ್ತು ರಾಯನ ಹಿಂದೆ ಹೊರಟು ಬಂದು ಪಾತಾಳಕ್ಕೆ ಹೋಗಿ ಸಗರಪುತ್ರರ ಬೂದಿಯಮೇಲೆ ಪ್ರವಹಿಸಿತು, ಆಗ ಸಗರಪುತ್ರರಿಗೆ ಸದ್ಗತಿಯುಂಟಾಯಿತು. ಆದಕಾರಣ ಈ ಗಂಗೆಗೆ ಭಾಗೀರಥಿ ಎಂಬ ಹೆಸರು ಬಂದಿತು, ಸಗರಪುತ್ರರಿಂದ ಅಗೆಯಲ್ಪಟ್ಟದ್ದರಿಂದ ಸಮುದ್ರಕ್ಕೆ ಸಾಗರವೆಂದು ಹೆಸರಾಯಿತು. ಈ ಕಥೆಯನ್ನು ಭಕ್ತಿಯಿಂದ ಕೇಳಿದವರ ಸಕಲ ಪಾಪಗಳು ಶಾಂತಿಯಾಗಿ ಮೋಕ್ಷವು ಕರತಲಾಮಲಕವಾಗುತ್ತದೆಂದು ವಿಶ್ವಾಮಿತ್ರಋಷಿಯು ರಾಮಚಂದ್ರನಿಗೆ ಹೇಳಿದನು. ಬಳಿಕ ರಾಮಚಂದ್ರನು ವಿಸ್ಮಯಾವಿಷ್ಟಹೃದಯನಾಗಿ ಆನಂದ ಸುಧಾರಸ ಪಾನಮಾಡುತ್ತಾ ರಾತ್ರಿ ಕಳೆದ ಬಳಿಕ ಪ್ರಾತಃಕಾಲಕ್ಕೆ ಎದ್ದು ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ವಿಶ್ವಾಮಿತ್ರರೊಡನೆ ಮುಂದಕ್ಕೆ ಹೊರಟರು.

## ರಾಮಲಕ್ಷ್ಮಣರಿಗೆ ವಿಶ್ವಾಮಿತ್ರರು ಧನುರ್ವಿದ್ಯೆಯನ್ನು ಕಲಿಸಿದುದು.

ಆಗ ವಿಶ್ವಾಮಿತ್ರನು ಈ ರಾಮಲಕ್ಷ್ಮಣರಿಗೆ ಬಲ ಅತಿಬಲಾ ಎಂಬ ಎರಡು ವಿದ್ಯೆಗಳನ್ನು ಉಪದೇಶಿಸಿ ಬ್ರಹ್ಮಾಸ್ತ್ರ, ಐಂದ್ರಾಸ್ತ್ರ, ವಾಯುವ್ಯಾಸ್ತ್ರ, ವಾರುಣಾಸ್ತ್ರ, ಪಾಶುಪತಾಸ್ತ್ರ, ಕಾಲಪಾಶ, ಕಂಠಪಾಶ, ಬ್ರಹ್ಮಶಿರೋನಾಮಕ, ಅಶನಿಚಕ್ರ ಮುಂತಾದ ಸರ್ವಾಸ್ತ್ರಗಳ ಪ್ರಯೋಗೋಪಸಂಹಾರಗಳೊಡನೆ ಮಂತ್ರೋಪದೇಶಮಾಡಿ ಅಜೇಯವಾದ ತನ್ನ ಧನುಸ್ಸನ್ನು ಕೊಟ್ಟು ಸಕಲಾಶೀರ್ವಾದಗಳನ್ನು ಮಾಡಿ ಸಂಗಡ ಕರೆದುಕೊಂಡು ಹೊರಟನು. ಈ ರೀತಿಯಾಗಿ ಹೊರಟು ಮಾರ್ಗದಲ್ಲಿ ಅನೇಕ ವೃತ್ತಾಂತಗಳನ್ನು ವಿವರಿಸುತ್ತ ರಾಮಲಕ್ಷ್ಮಣರ ವಿನಯಾದಿ ಗುಣಗಳನ್ನು ನೋಡಿ ಶ್ಲಾಘಿಸುತ್ತಾ ರಾಮಾಗಮನದಿಂದ ತಾನು ಕೃತಾರ್ಥನಾದೆನೆಂದು ಹರ್ಷಿಸುತ್ತ ಮಾರ್ಗಮಧ್ಯದಲ್ಲಿ ನಡೆದುಹೋಗುತ್ತಿರುವ ಕಾಲದಲ್ಲಿ ಸುಬಾಹು ಮಾರೀಚರೆಂಬ ರಾಕ್ಷಸರಿಗೆ ತಾಯಿಯಾದ ಸಕಲ ಜನ ಶೋಕದಾಯಿನಿಯಾದ ಯಾಗಾದಿ ಕರ್ಮನಾಶನ ವಿಧಾಯಿನಿಯಾದ ಭಕ್ಷಿಸಲ್ಪಡುತ್ತಿರುವ ಮನುಷ್ಯ ಮಾಂಸಾದಿಗಳಿಂದ ತುಂಬಿರುವ ವಕ್ತ್ರಗಹ್ವರಗಳಿಂದ ಕೂಡಿದನಳಾಗಿ ದಂಷ್ಟ್ರಾಕರಾಳ ಮುಖಿಯಾಗಿ ಭಯಂಕರಳಾಗಿ ಶಬ್ದಮಾಡುತ್ತಾ ಎದುರಾಗಿ ಬಂದ ತಾಟಕಿಯನ್ನು ನೋಡಿ ರಾಮಚಂದ್ರನೇ ಈ ರಾಕ್ಷಸಿಯನ್ನು ಸಂಹರಿಸಬೇಕೆಂದು ವಿಶ್ವಾ

ಮಿತ್ರರು ಆಜ್ಞೆಯನ್ನಿತ್ತಬಳಿಕ ಅತಿವಾರ್ಯಪರಾಕ್ರಮನಾದ ರಾಮಚಂದ್ರನು ಬಾಣವನು ಪ್ರಯೋಗಿಸಲು ಆ ಪ್ರಹಾರದಿಂದ ರಕ್ತವನ್ನು ಕಾರುತ್ತಾ ಇಂದ್ರನಿಂದ ಕತ್ತರಿಸಲ್ಪಟ್ಟ ಪಕ್ಷಗಳುಳ್ಳ ಪರ್ವತದೋಪಾದಿಯಲ್ಲಿ ನೆಲಕ್ಕೆ ಬಿದ್ದಳು ಈ ಕೃತ್ಯವಂ ನೋಡಿ ವಿಶ್ವಾಮಿತ್ರನು ಪುಲಕಿತಗಾತ್ರನಾಗಿ ರಾಮನನ್ನು ಶ್ಲಾಘಿಸುತ್ತಾ ಮುಂದೆ ಹೊರಟನು ರಾಮಚಂದ್ರನು ಲಕ್ಷ್ಮಣಾನುಚರನಾಗಿ ಹಿಂಬಾಲಿಸಿ ಹೋಗುತ್ತಿದ್ದನು ಆ ಬಳಿಕ ಕೆಲವು ದಿನಗಳು ಪ್ರಯಾಣಮಾಡಿ ಸಿದ್ಧಾಶ್ರಮವನ್ನು ಸೇರಿದರು. ಅಲ್ಲಿ ಸಮಸ್ತ ಋಷಿಗಳು ವಿಶ್ವಾಮಿತ್ರರ ಆಗಮನವನ್ನು ನಿರೀಕ್ಷಿಸುತ್ತಿದ್ದು ಆತನ ಆಗಮನದಿಂದ ಕೃತಕೃತ್ಯರಾದರು. ಅನಂತರದಲ್ಲಿ ವಿಶ್ವಾಮಿತ್ರನು ದೀಕ್ಷಾಬದ್ಧನಾಗಿ ಋತ್ವಿಕ್ಕು ಮೊದಲಾದವರಿಂದ ಕೂಡಿ ಯಜ್ಞಕ್ಕೆ ಉಪಕ್ರಮಿಸಲು ಸುಬಾಹು ಮಾರೀಚ ರಾಕ್ಷಸರಿಂದ ಸೇರಿದವನಾಗಿ ಬಂದು ಅಗ್ನಿಕುಂಡದಲ್ಲಿ ರಕ್ತವನ್ನು ಸುರಿಯುವುದು ಮುಂತಾದ ಕ್ರೂರಕೃತ್ಯಗಳಿಂದ ವಿಘ್ನಮಾಡಲು ಯತ್ನಿಸಿದರು ಆಗ ವಿಶ್ವಾಮಿತ್ರನಿಂದ ನಿಯಮಿತನಾಗಿ ರಾಮಚಂದ್ರನು ಬಾಣಪ್ರಯೋಗಮಾಡಲು ಸುಬಾಹುವು ಸಮುದ್ರಮಧ್ಯದಲ್ಲಿ ಬಿದ್ದನು. ಮಾರೀಚನು ಲಂಕೆಗೆ ಹಾರಿಬಿದ್ದನು. ಮಿಕ್ಕಾದ ರಾಕ್ಷಸರು ಮೃತಿಯನ್ನು ಹೊಂದಿದರು. ಆಗ ಸಮಸ್ತ ಋಷಿಗಳು ಆನಂದಭರಿತರಾಗಿ ರಾಮನನ್ನು ಶ್ಲಾಘಿಸಿದರು ಯಾಗವು ಸಾಂಗವಾಗಿ ನೆರವೇರಿತು, ಹೀಗೆ ಯಜ್ಞವು ಪೂರ್ತಿಯಾಗಿ ಸಿದ್ಧಾಶ್ರಮದಲ್ಲಿ ಕೆಲವುದಿನ ರಾಮಲಕ್ಷ್ಮಣರು ವಾಸವಾಗಿದ್ದರು.

## ಅಹಲ್ಯಾ ಶಾಪವಿಮೋಚನೆ.

ಇತ್ತ ಜನಕಮಹಾರಾಜನು ಮಿಥಿಲಾನಗರದಲ್ಲಿ ತನ್ನ ಪುತ್ರಿಯಾದ ಲೋಕಮಾತೆಯಾದ ಸೀತಾದೇವಿಗೆ ಸ್ವಯಂವರಕ್ಕೆ ಉಪಕ್ರಮ ಮಾಡಿದನೆಂಬದಾಗಿ ತಿಳಿದು ಋಷಿಗಳೂ ರಾಜಪುತ್ರರೂ ಬ್ರಾಹ್ಮಣರೂ ಹೋಗುತ್ತಿರಲು ತ್ರಿಕಾಲವೇದಿಯಾದ ವಿಶ್ವಾಮಿತ್ರನು ರಾಮಲಕ್ಷ್ಮಣರನ್ನೂ ಪ್ರಯಾಣಮಾಡಿ ಸಂಗಡ ಕರೆದುಕೊಂಡು ಹೊರಟುಬರುತ್ತಿದ್ದನು. ಆ ಮಿಥಿಲಾನಗರದ ಮಾರ್ಗದಲ್ಲಿ ಶಾಪದೋಷದಿಂದ ಕಲ್ಲಾಗಿಬಿದ್ದಿರುವ ಅಹಲ್ಯಾದೇವಿಯ ಚರಿತ್ರೆಯನ್ನು ಹೇಳಲುಪಕ್ರಮಿಸಿದನು. ಎಲೈ ವಿನಯಸಂಪನ್ನನಾದ, ರಾಮಚಂದ್ರನೇ! ಕೇಳು ಪೂರ್ವಕಾಲದಲ್ಲಿ ಜನಕಪುರೋಹಿತನಾದ ಶತಾನಂದನನ ತಂದೆಯಾದ ಗೌತಮಋಷಿಗೆ ಅಹಲ್ಯಾದೇವಿಯೆಂಬ ಪತಿವ್ರತಾಶಿರೋಮಣಿಯು ಪತ್ನಿಯಾಗಿದ್ದಳು. ಆಕೆ ಲೋಕೋತ್ತರ ಸೌಂದರ್ಯವುಳ್ಳವಳಾದಕಾರಣ ದೇವೇಂದ್ರನು ಕಾಮಮೋಹಿತನಾಗಿ ಒಂದುದಿನ ಅರ್ಧರಾತ್ರಿಯ ಹೊತ್ತಿನಲ್ಲಿ ವೇಷಧಾರಿಯಾಗಿ ಆ ಋಷಿಯ ಆಶ್ರಮಕ್ಕೆ ಬಂದು ಕೋಳಿಯಹಾಗೆ ಕೂಗಿದನು, ಆ ಶಬ್ದವನ್ನು ಕೇಳಿ ಸ್ನಾನಕಾಲವಾಯಿತೆಂದು ಆ ಋಷಿಯು ಅನುಷ್ಠಾನಕ್ಕ ನದಿಗೆ ಹೊರಟನು, ಆಗ ಇಂದ್ರನು ಮಲಗಿದ್ದ ಈ ಪತಿವ್ರತಾಶಿರೋಮಣಿಯನ್ನು ವಂಚಿಸಿ ಕ್ರೀಡಿಸತೊಡಗಿದನು ಆ ಮಹಾದೇವಿಯು ಪತಿಯೆಂಬದಾಗಿ ತಿಳಿದು ಸುಮ್ಮನಿದ್ದಳು. ಆ ತರುವಾಯ ಋಷಿಯು ನದೀತೀರಕ್ಕೆ ಹೋಗಿ ನೀರು ನಿಶ್ಚಲವಾಗಿರುವುದನ್ನು ಕಂಡು ಇನ್ನು ರಾತ್ರಿಯಾಗಿಯೇ ಇದೆ, ಈಗ ಸ್ನಾನಕಾಲವಲ್ಲವೆಂದು ಭಾವಿಸಿ ತನ್ನ ಆಶ್ರಮಕ್ಕೆ ಬಂದು ಆಗತಾನೇ ಇಂದ್ರನ ಸಂಗಡ ರತಿಯಂಗೈದ ಅಹಲ್ಯಾದೇವಿಯೊಡನೆ ತಾನು ಸುರತಕ್ಕೆ ಉಪಕ್ರಮಿಸಿದನು ಆಗ ಅವಳು ಇಷ್ಟುಹೊತ್ತು ರತಿಸುಖದಲ್ಲಿದ್ದು ಈಗ ಪುನಃ ಹೀಗೆ ಮಾಡುವುದು ಸರಿಯಲ್ಲವೆಂದು ಹೇಳಲು ಋಷಿಯು ಅನುಮಾನಪಟ್ಟು ತನ್ನ ದಿವ್ಯಜ್ಞಾನದಿಂದ ಆಲೋಚಿಸಿ ನಡೆದ ಸಂಗತಿಯನ್ನು ತಿಳಿದು ಇವಳು ಕಲ್ಲಾಗಿ ಹೋಗಲಿ ಇಂದ್ರನ ವೀರ್ಯಕೋಶವು ಹಾಳಾಗಲಿ ಎಂದು ಶಾಪಕೊಟ್ಟನು ಬಳಿಕ ಆ ಅಹಲ್ಯಾದೇವಿಯು ಕಳವಳಗೊಂಡು ನಡುಗುತ್ತಾ, ಋಷಿಯ ಪಾದಗಳಿಗೆರಗಿ ನಿರ

ಪರಾಧಿಯಾದ ನನಗೆ ಶಾಪಕೊಟ್ಟರೆ ನಾನು ಏನುಮಾಡಬೇಕು ಮೋಸ ನಡೆದುಹೋಯಿತೆಂದು ಬಹಳವಾಗಿ ಬೇಡಲು, ದಯಾರಸ ಪರಿಪೂರ್ಣನಾಗಿ ಭಗವಂತನು ರಾಮಾವತಾರ ಮಾಡಿದಾಗ ಅವನ ಕಾಲು ನಿನಗೆ ಸೋಕಿದರೆ ಶಾಪಪರಿಹಾರವಾಗಿ ಮಹಾ ಪತಿವ್ರತೆಯೆಂಬ ಪ್ರಖ್ಯಾತಿ ಗೊಂಡು ಸುಖವಾಗಿರು ಎಂದು ಅನುಗ್ರಹಮಾಡಿದನು. ನೀನು ಆ ಪಾಷಾಣದಮೇಲೆ ಪಾದ ವನ್ನಿಟ್ಟರೆ ಅಹಲ್ಯಾ ಶಾಪವಿಮೋಚನೆ ಯಾಗುತ್ತದೆ ಹಾಗೆಮಾಡು ಎಂದು ಹೇಳಲು ರಾಮ ಚಂದ್ರನು ಲೋಕವಂದ್ಯವಾದ ಲಕ್ಷ್ಮೀಸೇವ್ಯವಾದ ಹಲಕುಲಿಶಾಂಕುಶ, ಜಲಜಧ್ವಜ, ಪುತ್ರ ರೇಖೆಗಳಿಂದಲಂಕೃತವಾದ ತನ್ನ ಪಾದದಿಂದ ಆ ಶಿಲೆಯನ್ನು ತುಳಿದು ಸ್ವಸ್ವರೂಪಗಳಾದ ಅಹ ಲ್ಯಾದೇವಿಯನ್ನು ನೋಡಿ ವಿಸ್ಮಿತನಾದನು, ಬಳಿಕ ಅಹಲ್ಯೆಯು ರಾಮನನ್ನು ಬಹಳವಾಗಿ ಸ್ತುತಿಸಿ ವಿಶ್ವಾಮಿತ್ರನಿಗೆ ನಮಸ್ಕರಿಸಿ ತನ್ನ ಪತಿಯಾದ ಗೌತಮನ ಆಶ್ರಮಕ್ಕೆ ಹೋದಳು. ತರುವಾಯ ವಿಶ್ವಾಮಿತ್ರಾದಿಗಳು ಅಲ್ಲಿಂದ ಮುಂದಕ್ಕೆ ಹೊರಟು ನದಿಗಳನ್ನು ಗ್ರಾಮಗಳನ್ನು ಗಿರಿಗಳನ್ನು ವನಗಳನ್ನು ಋಷ್ಯಾಶ್ರಮಗಳನ್ನು ದಾಟಿ ಕಡೆಗೆ ಮಿಥಿಲಾಪಟ್ಟಣಕ್ಕೆ ಬಂದರು.

## ಸೀತಾಸ್ವಯಂವರ.

ಅತ್ತಲಾ ಮಿಥಿಲಾಪಟ್ಟಣದಲ್ಲಿ ಜನಕಮಹಾರಾಯನು ತನ್ನ ಪುತ್ರಿಯಾದ ಲೋಕಮಾತೆ ಯಾದ ಸೀತಾದೇವಿಗೆ ಸ್ವಯಂವರ ಮಹೋತ್ಸವವನ್ನು ಮಾಡಲೆಳಸಿ ತನ್ನ ರಾಜಧಾನಿಯಾದ ಮಿಥಿಲಾನಗರವನ್ನಲಂಕರಿಸಿ ಸ್ವಯಂವರಕ್ಕಾಗಿ ಬಂದ ರಾಜಕುಮಾರರಿಗೂ, ಋಷಿವರ್ಯರಿಗೂ, ಬ್ರಾಹ್ಮಣೋತ್ತಮರಿಗೂ, ಅರ್ಹವಾದ ಭವನಗಳನ್ನು ಸಿದ್ಧಪಡಿಸಿ ತಮ್ಮ ಪೂರ್ವಿಕನಾದ ದೇವ ರಾಜನಿಗೆ ವರುಣನಿಂದ ಕೊಡಲ್ಪಟ್ಟ ಈಶ್ವರ ಧನುಸ್ಸನ್ನು ಹದಿನಾಲ್ಕು ಸಾವಿರ ಭಟರಿಂದ ತರಿಸಿ ಸ್ವಯಂವರ ಮಂಟಪದಲ್ಲಿ ಸ್ಥಾಪಿಸಿ ಈ ಧನುಸ್ಸನ್ನು ಹೂಡಿ ಬಾಣಸಂಧಾನ ಮಾಡಿದವನಿಗೆ ನನ್ನ ಪುತ್ರಿಯಾದ ಸೀತೆಯನ್ನು ಕೊಡುತ್ತೇನೆಂದು ಪ್ರತಿಜ್ಞೆಮಾಡಿ ಮಂತ್ರಿಗಳಿಂದಲೂ ಸ್ವಾಮಿ ಕಾರ್ಯನಿರತರಾದ ಭೃತ್ಯರಿಂದಲೂ ಪರಮಾಪ್ತರಾದ ಬಂಧುಗಳಿಂದಲೂ ಶತಾನಂದಾದಿ ಪುರೋ ಹಿತರಿಂದಲೂ ವಂದಿಮಾಗಧ ಸೂತರಿಂದಲೂ ಕೂಡಿ ಆಸ್ಥಾನದಲ್ಲಿ ಕುಳಿತಿದ್ದನು. ಈಗ ಈ ವಿಶ್ವಾಮಿತ್ರನು ರಾಮಲಕ್ಷ್ಮಣ ಸಮೇತನಾಗಿ ಆಸ್ಥಾನಮಂಟಪಕ್ಕೆ ಬಂದು ತಾನು ಬಂದಿರುವ ಸುದ್ದಿಯನ್ನು ಜನಕರಾಯನಿಗೆ ತಿಳಿಸಲು ಶತಾನಂದನೊಡಗೂಡಿ ಸಿಂಹಾಸನದಿಂದೆದ್ದು ಎದುರು ಗೊಂಡು ವಿಶ್ವಾಮಿತ್ರಋಷಿಗೆ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಭಕ್ತಿಯಿಂದ ಕರೆದುತಂದು ಉಚಿತಾಸನಗಳಲ್ಲಿ ಕುಳ್ಳಿರಿಸಿ ಎಲೈ ಋಷಿವರ್ಯನೇ ನಿನ್ನ ಆಗಮನದಿಂದ ನನ್ನ ಜನ್ಮವು ಸಫಲ ವಾಯಿತು ತಮ್ಮ ಪಾದಧೂಳಿನಿಂದ ನನ್ನ ಗೃಹವು ಪರಿಶುದ್ಧವಾಯಿತು ನಾನು ಈ ಚಂದ್ರವಂಶ ದಲ್ಲಿ ಹುಟ್ಟಿದುದಕ್ಕೆ ಸಾರ್ಥಕವಾಯಿತು ತಮಗೆ ಸುಖಾಗಮನವೇ ಎಂದು ಕುಶಲಪ್ರಶ್ನೆಯನ್ನು ಮಾಡಿ ಸಮೀಪದಲ್ಲಿರುವ ರಾಮಲಕ್ಷ್ಮಣರನ್ನು ನೋಡಿ ಸಂತೋಷಪಟ್ಟು ಸ್ವಯಂವರಕ್ಕಾಗಿ ಬಂದಿರುವ ವಸಂತಮನ್ಮಥರೋ ಅಶ್ವಿನೀದೇವತೆಗಳೋ ಪರಮಪುರುಷನ ಪ್ರತಿರೂಪಿಗಳೋ! ನನ್ನ ಪುತ್ರಿಯಾದ ಸೀತಾದೇವಿಗೆ ಇಂಥಾ ಪುರುಷನು ಸಿಕ್ಕುವಬಗೆ ಹೇಗೆ ಶಿವಧನುಸ್ಸಂಧಾನ ಮಾಡಬೇಕೆಂಬ ಪ್ರತಿಜ್ಞೆಮಾಡಿರುವೆನು. ಅದಿಲ್ಲದೇ ಇದ್ದರೆ ಈ ಮಹಾಪುರುಷನಿಗೆ ಕನ್ಯಾದಾನ ಮಾಡಿ ಕೃತಾರ್ಥನಾಗುತ್ತಿದ್ದೆನು ಆಡಿದಮಾತಿಗೆ ತಪ್ಪುವದು, ಯಾರಿಗೂ ಯೋಗ್ಯವಾದುದಲ್ಲ ಇದಕ್ಕೇನು ಮಾಡಬೇಕೆಂದು ಚಿಂತಿಸಿ ಸ್ವಲ್ಪಹೊತ್ತು ಸುಮ್ಮನಿದ್ದು ಋಷಿಯನ್ನು ಕುರಿತು ಸ್ವಾಮಿ! ಈ ಕುಮಾರರು ಯಾರು ಎಂದು ಕೇಳಿದನು. ಆಗ ವಿಶ್ವಾಮಿತ್ರನು ಅಯ್ಯಾ ಜನಕ ಮಹಾರಾಜನೇ! ಈ ಬಾಲಕರು ದಶರಥಮಹಾರಾಜನ ಮಕ್ಕಳು ಇವರ ಹೆಸರು ರಾಮಲಕ್ಷ್ಮ

ಣರು ನಮ್ಮ ಆಶ್ರಮದಲ್ಲಿ ರಾಕ್ಷಸರಬಾಧೆಯು ಹೇರಳವಾಗಿದ್ದ ಕಾರಣ ಇವರನ್ನು ಕರೆದುಕೊಂಡು ಬಂದೆನು ಸುಬಾಹು ಮೊದಲಾದ ರಾಕ್ಷಸರನ್ನು ಸಂಹಾರಮಾಡಿ ನನಗೆ ಸುಖವನ್ನುಂಟುಮಾಡಿ ರುತ್ತಾನೆ. ಸೀತಾಸ್ವಯಂವರವನ್ನು ನೋಡಬೇಕೆಂಬ ಕುತೂಹಲದಿಂದ ಇಲ್ಲಿಗೆ ಬಂದಿರು ತ್ತಾರೆ. ಇವರಲ್ಲದೆ ದಶರಥನಿಗೆ ಭರತ ಶತ್ರುಘ್ನರೆಂಬ ಇನ್ನಿಬ್ಬರು ಕುಮಾರರೂ ಇರುತ್ತಾರೆ ಎಂದು ಹೇಳಲು ಜನಕಮಹಾರಾಜನು ಬಹಳ ಆಶ್ಚರ್ಯಪಟ್ಟು ಆಹಾ ಇವರ ಸ್ವರೂಪಕ್ಕೆ ಅನುರೂಪವಾಗಿ ಸದ್ವಂಶವೂ ಸೇರಿತಲ್ಲ ಈ ರಾಮಚಂದ್ರನೇ ಈ ಧನುಸ್ಸಂಧಾನಮಾಡಿದರೆ ಸೀತಾದೇವಿಯು ಪುಣ್ಯವಂತೆ ಎನ್ನುವುದಕ್ಕೆ ಸಂಶಯವಿಲ್ಲ ಈ ಮಹಾತ್ಮರಿಗೂ ಸೀತಾದೇವಿಗೂ ಸಂಬಂಧವುಂಟಾದರೆ ಸ್ವರ್ಣಭೂಷಣದಲ್ಲಿ ರತ್ನವನ್ನು ಕೆತ್ತಿದಹಾಗಾದೀತು ಎಂದು ಯೋಚಿಸುತ್ತಿ ದ್ದನು ಆಬಳಿಕ ಸಕಲ ರಾಜಕುಮಾರರೂ ಬಂದು ತಮಗೆ ಅರ್ಹವಾದ ಆಸನಗಳಲ್ಲಿ ಕುಳಿತು ಈ ಧನುಸ್ಸನ್ನು ನೋಡಿದಮಾತ್ರದಿಂದಲೇ ಭಗ್ನಮನೋರಥರಾಗಿ ರಾಮಲಕ್ಷ್ಮಣರನ್ನು ನೋಡಿ ಅವರ ರೂಪರೇಖಾದಿಗಳಿಂದ ವಿಸ್ಮಯಾವಿಷ್ಟರಾಗಿ ಚಿತ್ರಾರ್ಪಿತ ಪ್ರತಿಮೆಗಳೋಪಾದಿಯಲ್ಲಿ ದ್ದರು. ಅನಂತರದಲ್ಲಿ ಜನಕಮಹಾರಾಯನು ಎದ್ದುನಿಂತು ತನ್ನ ಭುಜವನ್ನು ಎತ್ತಿ ಈ ರಾಜ ಪುತ್ರರಲ್ಲಿ ಯಾರು ಈ ಧನುಸ್ಸಿನಲ್ಲಿ ಬಾಣಸಂಧಾನ ಮಾಡುವರೋ ಅವರಿಗೆ ಸೀತಾದೇವಿಯನ್ನು ಕೊಟ್ಟು ವಿವಾಹಮಾಡುತ್ತೇನೆಂದು ಸಾರಿದನು- ಆಗ ಅಲ್ಲಿದ್ದ ರಾಜಕುಮಾರರು ಆಶಾರಹಿತ ರಾಗಿ ತಮ್ಮತಮ್ಮ ಸ್ಥಾನಗಳಿಂದ ಚಲಿಸಲೇಯಿಲ್ಲ ಆಗ ಈ ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ಆಜ್ಞೆಮಾಡಲು ರಾಮನು ವಿಶ್ವಾಮಿತ್ರನಿಗೆ ಮಣಿದು ಧನುಸ್ಸಿನ ಹತ್ತಿರಕ್ಕೆ ಹೋಗಿ ತನ್ನ ಬಾಹು ದಂಡಗಳಿಂದ ತಬ್ಬಿ ಬಗ್ಗಿಸಲು ಆ ಶಿವಧನುಸ್ಸು ಮುರಿದು ಮಹಾಶಬ್ದದೊಡನೆ ಎರಡು ತುಂಡಾ ಯಿತು. ಆ ಶಬ್ದವನ್ನು ಕೇಳಿ ಸಭೆಯಲ್ಲಿದ್ದ ರಾಜಕುಮಾರರಲ್ಲಿ ಕೆಲವರು ಆಸನಗಳಿಂದುರಳಿ ಬಿದ್ದರು ಇನ್ನೂ ಕೆಲವರು ಓಡಿಹೋದರು ಹಲವರು ಏನೂ ತೋರದೇ ನಿಶ್ಚಲರಾಗಿದ್ದರು. ಜನಕಮಹಾರಾಜನು ಪುಲಕಿತಗಾತ್ರನಾಗಿ ಸಂಪ್ರಾಪ್ತ ಮನೋರಥನಾಗಿ ಆನಂದಸಾಗರದಲ್ಲಿ ತೇಲಾಡುತ್ತಿದ್ದನು. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು ಅಪ್ಸರಸ್ತ್ರೀಯರು ನೃತ್ಯವಾಡಿ ದರು ಸಭಾಸದರೆಲ್ಲರೂ ಜಯಜಯಧ್ವನಿಮಾಡಿದರು ಬಳಿಕ ರಾಮನು ಲಕ್ಷ್ಮಣಾನುಚರನಾಗಿ ತನ್ನ ಆಸನದಲ್ಲಿ ಕುಳಿತುಕೊಂಡನು- ಸೀತಾದೇವಿಯು ಸಖೀಸಮೇತಳಾಗಿ ಸ್ವಯಂವರ ಮಂಟ ಪಕ್ಕೆ ಬಂದು ರಾಮಚಂದ್ರನ ಮುಖಾರವಿಂದದಲ್ಲಿ ತನ್ನ ಅಪಾಂಗವೀಕ್ಷಣೆಗಳೆಂಬ ಭ್ರಮರಗ ಳನ್ನು ಪ್ರೇರಿಸಿ ನಿಲ್ಲಿಸುತ್ತ ಕಿಸಲಯ ಸಮಾನವಾದ ಕರಗಳಿಂದ ಸ್ರವನ್ಮಕರಂದವೆನಿಪ ಪುಷ್ಪ ಹಾರವನ್ನು ರಾಮಚಂದ್ರನ ಕೊರಳಿಗೆ ಹಾಕಿ ತತ್ಕರಗೃಹೀತೆಯಾಗಿ ಅರ್ಧಾಸನದಲ್ಲಿ ಕುಳಿತಳು, ಬಳಿಕ ಎಲ್ಲರೂ ಪೂರ್ಣಮನೋರಥರಾಗಿ ಎದ್ದು ತಮ್ಮತಮ್ಮ ಆವಾಸಗಳಿಗೆ ತೆರಳಿದರು ತರು ವಾಯ ಜನಕರಾಯನು ವಿಶ್ವಾಮಿತ್ರನನ್ನೂ ರಾಮಲಕ್ಷ್ಮಣರನ್ನು ಕರೆದುಕೊಂಡು ತನ್ನ ಅರ ಮನೆಗೆ ಹೋದನು.

## ಜನಕರಾಯನು ದಶರಥನಿಗೆ ಲಗ್ನಪತ್ರಿಕೆಯನ್ನು ಕಳುಹಿಸಿದುದು.

ಮಾರನೆಯ ದಿನ ಜನಕಮಹಾರಾಜನು ಜೋಯಿಸರಿಂದ ವಿವಾಹಲಗ್ನವನ್ನು ನಿಶ್ಚಯಿಸಿ ವಿಶ್ವಾಮಿತ್ರಾಜ್ಞೆಯನ್ನು ಪಡೆದು ಲಗ್ನಪತ್ರಿಕೆಯನ್ನು ಬರೆಸಿ ದಶರಥಮಹಾರಾಜನಿಗೆ ಕಳುಹಿಸಿ ದನು. ದಶರಥಮಹಾರಾಜನು ವಿಶ್ವಾಮಿತ್ರರೊಡಗೂಡಿ ಸಿದ್ಧಾಶ್ರಮಕ್ಕೆ ಹೋದ ಲಕ್ಷ್ಮಣಾ ನುಚರನಾದ ರಾಮಚಂದ್ರನ ವೃತ್ತಾಂತವೆ ತಿಳಿಯದೆ ಯೋಚನೆಯಿಂದ ಹಂಸತೂಲಿಕಾತಲ್ಪದಲ್ಲಿ ಮಲಗಿ ನಿದ್ರೆಗೈದು ಮಾಗಧ ಸ್ತುತಿಪಾಠಕರಿಂದ ಎಚ್ಚರಗೊಂಡು ಸ್ನಾನಾದಿಗಳನ್ನು ಮಾಡಿ

ಮೃಷ್ಟಭೋಜನವನ್ನು ಸಲ್ಲಿಸಿ ಸುಖದಿಂದಿದ್ದ ಕುಸುಮಕೋಮಲ ಶರೀರನಾದ ರಾಮಚಂದ್ರನು ಅನುಜ ಸಮೇತನಾಗಿ ಅರಣ್ಯದಲ್ಲಿ ವ್ಯಾಘ್ರಾದಿ ಮೃಗಗಳ ಘೋರಶಬ್ದಗಳನ್ನು ಕೇಳುತ್ತಾ ಕಂಟಕಮಧ್ಯದಲ್ಲಿ ಕಿಸಲಯೋಪಮವಾದ ತನ್ನ ಚರಣಗಳನ್ನಿಡುತ್ತ ವಾತಾತಪಾಕ್ರಾಂತನಾಗಿ ವೃಕ್ಷಗಳ ಕೆಳಗೆ ಹೇಗೆ ಮಲಗಿ ನಿದ್ರೆಮಾಡುವನೊ ಆ ಲಕ್ಷ್ಮಣನು ಅಗ್ರಜನನ್ನು ಹೇಗೆ ಸೇವಿಸುವನೋ ಋಷಿಜನಭೋಜ್ಯವಾದ ಕಂದಮೂಲ ನೀವಾರಾದಿಗಳನ್ನು ಹೇಗೆ ತಿನ್ನುವನೋ ಎಂದಿಗೆ ಸುಖವಾಗಿ ಬಂದು ಮಧುರವಾದ ಧ್ವನಿಯಿಂದ ನನ್ನನ್ನು ಮಾತನಾಡಿಸಿ ಶರಚ್ಚಂದ್ರಸಮಾನವಾದ ತನ್ನ ಮುಖವನ್ನು ಎಂದಿಗೆ ನನಗೆ ತೋರಿಸುವನೋ ಎಂದು ಮನಸ್ಸಿನಲ್ಲಿ ಚಿಂತಿಸುತ್ತಿರುವ ಸಮಯದಲ್ಲಿ ದ್ವಾರಪಾಲಕನು ಬಂದು ಕೈಮುಗಿದು ಸ್ವಾಮಿಾ ಪರಾಕು ರಘುವಂಶತಿಲಕ ದಶರಥಮಹಾರಾಯನೇ ಮಿಥಿಲಾಪಟ್ಟಣದ ಜನಕಮಹಾರಾಜನಿಂದ ಕಳುಹಿಸಲ್ಪಟ್ಟ ಒಬ್ಬ ಬ್ರಾಹ್ಮಣನು ಕುಶಲಪತ್ರಿಕಾಸಮೇತನಾಗಿ ಬಂದು ಬಾಗಿಲಲ್ಲಿ ನಿಂತಿರುವನು ಎಂದು ವಿಜ್ಞಾಪಿಸಿದನು. ಆಗ ದಶರಥರಾಯನು ಆತನನ್ನು ಬರಮಾಡು ಎಂದು ಆಜ್ಞೆಯನ್ನಿತ್ತು ಸಿಂಹಾಸನದಿಂದೆದ್ದು ಎದುರಾಗಿ ಬರುತ್ತಿರಲು ದ್ವಾರಪಾಲಕನು ಶೀಘ್ರವಾಗಿ ಬಂದು ಆ ಬ್ರಾಹ್ಮಣನನ್ನು ಕರೆದುಕೊಂಡು ಬರುತ್ತಿದ್ದನು ರಾಯನು ಆತನಿಗೆರಗಿ ಅರ್ಘ್ಯಾದಿಗಳಿಂದ ಪೂಜಿಸಿ ಆಲಿಂಗನ ಮಾಡಿಕೊಂಡು ಕೈಹಿಡಿದು ಕರೆದು ತಂದು ಆಸನದಲ್ಲಿ ಕುಳ್ಳಿರಿಸಿ ಆತನ ಕೈಲಿದ್ದ ಪತ್ರಿಕೆಯನ್ನು ಓದಿನೋಡಿ ಪುಲಕಿತನಾಗಿ ಸಂತೋಷದಿಂದ ಕೊಂಚಹೊತ್ತು ಕಳೆದ ಬಳಿಕ ವಸಿಷ್ಠಾದಿ ಋಷಿಗಳಿಗೂ ಸುಮಂತ್ರಾದಿ ಮಂತ್ರಿಗಳಿಗೂ ಈ ಶುಭವೃತ್ತಾಂತವನ್ನು ತಿಳಿಸಿ ಮಿಥಿಲಾಪಟ್ಟಣಕ್ಕೆ ಹೊರಡಲು ನಿಶ್ಚಯಿಸಿ ವಿವಾಹೋಪಕರಣಗಳಿಂದಲೂ ಹಸ್ತಿ ಅಶ್ವ ರಥಾದಿಗಳಿಂದಲೂ ಕೂಡಿ, ಪತ್ನೀಸಮೇತನಾಗಿ ವಸಿಷ್ಠನೊಡನೆ ಹೊರಟು ಪ್ರಯಾಣಮಾಡಿ ಮಿಥಿಲಾನಗರದ ಸಮಿಾಪಕ್ಕೆ ಬಂದು ಜನಕರಾಯನಿಗೆ ಈ ವೃತ್ತಾಂತವನ್ನು ತಿಳಿಸಿದನು, ಆತನು ಧನ್ಯನಾಗಿ ರಾಮಲಕ್ಷ್ಮಣ ವಿಶ್ವಾಮಿತ್ರ ಶತಾನಂದ ಮೊದಲಾದ ತನ್ನ ಪರಿವಾರದೊಡಗೂಡಿ ಎದುರಾಗಿ ಬಂದು ದಶರಥಮಹಾರಾಜನನ್ನು ಕಂಡು ಕುಶಲಪ್ರಶ್ನೆಮಾಡಿ ಆಲಿಂಗಿಸಿಕೊಂಡು ವಸಿಷ್ಠರಿಗೆರಗಿ ಕುಳಿತುಕೊಂಡನು. ದಶರಥಮಹಾರಾಯನು ತನ್ನ ಪ್ರಾಣಸಮಾನರಾದ ರಾಮಲಕ್ಷ್ಮಣರನ್ನು ಎತ್ತಿಕೊಂಡು ಆನಂದಭಾಷ್ಪದಿಂದ ಮೂರ್ಧಾಘ್ರಾಣಮಾಡಿ ನಿಧಿಯನ್ನು ನೋಡಿದ ಬಡವನ ಹಾಗೆ ಅಮಿತ ಸಂತೋಷದಲ್ಲಿದ್ದನು. ಆಗ ರಾಮಲಕ್ಷ್ಮಣರು ಭರತಶತ್ರುಘ್ನರನ್ನು ಕಂಡು ವಿಶ್ವಾಸದಿಂದ ಆಲಿಂಗಿಸಿಕೊಂಡು ತಾಯಿಯರಾದ ಕೌಸಲ್ಯಾ ಕೈಕಯಿಾ ಸುಮಿತ್ರೆಯರ ಪಾದಗಳಿಗೆರಗಿ ಸುಖಾಸೀನರಾದರು ಜನಕಮಹಾರಾಜನು ಮಿಥಿಲಾಪಟ್ಟಣಕ್ಕೆ ಎಲ್ಲರನ್ನು ಕರೆದುಕೊಂಡು ಹೊರಟು ಪಟ್ಟಣಪ್ರವೇಶ ಮಾಡಿದನು ಇಂದ್ರಭವನ ಸಮಾನವಾದ ಭವನದಲ್ಲಿ ಬೀಗರನ್ನು ಇಳಿಸಿ ಯಥಾರ್ಥವಾಗಿ ಅತಿಥ್ಯಾದಿಗಳನ್ನು ಮಾಡಿಸಿದನು. ಬಳಿಕ ಜನಕರಾಯನೂ ದಶರಥನೂ ಪರಿವಾರಸಹಿತರಾಗಿ ಚಂದನಕುಸುಮ ತಾಂಬೂಲಾದಿಗಳನ್ನು ಸೇವಿಸಿ ಸುಖಗೋಷ್ಠಿಯಲ್ಲಿದ್ದರು. ಆಗ ಶತಾನಂದನು ಹೀಗೆ ಪ್ರಸಂಗಿಸಲುಪಕ್ರಮಿಸಿದನು, ಓ ಜನಕಮಹಾರಾಜನೇ! ಈಗ ನಿನ್ನ ಮನೋರಥವು ಸಫಲವಾಯಿತು, ಸೂರ್ಯವಂಶಾವತಂಸನಾದ ರಘುವಂಶ ಲಲಾಮನಾದ ಈ ದಶರಥರಾಯನ ಸಂಬಂಧವು ನಿನಗೆ ಪ್ರಾಪ್ತವಾದುದು ನಿನ್ನ ಪುಣ್ಯವೇಸರಿ, ನಿನ್ನ ಪುರೋಹಿತನಾದ ನಾನೂ ಕೃತಾರ್ಥನಾದೆನು, ವಸಿಷ್ಠಮಹಾಮುನಿಯು ಈ ಸೂರ್ಯವಂಶಕ್ಕೆ ಕುಲಗುರುವಾಗಿ ನಮ್ಮಲ್ಲಿ ಅನುಗ್ರಹಿಸಿ ಇಲ್ಲಿಗೆ ಬಂದದ್ದು ಮಹಾವಿಶೇಷ, ಈ ವಿಶ್ವಾಮಿತ್ರನ ಶಿಷ್ಯರಾದ ರಾಮಲಕ್ಷ್ಮಣರು ನಿನಗ ಅಳಿಯರಾದುದು ಘನವೇ ಆಯಿತು.

## ಶತಾನಂದರು ವಿಶ್ವಾಮಿತ್ರರನ್ನು ಕೊಂಡಾಡಿದುದು.

ಈ ವಿಶ್ವಾಮಿತ್ರನ ಮಹಿಮಾತಿಶಯವು ಅನಿರ್ವಾಚ್ಯವಾದದ್ದು ವಿವರಿಸುವೆನು ಕೇಳಿ ಪೂರ್ವಕಾಲದಲ್ಲಿ ಗಾದಿಯೆಂಬ ಒಬ್ಬ ರಾಜನಿದ್ದನು ಆತನಿಗೆ ಕುಮಾರನಾದ ಈ ವಿಶ್ವಾಮಿತ್ರನು ಪ್ರಾಪ್ತವಯಸ್ಕನಾಗಿ ಮಹಾಬಲ ಪರಾಕ್ರಮವಂತನಾಗಿ ಸಕಲಶಾಸ್ತ್ರಗಳಲ್ಲಿ ಪ್ರವೀಣನಾಗಿ ಮಂತ್ರಿ ಸಾಮಂತ ಸಮೇತನಾಗಿ ರಾಜ್ಯಾಧಿಕಾರ ಮಾಡುತ್ತಿದ್ದನು. ಹೀಗಿರುವಲ್ಲಿ ಒಂದಾನೊಂದು ದಿನ ಪರಿವಾರ ಸಮೇತನಾಗಿ ವಶಿಷ್ಠಮುನಿಯ ಆಶ್ರಮಕ್ಕೆ ಬಂದು ಸಾಯಂಕಾಲವಾದ ಕಾರಣ ರಾತ್ರಿ ಅಲ್ಲೇ ತಂಗಿದ್ದು ಆ ಮಹಾತ್ಮನ ಹೋಮಧೇನುವಾದ ನಂದಿನೀ ಧೇನುವಿನಿಂದ ಮಾಡಲ್ಪಟ್ಟ ಆತಿಥ್ಯದಿಂದ ಸಂತುಷ್ಟನಾಗಿ ಪ್ರಾತಃಕಾಲಕ್ಕೆದ್ದು ಸ್ನಾನಸಂಧ್ಯಾದಿಗಳನ್ನು ತೀರಿಸಿಕೊಂಡು ಹೀಗೆ ಯೋಚಿಸತೊಡಗಿದನು ಅಯ್ಯೋ ನಮ್ಮ ರಾಜ್ಯಾಧಿಕಾರವು ಏತಕ್ಕೂ ಬಾರದುದು ಈ ನಂದಿನೀ ಧೇನು ಒಂದಿದ್ದರೆ ಸಾಕು ರಾಜ್ಯವನ್ನಾದರೂ ಕೊಟ್ಟು ಈ ಋಷಿಯನ್ನು ಕೇಳಿ ಈ ಧೇನುವನ್ನು ಕೊಂಡುಹೋಗಬೇಕೆಂದು ಯೋಚಿಸಿ ಋಷಿಯ ಸಮೀಪಕ್ಕೆ ಬಂದು ನಮಸ್ಕಾರ ಮಾಡಿ ಅಯ್ಯಾ? ಬ್ರಹ್ಮರ್ಷಿಯಾದ ವಶಿಷ್ಠಮಹಾಮುನಿಯೇ ತಮ್ಮ ಹೋಮಧೇನುವನ್ನು ನನಗೆ ಕೊಟ್ಟರೆ ನಿಮಗೆ ಕೋಟಿಗೋವುಗಳನ್ನು ಕೊಡುವೆನು ಎಂದು ಕೇಳಿದನು. ಆಗ ವಶಿಷ್ಠನು ನಕ್ಕು ನಿನ್ನ ಯೋಚನೆಯು ನನಗೆ ತಿಳಿದಿದೆ, ಅದು ನಡೆಯಲಾರದೆಂದು ಹೇಳಿದನು. ಬಳಿಕ ವಿಶ್ವಾಮಿತ್ರನು ರಾಜ್ಯಾಂಗಸಮೇತವಾಗಿ ನನ್ನ ಸರ್ವಸ್ವವನ್ನೂ ಕೊಡುತ್ತೇನೆ ಈ ಹೋಮಧೇನುವನ್ನು ನನಗೆ ಕೊಡಬೇಕೆಂದು ಬಲಾತ್ಕಾರ ಮಾಡಿದನು. ಆ ಋಷಿಯು ಅದಕ್ಕೆ ಒಪ್ಪಲಿಲ್ಲ. ಆಗ ವಿಶ್ವಾಮಿತ್ರನು ಧೇನುವನ್ನು ಹಿಡಿಯುವಂತೆ ತನ್ನ ಭಟರಿಗೆ ಆಜ್ಞೆಮಾಡಿದನು, ಭಟರು ಆ ನಂದಿನಿಯನ್ನು ಹಿಡಿದೆಳೆಯುತ್ತಿದ್ದರು. ಆ ನಂದಿನಿಯು ತಪ್ಪಿಸಿಕೊಂಡು ಓಡಿ ಬಂದು ವಶಿಷ್ಠಮಹಾಋಷಿಯ ಸಮೀಪದಲ್ಲಿ ನಿಂತಿತು, ಇದನ್ನು ನೋಡಿ ವಿಶ್ವಾಮಿತ್ರನು ಕೋಪಗೊಂಡು ಋಷಿಯಮೇಲೆ ಧನುರ್ಧಾರಿಯಾಗಿ ಯುದ್ಧಕ್ಕೆ ಯತ್ನಮಾಡಲು ವಶಿಷ್ಠನು ನಕ್ಕು ತನ್ನ ಬ್ರಹ್ಮದಂಡವನ್ನು ಅಡ್ಡವಾಗಿಟ್ಟು ಯೋಗದಲ್ಲಿ ನಿರತನಾಗಿ ಕುಳಿತುಕೊಂಡನು. ಈವಿಶ್ವಾಮಿತ್ರನು ಮಂತ್ರಾಸ್ತ್ರಗಳನ್ನು ಪ್ರಯೋಗಿಸಿದರೂ ಆಬ್ರಹ್ಮದಂಡದಿಂದಜಿತನಾಗಿ ಹೋಗಿ ನಾಚಿಕೆಪಟ್ಟು ಈ ಋಷಿಯ ತಪೋಬಲದಿಂದ ನನ್ನ ಅಸ್ತ್ರವಿದ್ಯವೆಲ್ಲ ನಿಷ್ಫಲವಾಯಿತು. ನಾನೂ ಇಂಥಾ ತಪಶ್ಶಕ್ತಿಯನ್ನು ಸಂಪಾದಿಸಿ ಈ ವಶಿಷ್ಠನಂತೆ ತಪಸ್ವಿಯಾಗಬೇಕು ಎಂದೆಣಿಸಿ ರಾಜ್ಯವನ್ನು ಮಂತ್ರಿಗಳಿಗೆ ವಹಿಸಿ ಪೂರ್ವಸಮುದ್ರ ತೀರದಲ್ಲಿ ನಿರಾಹಾರಿಯಾಗಿ ಜಿತೇಂದ್ರಿಯನಾಗಿ ಕುಳಿತು ಮಹಾಘೋರವಾಗಿ ತಪಸ್ಸುಮಾಡುತ್ತಿದ್ದನು. ಇಂದ್ರನು ಭೀತನಾಗಿ ಮೇನಕೆಯೆಂಬ ಅಪ್ಸರಸ್ತ್ರೀಗೆ ಇವನ ತಪೋಭಂಗಮಾಡಲು ಅಪ್ಪಣೆಮಾಡಿದನು. ಆ ಮೇನಕೆ ಬಂದು ಅಪಾಂಗವೀಕ್ಷಣಗಳಿಂದಲೂ ಸ್ತನನಾಭಿ ಕಂಠೋದರ ಜಂಘೋರು ದರ್ಶನಗಳಿಂದಲೂ ಮಂದಗಮನದಿಂದಲೂ ಭ್ರಾಂತಿಗೊಳಿಸಿ ಆತನ ತಪಸ್ಸನ್ನು ಭಂಗಮಾಡಿದಳು. ಆಗ ವಿಶ್ವಾಮಿತ್ರನು ಚಿಂತಾಕುಲನಾಗಿ ತನ್ನ ಪ್ರಯಾಸವು ವ್ಯರ್ಥವಾಯಿತೆಂದು ದಕ್ಷಿಣಸಮುದ್ರಕ್ಕೆ ಹೋಗಿ ಅಲ್ಲಿ ಪುನಃ ತಪಸ್ಸುಮಾಡಿ ಅಲ್ಲಿ ಒಬ್ಬ ಅಪ್ಸರಸ್ತ್ರೀಯಿಂದ ವ್ರತಭಂಗವಾಗಿ, ಪಡುವಲಿಗೆ ಹೋಗಿ ಅಲ್ಲಿಯೂ ವ್ಯರ್ಥ ಪ್ರಯಾಸನಾಗಿ, ಉತ್ತರದಿಕ್ಕಿನಲ್ಲಿ ಹಠಯೋಗದಿಂದ ಕುಳಿತು ಅಸಾಧ್ಯ ತಪಸ್ಸು ಮಾಡಲಾರಂಭಿಸಿದನು. ಆಗ ಬ್ರಹ್ಮರುದ್ರರಲೋಕದಲ್ಲಿ ಬೆಂಕಿಬಿದ್ದು ಲೋಕಕ್ಷೋಭೆಯುಂಟಾಗಲು ಇಂದ್ರಾದಿಗಳು ಭಯಪಟ್ಟು ಜಗತ್ಕರ್ತನಾದ ಬ್ರಹ್ಮದೇವನ ಸನ್ನಿಧಿಗೆ ಹೋಗಿ ಈ ವೃತ್ತಾಂತವನ್ನು ತಿಳಿಸಲು ಬ್ರಹ್ಮನು ಆಶ್ಚರ್ಯಪಟ್ಟು ದೇವತೆಗಳೊಡನೆ ಭೂಲೋಕಕ್ಕೆ ಬಂದು ಯೋಗನಿರತನಾದ ವಿಶ್ವಾಮಿತ್ರನನ್ನು ಕಂಡು ವತ್ಸಾ! ವಿಶ್ವಾಮಿತ್ರ ಈ ಹಠಯೋಗದಿಂದ

ನಿನಗೇನು ಪ್ರಯೋಜನ ಬೇಕಾದ ವರಗಳನ್ನು ಕೊಡುವೆನು ಯೋಚಿಸಬೇಡ ಎನಲು ಈ ವಿಶ್ವಾಮಿತ್ರನು ಸಾಷ್ಟಾಂಗ ಪ್ರಣಾಮಮಾಡಿ ಸಂಜಾತಪುಲಕಿತನಾಗಿ ಎಲೈಜಗತ್ಕರ್ತನೇ! ನನಗೆ ಬ್ರಾಹ್ಮಣ್ಯವನ್ನು ದಯಪಾಲಿಸಬೇಕೆಂದು ವಿಜ್ಞಾಪಿಸಲು, ಭಕ್ತವತ್ಸಲನಾದ ಬ್ರಹ್ಮನು ಆಗಲಿ ಎಂದನುಗ್ರಹಿಸಿದನು. ವಸಿಷ್ಠನು ನನ್ನನ್ನು ಬ್ರಹ್ಮರ್ಷಿಯೆಂದು ಹೇಳಿದರೆ ನಾನು ತಪಸ್ಸನ್ನು ಬಿಡುವೆನು ಎನಲು ಬ್ರಹ್ಮನು ವಸಿಷ್ಠನಬಳಿಗೆ ಹೋಗಿ ಎಲೈ ವಸಿಷ್ಠನೇ ನೀನು ವಿಶ್ವಾಮಿತ್ರನನ್ನು ಬ್ರಹ್ಮರ್ಷಿಯೆಂಬದಾಗಿ ಹೇಳಿದರೆ ಆತನು ಯೋಗವನ್ನು ಬಿಡುತ್ತಾನೆ ಇಲ್ಲದಿದ್ದರೆ ತಪೋಜ್ವಾಲೆಯಿಂದ ಲೋಕವೆಲ್ಲ ನಾಶವಾಗುತ್ತದೆ ನನ್ನ ಮಾತನ್ನು ನಡೆಸು ಎಂದು ಹೇಳಲು ವಸಿಷ್ಠನು ನಿರ್ವಾಹವಿಲ್ಲದೆ ಸಮ್ಮತಿಸಿ ವಿಶ್ವಾಮಿತ್ರನಬಳಿಗೆ ಬಂದು ಅಯ್ಯಾ? ನೀನು ನನಗೆ ಸಮಾನನಾದ ಬ್ರಹ್ಮರ್ಷಿಯೇಸರಿ ಈ ತಪಸ್ಸನ್ನು ಬಿಡು ಎಂದು ಸಮಾಧಾನಪಡಿಸಿ ತಪಸ್ಸನ್ನು ಬಿಡಿಸಿದನು, ಬ್ರಹ್ಮಾದಿಗಳು ಸ್ವಸ್ಥಾನಗಳಿಗೆ ತೆರಳಿದರು. ಈತನು ಬ್ರಹ್ಮಸೃಷ್ಟಿಗೆ ಬದಲಾಗಿ ಸೃಷ್ಟಿಯನ್ನು ಮಾಡಿದವನು, ಇಂಥಾ ಮಹಾತ್ಮನ ಶಿಷ್ಯರಾದ ಈ ರಾಮಲಕ್ಷ್ಮಣರು ಮಹಾ ಪುಣ್ಯಶಾಲಿಗಳು ಎಂದು ಹೇಳಿದನು. ಬಳಿಕಾವಸಿಷ್ಠನು ದಶರಥ ಮಹಾರಾಜನಿಗೆ ಜನಕಮಹಾರಾಜನ ವಂಶಪಾರಂಪರ್ಯವನ್ನು ವಿವರಿಸಿ ಹೇಳಿ ಪರಸ್ಪರ ಶ್ಲಾಘನೆಗಳಿಂದ ಆ ದಿನವನ್ನು ಸುಖನಾಗಿ ಕಳೆದನು.

## ರಾಮಲಕ್ಷ್ಮಣ ಭರತ ಶತ್ರುಘ್ನರ ವಿವಾಹ.

ಮಾರನೆಯದಿನ ಜನಕರಾಯನು ಸ್ವಯಂವರ ಮಂಟಪವನ್ನು ಅಲಂಕರಿಸಿ ವಿವಾಹೋಪಕರಣಗಳನ್ನು ಸಿದ್ಧಪಡಿಸಿ ಲಗ್ನಕ್ಕೆ ಬರಬೇಕೆಂದು, ದಶರಥಮಹಾರಾಜನಿಗೆ ಹೇಳಿಕಳುಹಿಸಲು ದಶರಥ ಮಹಾರಾಜನು ಪತ್ನೀ ಪುತ್ರ ಪುರೋಹಿತ ಮಂತ್ರಿ ಪರಿಜನ ಸಮೇತನಾಗಿ ವಿವಾಹ ಮಂಟಪಕ್ಕೆ ಬಂದು ಆಸನದಲ್ಲಿ ಕುಳಿತುಕೊಂಡನು. ತರುವಾಯ ಆಮಂಟಪದಲ್ಲಿ ಮಂಗಳವಾದ್ಯ ಶಬ್ದಗಳೊಂದು ಕಡೆ ಪುರೋಹಿತನಾದ ವಶಿಷ್ಠನ ಮಂತ್ರಘೋಷ ಒಂದು ಕಡೆ ಭೂಸುರಾಶೀರ್ವಾದ ಘೋಷ ಒಂದು ಕಡೆ ಅರುಂಧತೀ ಸಮಾನ ಪತಿವ್ರತಾ ಶಿರೋಮಣಿಯರಾದ ಸುವಾಸಿನಿಯರ ಸಂದಣಿಯೊಂದುಕಡೆ ವಾರಾಂಗನೆಯರ ನೃತ್ಯಗೀತಗಳೊಂದು ಕಡೆ ತುಂಬಿರಲು ಜನಕಮಹಾರಾಜನು ಗೋಭೂಹಿರಣ್ಯಾದಿ





ಷೋಡಶ ಮಹಾದಾನಗಳನ್ನು ಮಾಡಿ, ತನ್ನ ಪುತ್ರಿಯಾದ ಸೀತಾದೇವಿಯನ್ನು ಸುಮಂಗಲೀ ಪುರಸ್ಸರವಾಗಿ ಕರೆಸಿ ಮಂಗಳಸ್ನಾತನಾಗಿ ಅನರ್ಘ್ಯ ಭೂಷಣಾಲಂಕೃತನಾಗಿ ಸ್ವರ್ಣಪೀಠದಲ್ಲಿ

ಕುಳಿತು ಪುರೋಹಿತ ವಿಧೇಯನಾದ ರಾಮಚಂದ್ರನಿಗೆ ಕನ್ಯಾದಾನಮಾಡಿ ಶುಭಲಕ್ಷಣನಾದ ಲಕ್ಷ್ಮಣನಿಗೆ ತನ್ನ ಸ್ವಂತಪುತ್ರಿಯಾದ ಊರ್ಮಿಳಾದೇವಿಯನ್ನು, ತನ್ನ ಸಾದ ಕುಶಧ್ವಜನ ಪುತ್ರಿಯರಾದ ಮಾಂಡವೀ ಶ್ರುತಕೀರ್ತಿಯರನ್ನು ಭರತ ಶತೃಘ್ನರಿಗೂ ಕೊಟ್ಟು ವಿವಾಹ ಮಾಡಿದನು ಬಳಿಕ ಶಾಸ್ತ್ರೋಕ್ತಪ್ರಕಾರ ಲಾಜಾಹೋಮಾದಿಗಳು ನಡೆದವು, ದೇವತೆಗಳು ಪುಷ್ಪವೃಷ್ಟಿಯನ್ನು, ರಂಭಾದಿಗಳು ನೃತ್ಯವನ್ನು, ಗಂಧರ್ವರು ಗಾನವನ್ನು, ಭೂಸುರರು ಜಯಘೋಷ ಪುರಸ್ಸರವಾದ ಆಶೀರ್ವಾದಗಳನ್ನು ಸುಮಂಗಲೀಯರು ಆರತಿ ಮೊದಲಾದ ಶುಭಾಚರಣೆಗಳನ್ನು ಮಾಡಿದರು. ಜನಕ ದಶರಥಮಹಾರಾಜರಿಬ್ಬರೂ ಬ್ರಾಹ್ಮಣರಿಗೆ ಅಸಂಖ್ಯಾತವಾದ ವಸ್ತ್ರಾದಿಗಳನ್ನು ದಾನಮಾಡಿದರು. ಈ ಪ್ರಕಾರವಾಗಿ ವಿವಾಹಮಹೋತ್ಸವವನ್ನು ನಡೆಸಿ ಭೋಜನಾದಿಗಳನ್ನು ಮಾಡಿಸಿ ಚಂದನ ತಾಂಬೂಲಗಳನ್ನು ಸಲ್ಲಿಸಿ ಪರಮಾನಂದದೊಡನೆ ಸುಖವಾಗಿರುತ್ತಿದ್ದರು. ದಶರಥನು ಜನಕರಾಜನ ಸತ್ಕಾರಗಳಿಂದ ಸಂತುಷ್ಟನಾಗಿ ಸೊಸೆಯರನ್ನು ಕರೆದುಕೊಂಡು ಅಯೋಧ್ಯಾಪುರಕ್ಕೆ ಹೋಗಬೇಕೆಂದು ನಿಶ್ಚಯಮಾಡಿದನು. ಜನಕ ಮಹಾರಾಜನು ಮಗಳಿಗೂ ಅಳಿಯನಿಗೂ ಅಪರಿಮಿತವಾದ ಬಳುವಳಿಯನ್ನು ಕೊಟ್ಟು ದಾಸ ದಾಸಿಯರನ್ನೂ ಗಜತುರಗ ರಥಾದಿಗಳನ್ನಿತ್ತು ಸಂಭ್ರಮದೊಡನೆ ಕಳುಹಿಸಲು, ದಶರಥನು ಸಪರಿವಾರನಾಗಿ ವಶಿಷ್ಠರೊಡನೆ ತೆರಳಿದನು. ಇತ್ತಲಾ ಜನಕನು ಪುತ್ರಿಯರಿಗೆ ವಿವಾಹ ಮಹೋತ್ಸವಗಳನ್ನು ಸಂಭ್ರಮದಿಂದ ನಡೆಸಿ ಕೃತಾರ್ಥನಾಗಿ ಅಳಿಯನನ್ನೂ ಮಗಳನ್ನೂ ಸಾಗ ಕಳುಹಿಸಿ ಅವರ ಪುನರಾಗಮನವನ್ನು ನಿರೀಕ್ಷಿಸುತ್ತಾ ಯೋಗನಿರತನಾಗಿ ಸುಖವಾಗಿ ರಾಜ್ಯ ವಾಳುತ್ತಿದ್ದನು. ಬಳಿಕ ದಶರಥನು ಸಕಲ ಪರಿವಾರದೊಡನೆ ಸ್ವಲ್ಪದೂರ ಪ್ರಯಾಣ ಮಾಡುತ್ತಿರಲು, ಮಾರ್ಗಮಧ್ಯದಲ್ಲಿ ಸಕಲ ರಾಜವಂಶ ಕುಠಾರನಾದ ಪರಶುರಾಮನು ಬಂದನು. ಈ ದಶರಥನು ಆತನನ್ನು ನೋಡಿ ಭಯದಿಂದ ಕೂಡಿದವನಾಗಿ ಕಳವಳಗೊಂಡು ನಡುಗುತ್ತಾ ವ್ಯಾಘ್ರವನ್ನು ಕಂಡ ಹುಲ್ಲೆಯಂತೆ, ಸಿಂಹವನ್ನು ನೋಡಿದ ಆನೆಯಂತೆ ಭೀತನಾಗಿ ಬಾಷ್ಪಲೋಚನನಾಗಿ ದುಃಖಪಡುತ್ತ ಯೋಚಿಸತೊಡಗಿದನು. ಅಕಟಕಟ ಅರವತ್ತು ಸಾವಿರ ವರ್ಷದ ಮೇಲೆ ಮಕ್ಕಳನ್ನು ಪಡೆದು ಅವರನ್ನೂ ಸುಖದಿಂದ ಬೆಳಸಿ ಆ ಕುಮಾರರಿಗೆ ವಿವಾಹಾದಿಗಳನ್ನು ಮಾಡಿ ಸೇನಾಸಮೇತನಾಗಿ ಅಯೋಧ್ಯೆಗೆ ಹೋಗಿ ಸಂತೋಷದಿಂದಿರಬೇಕೆಂದು ಯೋಚಿಸುತ್ತಿದ್ದೆನು, ಇಷ್ಟರಲ್ಲೇ ಕಾಲರೂಪನಾದ ಈ ಪರಶುರಾಮನು ಬಂದನು. ಇವನು ಯಾರಿಗೂ ಜಗ್ಗುವನಲ್ಲ ಎಂದು ವ್ಯಾಕುಲಪಡುತ್ತಿರಲು ಆ ಪರಶುರಾಮನು ಎದುರಾಗಿ ನಿಂತು ಎಲೈ ಮಹಾಮದಾಂಧರಾದ ಕ್ಷತ್ರಿಯರಿರಾ! ಯಾರೂ ಅರಿಯದಂತೆ ಜನಕರಾಯನ ಬಳಿಗೆ ಬಂದು ನನಗೆ ಗುರುವಾದ ಪರಶಿವನ ಧನುಸನ್ನು ಮುರಿದು ನನಗೆ ಯಾರೂ ಎದುರಿಲ್ಲವೆಂದು ಬೆರೆಯುತ್ತಿರುವಿರಾ! ಇಗೋ? ಈ ನನ್ನ ಪರಶುವಿರುವತನಕ ನಿಮ್ಮ ಶಕ್ತಿ ಸಾಮರ್ಥ್ಯಗಳೊಂದೂ ನಡೆಯುವದಿಲ್ಲ. ಎಲೈ—ದಶರಥನೇ ನಾನು ರಾಜವಂಶಕುಠಾರನಾಗಿ ನಿನ್ನ ಪಟ್ಟಣಕ್ಕೆ ಬಂದಾಗಲೆಲ್ಲ ನೀನು ಸೀರೆ ಕುಪ್ಪಸ ಮೊದಲಾದ ಸ್ತ್ರೀಚಿಹ್ನೆಗಳನ್ನು ಧರಿಸಿ ಅಂತಃಪುರದಲ್ಲಿ ಅಡಗಿಕೊಳ್ಳುತ್ತಿದ್ದೆಯಲ್ಲ, ಆಗ ನಾನು ನಿನ್ನನ್ನು ಸಂಹಾರಮಾಡದೆ ಬಿಟ್ಟಿದ್ದರಿಂದ ಈಗ ನಿನ್ನ ಪ್ರಭಾವವನ್ನು ನಾನು ನೋಡಬೇಕಾಯಿತು ತಪ್ಪಿಸಿಕೊಂಡು ಹೋಗುವದಕ್ಕೆ ಏನು ಉಪಾಯ ಮಾಡುತ್ತೀಯೋ ನೋಡೋಣ ನನ್ನ ಪರಶುವು ನಿನ್ನ ಕಂಠದಹತ್ತಿರಕ್ಕೆ ಬಂದರೆ ಬ್ರಹ್ಮಾದಿಗಳು ಅಡ್ಡಿಯಾದರೂ ನಿಲ್ಲಲಾರದು ಈ ಪರಶುವಿನಿಂದಲೇ ಸಕಲ ರಾಜಕುಮಾರರ ಕಂಠಗಳನ್ನು ಕತ್ತರಿಸಿ ಆ ರಕ್ತದಲ್ಲಿ ತರ್ಪಣವನ್ನು ಮಾಡಿ, ಅವರ ಕಪಾಲಗಳಿಂದ ಸ್ವರ್ಗಕ್ಕೆ ಸೋಪಾನಗಳನ್ನು ಕಟ್ಟಿಸಿರುತ್ತೇನೆ ಇಂಥಾ ಪರಶುರಾಮನು ನಿನ್ನನ್ನು ಪ್ರಾಣದಿಂದ ಬಿಡುವನೆ ಎಂದು ಕಠಿಣವಾದ

ಮಾತುಗಳನ್ನಾಡಿದನು. ಅದನ್ನು ಕೇಳಿ ರಾಮಚಂದ್ರನು ನಕ್ಕು ಈ ಬ್ರಾಹ್ಮಣನಿಗೆ ಇಷ್ಟು ಸಾಹಸವುಂಟೇ ಈತನ ಗರ್ವವನ್ನು ನಾಶಮಾಡುವೆನೆಂದು ಯೋಚಿಸಿ ಈ ಪರಶುರಾಮನನ್ನು ಕುರಿತು ಅಯ್ಯಾ ಪರಶುರಾಮನೇ ನಿನಗೆ ಸುಖಾಗಮನವೆ ? ಎಲ್ಲಿಂದ ಬಂದೆ, ಎಲ್ಲಿಗೆ ಪೋಗುತ್ತೀಯೆ ಎಂದು ಕೇಳಲು ಆತನು ಕೋಪಾವಿಷ್ಟನಾಗಿ ಎಲೈ—ರಾಮಚಂದ್ರನೇ ನೀನು ಈಶ್ವರ ಧನುರ್ಭಂಗಮಾಡಿದೆ ಎಂದು ಕೇಳಿ ನಿನ್ನ ಪರಾಕ್ರಮವನ್ನು ನೋಡುವದಕ್ಕೆ ಬಂದಿರುವೆನೆನಲು ರಾಮಚಂದ್ರನು ನಕ್ಕು, ನೀವು ಬ್ರಾಹ್ಮಣರು ನಾವು ಕ್ಷತ್ರಿಯರು ನಿಮ್ಮ ಸಂಗಡ ನಮಗೇನು ನಾನೇ ಈಶ್ವರನ ಧನುಸ್ಸನ್ನು ಮುರಿದೆನೆಂದು ಹೇಳಲು, ಪುರಾತನವಾದ ಈಶ್ವರ ಧನುಸ್ಸನ್ನು ಮುರಿದದ್ದು ಆಶ್ಚರ್ಯವಲ್ಲ, ನನ್ನ ಧನುಸ್ಸನ್ನು ಸಂಧಾನಮಾಡು ನೋಡೋಣ ಎಂದು ಪರಶುರಾಮನು ಹೇಳಲು, ಶ್ರೀರಾಮನು ಆತನ ಧನುಸ್ಸನ್ನು ಕೈಗೆ ತೆಗೆದುಕೊಂಡು ಬಾಣ ಸಂಧಾನ ಮಾಡಲು ಪರಶುರಾಮನು ವಿಸ್ಮಯಾವಿಷ್ಟನಾಗಿ ರಾಮನನ್ನು ಕುರಿತು ಅಯ್ಯಾ ನೀನು ಸಾಕ್ಷಾತ್ಪುರಾಣಪುರುಷನೇ ಹೊರತು ರಾಜಮಾತ್ರನಲ್ಲ ಈ ನಾರಾಯಣ ಧನುಸ್ಸನ್ನು ನೀನು ಯುದ್ಧದಲ್ಲಿ ಉಪಯೋಗಿಸಬೇಕು. ನಾನು ರಾಜಕುಲಸಂಹಾರದಿಂದ ವಿಶ್ರಾಂತನಾಗಿ ಮಹೇಂದ್ರ ಪರ್ವತದಲ್ಲಿ ತಪಸ್ಸುಮಾಡುತ್ತಿರುತ್ತೇನೆ ಸಂಧಾನಮಾಡಿರುವ ಬಾಣದಿಂದ ಸ್ವರ್ಗಸೋಪಾನಗಳನ್ನು ಕತ್ತರಿಸು ಎನಲು, ಆಗ ರಾಮನು ಹಾಗೆ ಮಾಡಿದನು. ಆಗ ಪರಶುರಾಮನು ರಾಮಚಂದ್ರನಿಗೆ ಆಶೀರ್ವಾದಮಾಡಿ ಮಹೇಂದ್ರಾದ್ರಿಗೆ ಹೊರಟನು. ತರುವಾಯ ದಶರಥಮಹಾರಾಯನು ಸಂತೋಷಸಾಗರದಲ್ಲಿ ಮುಳುಗಿ ಪರಿವಾರ ಸಮೇತನಾಗಿ ಅಯೋಧ್ಯಾಪುರವನ್ನು ಸೇರಿದನು. ಈ ರಾಮ ಲಕ್ಷ್ಮಣ ಭರತ ಶತ್ರುಘ್ನರನ್ನು ನೋಡಿ ಪೌರರು ಬಹಳವಾಗಿ ಸಂಭಾವಿಸಿದರು. ದಶರಥನು ಅಖಂಡವೈಭವದಿಂದ ಕೂಡಿದವನಾಗಿ ಇಂದ್ರಾದಿಗಳಿಂದ ಪೂಜಿತನಾಗಿ ಸಕಲ ಐಹಿಕ ಸುಖಾನುಭವದಿಂದ ಕೃತಾರ್ಥನಾಗಿದ್ದು ಪುತ್ರರನ್ನು ನಿಮಿಷವಾದರೂ ಎಡೆಬಿಡದೆ ಅವರಿಂದ ಸೇವೆಗೊಳ್ಳುತ್ತ ಚತುಃಸಮುದ್ರ ಮಧ್ಯವರ್ತಿಯಾದ ಈ ಭೂಮಂಡಲದ ರಾಜರಿಂದ ಕಪ್ಪವನ್ನು ತೆಗೆದುಕೊಳ್ಳುತ್ತಿದ್ದನು. ರಾಮ ಲಕ್ಷ್ಮಣ ಭರತ ಶತ್ರುಘ್ನರು ಪರಸ್ಪರ ಪ್ರೇಮದಿಂದ ಪತ್ನೀಸಮೇತರಾಗಿ ಮಾತಾಪಿತೃ ಭಕ್ತಿಯಿಂದ ಕೂಡಿದವರಾಗಿ ಸಕಲ ಜನಾನಂದಕರಾಗಿದ್ದರು. ಹೀಗಿರುವಲ್ಲಿ ಒಂದಾನೊಂದು ದಿನ ಭರತನು ತನ್ನ ಸೋದರಮಾವನಾದ ಯುಧಾಜಿತುವಿನ ಆಜ್ಞಾನುಸಾರ ಹೊರಟು ಭರತ ಶತ್ರುಘ್ನರಿಬ್ಬರೂ ಗಿರಿವ್ರಜಕ್ಕೆ ಹೋದರು ಎಂದು ಮಾರ್ಕಂಡೇಯಮುನಿಯು ಧರ್ಮರಾಯನಿಗೆಹೇಳಿದನು ಎಂಬಲ್ಲಿಗೆ ರಾಮಾಯಣ ಕಥಾಸಂಗ್ರಹ ವಚನದಲ್ಲಿ ಬಾಲಕಾಂಡದ ಕಥೆ ಸಂಪೂರ್ಣಂ. ಶ್ರೀ. ಶ್ರೀ. ಶ್ರೀ.

**ಇಲ್ಲಿಗೆ ಬಾಲಕಾಂಡ ಸಂಪೂರ್ಣವಾದುದು.**



ಶ್ರೀರಸ್ತು.

ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ.



# ರಾಮಾಯಣ ಕಥಾಸಂಗ್ರಹ.



## ಅಯೋಧ್ಯಾಕಾಂಡ.



**ಮಾರ್ಕಂಡೇಯ ಮುನೀಶ್ವರನು ಧರ್ಮರಾಜನನ್ನು ಕುರಿತು, ಎಲೈ ಧರ್ಮರಾಜನೇ ! ಒಂದಾನೊಂದು ದಿನ ದಶರಥರಾಜನು ತನ್ನ ಮಂತ್ರಿ ಸಾಮಂತ ವಂದಿ ಮಾಗಧರಿಂದಲಂಕೃತ**

ವಾದ ಸಭಾಂಗಣದಲ್ಲಿ ಸಿಂಹಾಸನದಲ್ಲಿ ಕುಳಿತು, ಆನಂದದಿಂದ ರಾಜ್ಯಭಾರ ಮಾಡುತ್ತಿರುವ ಸಮಯದಲ್ಲಿ, ದಶರಥನು ಸರ್ವಸಭಿಕರನ್ನು ಕುರಿತು, ಎಲೈ ಸಭಿಕರೆ ನಾನು ರಾಜ್ಯಭಾರ ಮಾಡಲುಪಕ್ರಮಿಸಿ ಬಹಳ ದಿನಗಳಾದವು, ನನಗೆ ವೃದ್ಧಾಪ್ಯವೂ ಒದಗಿದೆ, ಆದಕಾರಣ ಈ ರಾಜ್ಯಭಾರವನ್ನು ಜ್ಯೇಷ್ಠಪುತ್ರನಾದ ರಾಮಭದ್ರನಿಗೆ ವಹಿಸಿ ನಾನು ಪರಮೇಶ್ವರ ಧ್ಯಾನದಲ್ಲಿ ಕಾಲ ಕಳೆಯಬೇಕೆಂದಿರುವೆನು. ರಾಮಭದ್ರನು ಗುಣಾಢ್ಯನಾಗಿ ವಿವೇಕಿಯಾಗಿ ತನ್ನ ನಡೆವಳಿ ಕೆಯಿಂದ ಲೋಕಾಭಿರಾಮನಾಗಿರುವನು. ಪೂರ್ಣಕಳಾವಿಷ್ಟನಾದ ಚಂದ್ರನಿಂದ ಸಾಗರವು ಉಕ್ಕುವಂತೆ ರಾಮಚಂದ್ರನಿಂದ ನನ್ನ ವಂಶವು ವೃದ್ಧಿಯಾಗುವುದು, ಈ ಸಾಮ್ರಾಜ್ಯವನ್ನು ವಹಿಸಲು ರಾಮಭದ್ರನು ಸಮರ್ಥನಾಗಿ ಇರುವನು, ಆದಕಾರಣ ರಾಮನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಯೋಚಿಸಿರುವೆನು ಇದಕ್ಕೆ ನಿಮ್ಮ ಸಮ್ಮತಿ ಏನು ಹೇಳಿ ಎಂದು ಕೇಳಲಾಗಿ, ವಸಿಷ್ಠ, ವಾಮದೇವಾದಿ ಪುರೋಹಿತರು ಸುಮಂತ್ರಾದಿ ಮಂತ್ರಿಗಳು ಸಾಮಂತರಾಜರು ಮೊದಲಾದ ಸರ್ವರೂ ಸಂತೋಷಪಟ್ಟು ದಶರಥರಾಯನನ್ನು ಕುರಿತು ಎಲೈ, ಮಹಾರಾಯನೇ ನೀನು ಹೇಳಿದುದು ಸರಿ! ಈ ರಾಮಚಂದ್ರನು ನಮಗೊಡೆಯನಾದರೆ ಈ ನಮ್ಮ ದೇಶವೆಲ್ಲ ಕಲ್ಪವೃಕ್ಷದ ನೆಳಲಿನಂತಾಗುವುದು ಮನು, ಮಾಂಧಾತ, ದಿಲೀಪ, ಪುರೂರವ, ಕಾರ್ತವೀ ರ್ಯಾರ್ಜುನ, ಭಗೀರಥ, ಸಗರ, ನಳ, ನಹುಷ ಮೊದಲಾದ ಚಕ್ರವರ್ತಿಗಳನ್ನು ಈತನು ತನ್ನ ಸುಗುಣಗಳಿಂದ ಮರೆಯುವಂತೆ ಮಾಡುವನು. ನಮ್ಮ ಭೂಕಾಂತೆಯು ರಾಮನನ್ನು ಪತಿಯನ್ನಾಗಿ ವರಿಸುವಳು. ಈತನು ಅರಸಾದರೆ ನಾವೆಲ್ಲರೂ ನಿಶ್ಚಿಂತೆಯಿಂದ ಸುಖವಾಗಿ ರುವೆವು ಎಂದು ಹೇಳಲು, ಆ ಮಾತನ್ನು ಕೇಳಿ ದಶರಥನು ಜೋಯಿಸರನ್ನು ಕರೆಯಿಸಿ, ವೈಶಾಖ ಶುದ್ಧ ಪಂಚಮಿಯದಿನ ಅಭಿಜಿನ್ಮುಹೂರ್ತದಲ್ಲಿ ರಾಮನಿಗೆ ಪಟ್ಟಾಭಿಷೇಕ ಮುಹೂ ರ್ತವನ್ನು ನಿಶ್ಚಯಿಸಿ ಪಟ್ಟಣವನ್ನೆಲ್ಲಾ ಅಲಂಕರಿಸುವಂತೆಯೂ ಪುರೋಹಿತರಾದ ವಸಿಷ್ಠರ ಅಪ್ಪಣೆಯ ಮೇರೆಗೆ ಪಟ್ಟಾಭಿಷೇಕಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಸಿದ್ಧಪಡಿಸುವಂತೆ ಸುಮಂತ್ರಾದಿ ಮಂತ್ರಿಗಳಿಗೆ ಹೇಳಿ, ರಾಮನನ್ನು ಕರೆಯಿಸಿ, ಎಲೈ ರಾಮನೇ ನಿನಗೆ ನಾಳೆಯ ದಿನ ಮಧ್ಯಾಹ್ನಕ್ಕೆ ಈ ಕೋಸಲರಾಜ್ಯದ ಪಟ್ಟಾಭಿಷೇಕವಾಗುವುದೆಂದು ತಿಳಿಸಿ, ಎಲ್ಲರನ್ನೂ ಕಳುಹಿಸಿದನು. ರಾಮನು ಅಲ್ಲಿಂದ ಅರಮನೆಗೆ ಬಂದು ತಾಯಿಗೆ ನಮಸ್ಕಾರಮಾಡಿ ತನ್ನ ಪಟ್ಟಾಭಿಷೇಕದ ಸುದ್ಧಿಯನ್ನು ಹೇಳಿ, ಲಕ್ಷ್ಮಣಾದಿಗಳಿಗೂ ತಿಳಿಸಿ ತನ್ನ ಬಿಡಾರಕ್ಕೆ ಬಂದನು. ಆಮೇಲೆ ದಶರಥರಾಯನು ಪುರೋಹಿತ ವಸಿಷ್ಠರನ್ನು ಕರೆಸಿ, ನೀವು ರಾಮನ ಅರಮನೆಗೆ ಹೋಗಿ ರಾಮನಿಗೂ ಸೀತೆಗೂ ಮಂಗಳಸ್ನಾನಮಾಡಿಸಿ ಕಂಕಣಗಳನ್ನು ಕಟ್ಟಿಸಿ ಈ ರಾತ್ರಿ ಉಪವಾಸ ಮಾಡುವಂತೆ ನಿಯಮಿಸಿ ಬರಬೇಕೆಂದು ಹೇಳಲು ವಸಿಷ್ಠರು ಹಾಗೆ ಮಾಡಿದರು. ಮಂತ್ರಿಗಳು ದೊರೆಯ ಅಪ್ಪಣೆಯಮೇರೆಗೆ ಆ ರಾತ್ರಿ ಪಟ್ಟಣವನ್ನೆಲ್ಲಾ ಅಲಂಕಾರಮಾಡಿಸಿ ಪಟ್ಟಾಭಿಷೇಕಕ್ಕೆ ಬೇಕಾದ ಸಾಮಗ್ರಿಗಳನ್ನು ತರಿಸಿ ಸಿದ್ಧಮಾಡಿಕೊಂಡಿದ್ದರು.

## ಮಂಥರೆಯು ಕೈಕಯಿಗೆ ದುರ್ಬೋಧನೆ ಮಾಡಿದುದು.

ರಾಮನ ಪಟ್ಟಾಭಿಷೇಕ ಮಹೋತ್ಸವದ ವರ್ತಮಾನವನ್ನು ಕೇಳಿ ಮಂಥರೆಯು ಬಹು ಜಾಗ್ರತೆಯಾಗಿ ಕೈಕಯಿಯ ಬಳಿಗೆ ಹೋಗಿ ಅಮ್ಮಾ ದಶರಥನು ನಿನ್ನ ಕುಮಾರನಾದ ಭರತ ನನ್ನು ಸೋದರಮಾವನ ಮನೆಗೆ ಕಳುಹಿಸಿಬಿಟ್ಟು ಇದೇ ತಕ್ಕ ಸಮಯವೆಂದು ರಾಮಚಂದ್ರನಿಗೆ ಪಟ್ಟಾಭಿಷೇಕ ಮಾಡುವದಕ್ಕೆ ಪ್ರಯತ್ನಿಸುತ್ತಿದ್ದಾನೆ ಎನಲು, ಕೈಕಯಿಯು ಆ ಮಾತನ್ನು ಕೇಳಿ ಸುಮ್ಮನಿದ್ದಳು. ಆಗ ಅವಳಿಗೆ ನಾನಾವಿಧವಾಗಿ ದುರ್ಬೋಧನೆ ಮಾಡಿ ಅವಳ

ಮನಸ್ಸನ್ನು ಕೆಡಿಸಿ, ನಿನ್ನ ಗಂಡನಾದ ದಶರಥರಾಯನು ನಿನಗೆ ಮೊದಲು ದೇವಾಸುರ ಯುದ್ಧದಲ್ಲಿ ಎರಡು ವರಗಳನ್ನು ಕೊಟ್ಟಿದ್ದನು. ಅದನ್ನು ನೀನು ಸಮಯ ಬಂದಾಗ ಕೇಳುತ್ತೇನೆಂದು ಹೇಳಿದ್ದೀಯೆ, ಈ ಮಾತನ್ನು ನಿನ್ನಿಂದ ನಾನು ಕೇಳಿದ್ದೇನೆ, ಆದಕಾರಣ ಆ ಎರಡು ವರಗಳಲ್ಲಿ ರಾಮನು ಜಡೆಗಳನ್ನು ಧರಿಸಿ ನಾರುಸೀರೆಯನ್ನುಟ್ಟು ಹದಿನಾಲ್ಕು ವರುಷ ವನವಾಸ ಮಾಡುವಂತೆ ಒಂದನ್ನೂ, ಭರತನಿಗೆ ಈ ಕೋಸಲ ರಾಜ್ಯದ ಪಟ್ಟವಾಗಬೇಕೆಂದು ಇನ್ನೊಂದನ್ನೂ ಕೇಳಿಕೊ, ಸತ್ಯವಚನನಾದ ರಾಯನು ಆಡಿದ ಮಾತಿಗೆ ತಪ್ಪದೆ ನಡೆಸುವನು. ಹಾಗಾದರೆ ನಿನ್ನ ಮಗನಾದ ಭರತನು ಈ ಕೋಸಲರಾಜ್ಯವನ್ನಾಳುವನು. ನೀನು ನಿನ್ನನ್ನು ನಂಬಿದ ನಾವೂ ಸುಖವಾಗಿರಬಹುದೆಂದು ಹೇಳಲು ಕೈಕಯಿಯು ಆ ಮಂಥರೆಯ ದುರ್ಬೋಧನೆಗೆ ಒಳಪಟ್ಟು ತನ್ನ ದಿವ್ಯವಾದ ಒಡವೆ ವಸ್ತುಗಳನ್ನೆಲ್ಲ ತೆಗೆದು ಹಾಕಿ ಬಿಳೀ ಬಿಜ್ಜೋಲೆಯನ್ನು ಇಟ್ಟುಕೊಂಡು ಶ್ವೇತಾಂಬರವನ್ನು ಧರಿಸಿ ತಲೆಯನ್ನು ಕೆದರಿ ನೆಲದಮೇಲೆ ಬಿದ್ದು ಹೊರಳಾಡುತ್ತಾ ಇದ್ದಳು. ಆಗ ದಶರಥರಾಯನು ಶ್ರೀರಾಮನ ಪಟ್ಟಾಭಿಷೇಕದ ಸಂತೋಷವನ್ನು ತನಗೆ ಪ್ರಿಯಪತ್ನಿಯಾದ ಕೈಕಯಿಗೆ ತಿಳಿಸಬೇಕೆಂದು ರಾಣಿವಾಸಕ್ಕೆ ಬಂದು ಅವಳ ಅವಸ್ಥೆಯನ್ನು ಕಂಡು ಬಹಳ ಘಾಬರಿಯಾಗಿ ಇದೇನು ನೀನಿಷ್ಟು ವ್ಯಸನದಿಂದ ಖಿನ್ನಳಾಗಿರುವದಕ್ಕೆ ಕಾರಣವೇನು? ನಿನಗೆ ಯಾರೇನು ದುರ್ಬೋಧನೆ ಮಾಡಿದರು ಸ್ಪಷ್ಟವಾಗಿ ಹೇಳು ಎಂದು ದೀನನಾಗಿ ಕೇಳುತ್ತಿರುವ ದಶರಥರಾಯನನ್ನು ನೋಡಿ, ನನಗೆ ಯಾರೂ ಏನೂ ಬೋಧಿಸಲಿಲ್ಲ, ನನ್ನ ಮನಸ್ಸಿನಲ್ಲಿರುವುದನ್ನು ಹೇಳುವೆನು ಕೇಳು, ನೀನು ದೇವಾಸುರರ ಯುದ್ಧದಲ್ಲಿ ನನಗೆ ಕೊಟ್ಟಿದ್ದ ವರದ್ವಯವನ್ನು ಈಗ ಕೇಳಿಕೊಳ್ಳುವೆನು. ಅದನ್ನು ತಪ್ಪದೇ ನಡೆಸುತ್ತೇನೆಂದು ಪ್ರಮಾಣ ಮಾಡಿದರೆ ಹೇಳುವೆನು ಎನಲು, ದಶರಥಮಹಾರಾಯನು ಹೆಂಡತಿಯಮೇಲಿನ ಮೋಹದಿಂದ ರಾಮನ ಸತ್ಯವಾಗಿ ನಡೆಸಿಕೊಡುವೆನು ಎಂದು ಆಣೆಯಿಟ್ಟುಕೊಂಡನು.



## ಕೈಕಯಿ ದಶರಥರ ಸಂವಾದ.

ಕೈಕಯಿಯು ದಶರಥನನ್ನು ಕುರಿತು, ಎಲೈ ಪ್ರಿಯನೇ! ನೀನು ಕೊಟ್ಟಿದ್ದ ಎರಡು ವರಗಳಲ್ಲಿ ಮೊದಲನೆಯದಾಗಿ ರಾಮನು ಜಟಾಧಾರಿಯಾಗಿ ನಾರುಸೀರೆಯನ್ನುಟ್ಟು ಹದಿನಾಲ್ಕು ವರ್ಷ ವನವಾಸ ಮಾಡಬೇಕು. ಎರಡನೆಯದಾಗಿ ಕೋಸಲರಾಜ್ಯದ ಪಟ್ಟವನ್ನು ನನ್ನ ಪ್ರಿಯ ಪುತ್ರನಾದ ಭರತನಿಗೆ ಕಟ್ಟಬೇಕು ಎಂದು ಹೇಳಿದಳು. ಆ ಮಾತು ಕಿವಿಯಲ್ಲಿ ಬೀಳಲು ಕಾದಲುಕ್ಕಿನ ಸಲಾಕಿಯನ್ನು ತೂರಿಸಿದಂತಾಗಿ ದಶರಥರಾಯನು ಪ್ರಚಂಡಮಾರುತದಿಂದ ಬೇರು ಸಹಿತ ಕಿತ್ತುಬೀಳುವ ಮರದಂತೆ ನೆಲದಲ್ಲಿ ಬಿದ್ದು ಮೂರ್ಛೆಯನ್ನೈದಿದನು. ಆಗ ಅಲ್ಲಿದ್ದ ಪರಿಜನರು ಶೈತ್ಯೋಪಚಾರ ಮಾಡಲಾಗಿ ಸ್ವಲ್ಪ ಹೊತ್ತಿನಮೇಲೆ ಚೇತರಿಸಿಕೊಂಡೆದ್ದು ಇದೇನು ಕನಸೋ, ಮನಸ್ಸಿನ ಕಳವಳವೋ, ಮಾಯೆಯೋ, ಮೋಹವೋ, ಚಿತ್ತಭ್ರಮಣೆಯೊ, ನಾನೇಕೆ ಹೀಗಾದೆ ಏನುಮಾಡಲಿ, ಎಂದು ಆಲೋಚಿಸುತ್ತಾ ಸುಖರಹಿತನಾಗಿ ನೆಲದಮೇಲೆ

ಬಿದ್ದು, ನಿಟ್ಟುಸುರುಬಿಡುತ್ತಾ, ಜಾಂಗಲಿಕನಿಂದ ತಡೆಯಲ್ಪಟ್ಟ ಕಾಳೋರಗನಂತೆ ಭುಸುಗುಟ್ಟುತ್ತಾ ಹಾ! ರಾಮಾ! ನನ್ನ ಮೋಹದಕಂದ? ಸೊಬಗಿನ ಉಕ್ಕಂದ, ಇಕ್ಷ್ವಾಕುಕುಲತಿಲಕಾ, ಹಾ! ರಾಮಚಂದ್ರಾ ಎಂದು ಹಂಬಲಿಸುತ್ತಾ ದುಃಖಾಗ್ನಿಯಲ್ಲಿ ಬೆಂದು ಬಾಡಿದ ಮೈಯುಳ್ಳವನಾಗಿ ಮತ್ತೆ ಮೂರ್ಛಿತನಾಗಿ ಬಹಳ ಹೊತ್ತಿನಮೇಲೆ ಚೇತರಿಸಿಕೊಂಡು ದುಃಖದಿಂದುದ್ಭವಿಸಿದ ಮಹಾಕೋಪದಿಂದ ಕಣ್ಣುಗಳಲ್ಲಿ ಕಿಡಿಗಳನ್ನು ಸುರಿಸುತ್ತಾ ಪ್ರಳಯಕಾಲದ ರುದ್ರನು ಫಾಲನೇತ್ರವನ್ನು ತೆರೆದು ಲೋಕವನ್ನು ಸುಡುವನೋ ಎಂಬಂತೆ ಕೆಂಪಾದ ಕಣ್ಣುಗಳಿಂದ ಕೈಕಯಿಯನ್ನು ನೋಡುತ್ತಾ, ಎಲೆ— ಘಾತಕಿ, ದುಷ್ಟೆ, ಕುಲನಾಶಿನಿ, ಪಾಪಿಷ್ಠೆ ನಿನಗೆ ನಾನೇನು ಮಾಡಿದೆ, ರಾಮನೇನು ಮಾಡಿದನು, ರಾಮನು ತನ್ನ ತಾಯಿಗಿಂತಲು ಹೆಚ್ಚಾಗಿ ನಿನ್ನಲ್ಲಿ ಮರ್ಯಾದೆಯನ್ನು ಇಟ್ಟುಕೊಂಡಿದ್ದನಲ್ಲಾ! ಅಂಥವನಿಗೆ ಕೇಡು ಬಯಸಿದೆಯಾ? ಪಾಪಿ! ನಿನ್ನನ್ನು ರಾಜಕುವರಿಯೆಂದು ತಿಳಿದು ವರಿಸಿದೆನಲ್ಲದೆ ನನ್ನನ್ನು ಕೊಲ್ಲುವ ಮಾರಿಯೆಂದು ತಿಳಿಯದೆ ಕೆಟ್ಟೆ. ಉತ್ತಮಕ್ಷತ್ರಿಯರ ವಂಶದಲ್ಲಿ ಹುಟ್ಟಿ, ಇಂಥಾ ನೀಚ ಯೋಚನೆ ಮಾಡುವದಕ್ಕೆ ನಿನಗೆ ಮನಸ್ಸುಹೇಗೆಬಂದಿತು. ನಿನ್ನ ಭಕ್ತನಾದ ರಾಮನಿಗೆ ಕೇಡೆಣಿಸಬಹುದೇ? ಜೀವಕೋಟಿಯೆಲ್ಲಾ ಶ್ರೀರಾಮನ ಗುಣಗಳನ್ನೇ ಸ್ತೋತ್ರಮಾಡುವುದು. ನಿರಪರಾಧಿಯಾದ ಶ್ರೀ ರಾಮನನ್ನು ನಿಷ್ಕಾರಣವಾಗಿ ಕಾಡಿಗೆ ಹೇಗೆ ಹೊರಡಿಸುವೆ? ಕೌಸಲ್ಯೆಯನ್ನಾಗಲೀ, ಸುಮಿತ್ರೆಯನ್ನಾಗಲೀ, ನಿನ್ನನ್ನಾಗಲೀ, ರಾಜ್ಯಲಕ್ಷ್ಮಿಯನ್ನಾಗಲೀ ಕಡೆಗೆ ನನ್ನ ಪ್ರಾಣಗಳನ್ನಾಗಲೀ ಬಿಟ್ಟುಬಿಡುವೆನು, ಪಿತೃವತ್ಸಲನಾದ ರಾಮನನ್ನು ಹೇಗೆ ಬಿಡಲಿ, ಜ್ಯೇಷ್ಠಪುತ್ರನಾದ ರಾಮನನ್ನು ನೋಡಿದರೆ ಪೂರ್ಣಚಂದ್ರನನ್ನು ನೋಡಿ, ಉಕ್ಕಿಬರುವ ಸಮುದ್ರದಂತೆ ಸಂತೋಷದಿಂದ ನನ್ನ ಮನಸ್ಸು ಉಕ್ಕುವುದು. ರಾಮಚಂದ್ರನನ್ನು ಒಂದು ನಿಮಿಷ ಅಗಲಿದರೆ ನನಗೆ ಪ್ರಾಣವೆ ಹೋದಂತಾಗುವುದು. ಕರ್ಮಸಾಕ್ಷಿಯಿಲ್ಲದೆ ಲೋಕವೂ, ವೈದ್ಯನಿಲ್ಲದೆ ರೋಗಿಗಳೂ, ನೀರಿಲ್ಲದೆ ಪೈರುಗಳೂ ಒಂದುವೇಳೆ ಜೀವಿಸಿದರೂ ಜೀವಿಸಬಹುದು, ರಾಮನಿಲ್ಲದೆ ನನ್ನ ಪ್ರಾಣಗಳು ಮಾತ್ರ ನಿಲ್ಲಲಾರವು. ಅಯ್ಯೋ! ಪಾಪಾತ್ಮಳೇ ಸಾಕು ಬಿಡು ನಿನ್ನ ಕಾಲಿಗಾದರೂ ಬಿದ್ದೇನು ಮನ್ನಿಸಿ ಪ್ರಸನ್ನಳಾಗು ಅಯ್ಯೋ, ಇಂಥಾ ಪಾಪಕಾರ್ಯವನ್ನು ಏಕೆ ಚಿಂತಿಸಿದೆ? ಕ್ಷತ್ರಿಯ ವಂಶದಲ್ಲಿ ಹುಟ್ಟಿ, ಇಕ್ಷ್ವಾಕು ಕುಲವನ್ನು ಸೇರಿದ ನಿನಗೆ ಇಂಥಾ ದುರ್ಬುದ್ಧಿ ಹುಟ್ಟಿದ್ದು ಆಶ್ಚರ್ಯ! ನೀತಿಸಂಪನ್ನೆಯಾದ ನೀನು ಒಂದು ದಿವಸವಾದರೂ ಇಂಥಾ ಕೆಟ್ಟ ಮಾತನ್ನು ಹೇಳಲಿಲ್ಲವಲ್ಲಾ! ನಿನಗೇನು ಭೂತ ಹಿಡಿದಿದೆಯೊ, ಪಿಶಾಚ ಹಿಡಿದಿದೆಯೋ ನಾನು ಕಾಣೆ, ಆದರಿಂದಲೇ ನಿನಗೆ ಬುದ್ಧಿವಿಕಾರವು ಉಂಟಾಯಿತು. ನೀನು ನನ್ನೊಡನೆ ಏಕಾಂತದಲ್ಲಿರುವಾಗ ಅನೇಕಾವರ್ತಿ ಭರತನಿಗಿಂತಲೂ ರಾಮನೆ ಹೆಚ್ಚೆಂದು ಹೇಳುತ್ತಿದ್ದೆಯಲ್ಲಾ! ಇಂಥಾ ಧರ್ಮಿಷ್ಠನಾಗಿಯೂ, ಕೀರ್ತಿವಂತನಾಗಿಯೂ ಇರುವ ರಾಮನಿಗೆ ಹದಿನಾಲ್ಕುವರ್ಷ ವನವಾಸವನ್ನು ಕೋರಿದೆ. ಹೆತ್ತತಾಯಿಗಿಂತಲೂ ಹೆಚ್ಚಾಗಿ ನಿನ್ನ ಶುಶ್ರೂಷೆಯನ್ನು ಮಾಡುತ್ತಲಿರುವ ರಾಮನ ವಿಷಯದಲ್ಲಿ ಮನಸ್ಸಿನೊಳಗಾದರೂ ಇಂಥಾ ಕ್ರೂರಕಾರ್ಯವನ್ನು ಎಣಿಸಬಹುದೇ? ನನಗೆ ಬಹುಮಂದಿ ಹೆಂಡತಿಯರಿರುವರು, ಒಬ್ಬಳಾದರೂ ರಾಮನಲ್ಲಿ ದೋಷವನ್ನು ಹೇಳಲಿಲ್ಲ. ಸತ್ಯದಿಂದ ಲೋಕಗಳನ್ನೂ, ದಾನದಿಂದ ದೀನರನ್ನೂ, ಬಿಲ್ಲಿನಿಂದ ಶತ್ರುಗಳನ್ನೂ, ಶುಶ್ರೂಷೆಯಿಂದ ಮುದುಕರನ್ನೂ ಜಯಿಸುವ ಸಕಲ ಸದ್ಗುಣ ಸಂಪನ್ನನಾದ ರಾಮನನ್ನು ಹೇಗೆ ನಿನಗೋಸ್ಕರ ಕಾಡಿಗೆ ಕಳುಹಿಸಲಿ? ಸ್ಥಿರಚಿತ್ತ ಇಂದ್ರಿಯನಿಗ್ರಹ ಸತ್ಯ ಧರ್ಮ ಕೃತಜ್ಞತೆಗಳುಳ್ಳ ರಾಮನನ್ನು ಬಿಟ್ಟರೆ ನನಗೆ ಗತಿಯಾರು? ದೀನನಾಗಿ ಬೇಡಿಕೊಳ್ಳುವ ಗಂಡನನ್ನು ಮನ್ನಿಸು ಕೋಪವನ್ನು ಬಿಟ್ಟು, ಚತುಸ್ಸಮುದ್ರ ಮಧ್ಯದೊಳಗಿರುವ ಯಾವ ಪದಾರ್ಥ

ವನ್ನು ಕೇಳಿದರು ತಂದುಕೊಡುತ್ತೇನೆ. ಎಲೈ—ಪ್ರಿಯಳೇ, ನನ್ನ ಮೋಹದರಗಿಣಿಯೇ ನಿನಗೆ ನಮಸ್ಕಾರ ಮಾಡುವೆನು, ನನ್ನನ್ನೂ ರಾಮನನ್ನೂ ಅಗಲಿಸಬೇಡ, ನಮ್ಮಿಬ್ಬರಿಗೂ ರಕ್ಷಕಳಾಗು! ಎಂದು ಬಹು ಪ್ರಕಾರವಾಗಿ ಪ್ರಲಾಪಿಸುತ್ತ ಬಾರಿಬಾರಿಗೂ ಬೋಡಿಕೊಳ್ಳುತ್ತಿರುವ ಗಂಡನನ್ನು ನೋಡಿ ಕಲ್ಲೆದೆಯ ಕೈಕಯಿಯು ಎಲೈ—ಅರಸೇ ಮೊದಲು ಪ್ರತಿಜ್ಞೆಮಾಡಿ ವರದ್ವಯವನ್ನುಕೊಟ್ಟು ಮಗನಮೇಲಿನ ಮೋಹದಿಂದೀಗ ಸಂಕಟಪಟ್ಟರೆ, ನಿನ್ನನ್ನು ಲೋಕದಲ್ಲಿ ಧಾರ್ಮಿಕನೆಂತಲೂ, ಸತ್ಯವ್ರತನೆಂತಲೂ ಅನ್ನುವರೋ? ಈ ನಮ್ಮ ಇಕ್ಷ್ವಾಕುಕುಲದಲ್ಲಿ ಹುಟ್ಟಿದವರು ಯಾರೂ ಮಾತಿಗೆ ತಪ್ಪಲಿಲ್ಲ. ನೀನು ಈ ಕುಲದಲ್ಲಿ ಹುಟ್ಟಿ ಕೊಟ್ಟ ವರವನ್ನು ನಡೆಸಬೇಕಲ್ಲಾ ಎಂದು ಸಂಕಟಪಡಬಹುದೇ, ಶಿಬಿಚಕ್ರವರ್ತಿಯು ಪಾರಿವಾಳಕ್ಕೆ ಅಭಯವನ್ನು ಕೊಟ್ಟು ಗಿಡಗನಿಗೆ ತನ್ನ ಮಾಂಸವನ್ನು ಕೊಡಲಿಲ್ಲವೆ, ಅಳರ್ಕನು ತನ್ನ ಕಣ್ಣುಗಳನ್ನು ಕೊಟ್ಟು ಸದ್ಗತಿ ಪಡೆಯಲಿಲ್ಲವೆ! ಆಡಿದಮಾತನ್ನು ತಪ್ಪಿದರೆ ಒಳ್ಳೆಯದೆ ಆಯಿತು. ನೀನು ನಿನ್ನ ರಾಮನಿಗೆ ಪಟ್ಟಗಟ್ಟಿ ಕೌಸಲ್ಯೆಯೊಡನೆ ಸುಖವಾಗಿರು, ನಾನು ನಿನ್ನೆದುರಿಗೆ ಈಗಲೇ ವಿಷಪಾನ ಮಾಡಿ ಸಾಯುವೆನು. ಅಭಿಷಿಕ್ತನಾದ ರಾಮನನ್ನು, ಅವನ ತಾಯಿಯಾದ ಕೌಸಲ್ಯೆಯನ್ನು ಒಂದು ಕ್ಷಣವಾದರೂ ನೋಡಲಾರೆನು. ರಾಮನ ವನವಾಸ ಭರತನ ಪಟ್ಟಾಭಿಷೇಕ ಹೊರತಾಗಿ ಇನ್ನಾವದೂ ನನಗೆ ಬೇಕಿಲ್ಲ. ಸ್ತ್ರೀಯರು ಹಿಡಿದ ಹಟವನ್ನು ಬಿಡುವರಲ್ಲವೆಂಬುದನ್ನು ಅರಿಯೆಯಾ? ಎನಲು, ದಶರಥನು ಆ ಮಾತಿಗೆ ಸಂಕಟಪಡುತ್ತಾ ಎಲೈ ಪಾಪಿಷ್ಠಳೇ ನಮ್ಮ ಸೂರ್ಯವಂಶದಲ್ಲಿ ಹುಟ್ಟಿದ ಪೂರ್ವಿಕರೆಲ್ಲರೂ ತಮ್ಮ ಹಿರಿಯ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿದರೆ ಹೊರತು, ಕಿರಿಯಮಗನಿಗೆ ಯಾರೂ ಮಾಡಲಿಲ್ಲ, ನೀನು ಯೋಚಿಸಿರುವ ಪಾಪ ಕೃತ್ಯವು ನಿನ್ನ ಮಗನಾದ ಭರತನಿಗೆ ಎಷ್ಟುಮಾತ್ರವು ಸಮ್ಮತಿಯಾಗಲಾರದು, ಕಿರಿಯ ಹೆಂಡತಿಯ ಮಾತನ್ನು ಕೇಳಿಕೊಂಡು ಹಿರಿಯ ಮಗನನ್ನು ಕಾಡಿಗಟ್ಟಿದನೆಂದು, ನನಗೆ ಅಪಯಶಸ್ಸು ಬರುವದು. ಧರ್ಮಮಾರ್ಗವನ್ನು ಬಿಟ್ಟು ಗಂಡನಿಗೆ ಪ್ರಿಯನಾದ ಜ್ಯೇಷ್ಠ ಕುಮಾರನನ್ನು ಕಾಡಿಗೆ ಕಳುಹಿಸಿ ಗಂಡನನ್ನು ಕೊಂದ ಘಾತಕಿಯೆಂಬ ಅಪಕೀರ್ತಿಯು ನಿನಗೆ ಸೂರ್ಯಚಂದ್ರರಿರುವವರೆಗೂ ಲೋಕದಲ್ಲಿ ಪ್ರಸಿದ್ಧವಾಗಿರುವದು. ನಿನ್ನ ತಂದೆಯೂ ತಮ್ಮನೂ ಈ ನಿನ್ನ ಕೆಟ್ಟ ಯೋಚನೆಯನ್ನು ಕೇಳಿದ ಮಾತ್ರದಲ್ಲಿ ನಿನ್ನನ್ನು ನಮ್ಮ ಕುಲದವಳಲ್ಲವೆಂದು ಹೊರಡಿಸಿಬಿಡುವರು. ಹೀಗೆ ಹುಟ್ಟಿದ ಮನೆಗೂ ಸೇರಿದ ಮನೆಗೂ ಅಘಗಳಿಗೂ ಅಸತ್ಯವಾದ ಭರತನ ಪಟ್ಟಾಭಿಷೇಕದಲ್ಲಿಯೂ, ರಾಮನ ವನವಾಸದಲ್ಲಿಯೂ ನೆಲಸಿರುವ ನಿನ್ನ ದುಷ್ಟ ಸಂಕಲ್ಪವನ್ನು ಬಿಟ್ಟುಬಿಡು. ಯೌವನದಲ್ಲಿ ರಾಜ್ಯವನ್ನು ಧರ್ಮದಿಂದ ಕಾಪಾಡಿ ಕುಮಾರರಾದ ಮಕ್ಕಳಿಗೆ ರಾಜ್ಯಾಭಿಷೇಕವನ್ನು ಮಾಡಿ, ಮುದುಕತನದಲ್ಲಿ ನಮ್ಮ ಹಿರಿಯರೆಲ್ಲರೂ ಹೋದಕಾಡಿಗೆ ತರುಣನಾದ ರಾಮನನ್ನು ಮುದುಕನಾದ ನಾನು ಹೇಗೆ ಕಳುಹಿಸಲಿ, ಅಯ್ಯೋ! ನನ್ನ ಹೊರಗಿನ ಪ್ರಾಣವೇ ರಾಮನಾಗಿದ್ದಾನೆ ಅವನು ವನಾಭಿಮುಖನಾದರೆ ಒಂದು ಕ್ಷಣದಲ್ಲಿ ನಾನು ಪರಲೋಕಾಭಿಮುಖನಾಗುವೆನು. ರಾಮನು ಹೊರಟು ಹೋದರೆ ನಾನು ಸತ್ತೇ ಹೋಗುವೆನು. ಗಂಡನಾದ ನನ್ನನ್ನು ಕೊಂದು, ಮಗನಾದ ರಾಮನನ್ನು ಕಾಡಿಗೆ ಕಳುಹಿಸಿ, ವಿಧವೆಯಾಗಿ ಭರತನೊಡನೆ ಬಾಳುವೆನೆಂಬದಾಗಿ ನೀನು ಎಣಿಸಿರುವದರಿಂದ ಈಗ ಹೇಳುವೆನು ಕೇಳು, ನೀನು ನನಗೆ ಮಡದಿಯೂ ಅಲ್ಲ, ನಾನು ನಿನಗೆ ಗಂಡನೂ ಅಲ್ಲ, ನಾನು ಅವನಿಗೆ ತಂದೆಯೂ ಅಲ್ಲ, ಅವನು ನನಗೆ ಮಗನೂ ಅಲ್ಲ, ಪ್ರಾಣಕ್ಕಿಂತಲೂ ಮಿಗಿಲೆನಿಸಿಕೊಂಡಿದ್ದ ಮಗನನ್ನು ಕಾಡಿಗೆ ಕಳುಹುವ ತಂದೆಯು ತಂದೆಯೇ! ಗಂಡನನ್ನಾದರೂ ಕೊಂದು ತನ್ನ ಮಾತೇ ನಡೆಯಬೇಕೆಂದು ಹೇಳುವ ಹೆಂಗಸು ಹೆಂಡತಿಯೇ ಅಲ್ಲ; ಗಂಡನನ್ನು ಹಿಡಿದು

ನುಂಗುವ ಮೃತ್ಯು, ಹರಹರ ಜನ್ಮಾಂತರದಲ್ಲಿ ನಾನೇನು ಅಪರಾಧ ಮಾಡಿದೆನೊ ಯಾರ ಮಕ್ಕಳನ್ನು ಅಗಲಿಸಿ ಓಡಿಸಿದೆನೋ ಶಿವಶಿವಾ! ಆನೆ ಕುದುರೆಗಳ ಮೇಲೆ ತಿರುಗಾಡುತ್ತಿದ್ದ ರಾಮನು ಕಲ್ಲುಗುಂಡುಗಳ ಮೇಲೆ ಹೇಗೆ ತಿರುಗುವನು, ಭಕ್ಷ್ಯಭೋಜ್ಯಾದಿಗಳನ್ನು ತಿನ್ನುತ್ತಿದ್ದ ಕುವರನು ಕಂದಮೂಲಗಳನ್ನೆಂತು ಸಹಿಸುವನು. ದಿವ್ಯಪೀತಾಂಬರವನ್ನುಡುತ್ತಿದ್ದ ನನ್ನ ಮುದ್ದು ಬಾಲನು ನಾರುಶೀರೆಯುನ್ನೆಂತು ಉಡುವನು. ನವರತ್ನ ಖಚಿತವಾದ ಒಡವೆಗಳನ್ನು ಧರಿಸಿ ಕೊಳ್ಳುತ್ತಿದ್ದ ಪುತ್ರನು ಜಡೆಗಳನ್ನೆಂತು ಧರಿಸುವನು. ರತ್ನಮಂಚದಮೇಲೆ ಹಾಸಿದ ಸುಪ್ಪತ್ತಿಗೆ ಯಲ್ಲಿ ಮಲಗುತ್ತಿದ್ದ ಸುಕುಮಾರನು ನೆಲದಲ್ಲಿ ತಳಿರ್ಹಾಸಿಗೆಯಮೇಲೆ ಹೇಗೆ ಮಲಗುವನು ಎಂದು ನಾನಾ ಪ್ರಕಾರವಾಗಿ ಪ್ರಲಾಪಿಸುತ್ತ ಮುದದಿಯಾದ ಇನಳು ಮೃತ್ಯು ದೇವತೆಯೆಂದು ಮನದೊಳು ಭಾವಿಸಿ ರಾಮನನ್ನು ಕುರಿತು ಹಂಬಲಿಸುತ್ತ ಮತ್ತೆ ಕೆಳಗೆ ಬಿದ್ದು ಮೈಮರೆತನು. ಅಷ್ಟರಲ್ಲಿಯೇ ಅರುಣೋದಯವಾಯಿತು, ಪುರೋಹಿತರಾದ ವಸಿಷ್ಠನು ವಾಮದೇವಾದಿ ಮುನಿ ಗಳೊಡನೆಯೂ, ಶಿಷ್ಯ ಸಮೂಹದೊಡನೆಯೂ ಕೂಡಿದವನಾಗಿ, ಶ್ರೀರಾಮಚಂದ್ರನ ಪಟ್ಟಾಭಿ ಷೇಕಕ್ಕೆ ಬೇಕಾದ ಸಾಮಗ್ರಿಗಳನ್ನು ತೆಗೆಯಿಸಿಕೊಂಡು ರಾಜನ ಅಂತಃಪುರದ ಬಾಗಿಲಿಗೆ ಬಂದು, ಅಲ್ಲಿ ಕಟ್ಟಳೆಯ ಪ್ರಕಾರ ನಿಂತಿದ್ದ ಸುಮಂತ್ರನೆಂಬ ಮಂತ್ರಿಯನ್ನು ನೋಡಿ, ಎಲೈ ಸುಮಂತ್ರನೇ ಅರಸನಿಗೆ ನಾನು ಬಂದಿರುವವನಾಗಿಯೂ, ರಾಮನ ಪಟ್ಟಾಭಿಷೇಕಕ್ಕೋಸ್ಕರ ಗಂಗಾದಿ ಪುಣ್ಯನದಿಗಳ ತೀರ್ಥಂಗಳಿಂದ ಕೂಡಿದ ಚಿನ್ನದಕಲಶಗಳೂ ಅತ್ತಿಮರದಿಂದ ಮಾಡಲ್ಪಟ್ಟ ಭದ್ರಪೀಠವೂ, ಸಕಲ ಧಾನ್ಯಗಳೂ, ನವರತ್ನಗಳೂ, ದಿವ್ಯೌಷಧಗಳೂ, ಪಂಚಾ ಮೃತಗಳೂ, ಪಂಚಪಲ್ಲವಗಳೂ, ಛತ್ರಗಳೂ, ಸರ್ವಾಂಗ ಸುಂದರಿಯರಾದ ಎಂಟುಮಂದಿ ಕನ್ಯೆಯರೂ, ದರ್ಭೆ, ಹಾಪ್ರಗೆ, ಮದದಾನೆಯೂ, ನಾಲ್ಕು ಕುದುರೆಗಳನ್ನು ಕಟ್ಟಿರುವ ರತ್ನಮ ಯವಾದ ರಥವೂ, ಹೊಸಸಾಣೆಯ ಕತ್ತಿಯೂ, ಬಿಲ್ಲುಬಾಣಗಳೂ, ಶ್ವೇತಚ್ಛತ್ರವೂ, ಬೀಳೀ ಗೂಳಿಯೂ, ನಾಲ್ಕು ಕೋರೆದಾಡೆಗಳುಳ್ಳ ಸಿಂಹವೂ, ಸಿಂಹಾಸನವೂ, ಸಂಪೂರ್ಣವಾದ ಹುಲಿ ಡೊಗಲೂ, ಸಮಿತ್ತುಗಳೂ, ಭೇರೀ, ಮೃದಂಗಾದಿ ವಾದ್ಯಗಳೂ, ದಿವ್ಯಾಲಂಕಾರ ಭೂಷಿತರಾದ ವೇಶ್ಯೆಯರೂ, ಬ್ರಾಹ್ಮಣರೂ, ಸುವಾಸಿನಿಯರೂ, ಗೋವುಗಳೂ, ಸಿದ್ಧವಾಗಿವೆ ಎಂದು ಹೇಳು ಮತ್ತು ಪರಿಶುದ್ಧವಾದ ಸುಮುಹೂರ್ತದಲ್ಲಿ ರಾಮನ ಪಟ್ಟಾಭಿಷೇಕಕ್ಕೆ ಅರಸನನ್ನು ತ್ವರೆಪಡಿಸು ಎಂದು ಹೇಳಲು ಸುಮಂತ್ರನು ಅಂತಃಪುರವನ್ನು ಹೊಕ್ಕು ಕೈಕಯಿಯ ಗೃಹದ್ವಾರದಲ್ಲಿ ನಿಂತು ಎಲೈ ಮಹಾರಾಯನೇ ಸೂರ್ಯನು ಹೇಗೆ ಸಕಲ ಲೋಕಗಳನ್ನೂ ಸಂತೋಷಪಡಿಸುತ್ತ ಉದಯಿಸುವನೋ ಹಾಗೆಯೇ ನೀನು ನಮ್ಮೆಲ್ಲರನ್ನೂ ಸಂತೋಷಪಡಿಸುತ್ತಾ ಹಾಸಿಗೆಯಿಂದೇಳು ಎಲೈ—ಮಹಾರಾಜನೇ, ಚಂದ್ರಸೂರ್ಯರೂ, ಇಂದ್ರಾದ್ಯಷ್ಟದಿಕ್ಪಾಲಕರೂ, ವರುಣ ವೈಶ್ರಣರೂ ನಿನಗೆ ಮಂಗಳವನ್ನೀಯಲಿ, ರಾತ್ರಿಯು ಕಳೆದುಹೋಯಿತು. ಮಂಗಳಕರವಾದ ಅರುಣೋ ದಯವಾಯಿತು. ವಸಿಷ್ಠಮಹಾಮುನಿಯು ಸಕಲ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಬಂದು ಕಾದಿರುವರು. ಶೀಘ್ರವಾಗಿ ದಯಮಾಡಿ ಲೋಕಾಭಿರಾಮನಾದ ರಾಮಚಂದ್ರನಿಗೆ ಪಟ್ಟಾಭಿ ಷೇಕ ಮಾಡಿಸು, ಗೋಪಾಲಕನಿಲ್ಲದ ಗೋವುಗಳಹಾಗೆ, ಸೇನಾನಾಯಕನಿಲ್ಲದ ದಂಡಿನಂತೆ ಚಂದ್ರನಿಲ್ಲದ ರಾತ್ರಿಯಂತೆ, ನೀನಿಲ್ಲದ ರಾಷ್ಟ್ರವು ಪ್ರಕಾಶಿಸುವುದಿಲ್ಲವೆಂದು ಹೇಳುತ್ತಿರಲು ಸ್ವಲ್ಪ ಎಚ್ಚತ್ತಿದ್ದ ದಶರಥನ ಕರ್ಣಕುಹರದಲ್ಲಿ ಸುಮಂತ್ರನ ವಾಕ್ಯಗಳೆಲ್ಲವೂ ಗಾಯಗಳಲ್ಲಿ ಬಿದ್ದ ಕಾರದನೀರಿನಂತಾಗಿ ರಾಯನು ಸುಮಂತ್ರನನ್ನು ದುಃಖದಿಂದ ನಿದ್ರೆಯಿಲ್ಲದೆ ಕೆಂಪಾಗಿರುವ ಕಣ್ಣುಗಳಿಂದ ನೋಡಿ ಎಲೈ ಶೂರನೇ ನನ್ನನ್ನೇಕೆ ನೋಯಿಸುತ್ತೀಯೆ ಹಾ! ರಾಮಾ ಎಂದು ಹೇಳಿ ಮತ್ತೆ ಮೈ ಮರೆದನು.

ಆಗ ಕೈಕಯಿಯು ಸುಮಂತ್ರನನ್ನು ಕುರಿತು ಎಲೈ, ಮಂತ್ರಿಯೇ! ರಾಜನು ರಾತ್ರಿಯೆಲ್ಲಾ ರಾಮನ ಪಟ್ಟಾಭಿಷೇಕ ಮಹೋತ್ಸವದ ಸಂಭ್ರಮದ ದೆಸೆಯಿಂದ ನಿದ್ರೆಹೋಗಲಿಲ್ಲ ಈಗತಾನೆ ಸ್ವಲ್ಪ ನಿದ್ರೆ ಮಾಡುತ್ತಿರುವರು ಏಕೆ ಕೂಗುತ್ತೀಯೇ, ನೀನು ಬೇಗ ಹೋಗಿ ರಾಮನನ್ನು ಕರೆದುಕೊಂಡು ಬಾ! ಆತುರಪಡಬೇಡ ಬೇಗ ನಡೆಯೆನಲು, ಸಚಿವನು ಪಟ್ಟಾಭಿಷೇಕಕ್ಕೋಸುಗ ಕೈಕಯಿಯು ತ್ವರೆಪಡಿಸುವಳೆಂದು ತಿಳಿದು ಸಂತೋಷಪಟ್ಟು ಒಡನೆ ರಾಘವನ ಸಮೀಪಕ್ಕೆ ಹೋಗಿ ಆಕೆ ಹೇಳಿದ ಮಾತನ್ನು ತಿಳಿಸಲು ರಾಮನು ಬೇಗನೆ ಹೊರಟು ಹಿಂದೆ ಬರುತ್ತಿದ್ದ ಸೀತೆಯನ್ನು ನೋಡಿ ಪ್ರಿಯಳೇ ತನ್ನ ತಂದೆಯೂ, ನನ್ನ ಕಿರೀತಾಯಿಯಾದ ಕೈಕಯಿಯೂ ಸಹಾ ತನಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕೋಸ್ಕರ, ಬರಹೇಳಿ ಸಚಿವನನ್ನು ಕಳುಹಿಸಿ ಇದ್ದಾರೆ ನಾನು ಹೋಗಿಬರುವೆನು ನಿನ್ನ ಪರಿವಾರದೊಡನೆ ನೀನಿಲ್ಲಿ ಸುಖವಾಗಿರು ಎಂದು ಹೇಳಿ ಸಮಾಧಾನಗೊಳಿಸಿ, ದಿವ್ಯವಾದ ಮಣಿಮಯ, ರಥವನ್ನೇರಿ ಹೊರಟನು. ಶ್ರೀಮಹಾವಿಷ್ಣುವನ್ನು ಎಡೆಬಿಡದೆ ಆದಿಶೇಷನು ಹೇಗೆ ಸಂಗಡಲೆ ಇರುವನೋ ಹಾಗೆ ಲಕ್ಷ್ಮಣನು ಧನುರ್ಬಾಣಗಳನ್ನು ಧರಿಸಿಕೊಂಡು ಅಣ್ಣನ ಸೇವೆಗೋಸ್ಕರ ಸಂಗಡ ಹೊರಟನು ಖಡ್ಗ ಮುಂತಾದ ಆಯುಧಗಳನ್ನು ಧರಿಸಿಕೊಂಡು, ಅನೇಕ ಮಂದಿ ಭಟರು ಕುದುರೆಗಳನ್ನೇರಿ ಸಂಗಡ ಬಂದರು. ಮುಂಮುಗದೆಯಲ್ಲಿ ಭಟರು ಹೊಗಳುತ್ತಾ ಬಂದರು ಕೆಲವು ಜನರು ಬೀದಿಗಳಲ್ಲಿ ನೆರೆದಿರುವ ಗುಂಪನ್ನು ಸಾಲಾಗೊಳಿಸಿ ನೋಡುವುದಕ್ಕೆ ಅಂದವಾಗಿರುವಂತೆ ಮಾಡುತ್ತಾ ಬಹು ಸಂಭ್ರಮದೊಡನೆ ರಾಮಚಂದ್ರನು ಬೀದಿಯಲ್ಲಿ ಬರುತ್ತಿರಲು ಚಂದ್ರನು ರೋಹಿಣಿಯನ್ನು ಕೂಡುವಂತೆ ರಾಮನು ರಾಜ್ಯಲಕ್ಷ್ಮಿಯನ್ನು ಕೂಡಿ ನಮ್ಮೆಲ್ಲರನ್ನು ಮಕ್ಕಳೋಪಾದಿಯಲ್ಲಿ ಕಾಪಾಡುವನು, ಎಂದು ಗುಂಪುಗುಂಪಾಗಿ ಮಾತಾಡಿಕೊಳ್ಳುವ ಜನಗಳ ಮಾತುಗಳನ್ನು ಕೇಳುತ್ತಾ ದಶರಥನ ಅರಮನೆಯ ಸಮೀಪಕ್ಕೆ ಬಂದು ತೇರಿನಿಂದಿಳಿದು ತನ್ನ ಸಕಲ ಪರಿವಾರವನ್ನೂ ಬಾಗಲಲ್ಲಿ ನಿಲ್ಲಿಸಿ ತಾನೊಬ್ಬನೆ ಒಳಹೊಕ್ಕು ದುಃಖದಿಂದ ಬಾಡಿದ ಮುಖದಿಂದ ಒಣಗಿದ ತುಟಿಗಳುಳ್ಳ ತಂದೆಯನ್ನು ನೋಡಿ ಆತನ ಕಾಲಿಗೆ ಮೊದಲು ನಮಸ್ಕರಿಸಿ ತರುವಾಯ ಕೈಕಯಿಯ ಕಾಲಿಗೆರಗಿ ನಿಂತಿರಲು ರಾಮನನ್ನು ನೋಡಿ ದಶರಥನು ಕಣ್ಣುಗಳಿಂದ ನೀರು ಸುರಿಸುತ್ತಾ ಹಾ! ರಾಮಾ ಎಂದು ಘಟ್ಟಿಯಾಗಿ ಕೂಗಿ ಮೂರ್ಛೆಯನ್ನು ಹೊಂದಿದನು.

ಆಗ ರಾಮನು ರಾಹುವಿನಿಂದ ಹಿಡಿಯಲ್ಪಟ್ಟ ಚಂದ್ರನಂತೆಯೂ ಮೋಡಗಳಿಂದ ಮುಚ್ಚಲ್ಪಟ್ಟ ಸೂರ್ಯನಂತೆಯೂ, ಅನೃತವನ್ನು ಹೇಳಿದ ಸತ್ಯವ್ರತನಂತೆಯೂ, ಕಾಂತಿಹೀನನಾಗಿರುವ ತಂದೆಯನ್ನು ನೋಡಿ ಭಯಭಕ್ತಿಗಳಿಂದ ಮತ್ತೆ ತಾಯಿಯಾದ ಕೈಕಯಿಯ ಕಾಲಿಗೆ ಬಿದ್ದು ತಾಯಿ ದಶರಥನು ಎಂದಿನಂತೆ ನನ್ನನ್ನು ಆದರಿಸುವದಿಲ್ಲ ಮೊದಲು ಯಾರಮೇಲಾದರೂ ಕೋಪಮಾಡಿಕೊಂಡಿದ್ದರೆ ನನ್ನನ್ನು ನೋಡಿದ ಮಾತ್ರದಿಂದಲೇ ಪ್ರಸನ್ನನಾಗುತ್ತಿದ್ದನು. ಅಂಥವನು ಈಗ ನನ್ನನ್ನು ನೋಡಿ ಏತಕ್ಕೆ ಇಷ್ಟು ಆಯಾಸಪಡುತ್ತಾನೆ ಏತಕ್ಕಿಷ್ಟು ದುಃಖಪಡುತ್ತಾನೆ, ಎಳಮಾವಿನ ಚಿಗುರು ಬೇಸಿಗೆಯ ಬಿಸಿಲಿನಿಂದ ಬಾಡಿವಂತೆ ಮುಖವೇಕೆ ಇಷ್ಟು ಬಾಡಿರುವದು, ನಾನೇನು ಅಪರಾದವನ್ನು ಮಾಡಿದ್ದೇನೆ ಇಷ್ಟು ಕೋಪವಾಗಿರುವದಕ್ಕೆ ಕಾರಣವೇನು ನೀನು ನನ್ನಮೇಲೆ ಕನಿಕರವಿಟ್ಟು ಆತನು ನನಗೆ ಪ್ರಸನ್ನನಾಗುವಂತೆ ಮಾಡು ಎಂದು ಮುಕುಳಿತಹಸ್ತನಾಗಿ ಬೇಡಿಕೊಂಡನು.

ಆಗ ಕೈಕಯಿಯು ನಾಚಿಕೆಯನ್ನು ತೊರೆದು ತನಗೆ ಬೇಕಾದ ಮಾತುಗಳನ್ನಾಡಲುದ್ಯುಕ್ತಳಾಗಿ ಎಲೈ ದಾಶರಥಿಯೇ! ಅರಸನಿಗೆ ನಿನ್ನಮೇಲೆ ಸ್ವಲ್ಪವಾದರೂ ಕೋಪವಿಲ್ಲ. ಆತನ ಮನೋಗತವೆ ಬೇರೆ ನಿನ್ನ ಭಯದಿಂದ ಅದನ್ನು ಹೇಳಲಾರದೇ ಇದ್ದಾನೆ ಪ್ರಿಯನಾದ ಮಗನಿಗೆ

ಅಪ್ರಿಯುವಾದ ಮಾತುಗಳನ್ನು ಹೇಗೆ ಹೇಳಾನು, ಪೂರ್ವದೊಳು ದೇವಾಸುರ ಯುದ್ಧದಲ್ಲಿ ನನಗೆ ಎರಡು ವರಗಳನ್ನು ಪ್ರಮಾಣಪೂರ್ವಕವಾಗಿ ಕೊಟ್ಟು ಈಗ ಸಾಧಾರಣ ಜನರಂತೆ ವ್ಯಸನಪಡುತ್ತಾನೆ ಧರ್ಮಕ್ಕೆ ಕಾರಣನಾದ ನಿನ್ನ ಪಿತನಾಡಿದ ಮಾತನ್ನು ನೀನು ನಡೆಸಿ ಆತನನ್ನು ಸತ್ಯವಂತನನ್ನಾಗಿ ಮಾಡು ನಿನಗದು ಇಷ್ಟವಾಗಲೀ ಅನಿಷ್ಟವಾಗಲೀ ನಡೆಸುವಹಾದರೆ ವಿವರವಾಗಿ ಹೇಳುವೆನು ಎಂದಳು. ರಾಮನು ಎಲ್ಲೈ ತಾಯೇ! ನೀನು ನನಗೆ ಇಂಥಾ ಮಾತನ್ನು ಹೇಳಬಹುದೇ ಪಿತೃವಿನ ಆಜ್ಞೆಯಾದರೆ ಬೆಂಕಿಯಲ್ಲಾದರೂ ಬೀಳುವೆನು ಕ್ರೂರವಾದ ವಿಷವನ್ನಾದರೂ ಕುಡಿಯುವೆನು, ಸಮುದ್ರದಲ್ಲಾದರೂ ಬೀಳುವೆನು, ನಾನು ಎದುರು ಮಾತು ಆಡುವವನಲ್ಲ ತಂದೆಯ ಮನೋಗತವನ್ನು ತ್ವರೆಯಾಗಿ ಹೇಳು ಎನಲು ಕೇಕಯ ರಾಜಪುತ್ರಿಯು ಎಲ್ಲೈ ರಾಮನೇ! ಮೊದಲು ದೇವಾಸುರ ಯುದ್ಧದಲ್ಲಿ ನಿಮ್ಮ ತಂದೆಯ ಕಷ್ಟವನ್ನು ನಾನು ಪರಿಹರಿಸಿದ್ದರಿಂದ ಆಗ ನನಗೆ ವರದ್ವಯವನ್ನು ಕೊಟ್ಟು ಇದ್ದನು. ನನಗೆ ಬೇಕಾದಾಗ ಕೇಳಿದರೆ ನಡೆಸಿಕೊಡಬೇಕೆಂದು ಹೇಳಿಕೊಂಡದ್ದಕ್ಕೆ ಹಾಗೆಯೇ ಆಗಲೆಂದು ಪ್ರಮಾಣಮಾಡಿದ್ದನು. ಈಗ ಸಮಯವಾದಕಾರಣ ಭರತನಿಗೆ ಕೋಸಲರಾಜ್ಯದ ಪಟ್ಟಾಭಿಷೇಕವನ್ನೂ, ಜಟಾಚೀರಧರನಾದ ನಿನಗೆ ಹದಿನಾಲ್ಕುವರುಷದ ವನವಾಸವನ್ನೂ ಕೇಳಿಕೊಂಡೆನು, ತಂದೆಯನ್ನು ಸತ್ಯಪ್ರತಿಜ್ಞನಾಗಿ ಮಾಡಬೇಕಾದರೆ ಅಪ್ರಕಾರ ನಡೆಯಿಸು ಎಂದು ಹೇಳಿದಳು. ಆಮಾತಿಗೆ ರಾಮನು ಬಹು ಕ್ರೂರವಾದ ಮಾತನ್ನು ಕೇಳಿ ಸ್ವಲ್ಪವಾದರೂ ಮನಸ್ಸಿನಲ್ಲಿ ಆತುರಪಡದೆ ಜಟಾಚೀರಧರನಾಗಿ ಅರಣ್ಯಕ್ಕೆ ಹೋಗುವೆನು ತಂದೆಯ ಮಾತನ್ನು ನಡೆಸುವೆನು ತಂದೆಯಾಗಿಯೂ, ಗುರುವಾಗಿಯೂ, ಹಿತನಾಗಿಯೂ ಅರಸನಾಗಿಯೂ ಇರುವ ತಂದೆಯ ಮಾತನ್ನು ಎಂಥ ಮಗನಾದರೂ ತಿರಸ್ಕರಿಸುವನೇ ನನ್ನ ಪ್ರಾಣಗಳನ್ನೂ ಧನಗಳನ್ನೂ ರಾಜ್ಯವನ್ನೂ ನನ್ನ ತಮ್ಮನಾದ ಭರತನಿಗೆ ಕೊಡಲು ನಾನು ಬಹಳ ಸಂತೋಷಪಡುವಾಗ ಮಾತಾ ಪಿತೃಗಳಿಂದ ಪ್ರೇರಿತನಾಗಿ ಕೊಡುವುದೊಂದು ಆಶ್ಚರ್ಯವೆ ದೂತರು ಈಗಲೇ ಹೋಗಿ ತಮ್ಮನಾದ ಭರತನನ್ನು ಕರೆತರಲಿ ಅವನಿಗೆ ನನ್ನ ಕೈಯ್ಯಾರ ಪಟ್ಟಾಭಿಷೇಕಮಾಡಿ, ಜಟಾಜೀರಧರನಾಗಿ ಅರಣ್ಯಕ್ಕೆ ಹೋಗುವೆನು ಭರತನನ್ನು ಕರೆಯಿಸು ಎನಲು ಕೈಕಯಿಯು ಬಹಳ ಹರುಷಿತಳಾಗಿ ಭರತನನ್ನು ಕರೆತರಿಸಿ ನಾವು ಪಟ್ಟಾಭಿಷೇಕಮಾಡುವೆವು ನೀನು ಮೊದಲು ಅರಣ್ಯಕ್ಕೆ ಹೊರಟುಹೋಗು ಅದು ಹೊರತು ನನಗೆ ತೃಪ್ತಿಯಾಗುವದಿಲ್ಲ, ದೊರೆಗೂ ಸಮಾಧಾನವಾಗುವದಿಲ್ಲ ಎಂದು ತನ್ನ ಅಭಿಪ್ರಾಯವನ್ನು ಸೂಚಿಸಲು, ಅದನ್ನು ಕೇಳುತ್ತಿದ್ದ ದಶರಥನು ಸಿಡಿಲುಹೊಡೆದ ದೊಡ್ಡ ಮರದಂತೆ ದೊಪ್ಪನೆ ನೆಲಕ್ಕೆ ಬಿದ್ದು ಮೈಮರೆದನು.

ಕೂಡಲೆ ರಾಮನು ಶೈತ್ಯೋಪಚಾರಮಾಡಿ ತಂದೆಯನ್ನು ಎಬ್ಬಿಸಿ, ಕೊರಡೆಯಿಂದ ಹೊಡೆಯಲ್ಪಟ್ಟ ಕುದುರೆಯಂತೆ, ಕೈಕಯಿಯ ಮಾತಿನಂತೆ ಜಾಗ್ರತೆಯಾಗಿ ತಂದೆತಾಯಿಗಳಿಗೆ ನಮಸ್ಕರಿಸಿ ಕೈಕಯಿಯನ್ನು ಕುರಿತು, ಎಲ್ಲೈ ತಾಯೇ! ನನ್ನನ್ನು ಕೇವಲ ಅರ್ಥೈಕಪರನೆಂದು ತಿಳಿಯಬೇಡ ಧರ್ಮದಲ್ಲಿ ಋಷಿಗಳಿಗೆ ಸಮಾನನೆಂದು ತಿಳಿ ಎಂದು ಪ್ರದಕ್ಷಿಣೆಮಾಡಿ ಹೊರಟು ಓಲಗದ ಚಾವಡಿಯಲ್ಲಿ ಅಣಿಮಾಡಿದ್ದ ಪಟ್ಟಾಭಿಷೇಕದ ಪದಾರ್ಥಗಳನ್ನು ಬಲಗೊಂಡು ಛತ್ರಚಾಮರಾದಿಗಳನ್ನೂ ಸಕಲ ಪರಿಜನರನ್ನೂ ಬಿಟ್ಟು ಏಕಾಂಗಿಯಾಗಿ ತನ್ನ ಮಾತೆಯ ಮನೆಗೆ ಪಾದಚಾರಿಯಾಗಿ ಬರುತ್ತಿರಲು ಲಕ್ಷ್ಮಣನು ಧನುರ್ಬಾಣ ಧರನಾಗಿ ರಾಮನ ಸಂಗಡ ಬರುತ್ತಿದ್ದನು. ಆಗ ರಾಮನು ಲಕ್ಷ್ಮಣನೊಡನೆ ತಾಯಾದ ಕೌಸಲ್ಯೆಯ ಅಂತಃಪುರಕ್ಕೆ ಬಂದು ಆಕೆಗೆ ನಮಸ್ಕಾರಮಾಡಿ ನಿಲ್ಲಲು ಆಕೆ ರಾಮನನ್ನು ನೋಡಿ ಅಪ್ಪಿಕೊಂಡು ತಲೆಯನ್ನು ಸವರಿ ಮುದ್ದಾಡಿ ಪುತ್ರವಾತ್ಸಲ್ಯದಿಂದ ಎಲ್ಲೈ ಮಗನೇ! ನಿನ್ನ ತಂದೆಯಾದ ದಶರಥಮಹಾರಾಯನು

ನಿನಗೆ ಪಟ್ಟಾಭಿಷೇಕಮಾಡುವನು ನೀನು ಪಿತೃಶುಶ್ರೂಷೆಯನ್ನು ಮಾಡುತ್ತಾ ನಿನ್ನ ತಂದೆಯ ರಾಣಿಯರಾದ ಬಲತಾಯಿಯರನ್ನೂ ನನ್ನಂತೆಯೇ ಕಾಣುತ್ತಾ ಅವರೆಲ್ಲರಿಗೂ ಪ್ರಿಯವಾಗುವಂತೆ ನಡೆದುಕೊಳ್ಳುತ್ತಾ, ಪ್ರಜೆಗಳನ್ನು ಮಕ್ಕಳಿಗಿಂತ ಹೆಚ್ಚಾಗಿ ಕಾಪಾಡುತ್ತಾ, ವಸಿಷ್ಠಾದಿ ಗುರುಗಳನ್ನು ಭಕ್ತಿಶ್ರದ್ಧೆಗಳಿಂದ ಪೂಜಿಸುತ್ತಾ ಗುರುಹಿರಿಯರ ಮಾತು ಮೀರದೆ, ರಾಜಧರ್ಮವನ್ನು ತಪ್ಪದೆ ಆಚಂದ್ರಾರ್ಕಸ್ಥಾಯಿಯಾದ ಕೀರ್ತಿಯೊಡನೆ ಪೃಥ್ವೀಸಾಮ್ರಾಜ್ಯವನ್ನು ಅನುಭವಿಸಿ ಧರ್ಮಸೇತುವೆಯನ್ನು ಕಟ್ಟು ಎಂದು ನುಡಿಯಲು ರಾಮನು ನಾಚಿಕೆಯುಳ್ಳವನಾಗಿ ಮಾತೆಯೆ ನನಗೆ ಈಗ ಸಂಭವಿಸಿರುವ ಭಯವನ್ನು ಅರಿಯದೆ ಹೀಗೆ ಹೇಳುತ್ತಿರುವೆಯಾ, ನಾನು ನಿನಗೂ, ಲಕ್ಷ್ಮಣನಿಗೂ, ಸೀತೆಗೂ ದುಃಖವನ್ನುಂಟುಮಾಡಲು ಹುಟ್ಟಿದವನು, ಈಗ ದಂಡಕಾರಣ್ಯವನ್ನು ಕುರಿತು ಹೋಗುತ್ತಿದೇನೆ ಭೋಜನವನ್ನು ಬಿಟ್ಟು ಮುನಿಗಳಹಾಗೆ ಕಂದಮೂಲಗಳನ್ನು ಭಕ್ಷಿಸುತ್ತ ನಾರುಸೀರೆಯನ್ನುಟ್ಟು ಜಡೆಗಳನ್ನು ಧರಿಸಿಕೊಂಡು ಹದಿನಾಲ್ಕುವರುಷ ಕಾಡಿನಲ್ಲಿರುವೆನು ಮಹಾರಾಜನು ಭರತನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಲೆಳಸಿ ನನಗೆ ಅರಣ್ಯಕ್ಕೆ ಹೊರಡಲು ಅಪ್ಪಣೆಕೊಟ್ಟನು ನಿನ್ನ ಅಪ್ಪಣೆಯನ್ನು ಪಡೆಯಲು ನಾನು ಇಲ್ಲಿಗೆ ಬಂದೆನು ಎಂದನು.

ಆ ಮಾತನ್ನು ಕೇಳಿ ಕೌಸಲ್ಯೆಯು ಕೊಡಲಿಯಿಂದ ಕಡಿಯಲ್ಪಟ್ಟ ತಾಳವೃಕ್ಷದಂತೆ ಸ್ವರ್ಗದಿಂದ ಭೂಮಿಗೆ ಬಿದ್ದ ದೇವತೆಯಂತೆ, ಸುಂಟರಗಾಳಿಯಿಂದ ಮುರಿಯಲ್ಪಟ್ಟ ಬಾಳೆಯಕಂಭದಂತೆ ನೆಲದಲ್ಲಿ ಬಿದ್ದು ಮೂರ್ಛಿತಳಾದಳು, ರಾಮನು ಶೈತ್ಯೋಪಚಾರಮಾಡಿ ಅವಳನ್ನು ಚೇತನಗೊಳಿಸಿದನು.

ಆಗ ಕೌಸಲ್ಯಾದೇವಿಯು ರಾಮನನ್ನು ನೋಡಿ ನಾನು ಬಹುಕಾಲದಮೇಲೆ ಅನೇಕ ದೇವರನ್ನು ಪ್ರಾರ್ಥಿಸಿ ನಿನ್ನನ್ನು ಹೆತ್ತು, ಇಂಥಾ ದುಃಖಕ್ಕೆ ಗುರಿಯಾದೆನು ಲೋಕದಲ್ಲಿ ಹೆಂಗಸು ಮಕ್ಕಳನ್ನು ಹೆತ್ತು ಹೀಗೆ ದುಃಖವನ್ನು ಅನುಭವಿಸುವುದಕ್ಕಿಂತ ಬಂಜೆಯಾಗಿರುವುದೆ ಲೇಸು ಮಕ್ಕಳಿಲ್ಲವೆಂಬ ದುಃಖವೇ ಹೊರತು ಬೇರೆ ಏನೂ ಇಲ್ಲ ಕೈಕಯಿಯು ನಿನ್ನ ತಂದೆಗೆ ಪ್ರಿಯಳಾಗಿರುವಳೆಂಬ ಗರ್ವದಿಂದ ನನ್ನನ್ನು ಆಗಾಗ ನಿಂದಿಸುತ್ತಿದ್ದರೂ ನಿನ್ನನ್ನು ನೋಡಿ ಅದನ್ನೆಲ್ಲಾ ಮರೆತಿದ್ದೆನು ಈಗ ಆಕೆಯ ಕೈಕೆಳಗೆ ನಾನು ಬಿದ್ದಿರಬೇಕಾಗಿ ಬಂದಿತು-





ಇದಕ್ಕಿಂತ ಹೆಚ್ಚಾದ ದುಃಖವೇನುಂಟು ಅಪ್ಪಾ ರಾಮ, ನೀನು ಅರಣ್ಯವಾಸಕ್ಕೆ ಹೋದರೆ ನನಗೆ ಸಾವು ಸಿದ್ಧವಾಗಿರುವದು ಹದಿನಾಲ್ಕು ವರುಷಗಳವರೆಗೂ ನಿನ್ನನ್ನು ಬಿಟ್ಟು ನಾನು ಹೇಗಿರಲಿ ಚಂದ್ರಮಂಡಲಕ್ಕೆ ಸರಿಯಾದ ನಿನ್ನ ಮುಖವನ್ನು ನೋಡದೆ ಗಂಡನ ಪ್ರೀತಿಯೂ ಇಲ್ಲದೆ ನಿನ್ನನ್ನೂ ತೊರೆದು ದೀನಳಾಗಿ ನಾನು ಹೇಗೆ ಬದುಕಲಿ ಕಂದಾ ನೀನು ಸುಖವಾಗಿ ಬಾಳುತ್ತ ಮಹೋನ್ನತನಾಗಿರಬೇಕೆಂದು ನಾನು ಮಾಡಿದ ಸಕಲ ನೋಂಪಿಗಳೂ ಬೂದಿಯಲ್ಲಿ

ಹೋಮ ಮಾಡಿದಂತಾಯಿತು ಸಾರ್ಥಕವಾಗಲಿಲ್ಲ ಅಯ್ಯೋ ದೇವರೇ ರಾಮನು ಅರಣ್ಯವಾಸದ ಸುದ್ಧಿಯನ್ನು ಕೇಳಿದ ನನ್ನ ಎದೆಯು ಸೀಳಿಹೋಗಲಿಲ್ಲವಲ್ಲ ಬ್ರಹ್ಮನು ವಜ್ರದಿಂದ ಈ ಎದೆಯನ್ನು ಮಾಡಿದ್ದಾನೆಯೋ, ಕಾಡಿನ ಹೆಬ್ಬುಲಿಯು ಹುಲ್ಲೆಯನ್ನು ಎಳೆದುಕೊಂಡು ಹೋಗುವಂತೆ ಯಮನು ನನ್ನನ್ನು ಏಕೆ ಎಳೆದುಕೊಂಡು ಹೋಗುವುದಿಲ್ಲ ದುಃಖಬಂದಂತೆ ಸಾವು ಬರಲಾರದೆಂದು ಹಿರಿಯರು ಹೇಳುವದು ದಿಟ ಕರುವನ್ನು ಕಾಣದೆ ಸಂಕಟಪಡುತ್ತಿರುವ ಎಳಗಂದಿಯಂತೆ ನಿನ್ನನ್ನು ಕಾಣದೆ ಸಂಕಟಪಡುತ್ತಾ ಬದುಕಿರುವದಕ್ಕಿಂತ ಸಾಯುವದೇ ಮೇಲು ಅಥವಾ ನಿನ್ನೊಡನೆ ನಾನೂ ಕಾಡಿಗೆ ಬರುವೆನು ಕರೆದುಕೊಂಡು ಹೋಗು ಎಂದು ಮೊರೆಯಿಡುತ್ತಾ ಕಂಬನಿಗಳನ್ನು ಸುರಿಸಿ ಗೋಳಾಡುತ್ತಿದ್ದ ಕೌಸಲ್ಯೆಯನ್ನು ನೋಡಿ ಲಕ್ಷ್ಮಣನು ಎಲೈ ತಾಯೇ! ರಾಮನು ರಾಜ್ಯಲಕ್ಷ್ಮಿಯನ್ನು ಬಿಟ್ಟು ಹೆಂಗಸಿನ ಮಾತನ್ನು ಕೇಳಿಕೊಂಡು ಬುದ್ಧಿಯಿಲ್ಲದ ಮುದುಕನಾದ ತಂದೆಯ ಮಾತನ್ನು ಕೇಳಿ ಅರಣ್ಯಕ್ಕೆ ಹೋಗುವದು ಯಾವ ನ್ಯಾಯ, ರಾಜ್ಯಾಭಿಷೇಕಕ್ಕೆ ಅರ್ಹನಾದ ಮಗನನ್ನು ಕಾಡಿಗೆ ಕಳುಹಿಸಿ ಕಿರಿಯುವನಾಗಿ ರಾಜ್ಯಭಾರಕ್ಕೆ ಅನರ್ಹನಾಗಿರುವ ಭರತನಿಗೆ ಪಟ್ಟಾಭಿಷೇಕ ಮಾಡುವದು ಯಾವ ಧರ್ಮ, ಇವನಲ್ಲಿ ದೋಷವನ್ನಾಗಲೀ, ಅಪರಾಧವನ್ನಾಗಲೀ, ತಪ್ಪನ್ನಾಗಲೀ, ಕಂಡನೆ! ಕಿರಿಯ ಹೆಂಡತಿಯ ಮಾತನ್ನು ಕೇಳಿ ನೀತಿತಪ್ಪಿ ನಡೆಯುವ ತಂದೆಯನ್ನು ಕೇಳಿಬರುವೆನು ನನ್ನೊಡನೆ ರಾಜ್ಯಭಾರ ಮಾಡುವ ಈ ರಾಮಚಂದ್ರನಿಗೆ ಅಪ್ರಿಯವನ್ನು ಮಾಡುವ ಸಮರ್ಥರು ಈ ಲೋಕದಲ್ಲಿರುವರೆ ಒಂದುವೇಳೆ ಕೈಕೆಯಿಯಿಂದ ಪ್ರೇರಿತನಾಗಿ ಕೆಟ್ಟಾಟಕ್ಕೆ ಭರತನೇನಾದರೂ ಬಂದರೆ ಅವನನ್ನೂ ಮುರಿಯುವೆನು ಗರ್ವಿಷ್ಟನಾಗಿ ಕಾರ್‍ಯಾಕಾರ್‍ಯಗಳನ್ನು ತಿಳಿಯದ ದುರ್ಮಾರ್ಗನಾದ ಗುರುವನ್ನಾದರೂ ಶಿಕ್ಷಿಸಬಹುದೆಂದು ಧರ್ಮಶಾಸ್ತ್ರವಿದೆ. ಲೋಕದಲ್ಲಿ ಮೆತ್ತಗಿರುವವನನ್ನು ಎಲ್ಲರು ತುಳಿಯುವರು ಎಂದು ಹೇಳಿದನು. ರಾಮನು ಆ ಮಾತನ್ನು ಕೇಳಿ ಅಹಹ! ಅಪಚಾರವಾಯಿತು, ಎಲೈ ಲಕ್ಷ್ಮಣನೇ! ನೀನಿಂಥಾ ಮಾತಾಡಬಹುದೆ, ಆದರೆ ಹೀಗೆ ಆಡಿದುದು ನಿನ್ನ ಸ್ವಭಾವದಿಂದಲ್ಲ ನನ್ನ ಮೇಲಿನ ವ್ಯಾಮೋಹವೆಂಬ ಹುಚ್ಚಿನಿಂದ ಹೀಗೆ ಆಡಿದ್ದೀಯೆ, ಆದರೆ ನನಗೂ ನಿನಗೂ ವಿರೋಧವಾಗಿ ಹಗೆತನ ಮಾಡಿಕೊಂಡು ಯಾರುತಾನೆ ಭರತನಿಗೆ ಪಟ್ಟಾಭಿಷೇಕ ಮಾಡುವರು, ನನ್ನ ತಮ್ಮನ ಮೇಲೆ ನನಗೆ ಪ್ರೀತಿಯುಂಟು ಆದಕಾರಣ ಭರತನು ಈ ಕೋಸಲ ದೇಶವನ್ನು ಆಳುವುದು ನನಗೆ ಸಂತೋಷಕರವಾಗಿದೆ, ಈ ನಮ್ಮ ದೇಹಗಳು ಯಾರವು, ಯಾರಿಂದ ಉಂಟಾದವು ಪಿತನಾದ ದಶರಥನಿಂದಲ್ಲವೇ, ಆತನು ತನ್ನಿಂದಾದ ಈ ದೇಹಗಳನ್ನು ಏನು ಮಾಡಿದರೂ ಬೇಡವೆಂದು ನಿಷೇದಿಸುವರು ಯಾರು, ಲೋಕದಲ್ಲಿ ತಂದೆಗಿಂತಲೂ ದೈವವುಂಟೆ? ನೀನು ವಿವೇಕವಿಲ್ಲದೆ ಇಂಥಾ ಮಾತುಗಳ್ನು ಆಡಿದೆ ಅದನ್ನು ಮನಸ್ಸಿನಲ್ಲಿಯಾದರೂ ನೆನೆಯಬಹುದೆ ಅಂಥ ಮಾತುಗಳನ್ನು ಆಡಬೇಡ ಎಂದು ಲಕ್ಷ್ಮಣನನ್ನು ಸಮಾಧಾನಪಡಿಸುತ್ತಿರಲು ಕೌಸಲ್ಯೆಯು ರಾಮನನ್ನು ಕುರಿತು, ಎಲೈ ರಾಮನೆ! ನಿನ್ನನ್ನು ಬಿಟ್ಟಿರುವುದಕ್ಕೆ ಬದಲಾಗಿ ಸುಖವಾಗಿ ಪ್ರಾಣಗಳನ್ನು ಬಿಟ್ಟುಬಿಡಬಹುದು ನನ್ನನ್ನೂ ಕರೆದುಕೊಂಡು ಹೋಗು, ನಾನೂ ನಿನ್ನೊಡನೆ ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಕಾಡಿನಲ್ಲಿ ಕಲ್ಲುಮುಳ್ಳುಗಳನ್ನು ತುಳಿದುಕೊಂಡು ಕಷ್ಟಪಟ್ಟುಕೊಂಡಿರುವೆನು, ನೀನು ಕಾಡಿಗೆ ಹೋಗಿ ನಾನು ಪಟ್ಟಣದಲ್ಲಿದ್ದರೆ ನನ್ನ ಭಾಗಕ್ಕೆ ಪಟ್ಟಣವೂ ಕಾಡಾಗುವದು ಹಾಗಲ್ಲದಿದ್ದರೆ ನಿನ್ನ ತಂದೆ ತನ್ನ ಮೋಹದರಾಣಿಯ ಮಗನಿಗೆ ಪಟ್ಟ ಕಟ್ಟಿಕೊಂಡು ಸುಖವಾಗಿರಲಿ ನೀನು ನನ್ನ ಸೇವೆಯನ್ನು ಮಾಡಿಕೊಂಡು ಇಲ್ಲಿ ಸುಖವಾಗಿರು ಈ ಎರಡರಲ್ಲಿ ಯಾವದನ್ನೂ ಮಾಡದೇ ನೀನು ಕಾಡಿಗೆ ಹೋಗುವದು ನಾನು ಸವತಿಯ ಕೈಕೆಳಗೆ ಬಿದ್ದು ದುಃಖಪಡುವುದು ಯಾವನ್ಯಾಯ ಲೋಕದಲ್ಲಿ ತಂದೆತಾಯಿಗಳಿಬ್ಬರೂ ಮಕ್ಕ

ಳಿಗೆ ಸಮರಲ್ಲವೆ ಮೊದಲು ತಾಯನ್ನು ಪೂಜಿಸಿ ತರುವಾಯ ತಂದೆಯನ್ನು ಪೂಜಿಸಬೇಕೆಂದು ವೇದಗಳು ಹೇಳುತ್ತಿವೆ ತಾಯಿಗೆ ಮಿಾರಿದ ದೇವರೇ ಇಲ್ಲ ತಂದೆಯಮಾತನ್ನು ಪಾಲಿಸಿದಂತೆಯೇ ನನ್ನ ಮಾತನ್ನೂ ಪಾಲಿಸಬೇಕು ನನ್ನ ಮಾತನ್ನು ಮಿಾರಿ ನೀನು ಕಾಡಿಗೆ ಹೋದರೆ ನಾನು ಪ್ರಾಣವನ್ನೇ ಬಿಟ್ಟುಬಿಡುವೆನು ಇದು ಖಂಡಿತ ಎಂದು ನಾನಾ ಬಗೆಯಾಗಿ ಗೋಳಾಡುತ್ತಿರುವ ತಾಯಿಯನ್ನು ನೋಡಿ ಅಮ್ಮಾ! ತಂದೆಯ ಮಾತನ್ನು ಎಳ್ಳಷ್ಟಾದರೂ ಮಿಾರಲಾರೆನು ನಮಸ್ಕಾರ ಮಾಡಿ ಹೇಳುತ್ತೇನೆ, ಅರಣ್ಯಕ್ಕೆ ಹೋಗುವದು ನನಗೆ ಇಷ್ಟವಾಗಿದೆ ನನ್ನಲ್ಲಿ ದಯವಿಟ್ಟು ಅಪ್ಪಣೆ ಕೊಡು ನಮ್ಮ ವಂಶದಲ್ಲಿ ಸಗರಚಕ್ರವರ್ತಿಯು ಅರವತ್ತುಸಾವಿರಮಂದಿ ಮಕ್ಕಳೂ ಒಟ್ಟಾಗಿ ಭೂಮಿಯನ್ನಗೆದು ಮಡಿಯಲಿಲ್ಲವೆ, ಪರಶುರಾಮನು ತಂದೆಯಾದ ಜಮದಗ್ನಿಯ ಮಾತಿನಮೇಲೆ ತಾಯಿಯಾದ ರೇಣುಕಾದೇವಿಯನ್ನು ಕೊಡಲಿಯಿಂದ ಕಡಿದು ಪಿತೃವಾಕ್ಯವನ್ನು ಕಾಪಾಡಲಿಲ್ಲವೆ? ತಂದೆಯ ಮಾತನ್ನು ನಡೆಸಿ ಪೂರ್ವೀಕರನೇಕರು ಪಿತೃವಾಕ್ಯಪರಿಪಾಲನೆ ಮಾಡಿರುವರು, ತಂದೆಯು ಮಹೋನ್ನತನಾಗಿರುವಾಗ ನಾನು ಒಬ್ಬನು ಅಲ್ಲ ನಿನ್ನನ್ನು ನಾನು ಕಾಡಿಗೆ ಕರೆದ ಕೊಂಡು ಹೋಗುವದು ನೀನು ನನ್ನೊಡನೆ ಕಾಡಿಗೆ ಬರುವದು ನ್ಯಾಯವಲ್ಲ ಲೋಕದಲ್ಲಿ ಹೆಂಗಸರಿಗೆ ಪತಿಗಿಂತಲೂ ಪ್ರಿಯವಾದ ವಸ್ತುವೆ ಇಲ್ಲ ತಂದೆ, ತಾಯಿ, ಅಣ್ಣ, ತಮ್ಮ, ತಂಗಿ, ಮಕ್ಕಳು ಮುಂತಾದವನರಿಗಿಂತ ಪತಿಯೇ ಶ್ರೇಷ್ಠನು ಈಗ ನನ್ನ ತಂದೆಯು ಕಿರೀ ಹೆಂಡತಿಯಾದ ಕೈಕಯಿಯ ಮಾತನ್ನು ಕೇಳಿ ನನ್ನನ್ನು ಕಾಡಿಗೆ ಕಳುಹಿಸಿ ಶೋಕಸಾಗರದಲ್ಲಿ ಮುಳುಗಿ ಕಡೆಗಾಣದೆ ಸಾಯುತ್ತ ಬಿದ್ದಿದ್ದಾನೆ ಇಂಥ ಕಷ್ಟಕಾಲದಲ್ಲಿ ಹಿರಿಯ ಹೆಂಡತಿಯಾಗಿ ಪ್ರಿಯ ಸತಿಯಾಗಿ ಸಕಲ ಧರ್ಮಗಳನ್ನು ತಿಳಿದವಳಾಗಿರುವ ನೀನು ಗಂಡನ ಸೇವೆಯನ್ನು ಬಿಟ್ಟು ನನ್ನೊಡನೆ ಕಾಡಿಗೆ ಬಂದರೆ ಲೋಕದ ಜನರು ಒಪ್ಪುವರೆ ತಿಳಿದವರು ಏನು ಹೇಳುವರು ಅಮ್ಮಾ! ನೀನು ಸಂತೋಷದಿಂದ ನನಗೆ ಅಪ್ಪಣೆಕೊಡು. ದಂಡಕಾರಣ್ಯಕ್ಕೆ ಹೋಗುವೆನು ನನ್ನಮೇಲೆ ಆಣೆಯಿಡುವೆನು, ಏನಲು ಮಾತಾಡದೆ ಅಪ್ಪಣೆಕೊಡು, ಯಯಾತಿ ಮಹಾರಾಜನು ಸ್ವರ್ಗವನ್ನು ಬಿಟ್ಟು ಭೂಮಿಗೆ ಬಂದಂತೆ ಹದಿನಾಲ್ಕು ವರುಷ ತಂದೆಯ ಅಪ್ಪಣೆಯ ಮೇರೆಗೆ ಕಾಡಿನಲ್ಲಿದ್ದು ಹಿಂತಿರಿಗಿ ನಿನ್ನ ಸೇವೆಗೆ ಬರುವೆನು ತಂದೆಯ ಅಪ್ಪಣೆಯಮೇರೆಗೆ ನೀನೂ, ನಾನೂ, ಸೀತೆಯೂ, ಲಕ್ಷ್ಮಣನೂ, ಸುಮಿತ್ರೆಯೂ ನಾವೆಲ್ಲರೂ ನಡೆಯಬೇಕಾದುದು ನಮ್ಮ ಧರ್ಮ. ಆದುದರಿಂದ ಶೋಕವನ್ನು ಸಹಿಸಿಕೊಂಡು ಆಶೀರ್ವಾದಮಾಡಿ, ನನಗೆ ಅಪ್ಪಣೆ ಕೊಟ್ಟು ಕಳುಹಿಸು ಎಂದು ಬೇಡಿಕೊಂಡನು. ಆಗ ಕೌಸಲ್ಯೆಯು ರಾಮನ ಮಾತನ್ನು ಕೇಳಿ ಪುತ್ರವಿರಹದಿಂದುಂಟಾದ ದುಃಖದಿಂದ ಭೂಮಿಗೆ ಬಿದ್ದು ಮೂರ್ಛೆಹೋದಳು. ಲಕ್ಷ್ಮಣನು ಅಣ್ಣನ ಕಾಲಿನಮೇಲೆ ಬಿದ್ದು ನ್ಮೈಮರೆದನು. ಸುಮಿತ್ರೆ ಮುಂತಾದವರೆಲ್ಲರೂ ಹಾ ರಾಮಾ! ಎಂದು ಸಂಕಟಪಡುತ್ತಾ ಎಲೈ ರಾಮನೇ! ನೀನು ಅರಣ್ಯಕ್ಕೆ ಹೊರಟುಹೋದರೆ ನಮ್ಮಗಳಿಗೆ ಗತಿಯಾರು ನಿನ್ನ ತಾಯಿಯಾದ ಕೌಸಲ್ಯೆಯಂತೆ ನಮ್ಮನ್ನೂ ನೋಡಿಕೊಳ್ಳುತ್ತಿದ್ದೆಯಲ್ಲಾ ಒಂದು ದಿನವಾದರೂ ನಿನ್ನ ಬಾಯಿಂದ ಕ್ರೂರವಾದ ಮಾತನ್ನು ನಾವು ಕೇಳಲಿಲ್ಲವಲ್ಲ ಕಾರಣಾಂತರದಿಂದ ನಾವು ಶೋಕಾಗ್ನಿಯಿಂದ ಪೀಡಿತರಾಗಿದ್ದಾಗ ನಿನ್ನ ಸವಿನುಡಿಗಳೆಂಬ ಚಂದ್ರಕಿರಣಗಳಿಂದ ತೃಪ್ತರಾಗಿ ಸಂತೋಷಪಡುತ್ತಿದ್ದೆವು ದಶರಥನು ವೃದ್ಧನಾಗಿ ಹೆಂಡತಿಯ ಮಾತನ್ನು ಕೇಳಿ ಪ್ರಿಯನಾದ ಪುತ್ರನನ್ನು ಕಾಡಿಗೆ ಕಳುಹಿಸಲು ಅವನಿಗೆ ಮನಸ್ಸು ಹೇಗೆ ಬಂದಿತು? ನಿನ್ನನ್ನು ಅಗಲಿ ನಾವೆಂತು ಜೀವಿಸುವೆವು ಎಂದು ಸರ್ವರೂ ರಾಮನ ಮುಂದೆ ಬಿದ್ದು ಹೊರಳಿ ದುಃಖದಿಂದ ಮೂರ್ಛಿತರಾದರು.

ಆಗ ರಾಮನು ಅವರನ್ನೆಲ್ಲಾ ನೋಡಿ ವ್ಯಸನಪಟ್ಟು ಧೈರ್ಯವನ್ನು ತಾಳಿ ಶೈತ್ಯೋಪಚಾರದಿಂದ ಎಲ್ಲರನ್ನೂ ಚೈತನ್ಯಗೊಳಿಸಿ ಅವರಿಗೆ ಕೈಮುಗಿದು ನೀವು ನನ್ನೆದುರಿಗೆ ತಂದೆಯನ್ನು ನಿಂದಿಸುವದು ನನಗೆ ಸಮಾಧಾನವಾಗಿಲ್ಲ- ತಂದೆಯಾಗಿಯೂ, ಗುರುವಾಗಿಯೂ, ವೃದ್ಧನಾಗಿಯೂ, ಒಡೆಯನಾಗಿಯೂ ಇರುವ ದಶರಥರಾಯನು ಕೋಪದಿಂದಲೇ ಆಗಲೀ, ಪ್ರೀತಿಯಿಂದಲೇ ಆಗಲೀ, ಮೋಹದಿಂದಲೇ ಆಗಲೀ ಏನು ಹೇಳಿದರೂ ನಾವೆಲ್ಲರೂ ಶಿರಸಾವಹಿಸಿ ನಡೆದುಕೊಳ್ಳಬೇಕು ಇದಕ್ಕಿಂತ ನಮಗೆ ಬೇರೆ ಧರ್ಮವಿಲ್ಲ. ನೀವೆಲ್ಲರೂ ನನ್ನಮೇಲೆ ದಯವಿಟ್ಟು ಆಶೀರ್ವಾದ ಮಾಡಿ ಕಳುಹಿಸಬೇಕು ನಾನು ಕೆಲವು ದಿವಸಗಳಲ್ಲಿಯೆ ಹಿಂತಿರುಗಿ ಬರುವೆನು ಹದಿನಾಲ್ಕು ವರುಷಗಳೂ ಹದಿನಾಲ್ಕು ನಿಮಿಷಗಳಾಗಿ ಕಳೆದುಹೋಗುವವು. ನೀವೆಲ್ಲರೂ ಒಟ್ಟಾಗಿ ನನ್ನ ವಿಯೋಗದಿಂದ ದುಃಖಪಡುತ್ತಿರುವ ದಶರಥಮಹಾರಾಯನನ್ನು ಸಮಾಧಾನಗೊಳಿಸಿ ಪ್ರಿಯವಾದ ಮಾತುಗಳನ್ನೇ ಹೇಳಿ ದುಃಖವು ಮನಸ್ಸಿಗೆ ಹತ್ತದಹಾಗೆ ಮಾಡಬೇಕೆಂದು ನಾನು ಬೇಡಿಕೊಳ್ಳುವೆನು ಎಂದು ಹೇಳಿದ ರಾಮಚಂದ್ರನ ಮಾತುಗಳನ್ನು ಕೇಳಿ ಎಲ್ಲರೂ, ದುಃಖಾತಿಶಯದಿಂದ ಕೈಕಯಿಯನ್ನು ನಿಂದಿಸುತ್ತ ಕೌಸಲ್ಯೆಯು ಪಿತೃವಾಕ್ಯಪರಿಪಾಲನೆಯಲ್ಲಿ ಸಿದ್ಧಸಂಕಲ್ಪನಾಗಿರುವ ರಾಮನನ್ನು ನೋಡಿ ಅಯ್ಯೋ ವಿಧಿಯೇ ಹುಟ್ಟಿದುದು ಮೊದಲು ಕಷ್ಟವನ್ನು ಕೊಟ್ಟೆಯಾ, ಯಾವನ ಭೃತ್ಯರು ಕೂಡ ಮೃಷ್ಟಾನ್ನವನ್ನು ತಿಂದು ದಿವ್ಯಾಂಬರಗಳನ್ನುಟ್ಟು ಸುಖವಾಗಿರುವರೋ ಅಂಥಾ ರಾಮನು ಜಡೆಗಳನ್ನು ಧರಿಸಿಕೊಂಡು ನಾರಸೀರೆಯನ್ನುಟ್ಟು ಕೃಷ್ಣಾಜಿನವನ್ನು ಧರಿಸಿ ಪಾದಚಾರಿಯಾಗಿ ಕಲ್ಲುಮುಳ್ಳುಗಳನ್ನು ತುಳಿಯುತ್ತಾ ಕಂದಮೂಲಗಳನ್ನು ತನ್ನ ಕೈಯಿಂದಲೇ ಅಗೆದು ತಿನ್ನುವ ಕಷ್ಟವನ್ನು ಕೊಡಬಹುದೆ ಸರ್ವಪ್ರಾಣಿಪ್ರಿಯನಾಗಿ ಸುಕುಮಾರನಾದ ರಾಮನಿಗೆ ಇಂಥಾ ಕಷ್ಟವನ್ನು ಕೊಡುವುದಕ್ಕೆ ನಿನಗೆ ಹೇಗೆ ಮನಸ್ಸು ಬಂದಿತು ನಿನಗೆ ಸ್ವಲ್ಪನಾದರೂ ಕರುಣವಿಲ್ಲ ಅಯ್ಯೋ ? ವಿಧಿಯೇ ಈ ರಾಮನು ಕಾಡಿಗೆ ಹೋಗುವುದಕ್ಕೆ ಮೊದಲೆ ನನ್ನನ್ನೂ ಯಮನ ಬಳಿಗೆ ಕಳುಹಿಸಿಬಿಡು ಎಂದು ಹಂಬಲಿಸುತ್ತಿರುವ ಕೌಸಲ್ಯೆಯನ್ನು ನೋಡಿ, ರಾಮನು ಆಕೆಯ ಕಾಲುಗಳನ್ನು ಹಿಡಿದುಕೊಂಡು ಎಲೈ ಮಾತೆಯೇ ! ನೀನು ಹೀಗೆ ದುಃಖಪಡುವುದನ್ನು ನೋಡಿದರೆ ನನಗೂ ದುಂಖವುಂಟಾಗುವುದು ನೋಡಿದವರೆಲ್ಲರೂ ಬಹಳ ವ್ಯಸನಪಡುವರು ನೀನು ಕೋಸಲರಾಜನ ಪುತ್ರಿಯಾಗಿ ಇಕ್ಷ್ವಾಕುವಂಶಕ್ಕೆ ಸೊಸೆಯಾಗಿ ಸಕಲ ನೀತಿಮಾರ್ಗಗಳನ್ನೂ ಬಲ್ಲವಳಾಗಿ ಆಪತ್ತು ಬಂದಾಗ ಧೈರ್ಯವನ್ನು ಅವಲಂಬಿಸಬೇಕು ಎಂಬ ನೀತಿಯನ್ನು ಮೀರಿ ನಿನ್ನ ಬುದ್ಧಿಯನ್ನೂ ವಿವೇಕವನ್ನೂ ದುಃಖಕ್ಕೆ ಈಡುಮಾಡಬಹುದೇ ಈ ಸಂಸಾರದಲ್ಲಿ ಸುಖದುಃಖಗಳು ಸಮಾನಗಳಾಗಿರುವವು. ಈಗ ನಾವು ಅಪೇಕ್ಷಿಸದೇ ಇದ್ದರೂ ದುಃಖವು ಹೇಗೆ ಪ್ರಾಪ್ತವಾಯಿತೋ ಹಾಗೆಯೇ ಸುಖವೂ ಉಂಟಾಗುವುದು. ಹಿಂದೆ ನಮ್ಮ ವಂಶದಲ್ಲಿ ಹುಟ್ಟಿದ ಹರಿಶ್ಚಂದ್ರಮಹಾರಾಯನು ಸತ್ಯಸಂಧನಾಗಿದ್ದುದನ್ನೂ ಆತನ ಹೆಂಡತಿ ಪತಿವ್ರತೆಯಾಗಿ ಗಂಡನ ಅಪ್ಪಣೆಯ ಮೇರೆ ಮಹಾದುಃಖವನ್ನು ಅನುಭವಿಸಿ ತರುವಾಯ ಸುಖವನ್ನು ಅನುಭವಿಸಿದುದನ್ನು ನೀನು ಕೇಳಲಿಲ್ಲವೆ ಈಗ ನನ್ನ ತಂದೆಯು ನನ್ನ ವಿರಹದಿಂದ ಸಾಯುವಹಾಗಿದ್ದಾನೆ. ಆತನ ಸಮೀಪದಲ್ಲಿ ನೀನಿದ್ದುಕೊಂಡು ಸಮಾಧಾನಗೊಳಿಸುತ್ತ ಇದ್ದರೆ ನಾನು ಕಾಡಿನಲ್ಲಿ ಹದಿನಾಲ್ಕು ವರ್ಷವನ್ನು ಹದಿನಾಲ್ಕು ಘಳಿಗೆಗಳಾಗಿ ಕಳೆದು ಬಂದು ನಿಮ್ಮನ್ನು ಸಂತೋಷಪಡಿಸುವೆನು ಹೆಂಗಸರಿಗೆ ಗಂಡನೇ ದೇವರು ಪತಿಯೇ ಪ್ರಭುವು ಗಂಡನು ಸುಖವಾಗಿದ್ದರೆ ನಿನಗೆ ಕಡಿಮೆಯೇನು, ಭರತನು ಭ್ರಾತೃವತ್ಸಲನು ಧರ್ಮಿಷ್ಠನು ಸರ್ವಭೂತದಯಾಪರನೂ ಆಗಿ ತನ್ನ ತಾಯಿಗಿಂತಲೂ, ಮಿಗಿಲಾಗಿ ನಿನ್ನಲ್ಲಿ ಗೌರವವನ್ನು ಇಟ್ಟುಕೊಂಡು ಕಾಪಾಡುವನು, ತಾಯೇ ನೀನು ಪತಿಶುಶ್ರೂಷೆಯನ್ನು ಮಾಡಿಕೊಂಡು, ನಾನು ಅರಣ್ಯದಿಂದ

ಸುಖವಾಗಿ ಬರುವುದಕ್ಕೆ ದೇವತಾ ಪೂಜೆಯನ್ನು ಮಾಡಿಕೊಂಡು ಸುಖವಾಗಿದ್ದರೆ ನಾನು ಸುಖವಾಗಿ ಹಿಂತಿರುಗಿ ಬರುವೆನು ನೀನೂ ಸಂತೋಷವನ್ನೂ, ಸೌಖ್ಯವನ್ನೂ ಹೊಂದುವೆ ನನ್ನಲ್ಲಿರುವ ಹಾಗೆ ಮಹಾರಾಜನಾದ ಭರತನಲ್ಲಿಯೂ ವಾತ್ಸಲ್ಯಯುಕ್ತಳಾಗಿರು ಅತನನ್ನು ಅಗೌರವವಾಗಿ ಕಾಣಬೇಡ ಕಷ್ಟಕಾಲದಲ್ಲಿ ಯಾರೇನು ಹೇಳಿದರೂ ಸಹಿಸಿಕೊಂಡು ತಾಳ್ಮೆಯಿಂದಿರಬೇಕೆಂದು ಹಿರಿಯರು ಹೇಳುವರು ಎಂದು ರಾಮನು ಅನೇಕ ವಿಧವಾದ ನೀತಿವಾಕ್ಯಗಳಿಂದ ತಾಯಿಯನ್ನು ಒಡಂಬಡಿಸಿದನು.

ಆಗ ಕೌಸಲ್ಯೆಯು ಮಗನ ಮಾತಿಗೆ ಸಮ್ಮತಿಸಿ, ಎಲೈ-ಕಂದನೆ ವನವಾಸವನ್ನು ನಿಶ್ಚಯಿಸಿರುವ ನಿನ್ನ ಮನಸ್ಸನ್ನು ತಡೆಯಲು ನಾನು ಸಮರ್ಥಳಲ್ಲ, ಕಾಲಗತಿಯನ್ನು ಯಾರುತಾನೆ ಮೀರಬಲ್ಲರು, ಮಗನೇ ನಿನಗೆ ಮಂಗಳವಾಗಲಿ, ನಿನ್ನ ಇಷ್ಟಾರ್ಥವು ಕೈಗೂಡಲಿ ನೀನು ತಿರಿಗಿ ಬರುವವರೆಗೂ ನಾನು ಬದುಕಿದ್ದರೆ ಈ ದುಃಖಗಳನ್ನೆಲ್ಲಾ ಕಳೆದು ಪಿತೃವಾಕ್ಯ ಪರಿಪಾಲನೆ ಮಾಡಿಬಂದ ನಿನ್ನನ್ನು ನೋಡಿ ಸಂತೋಷಪಡುವೆನು ಎಂದು ಹೇಳಿ ಮಗನಿಗೆ ಆಶೀರ್ವಾದವನ್ನು ಮಾಡುವದಕ್ಕಾಗಿ ತನ್ನ ಕೈಕಾಲುಗಳನ್ನು ತೊಳೆದುಕೊಂಡು ಮಡಿಯನ್ನುಟ್ಟು ಶುದ್ಧಾಚಮನ ಮಾಡಿ ಪೂರ್ವಾಭಿಮುಖವಾಗಿ ಕುಳಿತು ಎಲೈ—ಮಗನೇ ಧೈರ್ಯದಿಂದಲೂ ನಿಯಮದಿಂದಲೂ ಯಾವ ಧರ್ಮವನ್ನು ಕಾಪಾಡುವೆಯೋ ಆ ಧರ್ಮವು ನಿನ್ನನ್ನು ಕಾಪಾಡಲಿ, ಮನೆಗಳಲ್ಲಿಯೂ, ದೇವಸ್ಥಾನಗಳಲ್ಲಿಯೂ ನೀನು ಯಾವ ದೇವರಿಗೆ ನಮಸ್ಕಾರ ಮಾಡುತ್ತಿದ್ದೆಯೋ ಆ ದೇವರು ನಿನ್ನನ್ನು ಅರಣ್ಯದಲ್ಲಿ ರಕ್ಷಿಸಲಿ, ನೀನು ಮಹಾತ್ಮರಾದ ಯಾವಯಾವ ಋಷಿಗಳನ್ನು ಪೂಜಿಸಿರುವೆಯೋ ಅವರೆಲ್ಲರೂ ನಿನ್ನನ್ನು ಕಾಪಾಡಲಿ, ಕುಮಾರಸ್ವಾಮಿಯೂ, ಬ್ರಹ್ಮನೂ, ಉಮಾಸಹಿತನಾದ ಶಿವನೂ, ಬೃಹಸ್ಪತಿಯೂ, ಶುಕ್ರನೂ, ಇಂದ್ರಾದಿ ದೇವತೆಗಳೂ, ಆದಿಶೇಷನೇ ಮೊದಲಾದ ಉರಗಗಳೂ, ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳೂ ನಿನ್ನನ್ನು ಅರಣ್ಯದಲ್ಲಿ ಕಾದುಕೊಂಡಿರಲಿ, ದಿಕ್ಪಾಲಕರೆಲ್ಲರೂ ನಿನಗೆ ಅಂಗರಕ್ಷಕರಾಗಿರಲಿ, ವೃತ್ರಾಸುರನ ಸಂಹಾರ ಕಾಲದಲ್ಲಿ ಅದಿತಿಯು ಇಂದ್ರನಿಗೆ ಆಶೀರ್ವದಿಸಿದ ಮಂಗಳವು ಅರಣ್ಯದಲ್ಲಿರುವ ನಿನಗಾಗಲಿ, ಅಮೃತವನ್ನು ತರುವುದಕ್ಕೆ ಸನ್ನದ್ಧನಾದ ಗರುಡನಿಗೆ ವಿನತೆಯು ಮಾಡಿದ ಮಂಗಳಾಶೀರ್ವಾದವು ನಿನಗುಂಟಾಗಲಿ ಎಂದು ರಾಮನಿಗೆ ಆಶೀರ್ವಾದಮಾಡಿ ಅವನನ್ನು ತಬ್ಬಿಕೊಂಡು ಬೇಗನೆ ಅರಣ್ಯದಿಂದ ಬರುವವನಾಗು ಮತ್ತೆ ಪೂರ್ಣಿಮಾಚಂದ್ರನಂತೆಸೆದು ಅಯೋಧ್ಯೆಯಲ್ಲಿ ಸೀತಾಸಮೇತನಾಗಿ ಪಟ್ಟಾಭಿಷೇಕ ಮಾಡಿಕೊಂಡು ಸುಖವಾಗಿ ನೀನು ಬಾಳುವದನ್ನು ಎಂದಿಗೆ ನಾನು ನೋಡುವೆನು ಎಂದು ಅಪ್ಪಣೆಕೊಟ್ಟು ಕಳುಹಲು ರಾಮನು ತಾಯಿಗೆ ನಮಸ್ಕಾರ ಮಾಡಿ ಅಲ್ಲಿಂದ ಹೊರಟು ತನ್ನರಮನೆಗೆ ಬರಲು ದನುರ್ಧಾರಿಯಾದ ಲಕ್ಷ್ಮಣನೂ ರಾಮನ ಸಂಗಡಲೇ ಬಂದನು.

ಆಗ ಈ ಸುದ್ಧಿಯನ್ನೆ ಅರಿಯದೆ ಪಟ್ಟಾಭಿಷೇಕವಾಗುವುದೆಂಬ ಸಂತೋಷದಿಂದ ಸೀತೆಯು ದೇವತಾಪೂಜೆಗಳನ್ನು ಮಾಡುತ್ತಾ, ಮುತ್ತೈದೆಯರಿಗೆ ಬಾಗಿನವನ್ನು ಕೊಡುತ್ತಾ ಮುದುಕರನ್ನು ಆರಾಧಿಸುತ್ತಾ, ಬಡವರಿಗೆ ಒಡವೆ ವಸ್ತುಗಳನ್ನು ಕೊಟ್ಟು, ಕುರುಡ, ಕುಂಟ, ಹೆಳವ, ಕಿವುಡ ಮೊದಲಾದ ಅಂಗಹೀನರಿಗೆ ದಾನಮಾಡುತ್ತಾ ಇದ್ದಳು. ರಾಮನು ಸೀತೆಯನ್ನು ನೋಡಿ ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡು, ದುಃಖವನ್ನು ಸಹಿಸಲಾರದೆ ಕಂಬನಿಗಳನ್ನು ಸುರಿಸುತ್ತಾ ವ್ಯಾಕುಲ ಹೃದಯನಾಗಿ ನಿಂತಿರಲು ಸೀತೆಯು ಆತನನ್ನು ನೋಡಿ ಎಲೈ ಪ್ರಾಣಕಾಂತನೇ! ಇಂಥಾ ಪಟ್ಟಾಭಿಷೇಕ ಮಹೋತ್ಸವ ಕಾಲದಲ್ಲಿ ನಿನ್ನ ಮುಖವು ಹೀಗೆ ಬಾಡಿರುವದಕ್ಕೆ ಕಾರಣವೇನು? ಕಂಬನಿಗಳನ್ನು ಸುರಿಸುವಷ್ಟು ಶೋಕವು ನಿನಗೆಲ್ಲಿಂದ

ಬಂದಿತು ? ಎಂದು ಕೇಳಲು, ರಾಮನು ಎಲೈ—ಪ್ರಿಯೇ, ಈಗ ನನಗೆ ಬಂದ ವಿಪತ್ತನ್ನು ಏನುಹೇಳಲಿ, ಸತ್ಯಪ್ರತಿಜ್ಞನಾದ ದಶರಥನು ಕಿರಿಯ ಹೆಂಡತಿಯಾದ ಕೈಕಯಿಯ ಮಾತಿಗೊಪ್ಪಿ ಆಕೆಯ ಮಗನಾದ ಭರತನಿಗೆ ಪಟ್ಟಾಭಿಷೇಕ ಮಾಡುವನು ನನಗೆ ನಾರು ಬಟ್ಟೆಗಳನ್ನುಟ್ಟು ಋಷಿಗಳ ಹಾಗೆ ಜಟಾಧಾರಿಯಾಗಿ ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಹದಿನಾಲ್ಕು ವರ್ಷ ಕಾಡಿನಲ್ಲಿ ವಾಸಮಾಡಿಕೊಂಡಿರುವಂತೆ ಅಪ್ಪಣೆ ಮಾಡಿದನು. ಆದಕಾರಣ ಆ ಪಿತೃವಾಕ್ಯ ಪರಿಪಾಲನೆಗಾಗಿ ಅಡವಿಗೆ ಹೋಗಲು, ಸಿದ್ಧನಾಗಿ ಪ್ರಿಯಳಾದ ನಿನಗೆ ತಿಳಿಸಬೇಕೆಂದು ಬಂದಿರುವೆನು. ನೀನಾದರೋ ನನ್ನ ವಿಯೋಗದಿಂದ ದುಃಖಿಸುವ ಕೌಸಲ್ಯಾ ದಶರಥರನ್ನು ನಿನ್ನ ಸತ್ಕಾರಗಳಿಂದ ಸಮಾಧಾನಪಡಿಸಿ ಪಾತಿವ್ರತ್ಯವನ್ನು ಕಾಪಾಡಿಕೊಂಡು ನಾನು ಬರುವ ವರೆಗೂ ಇಲ್ಲಿಯೇ ಇರು, ನನ್ನ ತಮ್ಮಂದಿರನ್ನು ನಿನ್ನ ಮಕ್ಕಳಹಾಗೆ ಭಾವಿಸಿ ಪೋಷಿಸು, ಕೈಕಯಿಯ ವಿಷಯದಲ್ಲಿ ಸಿಟ್ಟಿನಿಂದ ಬಾಯಿಬಿಡದಿರಿ ಬಿರುನುಡಿಗಳನ್ನು ಆಡಬೇಡ, ಜಾಗರೂಕಳಾಗಿರು ದಶರಥನ ಅಂತಃಪುರದ ಜನರೊಡನೆ ಒಳ್ಳೆಯ ಮಾತುಗಳನ್ನಾಡುತ್ತಾ ಸಮಯವರಿತು ನಡೆಯುವವಳಾಗು ಎಂದು ಹೇಳಿ ಪ್ರೇಮೋದ್ರೇಕದಿಂದ ಕಂಬನಿಯನ್ನು ಸುರಿಸುತ್ತಾ, ನಿನ್ನನ್ನಗಲಿ ನಾನೆಂತಿರಲಿ, ದೈವದ ದುರ್ವಿಪಾಕವನ್ನು ಏನೆಂದು ಹೇಳಲಿ, ಹಾ ! ಪ್ರಿಯೆ, ಎಂದು ನಿಟ್ಟುಸಿರು ಬಿಟ್ಟು ಸುಮ್ಮನಾಗಲು ಸೀತೆಯು ಚಿಂತಾಕ್ರಾಂತಳಾಗಿ ಇಂತೆಂದಳು.

ಪ್ರಾಜ್ಞನಾದ ವಲ್ಲಭನೆ ಹೀಗೆ ಹೇಳುವುದಕ್ಕೆ ನಿನ್ನ ಮನಸ್ಸು ಹೇಗೊಪ್ಪಿತು ಅಥವಾ ನನ್ನ ಮನಸ್ಸನ್ನು ಪರೀಕ್ಷಿಸಲೋಸುಗ ಹೇಳುವೆಯೋ ಗಿಡದ ನೆಳಲು ಗಿಡವನ್ನೇ ಆಶ್ರಯಿಸುವಂತೆ, ನಿನ್ನನ್ನು ಆಶ್ರಯಿಸಿರುವ ನನ್ನನ್ನು ಬಿಟ್ಟು ಹೇಗೆ ಅರಣ್ಯಕ್ಕೆ ಹೋಗುವೆ? ಹಾಗೆ ಒಂದು ವೇಳೆ ಹೋದರೆ ತನ್ನ ಅಸ್ತಿಕೆಯಸೋಬಿಗೆ ನಾನು ನಿಂತರೂ ನನ್ನ ಪ್ರಾಣಗಳಾದರೂ ನಿಮ್ಮೊಡನೆ ಬಾರದೇ ಹೋಗುವವೇ ? ನೀವು ಧರ್ಮಾತ್ಮರಾದುದಕ್ಕೆ ನನ್ನನ್ನು ನೋಯಿಸುವದೇ ಲಕ್ಷಣವೊ? ಸಹಧರ್ಮಿಣಿಯೆನಿಸಿಕೊಂಡ ನಾನು ನಿಮ್ಮ ಸುಖದುಃಖಗಳಿಗೆ ಬಾಧ್ಯಳಲ್ಲವೋ ? ಸತ್ಯಪ್ರತಿಜ್ಞನಾಗಿ ನನ್ನನ್ನು ಪರಿಗ್ರಹಿಸಿ ಒಬ್ಬಳನ್ನೇ ಬಿಟ್ಟು ಹೋಗುವುದು ಲೋಕಸಮ್ಮತವಾದೀತೋ ಪಿತೃ ಮಾತೃ ಸೋದರ ಪುತ್ರಮಿತ್ರ ಬಾಂಧವಾದಿಗಳೆಲ್ಲರೂ ತಮ್ಮತಮ್ಮ ಪುಣ್ಯಾನುಸಾರವಾಗಿ ಸುಖದುಃಖಗಳನ್ನು ಅನುಭವಿಸುವರು. ಹೆಂಡತಿ ಮಾತ್ರ ಗಂಡನ ಸುಖದುಃಖಗಳಿಗೆ ಸಮಭಾಗಿನಿಯಾಗಿರುವಳು ಎಂದು ಧರ್ಮಶಾಸ್ತ್ರವು ಸಾರಿಯಿಡುತ್ತಿದೆ ಮಾನ್ಯರಾದ ನೀವು ಹೀಗೆ ಹೇಳುವುದು ನಿಮ್ಮ ಮಹಾತ್ಮ್ಯಕ್ಕೆ ತಕ್ಕದ್ದೇ? ನನ್ನನ್ನು ಮನ್ನಿಸಿ ಮಹಾರಣ್ಯಕ್ಕಾದರೂ ಕೊಂಡೊಯ್ದು ಮಮತೆಯಿಂದ ಸಲಹಿದರೆ ಸುಖವಾಗುವುದು ಹಾಗಿಲ್ಲದೆ ನಿಮ್ಮನ್ನು ಅಗಲಿ ರಾಜಭೋಗದಲ್ಲಿದ್ದರೂ ನನಗೆ ನಿತ್ಯ ದುಃಖವಾಗುವುದೆಂದು ಗೋಳಿಡಲು ಹೃದಯಾಭಿರಾಮನಾದ ರಾಮನು ಅಯ್ಯೋ! ಸುಕುಮಾರಿಯಾದ ಇವಳನ್ನು ಹೇಗೆ ಅಡವಿಗೆ ಕರೆದೊಯ್ಯಲಿ ಎಂದು ಚಿಂತಿಸತೊಡಗಿದನು.

ಎಲೈ ಮೋಹನಾಂಗಿಯೇ ನೀನು ಹೇಳಿದುದು ಯುಕ್ತವೇಸರಿ, ಆದರೆ ಜನಕರಾಯನ ಮಗಳಾಗಿ ದಶರಥರಾಯನ ಸೊಸೆಯಾಗಿ ಅತಿಸುಕುಮಾರಿಯಾಗಿ ಬಿಸಿಲನ್ನು ಕಾಣದೆ ಅರಮನೆಯಲ್ಲಿರುವ ನಿನ್ನನ್ನು, ಹುಲಿ, ಕರಡಿ, ಸಿಂಹ, ಶರಭ ಮೊದಲಾದ ಕ್ರೂರಮೃಗಗಳಿಂದಲೂ ದುಷ್ಟರಕ್ಕಸರಿಂದಲೂ ಕೂಡಿರುವ ದುರ್ಗಮವಾದ ಅರಣ್ಯಕ್ಕೆ ಕರೆದುಕೊಂಡು ಹೋಗಿ ಹೇಗೆ ಕಾಪಾಡಲಿ, ಕಾಡುದಾರಿಯಲ್ಲಿ ನಡೆಯುವ ನಿನ್ನ ಕೋಮಲವಾದ ಕಾಲುಗಳಿಗೆ ಕಲ್ಲು ಮುಳ್ಳುಗಳು ತಗಲಿ ಚಿಲ್ಲನೆ ರಕ್ತಸುರಿಯುವುದನ್ನು ಹೇಗೆ ನೋಡಲಿ, ಬೆಂಕಿಯಲ್ಲಿ ಸುಟ್ಟ ಬಾಳೆಯಂತೆ ಬಿಸಿಲಿನಿಂದ ಕಂದಿದ ನಿನ್ನ ಮುಖವನ್ನು ನೋಡಿ ಹೇಗೆ ಸಹಿಸಲಿ, ನೀನು ಇಲ್ಲಿಯೇ

ಇರು ಎನಲು, ಎಲೈ ಪ್ರಿಯನೇ! ಹೇಡಿಯಂತೆ ಹೆಂಡತಿಯನ್ನು ಕಾಪಾಡಲಾರೆನೆಂದು ಹೇಳಿದರೆ ನನ್ನ ತಂದೆಯಾದ ಜನಕರಾಯನು ಪುರುಷರೂಪವನ್ನು ಧರಿಸಿದ ಹೆಂಗಸೆಂದು ತಿಳಿಯದೆ ನಿನಗೆ ನನ್ನನ್ನು ಕೊಟ್ಟು ಮದುವೆಮಾಡಿದನೇ ಎಂದೆಣಿಸಬೇಕಾಗಿದೆ ನಾನು ಮೂಢಳೆಂದು ತಿಳಿದು ಹೀಗೆ ಮಾತಾಡುವೆಯಾ? ನಿನ್ನ ಶಕ್ತಿಯನ್ನೂ ನಿನ್ನ ಪರಾಕ್ರಮವನ್ನೂ ಅರಿಯದವನಂತೆ ಈ ಮಾತುಗಳನ್ನಾಡು, ನಿನ್ನೊಡನೆ ಇಂಥಾ ಮಾತುಗಳನ್ನಾಡುವುದು ಸರಿಯಲ್ಲ ನಿನ್ನೊಡನೆ ಬರುವ ನನಗೆ ಯಾವ ಮೃಗದ ಅಥವಾ ರಾಕ್ಷಸರ ಭಯವುಂಟು? ಕಂದ ಮೂಲಗಳನ್ನು ತಿಂದುಕೊಂಡು ಕಾಡಿನಲ್ಲಿರುವುದೇ ನನಗೆ ಸ್ವರ್ಗಸುಖವು, ನಿನ್ನನ್ನು ಬಿಟ್ಟಿರುವ ಅರಮನೆಯೇ ನನಗೆ ಕಾಡು, ನಿನ್ನೊಡನೆ ಇರುವ ನನಗೆ ಯಾವ ರಾಜಭೋಗಗಳೂ ಬೇಡ, ನಿನಗಾಗಿ ಈಗಲೇ ಪ್ರಾಣವನ್ನಾದರೂ ಬಿಡುವೆನು ಎಂದು ತಬ್ಬಿಕೊಂಡು ಕಂಬನಿಗಳನ್ನು ಸುರಿಸುತ್ತಿರಲು, ಆಗ ರಾಮನು ಆಕೆಯ ದುಃಖವನ್ನು ನೋಡಲಾರದೆ ಒಳ್ಳೆಯದು ನಿನ್ನ ವಸ್ತ್ರಾಭರಣಗಳನ್ನೆಲ್ಲ ಮುತ್ತೈದೆಯರಿಗೆ ದಾನಮಾಡಿ ಹೊರಡಲು ಸಿದ್ಧಳಾಗು ಎಂದು ಹೇಳಿದನು. ಆಗ ಲಕ್ಷ್ಮಣನು ಅಣ್ಣನ ಕಾಲುಗಳ ಮೇಲೆ ಬಿದ್ದು ಅಳುತ್ತಾ, ಎಲೈ ಅಣ್ಣನೇ ನಾನು ನಿನಗೆ ಹೊರಗಿನ ಪ್ರಾಣವಲ್ಲವೆ? ನನ್ನನ್ನು ಕರೆದುಕೊಂಡು ಹೋಗು, ನಿನ್ನ ಹೆಂಡತಿಯನ್ನೂ ನಿನ್ನನ್ನೂ ಶ್ರಮಪಡಿಸದಂತೆ ಕಾಡಿನಲ್ಲಿ ನಿಮಗೆ ಬೇಕಾದ ಗೆಡ್ಡೆಗೆಣಸುಗಳನ್ನು ಹಣ್ಣುಹಂಪಲುಗಳನ್ನು ತಂದು ಕೊಡುತ್ತಾ ಚಿಗುರುಗಳಿಂದ ಹಾಸಿಗೆಯನ್ನು ಹಾಸಿಕೊಡುತ್ತಾ ರಾಕ್ಷಸರ ಬಾಧೆಯನ್ನು ಪರಿಹರಿಸುತ್ತಾ ನಿಮ್ಮ ಶುಶ್ರೂಷೆಯನ್ನು ಮಾಡಿಕೊಂಡಿರುವೆನು. ದುಷ್ಟಮೃಗಗಳೂ ರಾಕ್ಷಸರೂ ನಿಮ್ಮ ತಂಟೆಗೆ ಬಾರದಹಾಗೆ ಧನುರ್ಬಾಣಗಳನ್ನು ಧರಿಸಿ ಕಾದಿರುವೆನು ಎಂದು ಬೇಡುತ್ತಿದ್ದ ಲಕ್ಷ್ಮಣನನ್ನೂ ಬಗೆಬಗೆಯಾಗಿ ಸಮಾಧಾನಗೊಳಿಸಿದರೂ ಕೇಳದೆ ಸಂಗಡಲೇ ಬರುವೆನೆಂದು ಹಟಹಿಡಿದ ತಮ್ಮನನ್ನೂ ಸೀತೆಯನ್ನೂ ಸಂಗಡ ಕರೆದುಕೊಂಡು ರಾಮನು ತಂದೆಯ ಅಪ್ಪಣೆಯನ್ನು ಪಡೆದು ಹೋಗಬೇಕೆಂದೆಣಿಸಿ ತನ್ನ ಪದಾರ್ಥಗಳನ್ನೆಲ್ಲಾ ಬ್ರಾಹ್ಮಣರಿಗೆ ದಾನಮಾಡಿ ಸೀತಾಲಕ್ಷ್ಮಣರೊಡನೆ ಹೊರಟು ತಂದೆಯಬಳಿಗೆ ಪಾದಚಾರಿಯಾಗಿ ಬೀದಿಯಲ್ಲಿ ಬರುತ್ತಿರುವುದನ್ನು ಕಂಡು ಪುರಜನರು, ಅಕಟಾ! ಇಂಥಾ ಅನ್ಯಾಯವುಂಟೇ, ಈ ಶ್ರೀರಾಮಚಂದ್ರನು ಮೊದಲು ಈ ರಾಜಬೀದಿಯಲ್ಲಿ ಮಣಿಮಯವಾದ ರಥವನ್ನೇರಿ ಸಕಲ ವೈಭವದೊಡನೆ ಬರುತ್ತಿರುವಾಗ ನೋಡಿದ ನಮ್ಮ ಕಣ್ಣುಗಳು ಈಗ ಸೀತಾಲಕ್ಷ್ಮಣರೊಡನೆ ಪಾದಚಾರಿಯಾಗಿ ಬರುವುದನ್ನು ಕಂಡು ಒಡೆದುಹೋಗದಿರವೆ ಅಯ್ಯೋ? ದೇವಸ್ತ್ರೀಯರಲ್ಲಿ ಸರ್ವಾಂಗ ಸುಂದರಿಯಾಗಿ ಮಹಾ ಪತಿವ್ರತೆಯೆನಿಸಿರುವ ಈ ಸೀತೆಯು ಅಂತಃಪುರದಲ್ಲಿರುತ್ತ ಬಿಸಿಲ ಮುಖವನ್ನೆ ಕಾಣದೆ ಇದ್ದವಳು ಈಗ ಸೂರ್ಯನ ಬಿಸಿಲಿನಿಂದ ಬಾಡಿದ ಮುಖವುಳ್ಳವಳಾಗಿ ಬಹಿರಂಗವಾಗಿ ಬೀದಿಯಲ್ಲಿ ನಡೆದು ಬರುವುದನ್ನು ನೋಡುವ ನಮ್ಮ ಕಣ್ಣುಗಳು ಕಳಚಿ ಬಿದ್ದುಹೋಗಲಿಲ್ಲವಲ್ಲಾ ತಂದೆ ಎಂಥವನಾದರೂ ಮಗನನ್ನು ಕಾಡಿಗೆ ಕಳುಹಿಸುವನೆ? ಮಗನು ಎಷ್ಟು ಕೆಟ್ಟವನಾದರೂ ತಂದೆಯನ್ನು ಕಾಡಿಗೆ ಕಳುಹಿಸುವುದಿಲ್ಲ, ಹೀಗಿರಲು ಸುಗುಣಶಾಲಿಯಾದ ಮಗನನ್ನು ಕಾಡಿಗೆ ಕಳುಹಿಸುವ ದಶರಥರಾಯನ ಬಾಳನ್ನು ಸುಡಬೇಕು. ರಾಮನನ್ನು ಬಿಟ್ಟು ಈ ಊರಿನಲ್ಲಿರುವುದರಿಂದ ನಮಗೇನು ಸುಖ, ನಾವು ನಮ್ಮನಮ್ಮ ಸಂಸಾರದೊಡನೆ ರಾಮನಸಂಗಡ ಅರಣ್ಯಕ್ಕೆ ಹೋಗೋಣ. ಶೂರರಾದ ರಾಮಲಕ್ಷ್ಮಣರೂ ಸರ್ವಗುಣ ಸಂಪನ್ನೆಯಾದ ಈ ಸೀತೆಯೂ ನಮ್ಮನ್ನು ಕಾಪಾಡುವರು. ಈ ಹಾಳು ಅಯೋಧ್ಯೆಯಲ್ಲಿ ಈ ಕೆಟ್ಟ ಕೈಕಯಿಯೆ ತನ್ನ ಮಗನೊಡನೆ ಬಾಳಲಿ ಎಂದು ನಾನಾ ಪ್ರಕಾರವಾಗಿ ಹೇಳುತ್ತಿರಲು ರಾಮನು ಆ ಮಾತುಗಳನ್ನು ಕೇಳಿ ವ್ಯಸನಪಟ್ಟು ದಶರಥನ ಅರಮನೆಯನ್ನು

ಬಾಗಲಿಗೆ ಬಂದು ಅಲ್ಲಿ ಕಾದಿರುವ ಸುಮಂತ್ರನನ್ನು ಕಂಡು, ಎಲೈ ಸುಮಂತ್ರನೇ ನಾನು ಬಂದಿರುವುದಾಗಿ ನಮ್ಮ ತಂದೆಗೆ ತಿಳಿಸು ಎನಲು, ಆತನು ಒಳಕ್ಕೆಹೋಗಿ ಅನ್ನ ನೀರಿಲ್ಲದೆ ಹಾ! ರಾಮಾ ಎಂದು ಹಂಬಲಿಸುತ್ತಾ, ನೆಲದವೇಲೆಬಿದ್ದು ಹೊರಳಾಡುತ್ತಾ, ಕ್ಷಣಕ್ಷಣಕ್ಕೂ ಮೂರ್ಛೆಹೋಗಿ ಚೇತರಿಸಿಕೊಳ್ಳುತ್ತಾ ಅಯ್ಯೋ ಏನುಮಾಡಲಿ ಎತ್ತಪೋಗಲಿ ವಿಷವನ್ನಾದರೂ ಕುಡಿಯಲೆ, ಪರ್ವತವನ್ನೇರಿ ಕೆಳಕ್ಕೆ ಬೀಳಲೆ, ಉಕ್ಕಿನ ಕಂಭವನ್ನಾದರೂ ಹಾಯಲೆ, ರಾಮ ನನ್ನು ಬಿಟ್ಟು ನಾನು ಹೇಗೆ ಬದುಕಲಿ? ಹಾ! ವಿಧಿಯೇ ಎಂದು ಹುಚ್ಚನಂತೆ ಮಾತನಾಡುತ್ತಾ, ಒಣಗಿದ ತುಟಿಗಳನ್ನು ನಾಲಗೆಯಿಂದ ಸವರಿಕೊಳ್ಳುತ್ತಾ ದೆವ್ವ ಹಿಡಿದವನಂತೆ ನೆಲದಲ್ಲಿ ಬಿದ್ದು ಹೊರಳಿ ಧೂಳಿತುಂಬಿದ ಮೈಯುಳ್ಳವನಾದ ದಶರಥನನ್ನುನೋಡಿ ಮಾತಾಡುವದಕ್ಕೆ ಭಯಪಟ್ಟು, ಮೆಲ್ಲಗೆ ಸಮೀಪಕ್ಕೆ ಹೋಗಿ ಎಲೈ ರಾಯನೇ, ರಾಮನು ತನ್ನ ಸರ್ವಸ್ವವನ್ನೂ ಬ್ರಾಹ್ಮಣರಿಗೂ ದೀನರಿಗೂ ದಾನಕೊಟ್ಟು ವನವಾಸಕ್ಕೆ ಹೊರಟು ಬಂದಿದ್ದಾನೆ, ನಿನ್ನನ್ನು ಕಂಡು ನಿನ್ನ ಅಪ್ಪಣೆ ಯನ್ನು ಪಡೆದುಕೊಳ್ಳಲು ಕಾದಿರುವನು. ಲೋಕಾಭಿರಾಮನಾದ ಸಕಲಗುಣ ಸಂಪನ್ನನಾದ ರಾಮನನ್ನು ಕರೆಯಿಸಿ ಅಪ್ಪಣೆ ಕೊಟ್ಟು ಕಳುಹಿಸು ಎಂದು ಹೇಳಿದನು

ಆಗ ದಶರಥರಾಯನು ಆ ಮಾತುಗಳನ್ನು ಕೇಳಿ ಸಾರಥಿಯನ್ನು ಕುರಿತು ಎಲೈ ಸಾರಥಿ ಯಾದ ಸುಮಂತ್ರನೇ ನಾನು ನನ್ನ ಸ್ತ್ರೀಯರೊಡನೆ ವನವಾಸಕ್ಕೆ ಹೋಗುವ ರಾಮನನ್ನು ನೋಡಲಪೇಕ್ಷಿಸುತ್ತೇನೆ ಎನಲು, ಆಗ ಸುಮಂತ್ರನು ಅಂತಃಪುರಕ್ಕೆ ಹೋಗಿ, ರಾಯನ ಅಪ್ಪಣೆ ಯನ್ನು ಹೇಳಲು ಪಟ್ಟಮಹಿಷಿಯಾದ ಕೌಸಲ್ಯೆ ಸುಮಿತ್ರೆಯರು ಮುನ್ನೂರರವತ್ತುಮಂದಿ ಸ್ತ್ರೀ ಯರೊಡನೆ ಕೂಡಿ ಬೇಗ ಬರಲು ದಶರಥನು ಸುಮಂತ್ರರೊಡನೆ ರಾಮನನ್ನು ಬರಹೇಳು ಎಂದನು. ಸೀತಾಲಕ್ಷ್ಮಣರೊಡನೆ ರಾಮನು ಬಂದು ದೂರದಲ್ಲಿಯೇ ನಮಸ್ಕರಿಸಿ, ಮುಕುಳಿತ ಹಸ್ತನಾಗಿ ನಿಂತುಕೊಳ್ಳಲು ದಶರಥನು ಹಾ! ರಾಮಾ ಎಂದು ನೆಲದಲ್ಲಿ ಬಿದ್ದು ಮೂರ್ಛಿತ ನಾದನು ಕೈಕಯಿಯೊಬ್ಬಳು ವಿನಾ ಮಿಕ್ಕವರೆಲ್ಲರೂ ನೆಲದಲ್ಲಿ ಬಿದ್ದು ಮೈಮರೆತರು. ಆಗ ರಾಮನು ಲಕ್ಷ್ಮಣನೊಡನೆ ಹೋಗಿ ದಶರಥನಿಗೆ ಶೈತ್ಯೋಪಚಾರಮಾಡಿ ಮಂಚದಮೇಲೆ ಮಲ ಗಿಸಿ ಕೈ ಮುಗಿದುಕೊಂಡು ಎಲೈ ಮಹಾರಾಯನೇ! ನೀನು ಸರ್ವರಿಗೂ ಒಡೆಯನು; ನಿನ್ನ ಅಪ್ಪಣೆಯನ್ನು ನಾವು ನಡೆಸುವೆವು ಅರಣ್ಯವನ್ನು ಕುರಿತು ಹೊರಡುವ ನಮ್ಮನ್ನು ಕೃಪಾದೃಷ್ಟಿ ಯಿಂದ ನೋಡು ಸೀತೆಯೂ ಲಕ್ಷ್ಮಣನೂ ಎಷ್ಟು ಸಮಾಧಾನಪಡಿಸಿದರೂ ಕೇಳದೆ ನನ್ನೊಡನೆ ಅರಣ್ಯಕ್ಕೆ ಹೊರಟಿದ್ದಾರೆ ಅವರಿಗೂ ಅಪ್ಪಣೆ ಕೊಟ್ಟುಕಳುಹಿಸು ಎಂದು ಪ್ರಾರ್ಥಿಸಲು ದಶರಥ ರಾಯನು, ರಾಮನನ್ನು ಕುರಿತು ಎಲೈ ರಾಮನೇ! ಕಾಲಮೃತ್ಯು ಸ್ವರೂಪಳಾದ ಕೈಕಯಿಗೆ ನಾನಾಗಿ ಎರಡು ವರಗಳನ್ನು ಕೊಟ್ಟು ಕೆಟ್ಟೆನು. ನೀನು ನನ್ನನ್ನು ನಿಗ್ರಹಿಸಿ ಅಯೋಧ್ಯೆಯಲ್ಲಿ ಅರಸನಾಗಿರು ಎಂದನು. ಅದನ್ನು ಕೇಳಿ ರಾಮನು ತಂದೆಯೇ ನೀನೇ ಸಾವಿರವರುಷ ರಾಜ್ಯ ಭಾರಮಾಡುತ್ತಾ ಮಡದಿಯರೊಡನೆ ಸುಖವಾಗಿರು ನಾನು ಕಾಡಿನಲ್ಲಿಯೇ ಸುಖವಾಗಿರುತ್ತೇನೆ ಹದಿನಾಲ್ಕುವರುಷ ವನವಾಸಮಾಡಿ ನಿನ್ನ ಪ್ರತಿಜ್ಞೆಯನ್ನು ನೆರವೇರಿಸಿ ನಿನ್ನ ಸನ್ನಿಧಿಗೆ ತಿರುಗಿ ಬರುವೆನು ನನಗೆ ಅಪ್ಪಣೆಯನ್ನು ಕೊಡು ಎಂದು ಒಪ್ಪಿಸಿ, ಎಲ್ಲರಿಗೂ ಪ್ರದಕ್ಷಿಣ ನಮಸ್ಕಾರ ಮಾಡಿ ಪ್ರಯಾಣಕ್ಕೆ ಸಿದ್ಧನಾಗಲು, ರಾಯನು ಸುಮಂತ್ರನನ್ನು ಕುರಿತು ಸಮಸ್ತ ಪರಿವಾರ ದೊಡನೆ ನನ್ನ ಸೇನಾನಾಯಕರೂ, ಅಡಿಗೆಯವರೂ, ಪರಿಚಾರಕರೂ, ದಾಸದಾಸೀಜನಗಳೂ, ಭೃತ್ಯರೂ, ಗೌಡಿಯರೂ, ಮುಂತಾಗಿ ಎಲ್ಲರೂ ರಾಮನೊಡನೆ ಹೊರಡಬೇಕು. ಒಂದು ಪದಾರ್ಥಕ್ಕೂ ಕೊರತೆಯಿಲ್ಲದಂತೆ ಸಕಲ ಸಾಮಗ್ರಿಗಳನ್ನೂ ಹದಿನಾಲ್ಕು ವರುಷಕ್ಕೆ ಆಗುವ ಹಾಗೆ ಸಿದ್ಧಪಡಿಸಿ ವಸ್ತ್ರಾಭರಣಗಳನ್ನೂ ತೆಗೆದುಕೊಂಡು ನೀನೇ ರಾಮನೊಡನೆ ಹೋಗು,

ರಾಮನು ಕಾಡಿನಲ್ಲಿದ್ದರೂ ಅರಮನೆಯಲ್ಲಿದ್ದಂತೆ ಸಕಲೋಪಚಾರಗಳನ್ನೂ ನಡೆಸುತ್ತಿರು ಎಂದು ಹೇಳಿದನು. ರಾಮನು ನಾನು ತಪಸ್ವಿಯಂತೆ ವನಕ್ಕೆ ಹೋಗುವಾಗ ನನಗೆ ಇದೆಲ್ಲ ಏತಕ್ಕೆ ಇವುಗಳಿಂದ ನನಗೆ ಏನು ಪ್ರಯೋಜನ, ಅರಣ್ಯದಲ್ಲಿ ಕಂದಮೂಲಗಳು ಬೇಕಾದಷ್ಟಿವೆ. ನಾರು ಸೀರೆಗಳನ್ನು ಮಾತ್ರ ಕೊಡಿಸಿದರೆ ಸಾಕು ಎನಲು, ಇಷ್ಟುಮಾತ್ರಕ್ಕೆ ಬಹಳ ಸಂತೋಷ ಪಟ್ಟು ಕೈಕಯಿಯು ಬೇಗನೆ ತಾನೇ ಹೋಗಿ ಮೊದಲು ಎರಡು ನಾರುಮಡಿಗಳನ್ನು ತಂದು ರಾಮನ ಕೈಗೆ ಕೊಡಲು, ರಾಮನು ಉಟ್ಟುಕೊಂಡನು, ಮತ್ತೆರಡು ನಾರುಮಡಿಗಳನ್ನು ತಂದು ರಾಮನ ಕೈಗೆ ಕೊಡಲು ಲಕ್ಷ್ಮಣನು ತನ್ನ ದಿವ್ಯಾಭರಣಗಳನ್ನು ಬಿಸುಟು ನಾರುಮಡಿಯನ್ನು ಉಟ್ಟುಕೊಂಡನು, ಮತ್ತೆರಡು ನಾರುಶೀರೆಗಳನ್ನು ತಂದು ರಾಮನ ಕೈಗೆ ಕೊಡಲು, ಸೀತೆಯು ರಾಮನ ಕೈಯಿಂದ ಸೆಳೆದುಕೊಂಡು, ಕಂಬನಿಗಳನ್ನು ಸುರಿಸುತ್ತಾ, ಉಟ್ಟುಕೊಳ್ಳುವುದಕ್ಕೆ ತಿಳಿಯದೆ ರಾಮನ ಮುಖವನ್ನು ನೋಡಿ ಮುನಿಪತ್ನಿಯರು ನಾರುಮಡಿಗಳನ್ನು ಹೇಗೆ ಉಟ್ಟುಕೊಳ್ಳುವರು ಎಂದು ಕೇಳಲು, ಅದನ್ನು ಕೇಳಿ ಅಲ್ಲಿ ನೆರೆದಿದ್ದ ಸ್ತ್ರೀಪುರುಷರೆಲ್ಲರೂ ಘಟ್ಟಿಯಾಗಿ ಅಳುತ್ತಾ ಇರಲು ವಸಿಷ್ಠಮಹಾಮುನಿಯು ಕೈಕಯಿಯನ್ನು ನೋಡಿ ಕೋಪಗೊಂಡು ನೀನು ರಾಮನೊಬ್ಬನು ನಾರುಶೀರೆಯನ್ನುಟ್ಟುಕೊಂಡು ಹೋಗುವ ಹಾಗೆ ಹೇಳಿ ಸೀತೆಗೂ ಹೇಗೆ ತಂದುಕೊಟ್ಟೆ ಆಕೆಯು ಪತಿಭಕ್ತಿಯಿಂದ ಸಂಗಡ ಹೊರಟಿರುವಳು. ನಾರುಮಡಿಗಳನ್ನು ಡುವುದಕ್ಕೆ ಏನೇನೂ ಕಾರಣವಿಲ್ಲ ನಿನ್ನ ವಂಶ ಹಾಳಾಯಿತು ಎಂದು ಘರ್ಜಿಸಲು, ಕೈಕಯಿಯು ಭಯದಿಂದ ಗಡಗಡನೆ ನಡುಗುತ್ತಾ ಅವುಗಳನ್ನು ಹಿಂದಕ್ಕೆ ತೆಗೆದುಕೊಂಡು ಹೋದಳು, ಕೈಕೆಗೆ ಹದಿನಾಲ್ಕು ವರುಷಗಳಿಗೂ ಬೇಕಾದಷ್ಟು ತನ್ನ ತೌರುಮನೆಯ ವಸ್ತ್ರಾಭರಣಗಳನ್ನು ಕೊಡು ಎಂದು ಹೇಳಿ ಕೊಡಿಸಿದನು. ದಶರಥನು ಸುಮಂತ್ರನನ್ನು ಕುರಿತು ಎಲೈ ಸಾರಥಿಯೇ ನೀನು ನನ್ನ ತೇರಿನಲ್ಲಿ ರಾಮನನ್ನು ಕುಳ್ಳಿರಿಸಿಕೊಂಡು ಹೋಗು ಆತನು ನಿನ್ನನ್ನು ಹಿಂದಕ್ಕೆ ಕಳುಹಿಸಿದರೆ ಬಂದುಬಿಡು ಎಂದು ಹೇಳಲು ಸುಮಂತ್ರನು ಬಳಿಕ ರಥವನ್ನು ಸಿದ್ಧಪಡಿಸಿದನು.

ಮೊದಲು ಸೀತೆಯೂ ಆಮೇಲೆ ಲಕ್ಷ್ಮಣನೂ ತರುವಾಯ ರಾಮನೂ ಕ್ರಮವಾಗಿ ರಥಾರೂಢರಾಗಿ ಹೊರಟರು. ದಶರಥನು ತನ್ನ ಮಡದಿಯರೊಡನೆ ಹಿಂದೆ ಬಂದನು ಮಂತ್ರಿಗಳೂ, ಸೇನಾಧಿಪತಿಗಳೂ, ಪುರಜನರೂ ಗೋಳಿಡುತ್ತಾ ಎಲ್ಲರೂ ಹಿಂದೆ ಹೊರಟರು. ಆಗ ರಾಮನು ಅವರ ದುಃಖವನ್ನು ನೋಡಿ ಸುಮಂತ್ರನಿಗೆ ರಥವನ್ನು ಬೇಗ ನಡೆಸುವಂತೆ ಸನ್ನೆಮಾಡಲು ಅವನು ರಥವನ್ನು ವೇಗವಾಗಿ ಹೊಡೆಯುತ್ತಾ ತಮಸ್ಸಾ ಎಲ್ಲೆಯನ್ನು ದಾಟಿ ಗಂಗಾತೀರದಲ್ಲಿ ತನ್ನ ಸ್ನೇಹಿತನಾಗಿ ಬೇಡರೊಡೆಯನಾಗಿರುವ ಗುಹನನ್ನು ನೋಡಿ ಅವನಿಂದ ಆಲದ ಹಾಲನ್ನು ತರಿಸಿ ಜಡೆಗಳನ್ನು ಧರಿಸಿಕೊಂಡು ಸುಮಂತ್ರನನ್ನು ಕುರಿತು ನೀನು ರಥದೊಡನೆ ಅಯೋಧ್ಯೆಗೆ ಹೋಗು ನಾವು ಮುಂದಕ್ಕೆ ಹೊರಡುವೆವು, ಎಂದು ಹೇಳಿ ಕಳುಹಿಸಲು ಸುಮಂತ್ರನು ಬಂದು ದಶರಥರಾಯನಿಗೆ ನಮಸ್ಕಾರಮಾಡಿ ನಿಂತುಕೊಂಡು, ಎಲೈ—ಪ್ರಭುವೆ? ಸುಕುಮಾರರಾದ ರಾಜಕುಮಾರರು ಮುನಿವೇಷವನ್ನು ಧರಿಸಿ ಪಾದಚಾರಿಗಳಾಗಿ ಅರಣ್ಯವನ್ನು ಪ್ರವೇಶಿಸಿದರು ಎಂದು ಹೇಳಲು ಪುತ್ರೈಕಾಯತ್ತಮಾನಸನಾದ ದಶರಥನು ಕೌಸಲ್ಯೆಯೊಡನೆ ತನಗೆ ಪುತ್ರಶೋಕದಿಂದ ಮರಣವುಂಟಾಗುವುದಕ್ಕೆ ಕಾರಣಗಳನ್ನೂ ಹೇಳಿ ಪ್ರಾಣಬಿಟ್ಟನು. ಪುರಜನರೆಲ್ಲರೂ ದುಃಖಸಾಗರದಲ್ಲಿ ಮುಳುಗಿದರು, ಕೌಸಲ್ಯಾದಿ ಅಬಲೆಯರೆಲ್ಲರೂ ಪತಿವಿಯೋಗದಿಂದುಂಟಾದ ದುಃಖವನ್ನು ತಡೆಯಲಾರದೆ ಕೆಳಗೆ ಬಿದ್ದು ಮೂರ್ಛಿತರಾದರು ಸುಮಂತ್ರಾದಿ ಮಂತ್ರಿಗಳೂ ವಸಿಷ್ಠಾದಿ ಪುರೋಹಿತರೂ ಕೂಡಿ ಆ ರಾಜಕಳೇಬರವನ್ನು ಎಣ್ಣೆಯ ದೋಣಿಯಲ್ಲಿ ಪರಿಮಳದ್ರವ್ಯಗಳೊಡನೆ ಇರಿಸಿ ಕೆಟ್ಟುಹೋಗದಂತೆ ಕಾಪಾಡಿದರು ಆಗ ಕೌಸಲ್ಯೆಗೆ ಮಗನನ್ನು ಅಗಲಿದ್ದ

ದುಃಖದೊಡನೆ ಪತಿವಿಯೋಗ ದುಃಖವೂ ಸೇರಿ ದುಃಖವಿಮ್ಮಡಿಯಾಗಿ ತಾಳಲಾರದೆ ಅಡಿಗಡಿಗೆ ಮೂರ್ಛೆ ಹೋಗುತ್ತಿದ್ದಳು ಸುಮಿತ್ರಾದಿ ಅಂತಃಪುರದ ಕಾಂತೆಯರೆಲ್ಲರೂ ಶೋಕಸಾಗರದಲ್ಲಿ ಮುಳುಗಿ ತೇಲುತ್ತಿದ್ದರು.

ಬಳಿಕ ಸೂರ್ಯೋದಯ ಸಮಯಕ್ಕೆ ವಸಿಷ್ಠಮಹಾಮುನಿಯು ಮಂತ್ರಿಗಳನ್ನು ಕರೆದು ಗಿರಿವ್ರಜಕ್ಕೆ ಹೋಗಿ ಭರತನನ್ನು ಕರೆದುಕೊಂಡು ಬರುವಂತೆ ಹೇಳಲು ಅವರು ಗಿರಿವ್ರಜಕ್ಕೆ ಬರುತ್ತಿರುವಾಗ ತಾನು ರಾತ್ರಿಕಂಡ ದುಸ್ವಪ್ನವನ್ನು ಹೇಳಿಕೊಂಡು ಭಯಪಡುತ್ತಿದ್ದ ಭರತನನ್ನು ನೋಡಿ ಕೈಮುಗಿದು ಸ್ವಾಮಿಾ ! ವಸಿಷ್ಠರು ಒಂದು ಮಹಾ ಕಾರ್ಯನಿಮಿತ್ತವಾಗಿ ತಮ್ಮನ್ನು ಅಯೋಧ್ಯೆಗೆ ಕರೆತರುವಂತೆ ನಮ್ಮನ್ನು ಕಳುಹಿಸಿದರು ಎನಲು ಭರತನು ಅವರ ಮುಖವನ್ನು ನೋಡಿ ಭಯಗ್ರಸ್ತನಾಗಿ ಕೇಕಯರಾಜನಿಗೆ ಈ ಸಮಾಚಾರವನ್ನು ತಿಳಿಸಿ ಆತನ ಅಪ್ಪಣೆಪಡೆದು ಶತ್ರುಘ್ನನೊಡನೆ ಹೊರಟು ಅಯೋಧ್ಯೆಗೆ ಬಂದನು. ಆಗ ಕೈಕಯಿಯು ಎದುರಿಗೆ ಬಂದು ಮಗನನ್ನು ಬಾಚಿ ಅಪ್ಪಿಕೊಳ್ಳಲಾಕೆಗೆ ಭರತನು ನಮಸ್ಕಾರಮಾಡಿ ಕೇಕಯ ಪತಿಯು ಕೊಟ್ಟ ಆಭರಣಗಳನ್ನು ಕೊಟ್ಟು ನಿಂತಿರುವ ಮಗನನ್ನು ನೋಡಿ ಮಗನೇ ಕುಳಿತುಕೋ ಎಂದು ಹೇಳಿ ಮಾರ್ಗಶ್ರಮವನ್ನು ಪರಿಹರಿಸಿ ನಿನ್ನ ತಾತನಾದ ಕೇಕಯ ನಾಥನು ಮೊದಲಾಗಿ ಎಲ್ಲರೂ ಸುಖವಾಗಿದ್ದಾರೆಯೇ ಎಂದು ಯೋಗಕ್ಷೇಮವನ್ನು ವಿಚಾರಿಸಿ ನಿಮ್ಮ ತಂದೆಯು ರತ್ನಖಚಿತಗಳಾದ ಈ ಭೂಷಣಂಗಳನ್ನೆಲ್ಲಾ ನಿನಗೆ ಕೊಟ್ಟಿಯಿದ್ದಾನೆ, ಧರಿಸಿಕೊಳ್ಳೆಂದು ಕೊಡಲು ಭರತನು ಅದನ್ನು ನೋಡಿ ಒಳ್ಳೆಯದು ನನ್ನ ತಂದೆಯ ಆಜ್ಞೆಯಮೇಲೆ ವಸಿಷ್ಠಮುನಿಯು ಶೀಘ್ರವಾಗಿ ಕರೆತರುವಂತೆ ಹೇಳಿಕಳುಹಿಸಿದುದರಿಂದ ಬಂದೆನು ನನ್ನ ತಂದೆಯೆಲ್ಲಿ ಕಾಣಲಿಲ್ಲ ಆತನೆಲ್ಲಿದ್ದಾನೆ ಎಂದು ಕೇಳಲು ನಿನ್ನ ತಂದೆಯು ಸ್ವರ್ಗಸ್ಥನಾದನು, ಎಂಬ ಮಾತನ್ನು ಕೇಳಿ ಸಿಡಿಲು ಹೊಡೆದಂತೆ ಕೆಳಕ್ಕೆ ಬಿದ್ದು ಮೂರ್ಛಿತನಾದನು. ಬಹಳ ಹೊತ್ತಿನಮೇಲೆ ಎಚ್ಚತ್ತು ಹೊರಳಿ ಅಳುತ್ತಿರುವ ಭರತನನ್ನು ಕಂಡು ಕೈಕಯಿಯು ನೀನೇಕೆ ಅಳುತ್ತೀಯೆ ನಿನ್ನ ತಂದೆಯು ಸಕಲ ವಸ್ತುಗಳಿಂದಲೂ ಕೂಡಿ ನಿಷ್ಕಂಟಕವಾಗಿರುವ ಈ ರಾಜ್ಯಕ್ಕೆ ನೀನೇ ದೊರೆಯಾಗಿ ಆಳುವಂತೆ ವರವನ್ನು ಪಡೆದಿದ್ದೇನೆ ಇನ್ನು ದುಃಖವನ್ನು ತ್ಯಜಿಸಿ ಪಟ್ಟಾಭಿಷಿಕ್ತನಾಗಿ ರಾಜ್ಯಭಾರಮಾಡು ಎನಲು ಭರತನು ನನಗೆ ರಾಜ್ಯವು ಹೇಗೆ ಉಂಟಾಗುವದು, ಜ್ಯೇಷ್ಠನಾಗಿ ರಾಜ್ಯಕ್ಕೆ ಅರ್ಹನಾಗಿರುವ ರಾಮನು ಈ ರಾಜ್ಯಕ್ಕೆ ಹಕ್ಕುದಾರನೇ ಹೊರತು ನಾವೆಲ್ಲರೂ ಅವನ ಭೃತ್ಯರು ಎಂದು ಹೇಳಿದನು. ಕೈಕಯಿಯು ತಾನು ಪಡೆದ ಎರಡನೆಯ ವರವನ್ನು ಕುರಿತು ರಾಮಚಂದ್ರನು ಜಟಾಚೀರಧರನಾಗಿ ಸೀತಾಲಕ್ಷ್ಮಣಸಹಿತ ಹದಿನಾಲ್ಕು ವರ್ಷ ವನವಾಸಮಾಡಲು ಒಪ್ಪಿ ಹೊರಟು ಹೋದನು. ಆ ಪುತ್ರವಿಯೋಗದ ದುಃಖದಿಂದ ನಿನ್ನ ತಂದೆಯು ಸತ್ತನು. ಆತನ ದೇಹವನ್ನು ತೈಲದಲ್ಲಿ ಹಾಕಿ ಚಾವಡಿಯಲ್ಲಿ ಸಿಂಹಾಸನದಮೇಲೆ ಇಟ್ಟಿದೆ ಇಗೋ ನೋಡು ಎಂದು ತೋರಿಸಲು ಭರತನು ಕೋಪಾಗ್ನಿಯಿಂದುರಿದುಬಿದ್ದು ಖಡ್ಗವನ್ನು ಸೆಳೆದು ತಾಯನ್ನು ಕಡಿಯ ಹೋಗಲು ಶತ್ರುಘ್ನನು ತಡೆದು ಈಕೆ ನಿಜವಾಗಿ ದ್ರೋಹಿಯನ್ನುವದಕ್ಕೆ ಸಂಶಯವಿಲ್ಲ ಆದರೂ ಈಕೆಯನ್ನು ವಧಿಸಲಾಗದು. ಈ ವರ್ತಮಾನವನ್ನು ರಾಮಚಂದ್ರನು ಕೇಳಿದರೆ ನಮ್ಮನ್ನು ಮಾತೃದ್ರೋಹಿಗಳೆಂದು ತಿಳಿದು ಮುಖಾವಲೋಕನ ಮಾಡುವದಿಲ್ಲ ತಾಳ್ಮೆಯನ್ನು ತಂದುಕೊಂಡು ಶಾಂತನಾಗು, ಎಂದು ಹೇಳಲು ಭರತನು ಶಾಂತನಾಗಿ ತೈಲಪಾಚಿತವಾದ ತಂದೆಯ ಶರೀರದ ಬಳಿಗೆ ಹೋಗಿ ನೋಡಿ, ಎಲೈ—ತಂದೆಯೇ ನಿನಗಿಂಥಾ ಕಷ್ಟ ಬಂಡದ್ದರಿಂದಲೆ ನನಗೆ ದುಸ್ವಪ್ನವಾಯಿತು ಎಂದು ಬಹುವಿಧವಾಗಿ ದುಃಖಪಟ್ಟು ನಮ್ಮ ತಾಯಿ ಇಂಥಾ ಕಾರ್ಯವನ್ನು ಮಾಡಿ ಅಪಕೀರ್ತಿಯನ್ನು ಹೊಂದಿದಳು ಎಂದು ಕೋಪಶೋಕಂಗಳು ಹುರಿಗೊಳ್ಳುತ್ತಿರಲು

ಶ್ರೀರಾಮನಿಂದುತ್ತರ ಕ್ರಿಯೆಗಳನ್ನು ಮಾಡಿಸುವುದಕ್ಕಿಲ್ಲ, ಕೌಸಲ್ಯೆಯ ಮುಖವನ್ನು ನಾನು ಹೇಗೆ ನೋಡಲಿ ಶ್ರೀರಾಮನ ದರ್ಶನವನ್ನು ಮಾಡುವದೆಂತು, ಲಕ್ಷ್ಮಣನನ್ನು ಹೇಗೆ ಸಮಾಧಾನ ಗೊಳಿಸಲಿ, ಇಂದಿಗೆ ಎಲ್ಲವೂ ಮುಳುಗಿಹೋದವು ಎನ್ನುತ್ತಾ ಕೌಸಲ್ಯೆಯ ಮನೆಗೆ ಹೋಗಿ ನಮಸ್ಕಾರಮಾಡಿ ಕೈಕಟ್ಟಿಕೊಂಡು ನಿಂತಿರುವ ಭರತನನ್ನು ನೋಡಿ ಕೌಸಲ್ಯೆಯು ನೀನಿನ್ನುಮೇಲೆ ಪಟ್ಟಾಭಿಷಿಕ್ತನಾಗಿ, ರಾಜ್ಯಪರಿಪಾಲನೆ ಮಾಡುತ್ತಾ ನಿನ್ನ ತಾಯಿಗೆ ಸುಖಪ್ರದನಾಗಿ ಸುಖವಾಗಿರು ಎಂದು ಹೇಳಿದಳು. ಭರತನು ಪುನಃ ಕೌಸಲ್ಯಾದೇವಿಯ ಪಾದಗಳಮೇಲೆ ಬಿದ್ದು, ಎಲೈ-ತಾಯೇ ನಾನೀ ಕಾರ್ಯವನ್ನು ತಿಳಿದು ಇದ್ದರೂ ಸರಿಯೇ ನಾನೀ ರಾಜ್ಯವನ್ನು ಅಪೇಕ್ಷಿಸಿ ಶ್ರೀ ರಾಮಚಂದ್ರನನ್ನು ಕಾಡಿಗೆ ಕಳುಹಿಸಬೇಕೆಂದು ಮನೋವಾಕ್ಕಾಯ ಕರ್ಮಗಳಲ್ಲಿ ಯತ್ನಮಾಡಿದ್ದರೂ ಸರಿಯೇ, ನಾನು ಬ್ರಹ್ಮಹತ್ಯೆ, ಪಿತೃಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಭ್ರೂಣಹತ್ಯ, ಭ್ರಾತೃಹತ್ಯ ಮೊದಲಾದ ಮಹಾಪಾಪಗಳನ್ನು ಮಾಡಿದವರು ಯಾವ ಗತಿಗೆ ಹೋಗುವರೋ ಆ ಗತಿ ತನಗಾಗಲೀ ಇದಕ್ಕೆ ಸಂಶಯವಿಲ್ಲ. ನನ್ನಲ್ಲಿಂಥಾ ಕೆಟ್ಟಯೋಚನೆಯಿಲ್ಲ ಸಾವಧಾನದಿಂದ ವಿಚಾರಿಸು ಎಲ್ಲವೂ ವ್ಯಕ್ತವಾಗುವುದು ಎಂದು ಸಮಾಧಾನಪಡಿಸುತ್ತಿರಲು, ಸಾಮಂತ ಮಂತ್ರಿ ಪುರೋಹಿತರೆಲ್ಲರೂ ಬಂದು ಭರತನನ್ನು ಸಮಾಧಾನಗೊಳಿಸಿ, ನೀನು ಧೈರ್ಯವನ್ನವಲಂಬಿಸಿ ನಿನ್ನ ತಂದೆಯ ಉತ್ತರಕ್ರಿಯೆಗಳನ್ನು ಮಾಡಿ ರಾಜ್ಯವು ಅನಾಯಕವಾಗದಂತೆ ಪಾಲಿಸು ಎನಲು ಭರತನು ರಾಜ್ಯಕ್ಕೆ ಅನರ್ಹನಾದ ನನಗೆ, ಸಮಸ್ತ ಧರ್ಮಗಳನ್ನೂ ತಿಳಿದ ನೀವು ಹೀಗೆ ಹೇಳಬಹುದೇ? ಸುಗುಣಾಭಿರಾಮನಾದ ಶ್ರೀರಾಮಚಂದ್ರನೊಬ್ಬನುವಿನಾ ರಾಜ್ಯಕ್ಕೆ ಇತರರು ಅರ್ಹರಾದರೇ ? ಎಂದು ಹೇಳಿದ ಭರತನನ್ನು ಕುರಿತು ವಸಿಷ್ಠಾದಿಗಳು ನೀವು ನಿಮ್ಮ ತಂದೆಗೆ ಉತ್ತರಕ್ರಿಯೆಗಳನ್ನುಮಾಡಿ, ತರುವಾಯ ನಿಮ್ಮ ಚಿತ್ತಕ್ಕೆ ಬಂದಂತೆ ಮಾಡಬಹುದೆಂದು ಹೇಳಲು, ಧೈರ್ಯವನ್ನು ತಂದುಕೊಂಡು ದಶರಥನಿಗೆ ಪರಲೋಕ ಕ್ರಿಯೆಗಳನ್ನು ಮಾಡಿ, ಷೋಡಶಮಹಾದಾನಗಳಿಂದ ಪಿತೃವರ್ಗದವರೆಲ್ಲರೂ ಸಂತೋಷಪಡುವಂತೆ ಮಾಡಿದನು. ರಾಮನಿಲ್ಲದರಾಜ್ಯವು ದೀಪವಿಲ್ಲದ ಮನೆಯಂತೆಯೂ, ಚಂದ್ರನಿಲ್ಲದ ರಾತ್ರಿಯಂತೆಯೂ, ಕಾಣುತ್ತಿದ್ದಿತು.

## ಭರತನು ಶ್ರೀರಾಮನ ದರ್ಶನಕ್ಕೆ ಹೊರಟುದು.

ಹೀಗಿರಲು ಇನ್ನು ನಾವು ಸಾವಕಾಶ ಮಾಡಬಾರದು, ರಾಮನನ್ನು ಕರೆತರಬೇಕು, ನೀವು ಸಕಲ ಸಾಮಗ್ರಿಗಳೊಂದಿಗೆ ಪರಿವಾರದೊಡನೆ ಬರಬೇಕೆಂದು ಭರತನು ಮಂತ್ರಿ ಪುರೋಹಿತ ಸಾಮಂತಾದಿಗಳಿಗೆ ಹೇಳಲು ಅವರುಅದಕ್ಕೆ ಸಮ್ಮತಿಸಿ ಎಲ್ಲರೂ ಪ್ರಯಾಣ ಹೊರಟು ಸಿದ್ಧವಾಗಿರುವ ಪುರೋಹಿತ ಮಂತ್ರಿ ಸಾಮಂತರೊಡಗೂಡಿ ಚತುರಂಗಬಲಸಮೇತನಾಗಿ ಸಕಲ ದಾಸ ದಾಸೀಜನರಿಂದ ಪರಿವೇಷ್ಟಿಸಿ ಜನನಿಯರಿಗೆ ವಾಹನಂಗಳನ್ನು ಸಿದ್ಧಪಡಿಸಿ, ತಾನು ಶತ್ರುಘ್ನಸಹಿತನಾಗಿ ರಥವನ್ನೇರಿ ಅಯೋಧ್ಯಾಪುರದಿಂದ ಹೊರಟು ಗಂಗಾತೀರವನ್ನು ಸೇರಿ ಅಲ್ಲಿ ಸಕಲ ಸೇನೆಗಳೊಡನೆ ನಿಲ್ಲಲು ಗುಹನು ಅಡ್ಡವಾಗಿ ಬಂದು ಕೋಪಮಾಡಿಕೊಂಡು ಭರತನನ್ನು ನೋಡಿ, ಕಾಡುಪಾಲಾಗಿ ಹೋಗುತ್ತಿರುವ ರಾಮನನ್ನು ಅಟ್ಟಿಕೊಂಡು ಬಂದೆಯಾ ಎಂದು ಕೇಳಲು ಭರತನು ಆ ಗುಹನನ್ನು ಶಾಂತವಾಕ್ಯಗಳಿಂದ ಸಮಾಧಾನಗೊಳಿಸಿ, ತಾವು ಬಂದ ಕಾರ್ಯವನ್ನರುಹಿ ಅವರು ಹೊರಟ ದಾರಿಯನ್ನು ಕೇಳಿ ಸಂಗತಿಗಳನ್ನು ತಿಳಿದುಕೊಂಡು ಅವರು ಜಟಾವಲ್ಕಲಧಾರಿಗಳಾದಕಾರಣ ನಾವು ಜಟಾವಲ್ಕಲಗಳನ್ನು ಧರಿಸುವೆನೆಂದು ಹೇಳಿ, ಭರತ ಶತ್ರುಘ್ನರು ಹಾಗೆಯೇ ಮಾಡಲು ಸಂತೋಷಪಟ್ಟು ಗುಹನಿಂದ ಸನ್ಮಾನಹೊಂದಿ ಅವನಿಂದ ತೋರಿಸಲ್ಪಟ್ಟ ಮಾರ್ಗದಲ್ಲಿ ಹೊರಟು ಭರದ್ವಾಜಾಶ್ರಮವನ್ನು ಸೇರಿ, ಆ ಋಷಿಯ ಆತಿಥ್ಯ

ವನ್ನು ಕೈಕೊಂಡು, ಅಲ್ಲಿಂದ ಚಿತ್ರಕೂಟದ ಮಾರ್ಗವಾಗಿ ಬರುತ್ತಿರಲು ಅಲ್ಲಿದ್ದ ಹಕ್ಕಿಗಳು ಮೃಗಗಳು ಚೆದರಿ ಚೆದರಿ ಓಡಿಹೋಗುತ್ತಿರಲು, ರಾಮಚಂದ್ರನು ಲಕ್ಷ್ಮಣನನ್ನು ಕುರಿತು ಅದೇನು ನೋಡೆನಲು ಆತನು ಒಂದು ದೊಡ್ಡ ವೃಕ್ಷದಮೇಲೇರಿ ಮೂರುದಿಕ್ಕುಗಳನ್ನೋಡಿ ಏನೂ ಕಾಣದೆ ಉತ್ತರ ದಿಕ್ಕಿಗೆ ತಿರುಗಲು ಸ್ವಲ್ಪ ದೂರದಲ್ಲಿ ಕೆಂದೂಳಿ ಕಾಣಿಸಿತು. ಅಲ್ಲಿ ರಥ ಗಜ ತುರಗ ಪದಾತಿಗಳಿಂದ ಕೂಡಿ ಸಮಸ್ತ ಪರಿವಾರದೊಡನೆ ಬರುತ್ತಿರುವ ಭರತನನ್ನು ನೋಡಿ ನಾಲ್ಕು ಸಮುದ್ರಗಳು ಬೆರೆದು ಬರುತ್ತಿದೆಯೋ ಎಂದು ಭಾವಿಸಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಧನುರ್ಬಾಣಗಳನ್ನು ಧರಿಸಿ ಅಣ್ಣನೊಡನೆ ಭರತನು ನಮ್ಮಮೇಲೆ ದಂಡೆತ್ತಿ ಬರುತ್ತಿದ್ದಾನೆ, ಅವನನ್ನು ಸಂಹರಿಸುವೆನು ಅಪ್ಪಣೆ ಕೊಡಬೇಕೆಂದು ಬೆಸಗೊಳ್ಳಲು ರಾಮನು ನಕ್ಕು, ಎಲೈ—ಲಕ್ಷ್ಮಣನೇ ನೀನೇಕೆ ಕೋಪಮಾಡುವೆ, ಭರತನು ನನಗೆ ಅತ್ಯಂತ ಭಕ್ತನು ನಾವು ಹೀಗೆ ಬಂದುದನ್ನು ಕೇಳಿ ನಮ್ಮನ್ನು ಆದರಿಸಿ ಅಯೋಧ್ಯೆಗೆ ಕರೆಯಲು ಬಂದಿದ್ದಾನೆ, ಎಂದು ಹೇಳುತ್ತಿರುವಷ್ಟರಲ್ಲಿಯೇ ಭರತನು ಚಿತ್ರಕೂಟದ ಸಮೀಪಕ್ಕೆ ಬಂದು ಪರಿವಾರವನ್ನು ನಿಲ್ಲಿಸಿ ತಾನು ಮಾತ್ರ ರಾಮನ ಬಳಿಗೆ ಬಂದನು.

## ಭರತನು ಶ್ರೀರಾಮನನ್ನು ಕಂಡುದು.

ಭರತನು ರಾಮನಿರುವ ಪರ್ಣಶಾಲೆಗೆ ಬಂದು ಸಾಷ್ಟಾಂಗ ಪ್ರಣಾಮಮಾಡಿ ನಿಲ್ಲಲು ಭರತನನ್ನು ಆಲಿಂಗಿಸಿಕೊಂಡು ತೊಡೆಯಮೇಲೆ ಕುಳ್ಳಿಸಿಕೊಂಡು ರಾಮನು ನೀನು ರಾಜ್ಯಪರಿಪಾಲನೆ ಮಾಡಿಕೊಂಡು ಸುಖವಾಗಿರೆಂದು ಹೇಳಲು, ತಲೆಬಗ್ಗಿಸಿಕೊಂಡು ಉತ್ತರಕೊಡದಿರುವ ಭರತನನ್ನು ನೋಡಿ ರಾಮನು ನಮ್ಮ ಪಟ್ಟಣದಲ್ಲಿ ಎಲ್ಲರು ಕ್ಷೇಮವೇ ? ನಮ್ಮ ತಾಯಿಯರೂ ತಂದೆಯಾದ ದಶರಥರಾಯರು ಕ್ಷೇಮವಾಗಿದ್ದಾರೆಯೇ ಎಂದು ಕೇಳಲು, ಭರತನು ದುಃಖವನ್ನು ಸಹಿಸಲಾರದೆ ಗದ್ಗದಸ್ವರದಿಂದ ನಮ್ಮ ತಂದೆಯು ಸ್ವರ್ಗಸ್ಥನಾದನೆಂದು ಹೇಳಲು ರಾಮನು ಚಿಂತಾಕ್ರಾಂತನಾಗಿ ಮೈಮರೆತು ಸ್ವಲ್ಪ ಹೊತ್ತಿನಮೇಲೆ ಚೇತರಿಸಿಕೊಂಡು ಲಕ್ಷ್ಮಣಭರತರೊಡನೆ ತಾಯಿಯನ್ನು ಕಂಡು ನಮಸ್ಕರಿಸಿ ಪುರೋಹಿತ ಮೊದಲಾದವರನ್ನು ತಮ್ಮ ಆಶ್ರಮಕ್ಕೆ ಕರದೊಯ್ದು ಎಲ್ಲರೂ ಸೇರಿ ಸ್ವಲ್ಪಹೊತ್ತು ದುಃಖಪಡುತ್ತಿರಲು ರಾಮನು ಉಪಚಾರೋಕ್ತಿಗಳಿಂದ ಅವರವರ ದುಃಖಗಳನ್ನು ಸಮಾಧಾನಗೊಳಿಸಿ ತಂದೆಗೆ ಉತ್ತರಕ್ರಿಯೆಗಳನ್ನು ಮಾಡಿ ಭರತನಿಗೆ ನೀನು ಅಯೋಧ್ಯೆಗೆ ಹೋಗಿ ರಾಜ್ಯಪರಿಪಾಲನೆ ಮಾಡಿಕೊಂಡಿರು ಎನಲು ಭರತನು ಈ ನಮ್ಮ ಅಪರಾಧವನ್ನು ಕ್ಷಮಿಸಿ ನನ್ನಲ್ಲಿ ಕರುಣವಿಟ್ಟು ನೀನು ಬಂದು ಪಟ್ಟಾಭಿಷಿಕ್ತನಾಗಿ ನಮ್ಮನ್ನು ಕಾಪಾಡುತ್ತಿದ್ದರೆ ನಾವು ನಿಮ್ಮ ಸಂರಕ್ಷಣೆಯಲ್ಲಿದ್ದುಕೊಂಡು, ನಿನ್ನ ಆಜ್ಞಾನುಸಾರವಾಗಿ ನಡೆಯುವೆವು ಎಂದು ಹೇಳಲು ಆತನೊಡನೆ ರಾಮನು ನಾವು ಪಿತೃವಾಕ್ಯಪರಿಪಾಲನೆ ಮಾಡತಕ್ಕವರಲ್ಲದೆ, ಉಲ್ಲಂಘನೆ ಮಾಡತಕ್ಕವರಲ್ಲ ಎಂದು ಸಮಾಧಾನಪಡಿಸಲು ಭರತನು ಅಣ್ಣನೊಡನೆ ನೀವು ಪುನಃ ಬರುವವರೆಗೂ ನಿಮ್ಮ ಆಗಮನವನ್ನು ಎದುರು ನೋಡುತ್ತಾ ಇಲ್ಲಿಯೇ ಇರುವೆನು, ಆದುದರಿಂದ ನೀವು ನಿಮ್ಮ ಪಾದುಕೆಗಳನ್ನು ಕೊಟ್ಟರೆ ಅವುಗಳನ್ನು ಸಿಂಹಾಸನದಲ್ಲಿಟ್ಟು ಪೂಜಿಸುತ್ತಾ ನಾನು ನಂದಿ ಗ್ರಾಮದಲ್ಲಿರುವಹಾಗೆ ಅಪ್ಪಣೆಯಾಗಬೇಕೆಂದು ಬೇಡಿಕೊಳ್ಳಲು ರಾಮನು ಅದಕ್ಕೊಪ್ಪಿ ಪಾದುಕೆಗಳನ್ನು ಕೊಡಲು ಅದನ್ನು ಭರತನು ಶಿರಸಾವಹಿಸಿ ಸಕಲ ಸೈನ್ಯದೊಡನೆ ಹೊರಟು ಅಯೋಧ್ಯಾಪಟ್ಟಣವನ್ನು ಸೇರಿ ಸಿಂಹಾಸನವನ್ನು ಅಲಂಕರಿಸಿ ಶ್ರೀರಾಮನ ಪಾದುಕೆಗಳನ್ನು ಸಿಂಹಾಸನದಮೇಲಿಟ್ಟು ಶತ್ರುಘ್ನನನ್ನು ಪಟ್ಟಣದಲ್ಲಿ ಇರುವಂತೆ ನಿಯಮಿಸಿ ತಾನು ನಂದಿಗ್ರಾಮವನ್ನು ಪ್ರವೇಶಿಸಿ ಅಲ್ಲಿಯೇ ಇದ್ದನು.

## ಕಾಕಾಸುರನ ವೃತ್ತಾಂತ.

ಇತ್ತ ಶ್ರೀರಾಮನು ತಾಯಿ ಮೊದಲಾದವರನ್ನು ಸಮಾಧಾನ ಮಾಡಿ ಭರತನೊಡನೆ ಸಾಗಕಳುಹಿಸಿ, ಆ ಚಿತ್ರಕೂಟ ಪರ್ವತದಲ್ಲಿರುವಾಗ ಒಂದು ದಿನ ಕಾಕಾಸುರನೆಂಬ ರಾಕ್ಷಸನೊಬ್ಬನು ಸೀತೆಯನ್ನು ಪೀಡಿಸಲು ರಾಮನು ಕುಪಿತನಾಗಿ ಒಂದು ತೃಣವಂ ತೆಗೆದು ಮಂತ್ರಿಸಿ ಎಸೆಯಲು, ಅದು ಮಹಾಭಯಂಕರ ರೂಪದೊಡನೆ ಕಾಕಾಸುರನನ್ನೂ ಬೆನ್ನಟ್ಟಿ ಎಲ್ಲಿಯೂ ನಿಲಗೊಡಿಸದೆ ಪೀಡಿಸುತ್ತಿರಲು ಮೂರು ಲೋಕಗಳನ್ನು ಸುತ್ತಿ ಅವನ ಗರ್ವವಳಿದು, ಅನ್ಯನ್ಯ ಗತಿಕನಾಗಿ ಕಡೆಗೆ ಅದರ ವೇಧೆಯನ್ನು ತಾಳಲಾರದೆ ಶ್ರೀರಾಮನ ಪಾದಗಳಮೇಲೆ ಬಿದ್ದು ತಪ್ಪುಮಾಡಿದೆನು ನನ್ನನ್ನು ಕಾಪಾಡು ಎಂದು ಮೊರೆಯಿಡಲು, ರಾಮನು ಕರುಣಿಸಿ ಕಾಕಾಸುರನ ಒಂದು ಕಣ್ಣನ್ನು ಮಂತ್ರಾಸ್ತ್ರಕ್ಕೆ ಅರ್ಪಿಸಿ, ಅವನನ್ನು ಅಲ್ಲಿಂದ ಹೊರಡಿಸಿದನು. ತರುವಾಯ ಲಕ್ಷ್ಮಣನನ್ನು ಕುರಿತು ಎಲೈ ಲಕ್ಷ್ಮಣನೇ! ನಾವು ಈ ಸ್ಥಳದಲ್ಲಿರುವದು ಯುಕ್ತವಾಗಿ ಕಾಣುವುದಿಲ್ಲ, ದಂಡಕಾರಣ್ಯಕ್ಕೆ ಹೋಗೋಣ ಎಂದು ಸೀತಾಲಕ್ಷ್ಮಣ ಸಹಿತನಾಗಿ ಹೊರಟು ಬರುತ್ತಿರುವಾಗ ಅತ್ರಿಮಹಾಮುನಿಯ ಆಶ್ರಮವನ್ನು ಪ್ರವೇಶಿಸಿ ಮೂವರೂ ಆ ಮುನಿಯನ್ನು ನೋಡಿ ನಮಸ್ಕರಿಸಿ ನಿಂತಿರಲು ಆತನು ಇವರನ್ನು ನೋಡಿ, ರಾಮನೊಡನೆ ಈ ಸೀತೆಯು ಪರಮಪತಿವ್ರತೆ ಇವಳು ಅನಸೂಯೆಯನ್ನು ಕಂಡು ಆಕೆಯಿಂದ ಪತಿವ್ರತಾಧರ್ಮಗಳನ್ನು ತಿಳಿದುಕೊಳ್ಳಲಿ ಎಂದು ಹೇಳಲು ರಾಮನು ಈ ಸಂಗತಿಯನ್ನು ಸೀತೆಗೆ ಹೇಳಲು, ಪತಿಯ ಆಜ್ಞಾನುಸಾರವಾಗಿ ಸೀತೆಯು ಅನಸೂಯೆಯನ್ನು ಕಂಡು ಆದೇವಿಯಿಂದ ಸಕಲ ಧರ್ಮಗಳನ್ನು ತಿಳಿದುಕೊಂಡಳು. ತರುವಾಯ ಶ್ರೀರಾಮನು ಸೀತಾಲಕ್ಷ್ಮಣ ಸಹಿತನಾಗಿ ಅತ್ರಿಮಹಾಮುನಿಯ ಅಪ್ಪಣೆಯನ್ನು ಪಡೆದು ದಂಡಕಾರಣ್ಯವಂ ಪ್ರವೇಶಿಸಿದನು ಎಂದು ಮಾರ್ಕಂಡೇಯ ಮುನಿಗಳು ಧರ್ಮರಾಯನಿಗೆ ಹೇಳಿ ಸುಮ್ಮನಾದರು.

ಇಂತು ಶ್ರೀ ವಚನರಾಮಾಯಣದಲ್ಲಿ ಅಯೋಧ್ಯಾಕಾಂಡಂ ಸಂಪೂರ್ಣಂ.



ಶ್ರೀರಸ್ತು.

ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ.



# ರಾಮಾಯಣ ಕಥಾಸಂಗ್ರಹ.



## ಅರಣ್ಯ ಕಾಂಡ.



ಅನಂತರದಲ್ಲಿ ಶ್ರೀರಾಮಚಂದ್ರನು ತಮ್ಮನಾದ ಲಕ್ಷ್ಮಣನಿಂದಲೂ, ಪತ್ನಿಯಾದ ಸೀತೆಯಿಂದಲೂ ಕೂಡಿ, ಸಿಂಹ, ಶಾರ್ದೂಲ, ಕುಂಜರ, ಮಾಹಿಷಾದಿಗಳಿಂದ ಭಯಂಕರವಾಗಿ ಗಗನಚುಂಬಿತಗಳಾದ ವೃಕ್ಷಗಳಿಂದ ನಿಬಿಡವಾಗಿ ರಾಕ್ಷಸರ ಧ್ವನಿಯಿಂದ ತುಂಬಿರುವ ಘೋರವಾದ ದಂಡಕಾರಣ್ಯದಲ್ಲಿ ಸಂಚರಿಸುತ್ತಿರಲು, ವಿರಾಧನೆಂಬ ರಕ್ಕಸನು ಇವರ ಸೌಂದರ್ಯಗಾಂಭೀರ್ಯಾದಿ ಗುಣಗಳಿಗೆ ಬೆರಗಾಗಿ, ಇವರನ್ನು ಕಂಡು ಅಯ್ಯಾ, ನೀವು ಯಾರು, ಎತ್ತ ತೆರಳುವಿರಿ, ನಿಮ್ಮನ್ನು ನೋಡಿದರೆ ರಾಜಪುತ್ರರಂತೆ ಕಾಣುತ್ತೀರಿ, ಹತ್ತಿರದಲ್ಲಿರುವ ಲಲನಾಮಣಿ ಯಾರು? ಇಂಥ ಘೋರಾರಣ್ಯದಲ್ಲಿ ಈ ಸುಂದರಾಂಗಿಯನ್ನು ಕರೆದುಕೊಂಡು ಬರಬಹುದೆ

ನೀವಾದರು ಜಟೆಗಳನ್ನು ಧರಿಸಿ ವಲ್ಕಲವನ್ನುಟ್ಟು ಮುನಿವೇಷಧಾರಿಗಳಾದ ಮೇಲೆ ಈ ವನಿತೆಯಿಂದ ನಿಮಗೆ ಪ್ರಯೋಜನವೇನು ಸುವರ್ಣಲತೆಯಂತಿರುವ ಈ ಸ್ತ್ರೀರತ್ನವು ನಿಮಗೆ ಯೋಗ್ಯವಾದುದಲ್ಲ ಎಂಬದಾಗಿ ನುಡಿಯಲು ಶ್ರೀರಾಮನು ಎಲೈ ರಕ್ಕಸಾಧಮನೇ ನಾವೀರ್ವರೂ ದಶರಥಮಹಾರಾಜನ ಮಕ್ಕಳು, ಇವಳು ಜನಕಾತ್ಮಜೆಯಾದ ಸೀತೆ ನನ್ನ ಮಡದಿ. ಪಿತೃವಾಕ್ಯ ಪರಿಪಾಲನೆಗಾಗಿ ಈ ಘೋರಾರಣ್ಯಕ್ಕೆ ಬಂದೆವು ನೀನು ಯಾರು ಎಲ್ಲಿಗೆ ಹೋಗುತ್ತೀಯೆ ಎಂದು ಕೇಳಿದನು. ಆ ವಿರಾಧನು ಬಲಗರ್ವಿತನಾಗಿ ನೀನು ಕೇಳುವನು, ನಾನು ಹೇಳುವನು ಆಹಾ ! ಎಷ್ಟು ವಿಚಿತ್ರ ಈ ಘೋರಾರಣ್ಯದಲ್ಲಿ ನಿಮ್ಮಿಬ್ಬರನ್ನು ಸಂಹರಿಸಿ, ಈ ಸ್ತ್ರೀರತ್ನವನ್ನು ಅಪಹರಿಸುತ್ತೇನೆ ಎಂದು ನುಡಿದು ಹಲ್ಲುಗಳಂ ಕಡಿಯುತ್ತಾ ಭುಜಗಳನ್ನು ತಟ್ಟಿ ರಾಮಚಂದ್ರನನ್ನು ಬಲಭುಜದಮೇಲೆ, ಲಕ್ಷ್ಮಣನನ್ನು ಎಡಭುಜದಮೇಲೆ, ಸೀತಾದೇವಿಯನ್ನು ತಲೆಯ ಮೇಲೆ ಎತ್ತಿಕೊಂಡು ದಕ್ಷಿಣದಿಗ್ಮುಖವಾಗಿ ಹೊರಟನು. ಆಗ ಸೀತಾದೇವಿಯು ಗಡಗಡನೆ ನಡುಗುತ್ತಾ ಕಳವಳಗೊಂಡು ರಾಮದೇವರ ಮುಖಾರವಿಂದವನ್ನು ನೋಡಲಾಗಿ ಆಗ ಲಕ್ಷ್ಮಣನು ಅಯ್ಯಾ ರಾಮಚಂದ್ರನೇ ಈ ರಾಕ್ಷಸನು ಎತ್ತಿಕೊಂಡು ಹೋಗುತ್ತಿದ್ದರೆ ನಾವು ಸುಮ್ಮನಿರುವುದು ಸರಿಯಲ್ಲ. ಸೀತಾದೇವಿಯು ಕಳವಳಗೊಂಡು ಭೀತಳಾಗಿದ್ದಾಳೆ, ಅಪ್ಪಣೆಯಾದರೆ ನಾನು ಖಡ್ಗದಿಂದ ಇವನನ್ನು ಛೇದಿಸುವೆನೆಂದು ನುಡಿದನು. ಆಗ ರಾಮಚಂದ್ರನು ಶುಭಲಕ್ಷಣನಾದ ಲಕ್ಷ್ಮಣನೆ ಪ್ರಿಯ ಸಹೋದರನೇ ನಾವು ದಕ್ಷಿಣದಿಕ್ಕಿಗೆ ಹೋಗಬೇಕಾದದ್ದೇ ಸರಿ. ಈ ರಾಕ್ಷಸನು ಸುಲಭವಾಗಿ ಎತ್ತಿಕೊಂಡು ಹೋಗುವಾಗ ಸುಖಕರವೇ ಆಯಿತು. ಹೋಗಲಿ ಇನ್ನೂ ಕೆಲವುದೂರ ಹೋದಮೇಲೆ ಇವನನ್ನು ಸಂಹರಿಸಬೇಕೆಂದು ನುಡಿದನು. ಹೀಗೆ ಕೆಲವುಯೋಜನದೂರ ಹೋದಮೇಲೆ ಶ್ರೀರಾಮಚಂದ್ರನು ಖಡ್ಗದಿಂದ ಆ ರಾಕ್ಷಸನ ಒಂದು ಭುಜವನ್ನು ಕಡಿದನು. ಆಗ ಲಕ್ಷ್ಮಣನು ಮತ್ತೊಂದು ಭುಜವನ್ನು ಛೇದಿಸಿದನು. ಈ ವಿರಾಧನು ಈ ರಾಮಚಂದ್ರ ಲಕ್ಷ್ಮಣ ಸೀತಾದೇವಿಯರನ್ನು ಕೆಳಕ್ಕೆ ಇಳಿಸಿದನು. ಬಳಿಕ ಲಕ್ಷ್ಮಣನು ಖಡ್ಗದಿಂದ ಶಿರಚ್ಛೇದನಮಾಡಿ ಅವನನ್ನು ಸಂಹರಿಸಿದನು. ಆ ಕೂಡಲೆ ರಾಕ್ಷಸನು ದಿವ್ಯತೇಜೋವಂತನಾದ ಗಂಧರ್ವನಾಗಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಎಲೈ ರಘುವಂಶ ಲಲಾಮನೆ ನಾನು ಒಬ್ಬ ಗಂಧರ್ವನು ಶಾಪದಿಂದ ರಾಕ್ಷಸಾಕೃತಿಯಲ್ಲಿದ್ದು ತಮ್ಮ ಸಂದರ್ಶನದಿಂದ ಶಾಪವಿಮುಕ್ತನಾಗಿ ಕೃತಾರ್ಥನಾದೆನು. ನಾನು ಇನ್ನು ಸ್ವರ್ಗಕ್ಕೆ ಹೋಗುತ್ತೇನೆಂದು ಹೇಳಿ ಹೊರಟುಹೋದನು. ಆಗ ರಾಮಲಕ್ಷ್ಮಣರು ವಿಸ್ಮಿತರಾಗಿ ಮುಂದಕ್ಕೆ ಹೊರಟರು.

## ರಾಮಲಕ್ಷ್ಮಣರು ಅರಣ್ಯದಲ್ಲಿ ಋಷಿಗಳಂ ಸೇವಿಸಿದುದು.

ಬಳಿಕ ಸೀತಾ ರಾಮ ಲಕ್ಷ್ಮಣರು ದಂಡಕಾರಣ್ಯವನ್ನು ಪ್ರವೇಶಿಸಿ ಋಷ್ಯಾಶ್ರಮಗಳನ್ನು ನೋಡಿ ಹೋಮಧೂಮವನ್ನು ಆಸ್ವಾದಿಸುತ್ತಾ ಋಷಿಗಳು ತಂಡೋಪತಂಡವಾಗಿ ವೇದಘೋಷ ಮಾಡುತ್ತಿರಲು ನೋಡಿ ಹರ್ಷಿಸುತ್ತಾ ಕಂದಮೂಲಾದಿಗಳನ್ನು ತಿಂದರೂ ವನವಾಸ ದುಃಖವನ್ನು ಮರೆತು, ಪರಮಾನಂದದಿಂದ ಹೊರಟು ಬರುತ್ತ ಮಾರ್ಗದಲ್ಲಿ ಶರಭಂಗಋಷಿಯ ಆಶ್ರಮವನ್ನು ಹೊಕ್ಕು ವಂದಿಸಿ ಅವನ ಸತ್ಕಾರವನ್ನು ಕೈಕೊಂಡು ಹೊರಟು ಸುತೀಕ್ಷ್ಣ ಋಷಿಯ ಆಶ್ರಮವನ್ನು ಪ್ರವೇಶಿಸಿ ಅಲ್ಲಿಂದ ಮುಂದೆ ಬ್ರಹ್ಮನಿಷ್ಠನಾದ ಅತ್ರಿಮಹಾಋಷಿಯ ಆಶ್ರಮಕ್ಕೆ ಬಂದು ನಮಸ್ಕರಿಸಿ ಆ ರಾತ್ರಿ ಅಲ್ಲೇ ಇರಬೇಕೆಂದು ತಂಗಿದರು. ಸೀತಾದೇವಿಯು ಆ ಅತ್ರಿಮಹಾಋಷಿಯ ಪ್ರಿಯಪತ್ನಿಯಾದ ಅನಸೂಯಾದೇವಿಯ ಅನುಗ್ರಹವನ್ನು ಪಡೆದು

ಆಕೆಯಿಂದ ಸತ್ಕೃತಳಾಗಿ ಅನಸೂಯಾದೇವಿಯು ಕೊಟ್ಟ ಆಭರಣಗಳನ್ನು ಧರಿಸಿಕೊಂಡು ಸಂತೋಷಪಟ್ಟಳು. ಅಲ್ಲಿಂದ ಹೊರಟು ಬರುತ್ತಿರಲು ಸಿಂಹ, ಶಾರ್ದೂಲ, ಭಲ್ಲೂಕ, ಚಮರಿ, ಗಂಡಬೇರುಂಡ, ನಕುಲ, ಕೇಸರಿಗಳಿಂದ ತುಂಬಿ ಹೋಮಧೂಮ ಪೂರಿತವಾದ ವೇದಘೋಷ ದಿಂದ ಕೂಡಿ ಸ್ವಾಹಾಕಾರ, ವಷಟ್ಕಾರಾದಿ ಶಬ್ದಗಳಿಂದ ಪೂರಿತವಾಗಿ ಕಲ್ಪವೃಕ್ಷ ಸಮಾನ ವಾದ ಭೂಜಗಳಿಂದ ತುಂಬಿರುವ ಅಗಸ್ತ್ಯಾಶ್ರಮ ಪ್ರಾಂತ್ಯದಲ್ಲಿ ಸಂಚರಿಸುತ್ತಾ ರಾಮ ಚಂದ್ರನು ಹೀಗೆ ಹೇಳಲುಪಕ್ರಮಿಸಿದನು. ಎಲೈ ಲಕ್ಷ್ಮಣನೇ ಈ ಪ್ರದೇಶದಲ್ಲಿ ಸಿಂಹಗಜಗಳು ಮೃಗಶಾರ್ದೂಲಗಳು, ನಕುಲಸರ್ಪಗಳು ಪರಸ್ಪರ ಮೈತ್ರಿಯಿಂದಿರುತ್ತವೆ. ಕಮಲಾಕರಗಳು ದರ್ಪಣ ಸಮಾನಗಳಾಗಿದೆ. ವೃಕ್ಷಗಳಲ್ಲಿ ವಲ್ಕಲಗಳು ನೇತಾಡುತ್ತಿವೆ. ಮೃಗಗಳು ದರ್ಭಾ ಗ್ರಗಳನ್ನು ಭುಂಜಿಸುತ್ತಿವೆ. ಇದು ಪ್ರಸಿದ್ಧವಾದ ಅಗಸ್ತ್ಯಮಹರ್ಷಿಯ ಆಶ್ರಮವಾಗಿರಬೇಕು. ಆಹಾ! ಈತನ ಪ್ರಭಾವವು ಅತಿಶಯವಾಗಿ ಅನಿರ್ವಾಚ್ಯವಾಗಿದೆ. ವಿಂಧ್ಯನೆಂಬ ಪರ್ವತ ರಾಜನು ಮೇರುಪರ್ವತದೊಡನೆ ಶಪಥಮಾಡಿ ಬೆಳೆಯುತ್ತಾ ಸೂರ್ಯಮಂಡಲದವರೆಗೂ ಹೋಗಿ ಇನ್ನೂ ಮುಂದಕ್ಕೆ ಹೋಗುತ್ತಿರಲು ಬ್ರಹ್ಮಾದಿಗಳು ಏನೂ ತೋರದೆ ಈ ಅಗಸ್ತ್ಯನಿಗೆ ತಿಳಿಸಲು ಈತನು ಕೋಪಗೊಂಡು ವಿಂಧ್ಯಾದ್ರಿಯಮೇಲೆ ತನ್ನ ಹಸ್ತವನ್ನಿಟ್ಟನು ಆಗ ಪರ್ವತವು ಭೂಮಿಗೆ ಇಳಿದುಹೋಯಿತು ಇದೂ ಅಲ್ಲದೆ ಸಮುದ್ರರಾಜನಮೇಲೆ ಕೋಪಗೊಂಡು ಸಪ್ತ ಸಮುದ್ರಗಳನ್ನು ತನ್ನ ಅಂಗೈಗೆ ಆಕರ್ಷಿಸಿ ಆಪೋಶನದಂತೆ ಕುಡಿದುಬಿಟ್ಟನು. ನಮ್ಮ ಸುಕೃತ ಪರಿಪಾಕದಿಂದ ಇಂಥಾ ಮಹಾತ್ಮನ ದರ್ಶನ ದೊರೆಯಿತು ಸಾಧುಗಳ ಸಂದರ್ಶನವು ಪುಣ್ಯ ಪುರುಷರಿಗಲ್ಲದೆ ಅನ್ಯರಿಗೆ ಲಭಿಸದು. ನಾವು ಆಶ್ರಮಕ್ಕೆ ಹೋಗಿ ಅಗಸ್ತ್ಯನ ದರ್ಶನದಿಂದ ಕೃತಾರ್ಥರಾಗಬೇಕು. ತತ್ಪತ್ನಿಯಾದ ಲೋಪಾಮುದ್ರೆಯೆಂಬ ಪತಿವ್ರತಾ ಶಿರೋಮಣಿಯನ್ನು ಕಂಡು ಆಕೆಯಿಂದ ಅನುಗೃಹೀತಳಾಗಿ ಸೀತಾದೇವಿಯು ಕೃತಾರ್ಥಳಾಗಲಿ ಆ ಮೇಲೆ ಮುಂದಕ್ಕೆ ಹೋಗೋಣ ಎಂದು ಹೇಳಿ ಆಶ್ರಮವನ್ನು ಪ್ರವೇಶಿಸಿ ಅಲ್ಲಿ ಸಕಲ ಋತ್ವಿಕ್ ಶಿಷ್ಯ ಪರಿವೃತನಾಗಿ ಯಾಗದೀಕ್ಷಾಬದ್ಧನಾಗಿ ಇಂದ್ರಾದಿ ಬೃಂದಾರಕ ಮಧ್ಯದಲ್ಲಿರುವ ಅಗಸ್ತ್ಯ ಮಹರ್ಷಿಯನ್ನು ಕಂಡು ಸಂತೋಷದಿಂದ ಆತನ ಪಾದಗಳಿಗೆರಗಿ ನಿಂತನು. ಆಗ ಸಮೀಪ ದಲ್ಲಿ ನಿಂತಿರುವ ಸೀತಾರಾಮಲಕ್ಷ್ಮಣರನ್ನು ನೋಡಿ ಅಗಸ್ತ್ಯನು ಸಂತೋಷಭರಿತನಾಗಿ ಕುಳಿತು ಕೊಳ್ಳುವುದಕ್ಕೆ ಆಜ್ಞೆಯನ್ನಿತ್ತನು. ಇವರು ತಮಗೆ ಯೋಗ್ಯವಾದ ಆಸನಂಗಳನ್ನು ಅಲಂಕ ರಿಸಿದರು. ಲೋಪಾಮುದ್ರೆಯು ಸೀತಾದೇವಿಯನ್ನು ಸಂಭಾವಿಸಿ ತನ್ನ ಪರ್ಣಶಾಲೆಗೆ ಕರೆದು ಕೊಂಡು ಹೋಗಿ ಕುಶಲಪ್ರಶ್ನೆಗಳನ್ನು ಮಾಡಿ ಸಕಲ ಭೂಷಣಗಳಿಂದ ಅಲಂಕರಿಸಿದಳು, ಬಳಿಕಾ ಅಗಸ್ತ್ಯಋಷಿಯು ಈ ರಾಮಲಕ್ಷ್ಮಣರನ್ನು ಕುರಿತು ಇಂತೆಂದನು. ಎಲೈ ಮಹಾತ್ಮರೇ ದಶರಥ ಪುತ್ರರಾದ ರಾಮಲಕ್ಷ್ಮಣರು ದಂಡಕಾರಣ್ಯದಲ್ಲಿ ಸಂಚರಿಸುತ್ತಾರೆಂದು ಕೇಳಿದ್ದೆನು. ಈಗ ನನ್ನ ತಪಸ್ಸು ಸಫಲವಾಯಿತು. ಸಾಕ್ಷಾತ್ ಶ್ರೀಮನ್ನಾರಾಯಣಾಂಶ ಸಂಭೂತರಾದ ನೀವು ನಮ್ಮ ಆಶ್ರಮಕ್ಕೆ ಬಿಜಯಮಾಡಿದುದು ನಮ್ಮ ಪುಣ್ಯೋದಯವಲ್ಲವೆ? ಜಗನ್ಮಾತೆಯಾದ ಸೀತಾದೇವಿಯು ಈ ಆಶ್ರಮಕ್ಕೆ ಬಂದಮೇಲೆ ನಮಗೇನು ಕಡಿಮೆ ರಾಕ್ಷಸಭೂಯಿಷ್ಠವಾದ ಈ ಮಹಾ ಅರಣ್ಯದಲ್ಲಿ ನಿಬಿಡವಾಗಿ ಬೆಳೆದಿರುವ ಈ ಕಂಟಕ ಮಧ್ಯದಲ್ಲಿ ಸೀತೆಯೊಡನೆ ಈ ದಿನ ಇಲ್ಲೇ ಇದ್ದು ನಮ್ಮನ್ನು ಕೃತಾರ್ಥರನ್ನಾಗಿಮಾಡಿ ನಾಳೆಯದಿನ ಹೊರಡಬಹುದು ಮಹಾ ಪತಿವ್ರತೆಯಾದ ಕೈಕೆ ನಮಗೆ ಇಷ್ಟು ಉಪಕಾರಮಾಡಿದಳು ಆಹಾ! ನಿಮ್ಮ ಭಾಗ್ಯವೇನು ಈ ಕಾರಣವಿಲ್ಲದಿದ್ದರೆ ನಮ್ಮ ಆಶ್ರಮಕ್ಕೆ ನೀವೇಕೆ ಬರುತ್ತಿದ್ದಿರಿ? ದಶರಥನು ನಮ್ಮ ಮೇಲೆ ದಯಪಟ್ಟು ನಿಮ್ಮನ್ನು ದಂಡಕಾರಣ್ಯಕ್ಕೆ ಕಳುಹಿಸಿದನು. ಶೌನಕಾದಿ ಋಷಿಗಳಿಗೆ ದುರ್ಲಭ

ವಾದ ನಿಮ್ಮ ದರ್ಶನವು ನಮಗೆ ಸುಲಭವಾಗಿ ದೊರೆಯಿತು. ಬ್ರಹ್ಮಾದಿಗಳಿಂದಪೇಕ್ಷಿತವಾದ ಲಕ್ಷ್ಮೀದೇವಿಯ ಚರಣಕಮಲವನ್ನು ನಾವು ಕಂಡೆವು. ಲೋಪಾಮುದ್ರೆಯು ನನಗೆ ಪತ್ನಿ ಯಾದುದು ಸಾರ್ಥಕವಾಯಿತು. ನಾವು ಕೃತಾರ್ಥರಾದೆವು, ನಮ್ಮ ಭಾಗ್ಯವು ಫಲಿಸಿತು ಎಂದು ಹೇಳಿದನು.

## ಅಗಸ್ತ್ಯನು ರಾಮನಿಗೆ ಬ್ರಹ್ಮಾಸ್ತ್ರ ಕೊಟ್ಟುದು.

ಬಳಿಕಾ ರಾಮಚಂದ್ರನು ಬದ್ಧಾಂಜಲಿಯಾಗಿ ವಿನಯ ಸಂಪನ್ನನಾಗಿ ಲಕ್ಷ್ಮಣಸಹಿತನಾಗಿ ಕುಳಿತು ಹೀಗೆ ಹೇಳಿದನು. ಎಲೈ ಮಹಾತ್ಮನೇ! ನಿಮ್ಮ ಕೀರ್ತಿಯು ಲೋಕವಿಖ್ಯಾತವಾಗಿದೆ. ನಿಮ್ಮ ದರ್ಶನದಿಂದ ನಾವು ಕೃತಾರ್ಥರಾದೆವು, ನಮ್ಮ ವಂಶವು ಪವಿತ್ರವಾಯಿತು, ಕೈಕೆ ಉಪಕಾರಮಾಡಿದಳೆಂಬುದು ಸುಳ್ಳಲ್ಲ, ಇಲ್ಲದಿದ್ದರೆ ಅಯೋಧ್ಯಾವಾಸಿಗಳಾದ ನಮಗೆ ತಮ್ಮ ದರ್ಶನವು ಲಭಿಸುತ್ತಿತ್ತೆ. ತಮ್ಮಂಥ ಮಹಾಋಷಿಗಳಿಂದ ಕೂಡಿದ ದಂಡಕಾರಣ್ಯದಲ್ಲಿ ನಮ್ಮ ಪೂರ್ವಸುಕೃತದಿಂದ ನಾವು ಸಂಚರಿಸಬೇಕಾಯಿತು ಎಂದು ನಮಸ್ಕರಿಸಿದನು. ಆಗ ಅಗಸ್ತ್ಯ ಋಷಿಯು ಬ್ರಹ್ಮಾಸ್ತ್ರವೇ ಮೊದಲಾದ ಶಸ್ತ್ರಾಸ್ತ್ರಗಳನ್ನು ಕೊಟ್ಟು ಧನುಸ್ಸನ್ನು ಅನುಗ್ರಹಿಸಲು ರಾಮನು ಪುನರುಕ್ತ ತೇಜೋವಂತನಾಗಿ ಆತನ ಅಪ್ಪಣೆಯಂತೆ ಸೀತಾಲಕ್ಷ್ಮಣರೊಡನೆ ಆ ರಾತ್ರಿ ಅಲ್ಲಿಯೇ ಇದ್ದು ಮಾರನೆಯದಿನ ಪ್ರಾತಃಕಾಲದಲ್ಲಿ ಕಾಲ್ಯಕರ್ಮಗಳನ್ನು ತೀರಿಸಿಕೊಂಡು ಮುಂದೆ ಹೊರಟು ಋಷಿಗಳಿಗೆ ರಾಕ್ಷಸ ಭಾಧೆಯನ್ನು ನಿವಾರಣೆ ಮಾಡಬೇಕೆಂದಾಲೋಚಿಸಿ ಗೋದಾವರೀ ತೀರದಲ್ಲಿರುವ ಪಂಚವಟಿಯಲ್ಲಿ ಪರ್ಣಶಾಲೆಯನ್ನು ಮಾಡಿಕೊಂಡು ಸುಖವಾಗಿದ್ದನು.

## ಜಂಬುಕುಮಾರನ ಸಂಹಾರ.

ಹೀಗಿರುವಲ್ಲಿ ಒಂದುದಿನ ಲಕ್ಷ್ಮಣನು ಕಂದಮೂಲಗಳನ್ನು, ತರುವುದಕ್ಕಾಗಿ ಅರಣ್ಯದಲ್ಲಿ ಸಂಚರಿಸುತ್ತ ಒಂದಾನೊಂದು ಬಿದಿರು ಪೊದೆಯ ಬಳಿಗೆ ಬಂದನು. ಅಷ್ಟು ಹೊತ್ತಿಗೆ ಸರಿಯಾಗಿ ಆಕಾಶಮಾರ್ಗದಿಂದಿಳಿದು ಬರುತ್ತಿರುವ ಸೂರ್ಯನೋಪಾದಿಯಲ್ಲಿ ಒಂದು ಖಡ್ಗವು ಇಳಿದು ಬಂದಿತು, ಲಕ್ಷ್ಮಣನು ಅದನ್ನು ತೆಗೆದುಕೊಂಡು ತನ್ನೆದುರಿಗಿದ್ದ ಪೊದೆಯನ್ನು ಹೊಡೆಯಲು ಅಲ್ಲಿ ಗೋಪ್ಯವಾಗಿ ಕುಳಿತು ಲಂಕಾಧಿಪತ್ಯವನ್ನು ಸಂಪಾದಿಸಬೇಕೆಂದು ತಪಸ್ಸು ಮಾಡುತ್ತಿದ್ದ ಶೂರ್ಪಣಖಿಯ ಮಗನಾದ ಜಂಬುಕುಮಾರನ ಶಿರಸ್ಸು ಕತ್ತರಿಸಿಹೋಗಿ ಆ ಪೊದೆಯೊಡನೆ ಹೊರಗೆ ಬಿದ್ದಿತು. ಆಗ ಲಕ್ಷ್ಮಣನು ಭಯಗ್ರಸ್ತನಾಗಿ ಆಹಾ! ಎಂಥ ಅಪಚಾರವಾಯಿತು, ಅಕಸ್ಮಾತ್ತಾಗಿ ಸಿಕ್ಕಿದ ಈ ಖಡ್ಗವನ್ನು ವಿನೋದಾರ್ಥವಾಗಿ ಈ ಪೊದೆಯ ಮೇಲೆ ಪ್ರಯೋಗಿಸಲು ತಪಸ್ಸುಮಾಡುತ್ತಿದ್ದ ಋಷಿಕುಮಾರನು ಸತ್ತನಲ್ಲಾ! ಏನು ಮಾಡಲಿ! ಈ ಬ್ರಹ್ಮಹತ್ಯವನ್ನು ಕೇಳಿದರೆ ರಾಮನು ಸುಮ್ಮನಿರುವನೆ! ಇನ್ನೇನು ಗತಿ ಎಂದು ಚಿಂತಾ ಕ್ರಾಂತನಾಗಿ ಹಂಬಲಿಸುತ್ತಿರಲು, ಆಗ ಆಕಾಶಮಾರ್ಗದಲ್ಲಿ ನೆರೆದಿದ್ದ ದೇವತೆಗಳು ಭಲಾ! ಶಹಬಾಸ್, ಲಕ್ಷ್ಮಣಾ! ಹೆದರಬೇಡ, ನಿನ್ನಿಂದ ಲೋಕಕ್ಕೆ ಮಹೋಪಕಾರವಾಯಿತು. ದೇವತೆಗಳು ಸಂತೋಷಪಟ್ಟರು, ಇವನು ಋಷಿಪುತ್ರನಲ್ಲ, ಮಾಯಾವಿಯಾದ ಜಂಬು ಕುಮಾರ, ಶೂರ್ಪಣಖಿಯ ಮಗ. ದೇವಕಂಟಕನಾಗಿ ಬಾಳುವುದಕ್ಕೆ ತನಗೆ ಬೇಕಾದ ಖಡ್ಗವನ್ನು ಸಂಪಾದಿಸಲು ಹೀಗೆ ತಪಸ್ಸು ಮಾಡುತ್ತಿದ್ದನು. ನಿನ್ನಂಥ ಪುಣ್ಯಾತ್ಮನಿಂದ ಆತನು ಸತ್ತುದು ಲೋಕಕ್ಕೆ ಸುಖವಾಯಿತು ಎಂದು ಹೇಳಲು, ಲಕ್ಷ್ಮಣನು ಸಂತೋಷಭರಿತನಾಗಿ ಪರ್ಣಶಾಲೆಗೆ ಬಂದು ನಡೆದ ಸಂಗತಿಯನ್ನು ರಾಮಚಂದ್ರನಿಗೆ ಹೇಳಿ ಸುಖವಾಗಿದ್ದನು.

## ಶೂರ್ಪಣಖಿಯ ಕಾಮವಿಕಾರ.

ಬಳಿಕ ಜಂಬುಕುಮಾರನ ಜನನಿಯಾದ ಶೂರ್ಪಣಖಿಯು ತನ್ನ ಮಗನಿಗೆ ಆಹಾರವನ್ನು ತೆಗೆದುಕೊಂಡು ಬಂದು ಪೊದೆಯಲ್ಲಿ ಸತ್ತು ಬಿದ್ದಿರುವ ಮಗನನ್ನು ಕಂಡು ರೋಷಭೀಷಣಳಾಗಿ ಆರ್ಭಟಿಸುತ್ತ ಅಲ್ಲಿದ್ದ ಋಷಿಕುಮಾರರನ್ನು ಕೇಳಿ ಲಕ್ಷ್ಮಣನು ತನ್ನ ಮಗನನ್ನು ಕೊಂದನೆಂಬ ವಾರ್ತೆಯನ್ನು ತಿಳಿದು ಹೇಗಾದರೂ ಮಾಡಿ ಕ್ಷಣಮಾತ್ರದಲ್ಲಿ ಆ ರಾಮಲಕ್ಷ್ಮಣರನ್ನು ಆಹುತಿಗೊಳ್ಳುವೆನು, ಎಂದು ಗರ್ಜಿಸುತ್ತ ರಾಮನ ಪರ್ಣಶಾಲೆಯ ಬಳಿಗೆ ಬಂದು, ರಾಮಲಕ್ಷ್ಮಣರನ್ನೂ ಸೀತಾದೇವಿಯನ್ನೂ ನೋಡಿ ಭ್ರಾಂತಳಾಗಿ ಕಾಮವಿಕಾರದಿಂದವರ ರೂಪರೇಖಾದಿಗಳಿಗೆ ಮೋಹಿಸಿ ರಾಮನನ್ನು ಮದುವೆಯಾಗಬೇಕೆಂದು ನಿಶ್ಚಯಿಸಿ ಲೋಕದಲ್ಲಿ ಹೆಣ್ಣಾಗಿ ಹುಟ್ಟಿದವಳು ಇಂಥ ಸುಂದರನನ್ನು ಮದುವೆಯಾಗದಿದ್ದಮೇಲೆ ಹುಟ್ಟಿ ಫಲವೇನು? ಅಣ್ಣತಮ್ಮಂದಿರಿಬ್ಬರೂ ಸುಂದರರಾಗಿದಾರೆ. ಇವರ ಬಳಿಯಲ್ಲಿರುವ ಸೀತೆಯೂ ಮಹಾ ಸೌಂದರ್ಯವತಿ ಅವಳನ್ನು ಬಿಟ್ಟು ರಾಮನು ನನ್ನನ್ನು ವರಿಸುವ ಹಾಗಿಲ್ಲ ಏನುಮಾಡಲಿ! ನನ್ನ ಕೋರಿಕೆ ಕೈಗೂಡಬೇಕಾಗಿದ್ದರೆ ಮೊದಲು ಸೀತೆಯನ್ನು ಕೊಂದು ತಿಂದು ಬಿಟ್ಟರೆ ರಾಮನು ಕಾಮವಿಕಾರವನ್ನು ತಡೆಯಲಾರದೆ ನನ್ನನ್ನೆ ವರಿಸುವನು. ಆಗಲಿ ಸಾಮದಿಂದ ಮಾತಾಡಿಸಿ ಅವರು ನನಗೆ ವಶರಾಗದಿದ್ದರೆ ಬಳಿಕ ನನ್ನ ಸಾಮರ್ಥ್ಯವನ್ನು ತೋರಿಸುವೆನು ಎಂದು ಕಾಮಚಾರಿಯಾದ ಅಪ್ಸರಸ್ತ್ರೀಯಂತೆ ಸೌಂದರ್ಯಯುಕ್ತಳಾಗಿ ರಾಮನೆದುರಿಗೆ ನಿಂತು ತನ್ನ ಹಾವಭಾವವಿಲಾಸಗಳನ್ನು ತೋರಿಸುತ್ತ ರಾಮನನ್ನು ಕುರಿತು ಹೀಗೆ ಪ್ರಶ್ನೆಮಾಡುತ್ತಿದ್ದಳು. ಎಲೈ ಸುಂದರಾಂಗನೆ ನೀನು ಯಾರು? ನಿನ್ನೆದುರಿಗೆ ನಿಂತಿರುವ ಇವನಾರು? ನಿನ್ನ ಪಕ್ಕದಲ್ಲಿ ಕುಳಿತಿರುವ ಸ್ತ್ರೀಯಾರು ನಿನಗೇನಾಗಬೇಕು? ನೀವೆಲ್ಲರೂ ಎಲ್ಲಿಂದ ಬಂದಿರಿ? ಈ ಅರಣ್ಯದಲ್ಲಿರಲು ಕಾರಣವೇನು ಎಂದು ಕೇಳಿದಳು, ಅದಕ್ಕೆ ರಾಮನು ನಾನು ಅಯೋಧ್ಯಾಧಿಪತಿಯಾದ ದಶರಥರಾಯನ ಮಗನು, ನನ್ನ ಹೆಸರು ರಾಮನೆಂದು ಪ್ರಸಿದ್ಧವಾಗಿದೆ. ಈತನೆ ನನ್ನ ತಮ್ಮನಾದ ಲಕ್ಷ್ಮಣನು, ನನ್ನ ಬಳಿಯಲ್ಲಿ ಕುಳಿತಿರುವಳು ಜನಕರಾಜನ ಮಗಳಾದ ಸೀತಾದೇವಿ, ಇವಳು ನನಗೆ ಹೆಂಡತಿಯಾಗಬೇಕು. ನಾವೆಲ್ಲರು ಋಷ್ಯಾಶ್ರಮಗಳನ್ನು ನೋಡುವನಿಮಿತ್ತ ಇಲ್ಲಿಗೆ ಬಂದು ಈ ಪರ್ಣಶಾಲೆಯಲ್ಲಿ ವಾಸಮಾಡಿಕೊಂಡಿದೇವೆ ಎನಲು, ಶೂರ್ಪಣಖಿಯು ಬಹಳ ಸಂತೋಷವಾಯಿತು. ನಾನಾದರೋ ಲಂಕಾಧಿಪತಿಯಾದ ರಾವಣನಿಗೆ ತಂಗಿಯಾದ ಶೂರ್ಪಣಖಿ, ನಿಮ್ಮ ಸೌಂದರ್ಯಾತಿಶಯವನ್ನು ನೋಡಿ ಕಾಮಮೋಹಿತಳಾಗಿ ನಿಮ್ಮಿಬ್ಬರಲ್ಲಿ ಯಾರನ್ನಾದರೂ ಮದುವೆಯಾಗಬೇಕೆಂದು ಇಲ್ಲಿಗೆ ಬಂದಿರುವೆನು. ನೀವು ಕರುಣದಿಂದ ಅನುಗ್ರಹಿಸಿ ನನ್ನನ್ನು ಮದುವೆಯಾಗುವಿರಾ? ಎಂದು ಕೇಳಿದಳು. ಆಗ ರಾಮನು ಅಮ್ಮಾ! ಈಗ ನಾನು ವ್ರತಸ್ಥನಾಗಿ ಜಟಾವಲ್ಕಲಗಳನ್ನು ಧರಿಸಿರುವೆನು, ನನ್ನ ಧರ್ಮಪತ್ನಿಯನ್ನು ಬಿಟ್ಟು ಅನ್ಯರನ್ನು ಕಣ್ಣೆತ್ತಿಯೂ ನೋಡಲಾರೆ, ಇದೂ ಅಲ್ಲದೆ ನನಗೆ ಹೆಂಡತಿಯೂ ಇರುವಳು! ಅದೊ! ಅಲ್ಲಿರುವ ಲಕ್ಷ್ಮಣನು ಒಂಟಿಯಾಗಿರುವನು. ಅವನೊಪ್ಪಿದರೆ ಆತನನ್ನು ಮದುವೆಯಾಗು ಎಂದು ಹೇಳಲು ಶೂರ್ಪಣಖಿಯು ಲಕ್ಷ್ಮಣನ ಬಳಿಗೆ ಬಂದು ಕೈಮುಗಿದು ರಾಮನು ಹೇಳಿದ ವೃತ್ತಾಂತವನ್ನು ತಿಳಿಸಿ ನೀನು ನನ್ನನ್ನು ವರಿಸಬೇಕು ಎಂದು [illegible] ಆಗ ಲಕ್ಷ್ಮಣನು ನಾನು ಸ್ವತಂತ್ರನಲ್ಲ, ಅಣ್ಣನ ಆಶ್ರಯದಲ್ಲಿದ್ದುಕೊಂಡ [illegible] ಅವನ ಅಪ್ಪಣೆಯಿಲ್ಲದೆ ಯಾವ ಕೆಲಸವನ್ನೂ ಮಾಡಲಾರೆ ನನ್ನನ್ನು ಮದು[illegible] ಸುಖ, ಧೀರನಾಗಿಯೂ, ರಾಜನಾಗಿ[illegible]ತಂತ್ರನಾಗಿಯೂ, ಇರುವ [illegible] ಯಾಗು ನಿನಗೆ ಸುಖವಾಗುವುದೆಂದು ಹೇಳಿ ಕಳುಹಿಸಿದನು. ಅವಳು ನಿರಾಶಳಾಗಿ ರಾಮನ

ಬಳಿಗೆ ಬಂದು ಕೈಮುಗಿದು ಸ್ವಾಮಿ! ಲಕ್ಷ್ಮಣನು ನನ್ನನ್ನು ತಿರಸ್ಕರಿಸಿದನು. ನೀನೆ ನನ್ನನ್ನು ಮದುವೆಯಾಗಬೇಕು ಇಲ್ಲವಾದರೆ ನನಗೆ ದಿಕ್ಕೆ ಇಲ್ಲ. ಈ ಕಾಮಬಾಧೆಯನ್ನು ನಾನು ಸಹಿಸಲಾರೆ ನಿನ್ನ ಹೆಂಡತಿಯಾದ ಸೀತೆಯನ್ನು ಈ ಕ್ಷಣವೆ ತಿಂದು ತೇಗಿಬಿಡುವೆನು ಬಳಿಕ ನಾವಿಬ್ಬರೂ ಗಂಡಹೆಂಡಿರಾಗಿ ಸುಖವಾಗಿರೋಣ ಎಂದು ಸೀತೆಯ ಮೇಲೆ ಬೀಳಲು ಆರಂಭಿಸಿದಳು ಆಗ ರಾಮನು ಲಕ್ಷ್ಮಣನನ್ನು ಕುರಿತು ಸನ್ನೆಮಾಡಿ ಅವಳನ್ನು ಶಿಕ್ಷಿಸುವಂತೆ ಆಜ್ಞಾಪಿಸಿದನು.

## ಶೂರ್ಪಣಖಿ ನಾಸಾಭಂಗ, ಖರದೂಷಣರ ಸಂಹಾರ.

ಆಗ ಲಕ್ಷ್ಮಣನು ಖಡ್ಗದಿಂದ ಅವಳ ಮೂಗನ್ನೂ ಮೊಲೆಗಳನ್ನೂ ಕತ್ತರಿಸಿದನು ಬಳಿಕ ಅವಳು ರಕ್ತಸಿಕ್ತಾಂಗಳಾಗಿ ಜನಸ್ಥಾನವೆಂಬ ಅರಣ್ಯದಲ್ಲಿ ರಾವಣ ಪ್ರೇರಿತರಾಗಿ ಋಷಿಗಳ ಕರ್ಮವಿಘಾತ ಮಾಡುತ್ತಿದ್ದ ಖರದೂಷಣ ತ್ರಿಶಿರರೆಂಬ ರಾಕ್ಷಸರ ಬಳಿಗೆ ಓಡಿಹೋಗಿ ಗೋಳಿಟ್ಟು ಅಳುತ್ತಾ ಎಲೈ ರಾಕ್ಷಸಾಧಮರೇ ನೀವು ಇಷ್ಟು ಜನವಿದ್ದೂ ವ್ಯರ್ಥವಾಯಿತು ರಾಮಲಕ್ಷ್ಮಣರೆಂಬ ರಾಜಪುತ್ರರು ಈ ಪಂಚವಟೀತೀರದಲ್ಲಿ ವಾಸಮಾಡುತ್ತಾ ನನ್ನ ಪುತ್ರನಾದ ಜಂಬುಕುಮಾರನನ್ನು ಕೊಂದು ನನಗೆ ಈ ದುರವಸ್ಥೆಯನ್ನುಂಟುಮಾಡಿದರು. ನೀವು ಈ ಕ್ಷಣವೇ ಹೋಗಿ ಅವರನ್ನು ಸಂಹಾರಮಾಡಿ ನನಗೆ ಸಂತೋಷವನ್ನುಂಟುಮಾಡಬೇಕೆಂದು ಹೇಳಿದಳು. ಆಗ ಖರನು ಅಗ್ರಹೋದಗ್ರನಾಗಿ ತನ್ನ ಸೈನ್ಯಕ್ಕೆ ಯುದ್ಧಕ್ಕೆ ಸಿದ್ಧವಾಗಬೇಕೆಂದು ಆಜ್ಞೆಮಾಡಿ ಅನುಜ ಸಹಿತನಾಗಿ ಹೊರಟು ಹದಿನಾಲ್ಕು ಸಹಸ್ರ ಕಂಚಿನ ರಥಗಳೊಡನೆ ರಾಮಚಂದ್ರನಿದ್ದ ಕಡೆಗೆ ಬಂದು ಅಸ್ತ್ರಪ್ರಯೋಗ ಮಾಡುತ್ತಾ ನಿಂತಿರಲು, ಆಗ ರಾಮಚಂದ್ರನು ಲಕ್ಷ್ಮಣನನ್ನು ನೋಡಿ ಎಲೈ ಸಹೋದರನೇ ಯಾರೋ ರಾಕ್ಷಸರು ಯುದ್ಧೋದ್ಯುಕ್ತರಾಗಿ ಬಂದಿರುವ ಹಾಗಿದೆ ನಾನು ಯುದ್ಧಕ್ಕೆ ಹೊರಡುತ್ತೇನೆ ನೀನು ಸೀತಾದೇವಿಯನ್ನು ಕಾದುಕೊಂಡು ಇಲ್ಲಿಯೇ ಇರು ರಾಕ್ಷಸರಿಗೆ ವಿನಾಶಕಾಲವು ಪ್ರಾಪ್ತವಾಯಿತೆಂದು ಹೇಳಿ ಧನುರ್ಧಾರಿಯಾಗಿ ಹೊರಟು ಸಿಂಹನಾದಮಾಡಿ ಭುಜಾಸ್ಫಾಲನ ಮಾಡುತ್ತಾ ಬಾಣಗಳಿಂದ ರಾಕ್ಷಸರನ್ನು ಹೊಡೆಯು ತಪತ್ತ್ರ ಖರನನ್ನು ನೋಡಿ ಎಲೈ ಖರಾಸುರನೇ! ನಮ್ಮ ಮೇಲೆ ಯುದ್ಧಕ್ಕೆ ಬಂದರೆ ನೀನು ಉಳಿಯಲಾರೆ ರಾಕ್ಷಸ ಸಂಹಾರಾರ್ಥನಾಗಿ ಬದ್ಧಕಂಕಣರಾದ ನಮ್ಮೆದುರಿಗೆ ನೀವೇಕೆ ಬಂದಿರಿ ನಿಮ್ಮ ರಾವಣಾಸುರನಿಗೆ ಜಯಕಾಲವು ಮುಗಿಯಿತು ಈಗಿನ ಯುದ್ಧದಲ್ಲಿ ನಿಮ್ಮನ್ನು ಸಂಹರಿಸಿ ಋಷಿಗಳನ್ನು ಸಂತೋಷಪಡಿಸುತ್ತೇನೆಂದು ಹೇಳಿದನು. ಆಗ ಖರಾಸುರನು ಎಲೈ ರಾಮಚಂದ್ರನೇ! ನಮ್ಮ ಮುಂದೆ ನಿನ್ನ ಪರಾಕ್ರಮವೇನೂ ಸಾಗದು ವೃಥಾ ಕದನಗಳಿಂದೇನು ಪ್ರಯೋಜನ ನೀವು ಮನುಷ್ಯರು ನಿಮ್ಮನ್ನು ಭಕ್ಷಿಸುವ ರಾಕ್ಷಸರು ನಾವು ಆಗಲಿ ಯುದ್ಧದಲ್ಲಿ ಮುಹೂರ್ತಕಾಲ ನಿಂತು ನೋಡು ಎಂದು ಹೇಳಿ ಬಾಣಗಳನ್ನು ಬಿಡುತ್ತಾ ಬರಲು ರಾಮಚಂದ್ರನು ವಜ್ರತುಲ್ಯವಾದ ತನ್ನ ಬಾಣಗಳಿಂದ ಸೈನ್ಯವನ್ನು ನಾಶಗೊಳಿಸಿ ದೂಷಣ ತ್ರಿಶಿರರನ್ನು ಸಂಹರಿಸಿ ಕಡೆಗೆ ಖರಾಸುರನನ್ನೂ ಸಂಹರಿಸಿದನು. ಬಳಿಕ ಹತಶೇಷರಾದ ರಾಕ್ಷಸರು ಓಡಿಹೋಗಿ ಲಂಕಾಪಟ್ಟಣವನ್ನು ಸೇರಿದರು. ರಾಮಚಂದ್ರನು ಪರ್ಣಶಾಲೆಗೆ ಬಂದು ಸೀತಾದೇವಿಯನ್ನಾದರಿಸುತ್ತ, ಲಕ್ಷ್ಮಣನಿಂದ ಶ್ಲಾಘಿಸಲ್ಪಡುತ್ತಾ ಋಷಿಗಳಿಂದ ಆಶೀರ್ವಾದಪಡೆದು ದೇವತೆಗಳಿಂದ ಜಯಶಬ್ದಪುರಸ್ಸರನಾಗಿ ಸ್ತುತಿಸಲ್ಪಟ್ಟು ಸುಖವಾಗಿದ್ದನು.

## ರಾವಣನಿಗೆ ಶೂರ್ಪಣಖಿಯು ದುರ್ಬೋಧನೆ ಮಾಡಿದದು.

ಅತ್ತಲಾ ಶೂರ್ಪಣಖಿಯು ಖರಾದಿಗಳ ಸಂಹಾರದಿಂದ ದುಃಖಿತಳಾಗಿ ಲಂಕಾಪುರಿಯನ್ನು ಸೇರಿ ಒಡ್ಡೋಲಗದಲ್ಲಿ ಕುಳಿತಿರುವ ರಾವಣನನ್ನು ನೋಡಿ ಪಾದಗಳಿಗೆರಗಿ ಓ ರಾಕ್ಷಸ

ಪಟ್ಟಭದ್ರನೇ! ನೀನು ಬದುಕಿದ್ದರೂ ನನಗೆ ಇಂಥಾ ದುರವಸ್ಥೆ ಪ್ರಾಪ್ತವಾಯಿತಲ್ಲ ಮೂಗೂ ಸ್ತನಗಳೂ ಸಹಾ ಲಕ್ಷ್ಮಣನಿಂದ ಕತ್ತರಿಸಲ್ಪಟ್ಟವು. ಜನಸ್ಥಾನವಾಸಿಗಳಾದ ಖರಾದಿ ರಾಕ್ಷಸರು ಮುಹೂರ್ತದೊಳಗಾಗಿ ರಾಮನಿಂದ ಸಂಹರಿಸಲ್ಪಟ್ಟರು. ರಾಮಚಂದ್ರನಿಗೆ ಪತ್ನಿಯಾದ ತ್ರಿಲೋಕಸುಂದರಿಯಾದ ಸೀತಾದೇವಿಯನ್ನು ನೀನು ನೋಡಿದರೆ ನಿನ್ನ ಜನ್ಮವು ಸಫಲವಾಗುವುದು. ಸುರ, ಗರುಡ, ವಿದ್ಯಾಧರ, ಕಿನ್ನರ, ಕಿಂಪುರುಷಸ್ತ್ರೀಯರಲ್ಲಿ ಅಷ್ಟು ಸೌಂದರ್ಯವು ಯಾರಿಗೂ ಇಲ್ಲ. ಆಕೆಯನ್ನು ಅಪಹರಿಸದೆ ಹೋದರೆ ನಿನ್ನ ಪರಾಕ್ರಮವು ನಿಷ್ಫಲವಲ್ಲವೆ? ನನ್ನ ಮೂಗನ್ನು ನೋಡು ಎಂದು ಹೇಳಿ ಕಾಲುಗಳ ಮೇಲೆ ಬಿದ್ದು ಅಳುತ್ತಿರಲು ಆಗ ರಾವಣಾಸುರನು ಅವಳನ್ನು ಶಾಂತವಚನಗಳಿಂದ ಸಮಾಧಾನಮಾಡಿ ಮನೆಗೆ ಕಳುಹಿಸಿ ತನ್ನ ಅಂತಃಪುರದ ಸ್ತ್ರೀಸಹಸ್ರದೊಡಗೂಡಿ ಸುಖದಿಂದಿರುತ್ತ ಒಂದಾನೊಂದು ದಿನ ಸೀತೆಯನ್ನು ಬಯಸಿ ಮೋಹಗೊಂಡವನಾಗಿ ಹೇಗಾದರೂ ಅವಳನ್ನು ಕದ್ದು ತರಬೇಕೆಂದು ಯೋಚಿಸಿ ಹೊರಟು ಮಾರೀಚನ ಆಶ್ರಮಕ್ಕೆ ಬಂದನು.

## ರಾವಣ ಮಾರೀಚರ ಮಂತ್ರಾಲೋಚನೆ.

ಬಳಿಕಾ ಮಾರೀಚನು ತನ್ನ ಆಶ್ರಮಕ್ಕೆ ಬಂದ ರಾವಣಾಸುರನನ್ನು ಕಂಡು ಸಂಭ್ರಮದೊಡನೆ ಪ್ರತ್ಯುತ್ಥಾನಮಾಡಿ ಪಾದಗಳಿಗೆರಗಿ ಭದ್ರಾಸನದಲ್ಲಿ ಕುಳ್ಳಿರಿಸಿ ಓ ಮಹಾರಾಜನೇ! ತಮ್ಮ ಆಗಮನದಿಂದ ನಾನು ಕೃತಾರ್ಥನಾದೆನು ಬಡವನಾದ ನನ್ನ ಹತ್ತಿರಕ್ಕೆ ನೀನೆ ಬರಲು ಕಾರಣವೇನು? ನನ್ನಿಂದ ಆಗಬೇಕಾದ ಕೆಲಸವೇನಿದೆ, ತಿಳಿಸಿದರೆ ಕೈಲಾದಮಟ್ಟಿಗೆ ನಡೆಸುತ್ತೇನೆಂದು ಹೇಳಿದನು. ರಾವಣಾಸುರನು ಎಲೈ ಮಿತ್ರನೇ! (ಕಾರ್ಯಾರ್ಥಿನಃ ಕುತೋಗರ್ವಃ) ಎಂಬಂತೆ ಕೆಲಸವಿದ್ದ ಕಡೆಗೆ ಬಂದರೆ ಕೊರತೆಯೇನು? ಈಗ ನಿನ್ನಿಂದ ಆಗಬೇಕಾದ ಸಹಾಯವೊಂದಿದೆ ಆ ಕೆಲಸವನ್ನು ನೀನು ಮಾಡಿಯೇತೀರಬೇಕೆಂದು ಹೇಳಲು ಮಾರೀಚನು ಅದಕ್ಕೆ ಅಭ್ಯಂತರವುಂಟೆ ಸಿದ್ಧನಾಗಿದೇನೆ ಆಗಲಿ ಎಂದು ಹೇಳಿದನು, ರಾವಣಾಸುರನು ಅಯ್ಯಾ ಮಾರೀಚನೇ ಗೋದಾವರೀತೀರದಲ್ಲಿ ರಾಮಲಕ್ಷ್ಮಣರೆಂಬ ಇಬ್ಬರು ರಾಜಪುತ್ರರು ಸೀತೆಯೆಂಬ ಒಂದು ವನಿತಾರತ್ನವು ಸಹಾ ವಾಸವಾಗಿರುತ್ತಾರೆ ನನ್ನ ತಂಗಿಯಾದ ಶೂರ್ಪಣಖಿಯು ಮೋಹಿತಳಾಗಿ ಅವರ ಬಳಿಗೆ ಹೋಗಲು ಅವರು ಕೋಪಗೊಂಡು ಆಕೆಯ ಮೂಗು, ಮೊಲೆಗಳನ್ನು ಕೊಯಿದರು. ಬಳಿಕ ಜನಸ್ಥಾನ ನಿವಾಸಿಗಳಾದ ಖರಾದಿ ರಾಕ್ಷಸವೀರರು ಯುದ್ಧ ಮಾಡಲು, ಅವರನ್ನೂ ಸಂಹರಿಸಿದರು. ಅವರ ಬಳಿ ಇರುವ ಸೀತಾದೇವಿಯು ಲೋಕೋತ್ತರ ಸೌಂದರ್ಯವತಿಯಂತೆ ಆದಕಾರಣ ನಾನು ಅಪಹರಿಸಬೇಕೆಂದು ನಿಶ್ಚಯಿಸಿದೇನೆ ಇದಕ್ಕೆ ನೀನು ಸಹಾಯಮಾಡಬೇಕು ಎಂದು ಕೇಳಲು ಮಾರೀಚನು ಕಳವಳಗೊಂಡು ನಿಟ್ಟುಸಿರುಬಿಟ್ಟು ನೀನು ಹೇಳಿದುದನ್ನು ಮಾಡುವದಕ್ಕೆ ಸಂಶಯವಿಲ್ಲ. ಆದರೆ ಇಂಥಾ ದುಷ್ಕಾರ್ಯಕ್ಕೆ ನೀನು ಪ್ರವೇಶಿಸಬಹುದೆ ಆ ರಾಮಚಂದ್ರನ ಬಳಿಗೆ ಹೋಗಿ ಮೊದಲೆ ಗುರುತಾಗಿ ಅವನ ಒಂದೇ ಬಾಣದಿಂದ ಇಲ್ಲಿಗೆ ಬಂದು ಬಿದ್ದೆನು. ನೀನಾದರೂ ಆತನ ಮುಂದೆ ನಿಂತು ಬದುಕಲಾರೆ ದುರ್ಮಂತ್ರಿಗಳ ಬೋಧನೆಯಿಂದ ಕೆಡುವುದಕ್ಕೆ ದಾರಿಯಾಯಿತು. ಆಹಾ ಎಂಥ ಕಾಲಗತಿ ಇಂಥ ದುಷ್ಕೃತ್ಯಕ್ಕೆ ನೀನು ಎಂದಿಗೂ ಪ್ರವೇಶಿಸಬೇಡ ನಾನು ಈ ಕಾರ್ಯವನ್ನು ಬಿಟ್ಟು ಯಾವ ಕೆಲಸಕ್ಕಾದರೂ ಸಿದ್ಧನಾಗಿದೇನೆ ರಾಮಚಂದ್ರನಿಗೆ ವಿರೋಧವಾಗಿ ನಡೆಯಲು ನನ್ನಿಂದಾಗದು ಎಂದು ಪಾದಗಳ ಮೇಲೆ ಬೀಳಲು ರಾವಣಾಸುರನು ಕೋಪೋದ್ದೀಪಿತನಾಗಿ ಎಲೈ ದುರಾತ್ಮನೆ! ಈ ನೀಚ ಮಾತುಗಳನ್ನು ನೀನು ಎಂದಿಗೂ ಆಡಬೇಡಾ ರಾಮಚಂದ್ರನೆಂದರೇನು ನನಗೆ ಲಕ್ಷ್ಯವೇ

ಲೋಕಸುಂದರಿಯಾದ ಸ್ತ್ರೀಯನ್ನಪಹರಿಸದೇ ಹೋದರೇ ನಾನು ಬದುಕಿ ಫಲವೇನು ಮನುಷ್ಯರಿಗೆ ಅಂಜಬೇಕೆ ನೀನು ಮಾಯಾಮೃಗದ ವೇಷದಿಂದ ಅಲ್ಲಿಗೆ ಹೋದರೆ ಆ ಸೀತೆಯು ಆದರ ಮೇಲೆ ಆಸೆಪಟ್ಟು ರಾಮಚಂದ್ರನನ್ನು ಕಳುಹಿಸುತ್ತಾಳೆ ನೀನು ಅವನನ್ನು ಮೋಸದಿಂದ ದೂರವಾಗಿ ಕರೆದುಕೊಂಡು ಹೋದರೇ ಅಗ ನಾನು ಸೀತೆಯನ್ನು ಎತ್ತಿಕೊಂಡು ಬರುವೆನು, ಇದಕ್ಕೆ ನೀನು ಒಪ್ಪದಿದ್ದರೆ ! ಈಗಲೆ ನಿನ್ನನ್ನು ಸಂಹರಿಸುವೆನೆಂದು ಹೇಳಿದನು. ಬಳಿಕ ಮಾರೀಚನು ದುಃಖಿತನಾಗಿ ಆಹಾ ದೈವಗತಿ ತಪ್ಪದು ಈ ದುರಾತ್ಮನಿಂದ ಸಾಯುವದಕ್ಕಿಂತ ಆ ರಾಮನ ಬಾಣದಿಂದ ಸಾಯುವುದೆ ಉತ್ತಮ ಇವನು ನಾಶವಾಗುವದರಲ್ಲಿ ಸಂಶಯವಿಲ್ಲವೆಂದು ಯೋಚಿಸಿ ತೇಜೋಹೀನನಾಗಿ ಆಗಲಿ ತಮ್ಮ ಆಜ್ಞೆಗೆ ವಿರೋಧವಾಗಿ ನಡೆಯಲು ನನಗೆ ಶಕ್ತಿಯುಂಟೆ ಮಾಯಾಮೃಗವಾಗಿ ಹೋಗುತ್ತೇನೆಂದು ನುಡಿದು ವಿಚಿತ್ರವಾದ ಮೃಗರೂಪವನ್ನು ಧರಿಸಿ ಪಂಚವಟೀತೀರವನ್ನು ಸೇರಿದನು. ಅಗ ರಾವಣಾಸುರನು ಕೃತಕೃತ್ಯನಾಗಿ ಲಂಕಾಪುರಿಗೆ ಬಂದು ರಥಾರೂಢನಾಗಿ ಪ್ರಚ್ಛನ್ನವೇಷದಿಂದ ಹೊರಟು ರಾಮಚಂದ್ರನ ಪರ್ಣಶಾಲೆಯ ಹತ್ತಿರ ಕಾದುಕೊಂಡಿದ್ದು ಸಮಯವನ್ನು ನಿರೀಕ್ಷಿಸುತ್ತಿದ್ದನು.

## ಮಾಯಾಮೃಗವು ಶ್ರೀರಾಮನನ್ನು ವಂಚಿಸಿದುದು.

ಮಾಯಾಮೃಗರೂಪಿಯಾದ ಮಾರೀಚನು ಸೀತಾದೇವಿಯ ಸಮೀಪದಲ್ಲಿ ಸಂಚರಿಸುತ್ತಾ ದರ್ಭಾಂಕುರಗಳಂ ಭುಂಜಿಸುತ್ತಾ ಹಿಂದಕ್ಕೆ ತಿರುಗಿತಿರಿಗಿ ನೋಡುತ್ತಾ ಚಂಚಲವಾದ ದೃಷ್ಟಿಯಿಂದ ಚಂಗನೆ ಹಾರುತ್ತಿರಲು ಸೀತಾದೇವಿಯು ಅದನ್ನು ನೋಡಿ ಭ್ರಾಂತಳಾಗಿ ಓ ಪ್ರಾಣನಾಥ ! ಇಂಥ ಮೃಗವನ್ನು ನಾನು ಎಲ್ಲಿಯೂ ನೋಡಿಲ್ಲ ಇದು ಎಷ್ಟು ಲಕ್ಷಣವಾಗಿದೆ ಬಂಗಾರದ ಬಾಲ, ಮರಕತದ ಕಿವಿಗಳು, ವಜ್ರದಗೊರಸುಗಳು, ಬಗೆಬಗೆಯ ಬಣ್ಣದ ಶರೀರವುಳ್ಳ ಮೃಗವು ಬಹು ಸುಂದರವಾಗಿದೆ ಇದನ್ನು ಹೇಗಾದರೂ ಮಾಡಿ ನನಗೆ ತಂದುಕೊಡು ಎಂದು ಕೇಳಿದಳು. ರಾಮಚಂದ್ರನು ಹಾಗಾದರೆ ನಿನಗೋಸ್ಕರ ಅದನ್ನು ತರುವೆನೆಂದು ಧನುರ್ಧಾರಿಯಾಗಿ ಹೊರಟನು. ಬಳಿಕಾ ಮಾಯಾಮೃಗವು ಕೈಗೆ ಸಿಕ್ಕಿದಹಾಗೆ ಸಮೀಪಕ್ಕೆ ಬರುತ್ತಾ ಹಿಡಿಯುವುದಕ್ಕೆ ಹೋದರೆ ದೂರವಾಗಿ ಓಡುತ್ತಾ ರಾಮಚಂದ್ರನನ್ನು ಆಕರ್ಷಿಸಿಕೊಂಡು ಬಹುದೂರ ಹೊರಟುಹೋಯಿತು. ಆಗ ರಾಮಚಂದ್ರನಿಗೆ ಕೋಪಬಂದು ಬಾಣವನ್ನು ಪ್ರಯೋಗಿಸಲು ಆ ಬಾಣದ ಪೆಟ್ಟಿನಿಂದ ಅದು ಸಾಯುವಾಗ ಸುಮ್ಮನಿರದೆ ಹಾ ! ಲಕ್ಷ್ಮಣಾ ಹಾ ! ಸೀತಾ ಎಂದು ಕೂಗಿತು ಈ ಶಬ್ದವನ್ನು ಕೇಳಿ ಸೀತೆ ರಾಮಚಂದ್ರನಿಗೆ ಏನೋ ಅಪಾಯವುಂಟಾಗಿರಬೇಕು, ನೀನು ಶೀಘ್ರವಾಗಿ ಹೋಗಿ ನೋಡು ಎನಲು ಲಕ್ಷ್ಮಣನು ರಾಮಚಂದ್ರನಿಗೆ ಅಪಾಯವೆಂದರೇನು ಇವೆಲ್ಲಾ ರಾಕ್ಷಸರ ಮಾಯ ಅರಣ್ಯದಲ್ಲಿ ನಿನ್ನನ್ನು ಒಂಟಿಯಾಗಿ ಬಿಟ್ಟು ಹೋದರೆ ರಾಮಚಂದ್ರನಿಗೆ ನಾನೇನು ಹೇಳಬೇಕು ಈಗಲೆ ರಾಮನು ಬರುತ್ತಾನೆ ಸುಮ್ಮನಿರು ಎಂದು ಹೇಳಿದನು, ಆಗ ಸೀತಾದೇವಿಯು ದುಃಖಿತಳಾಗಿ ಅಯ್ಯಾ ಲಕ್ಷ್ಮಣ ಈಗ ಆದ ಶಬ್ದವು ಶ್ರಿರಾಮನದೆ ಹೊರತು ಅನ್ಯರದಲ್ಲ. ಆದಕಾರಣ ತಡೆಮಾಡದೆ ನೀನು ಹೋಗಿ ನೋಡಿಕೊಂಡು ಬಾ ! ಹಾಗಿಲ್ಲವಾದರೆ ನಾನು ಈಗಲೆ ಪ್ರಾಣವನ್ನು ಬಿಡುತ್ತೇನೆ ಎಂದಳು. ಬಳಿಕ ಲಕ್ಷ್ಮಣನು ವಿಧಿಯಿಲ್ಲದೆ ಕೋಪದಿಂದ ಕುದಿಯುತ್ತ ಅರಣ್ಯಕ್ಕೆ ಹೊರಟುಹೋದನು.

## ರಾವಣನು ಸನ್ಯಾಸಿಯಾಗಿ ಸೀತೆಯನ್ನು ಅಪಹರಿಸಿದುದು.

ಇತ್ತಲಾ ದಶಕಂಧರನು ಪರ್ಣಶಾಲೆಯಲ್ಲಿ ಏಕಾಂಗಿಯಾಗಿ, ರಾಮಾಗಮನ ಕುತೂಹಲಳಾಗಿರುವ ಲೋಕಮಾತೆಯಾದ ಸೀತಾದೇವಿಯನ್ನು ಅಪಹರಿಸಬೇಕೆಂಬ ದುರ್ಬುದ್ಧಿಯಿಂದ



ಯತಿವೇಷವನ್ನು ಧರಿಸಿ ಕೈಲಿ ದಂಡಕಮಂಡಲಗಳನ್ನು ಹಿಡಿದು ಕಾವಿಬಟ್ಟೆಯನ್ನುಟ್ಟು ಮೈಗೆ ಭಸ್ಮವನ್ನು ಲೇಪಿಸಿಕೊಂಡು ಬಾಯಿಯಲ್ಲಿ ಭಗವನ್ನಾಮವನ್ನು ಜಪಿಸುತ್ತ ಕೇವಲ ಬ್ರಹ್ಮರ್ಷಿಯಂತೆ ಕಾಣಿಸುತ್ತಾ ಸೀತಾದೇವಿಯ ಸನ್ನಿಧಿಗೆ ಬಂದು ಎಲೈ ನಾರೀಮಣಿಯೆ ನೀನು ಯಾರು ನಿನ್ನ ಗಂಡನು ಎಲ್ಲಿಗೆ ಹೋಗಿದ್ದಾನೆ. ನಾನು ಯತಿವೇಷಧಾರಿಯಾದ ರಾವಣಾಸುರನೆಂಬ ರಾಕ್ಷಸನು ನಿನ್ನ ಸೌಂದರ್ಯವನ್ನು ಕೇಳಿ ಮೋಹಿತನಾಗಿ ಬಂದಿರುವೆನು ನೀನು ಅರಣ್ಯವಾಸಕ್ಕೆ ತಕ್ಕವಳಲ್ಲ ನನ್ನ ಅಂತಃಪುರದಲ್ಲಿರಬೇಕಾದವಳು, ಈಗಬಂದ ಮಾಯಾಮೃಗವು ನನ್ನಿಂದ ಪ್ರೇರಿತವಾದದ್ದೇ ನಿನ್ನನ್ನು ನಾನು ಹೇಗಾದರೂ ಬಿಡುವದಿಲ್ಲವೆಂದು ಹೇಳಲು ಸೀತಾದೇವಿಯು ಭಯಾಕ್ರಾಂತಳಾಗಿ ಗಡಗಡನೆ ನಡುಗುತ್ತಾ ಆಹಾ ! ಲಕ್ಷ್ಮಣನ ಮಾತನ್ನು ಕೇಳದೆಹೋದೆನಲ್ಲಾ ಎಂಬದಾಗಿ ಆಲೋಚಿಸುತ್ತಾ ತೂಷ್ಣೀಂಭಾವದಿಂದಿರಲು ರಾವಣಾಸುರನು ರಾಮಚಂದ್ರನು ಎಲ್ಲಿ ಬರುವನೋ ಎಂಬ ಭೀತಿಯಿಂದ ತನ್ನ ನಿಜರೂಪವನ್ನು ತಾಳಿ ಬಲಾತ್ಕಾರದಿಂದ ಸೀತಾದೇವಿಯನ್ನು ಎತ್ತಿಕೊಂಡು ಗಗನದಲ್ಲಿದ್ದ ರಥದಲ್ಲಿ ಕುಳ್ಳಿರಿಸಿಕೊಂಡು ಓಡಿಹೋಗುತ್ತಿದ್ದನು. ಆಗ ಸೀತಾದೇವಿಯು ಸಿಂಹದ ಕೈಗೆ ಸಿಕ್ಕಿದ ಆನೆಯಹಾಗೆ ಕೂಗುತ್ತಾ ಹಾ ರಾಮಾ ! ಹಾ ಲಕ್ಷ್ಮಣಾ ! ಹಾ ಭರತ ! ಹಾ ಶತ್ರುಘ್ನ ! ಹಾ ಜನಕ ! ಎಂದು ಪ್ರಲಾಪಿಸಿ ರಾಮಧ್ಯಾನಮಾಡುತ್ತಾ ಹೋಗುತ್ತಿರಲು ಮಾರ್ಗಮಧ್ಯದಲ್ಲಿ ಜಟಾಯುವೆಂಬ ಗೃಧ್ರರಾಜನು ಓಹೋ ಮೋಸವಾಯಿತು ರಾವಣಾಸುರನು ಸೀತೆಯನ್ನು ಕದ್ದುಕೊಂಡು ಹೋಗುತ್ತಿದ್ದಾನೆ ರಾಮನು ಪರ್ಣಶಾಲೆಯಲ್ಲಿಲ್ಲದೆ ಹೊರಗೆ ಹೋಗಿರಬೇಕು ನಾನು ಶಕ್ತ್ಯಾನುಸಾರವಾಗಿ ತಡೆದು ನೋಡುವೆನೆಂದಾಲೋಚಿಸಿ ಮೇಲಕ್ಕೆ ಹಾರಿ ರಥಕ್ಕೆ ಎದುರಾಗಿ ಬಂದು ಎಲೈ—ದುರಾತ್ಮನೇ ರಾಮದೇವರು ಇಲ್ಲದಿರುವ ಕಾಲದಲ್ಲಿ ಸೀತಾದೇವಿಯನ್ನು ಕದ್ದುಕೊಂಡು ಹೋಗುತ್ತೀಯಾ ? ಈಗ ನಿನ್ನನ್ನು ಸಂಹಾರಮಾಡುವೆನೆಂದು ಗರ್ಜಿಸಿ ರೆಕ್ಕೆಗಳಿಂದಲೂ, ಕೊಕ್ಕಿನಿಂದಲೂ, ಕಾಲುಗಳಿಂದಲೂ ಕುದುರೆಗಳನ್ನು ರಥವನ್ನು ಪತಾಕೆಯನ್ನು ಹೊಡೆದು ರಾವಣನನ್ನು ಎದುರಿಸಿ ದಾರಿಗೆ ಅಡ್ಡವಾಗಲು ಆಗ ರಾವಣನು ಕೋಪೋದ್ದೀಪಿತನಾಗಿ ಖಡ್ಗದಿಂದ ಪಕ್ಷಗಳನ್ನು ಭೇದಿಸಲು ಶಕ್ತಿಗುಂದಿ ಕೆಳಗೆ ಬಿದ್ದನು. ಆಗ ರಾವಣನು ಮುಂದೆ ಹೊರಟು ರಾಮಚಂದ್ರನ ಭೀತಿಯಿಂದ ಹಿಂದಕ್ಕೆ ನೋಡುತ್ತಾ, ಸೀತಾದೇವಿಯನ್ನು ಅಶ್ವಾಸಿಸುತ್ತಾಯಿರಲು ಋಷ್ಯಮೂಕಾದ್ರಿಯಲ್ಲಿ ವಾಸವಾಗಿರುವ ಸುಗ್ರೀವಾದಿಗಳನ್ನು ನೋಡಿ ಇವನಾದರೂ ಈ ವೃತ್ತಾಂತವನ್ನು ರಾಮಚಂದ್ರನಿಗೆ ತಿಳಿಸಲೆಂದಾಲೋಚಿಸಿ ಉತ್ತರೀಯವಸ್ತ್ರದಲ್ಲಿ ತನ್ನ ಆಭರಣಗಳನ್ನು ಕಟ್ಟಿ ಅವರೆದುರಿಗೆ ಹಾಕಿದಳು. ಆ ವಾನರರು ಅವನ್ನು ನೋಡಿ ವಿಸ್ಮಿತರಾಗಿ ಎತ್ತಿಕೊಂಡು ಭದ್ರವಾಗಿಟ್ಟರು ಬಳಿಕಾರಾವಣನು ಸೀತಾದೇವಿಯಿಂದೊಡಗೂಡಿ ಲಂಕಾಪಟ್ಟಣವನ್ನು ಸೇರಿ ತನ್ನ ಅಶೋಕವನದಲ್ಲಿ ಶಿಂಶುಪಾವೃಕ್ಷದ ಕೆಳಗೆ ಇರಿಸಿ ಕೆಲವು ರಾಕ್ಷಸ ಸ್ತ್ರೀಯರನ್ನು ಕಾವಲಿಟ್ಟನು, ಇತ್ತ ರಾಮಚಂದ್ರನು ಆ ಮಾಯಾಮೃಗವನ್ನು ಸಂಹರಿಸಿ ಹಿಂತಿರುಗಿ ಬರುತ್ತಿರುವ ತಮ್ಮನಾದ ಲಕ್ಷ್ಮಣನನ್ನು ನೋಡಿ, ಆಹಾ ! ಏನು ವಿಚಿತ್ರ

ಲಕ್ಷ್ಮಣನೂ ಬರುತ್ತಿದಾನೆ ಸೀತಾದೇವಿಯು ಎಲ್ಲಿ ಹೋದಳೋ ಈ ಮೃಗವು ರಾಕ್ಷಸರಿಂದ ಪ್ರೇರಿತವಾದ ಮಾಯಾಮೃಗವಲ್ಲದೆ ಬೇರೆಯಿಲ್ಲವೆಂದು ಯೋಚಿಸಿ ಲಕ್ಷ್ಮಣನನ್ನು ನೋಡಿ, ಎಲೈ ಲಕ್ಷ್ಮಣ ! ಏನು ಕಾರಣ ನೀನು ಸೀತೆಯನ್ನು ಒಂಟಿಯಾಗಿ ಬಿಟ್ಟುಬಂದೆ ಹೀಗೆ ಬರಬಹುದೇ ? ರಾಕ್ಷಸರ ಮಾಯದಿಂದ ನಾನು ಮೋಹಿತನಾಗಿ ಮೃಗದಿಂದ ವಂಚಿಸಲ್ಪಟ್ಟೆನೆಂದು ಹೇಳಲು ಲಕ್ಷ್ಮಣನು ರಾಮನಿಗೆರಗಿ ನಾನೆಷ್ಟುಹೇಳಿದರೂ ಕೇಳದೆ ಸೀತೆಯು ಕ್ರೂರವಾದಮಾತುಗಳನ್ನಾಡಿ ನನ್ನನ್ನು ಕಳುಹಿಸಿದಕಾರಣ ನಾನು ಬಂದೆನೆಂದು ಹೇಳಿ ರಾಮನನ್ನು ಕರೆದುಕೊಂಡು ಪರ್ಣಶಾಲೆಗೆ ಬಂದನು. ರಾಮಚಂದ್ರನು ಸೀತಾ ಶೂನ್ಯವಾದ ಪರ್ಣಶಾಲೆಯನ್ನು ನೋಡಿ ದುಃಖಿಸುತ್ತಾ, ಸುತ್ತಲೂ ಇರುವ ವೃಕ್ಷಗಳನ್ನು ಶೋಧಿಸುತ್ತಾ, ಏನೂ ತೋರದೇ ದಿಗ್ಭ್ರಾಂತನಾಗಿ ಉನ್ಮತ್ತನೋಪಾದಿಯಲ್ಲಿ ಅರಣ್ಯದಲ್ಲಿ ಚರಿಸುತ್ತಾ ಮಾರ್ಗದಲ್ಲಿ ಹತಪಕ್ಷನಾಗಿ ಬಿದ್ದಿರುವ ಜಟಾಯು ಎಂಬ ಗೃಧ್ರರಾಜನನ್ನು ಕಂಡು ಆತನಿಂದ ಸೀತಾವೃತ್ತಾಂತವನ್ನು ತಿಳಿದು ಪರಮಾನುಗ್ರಹದಿಂದ ಆತನಿಗೆ ಮೋಕ್ಷವನ್ನಿತ್ತು ಮುಂದೆ ಹೋಗುತ್ತಾ, ದಾರಿಯಲ್ಲಿ ಬಾಯಿ ತೆರೆದುಕೊಂಡಿದ್ದ ಕಬಂಧನೆಂಬ ರಾಕ್ಷಸನ ಯೋಜನ ವಿಶಾಲವಾದ ಬಾಹುಗಳನ್ನು ಛೇದಿಸಿ ಮುಂದೆ ಹೋಗುತ್ತಾ, ಶಬರೀ ಎಂಬ ಭಕ್ತಳಿಂದ ಪೂಜಿತನಾಗಿ ಆಕೆಯಿಂದ ತಿಳಿಸಟ್ಟ ಸುಗ್ರೀವನ ವೃತ್ತಾಂತವನ್ನು ಕೇಳಿ ಪಂಪಾಸರೋವರದ ತೀರದಲ್ಲಿ ವಾಸಮಾಡಿಕೊಂಡು ಋಷ್ಯಮೂಕಾದ್ರಿಯಲ್ಲಿ ಮೃಗಯಾವಿಹಾರ ಮಾಡುತ್ತಾ, ಸದಾ ಸೀತಾ ! ಸೀತಾ ! ಎಂದು ಪ್ರಲಾಪಿಸುತ್ತಾ ಲಕ್ಷ್ಮಣನಿಂದ ಆಶ್ವಾಸಿತನಾಗಿ ಕೊರಗಿ ಕಾಲಕಳೆಯುತ್ತಿದ್ದನೆಂದು ಮಾರ್ಕಂಡೇಯ ಮುನೀಶ್ವರನು ಧರ್ಮರಾಯನಿಗೆ ಹೇಳಿದನು.

ಇಂತು ಶ್ರೀರಾಮಾಯಣ ಕಥಾಸಂಗ್ರಹದಲ್ಲಿ ಅರಣ್ಯಕಾಂಡದ ಕಥೆ ಸಂಪೂರ್ಣಂ.

ಶ್ರೀ ರ ಸ್ತು.

ಶ್ರೀ ರಾಮಚಂದ್ರಾಯ ನಮಃ.

## ರಾಮಾಯಣ ಕಥಾಸಂಗ್ರಹ.

ವ ಚ ನ ದ ಲ್ಲಿ

## ಕಿ ಷ್ಕಿಂ ಧಾ ಕಾಂ ಡ.

ಅಷ್ಟರಲ್ಲೇ ಮಾನುಷವೇಷವನ್ನು ಧರಿಸಿ ಶ್ರೀರಾಮಭದ್ರನ ಲೋಕವಿಡಂಬನಲೀಲೆಯನ್ನು ಜಗತೀತಳದಲ್ಲಿ ವಿಸ್ತರಿಸುವುದಕ್ಕೋಸ್ಕರವೋ ಎಂಬಂತೆ ವಸಂತ ಮಹಾರಾಜನು ತಲೋರಿದನು ಸಕಲ ತರುಲತಾದಿಗಳು ಫಲಪುಷ್ಪಾದಿಗಳಿಂದ ನಿಬಿಡವಾದುವು ಕೋಗಿಲೆಯ ಸ್ವರಗಳು ಕರ್ಣಾನಂದವನ್ನು ಉಂಟುಮಾಡುತ್ತಿದ್ದುವು, ಚೂತ ವೃಕ್ಷದಲ್ಲಿದ್ದ ಶುಕಗಳ ಚುಂಚುಗಳನ್ನು ಕಂಡು ಭ್ರಮರಗಳು ಪಲಾಶಕುಸುಮವೆಂದು ಆಸ್ವಾದಿಸಲಿಕ್ಕೆ ಯತ್ನಿಸುತ್ತಿದ್ದವು, ಶುಕಗಳಾದರೂ ಭ್ರಮರಗಳನ್ನು ಜಂಬೂಫಲವೆಂದು ತಿಳಿದು ಭಕ್ಷಿಸಲಿಕ್ಕೆ ಉದ್ಯುಕ್ತವಾದವು, ಮಂದಾನಿಲನು ಮಂದ ಮಂದವಾಗಿ ಬೀಸಲಸುವಾದನು, ವಿರಹತಾಪವನ್ನು ಹುಟ್ಟಿಸುವ ಇಂಥವಸಂತಕಾಲವು ಒದಗಿದುದನ್ನು ಕಂಡು ಶ್ರೀರಾಮನು ಶೋಕವಿಡಂಬನಾರ್ಥವಾಗಿ ಹಾ ! ಸೀತೆ ನಿನ್ನನ್ನಗಲಿ ಹೇಗೆ ಜೀವಿಸಲಿ ನಿನ್ನ ಮುಖವೆಂಬ ಚಂದ್ರನನ್ನು ನೋಡುತ್ತ ಶಾಂತವಾಗಿದ್ದ ಹೃದಯವು ದುಃಖಾಗ್ನಿ

ಯಿಂದ ದಹಿಸುತ್ತಿರುವುದು, ಜನಕಾತ್ಮಜೇ ಕ್ಷಣವಾದರೂ ನನ್ನನ್ನಗಲದೇ ಇದ್ದ ನೀನು ಎತ್ತ ಹೋದೆ ಎಂದು ಪರಿಪರಿಯಿಂದ ರೋದಿಸುತ್ತ ಲಕ್ಷ್ಮಣಾನುಚರನಾಗಿ ವಿಪಿನಾಂತರದಲ್ಲಿ ಹುಚ್ಚನಂತೆ ಸಂಚರಿಸುತ್ತಾ ಕಂಡಕಂಡ ಪದಾರ್ಥಗಳನ್ನು ಸೀತೆ ಎಂದು ಭ್ರಮಿಸುತ್ತ ವನಪರ್ವತಗಳಲ್ಲಿ ಸಂಚರಿಸುತ್ತಿರಲು ಸಮೀಪದಲ್ಲಿರುವ ಋಷ್ಯಮೂಕವೆಂಬ ಘನಪರ್ವತದಲ್ಲಿ ವಾಲಿಯಿಂದ ಭೀತನಾದ ಸುಗ್ರೀವನು ಹನುಮದಾದಿ ಮಂತ್ರಿಗಳಿಂದ ಪರಿವೃತನಾಗಿ ಕುಳಿತು ನೋಡುತ್ತಿದ್ದು ಕೆಳಗೆ ಸಂಚರಿಸುತ್ತಿರುವ ಮುನಿವೇಷಧಾರಿಗಳಾದ ರಾಮಲಕ್ಷ್ಮಣರನ್ನು ಕಂಡು ಇವರು ವಾಲಿಯಿಂದ ಪ್ರೇರಿತರಾಗಿ ತನ್ನನ್ನು ಸಂಹರಿಸುವದಕ್ಕೆ ಬಂದಿರುವರೆಂದು ತಿಳಿದು ಮಾರುತಿಯನ್ನು ಕುರಿತು ಆಂಜನೇಯಾ? ನೋಡಿದೆಯಾ? ವಾಲಿಯು ಶಾಪಮೂಲಕ ತಾನು ಇಲ್ಲಿಗೆ ಬರಲಾಗದಿದ್ದರೂ ನನ್ನ ವಧಾರ್ಥವಾಗಿ ಈ ಜನರನ್ನು ಕಳುಹಿಸಿರುವಂತೆ ಕಾಣುವುದು, ಆದಕಾರಣ ನೀನು ಅವರ ಬಳಿಗೆ ಹೋಗಿ ಅವರು ಯಾರು ಇಲ್ಲಿಗೆ ಏತಕ್ಕೆ ಬಂದಿರುವರು, ಎಂಬುದನ್ನು ತಿಳಿದುಕೊಂಡು ಬಾ, ಎಂದು ಅಪ್ಪಣೆಮಾಡಿದನು.

## ಆಂಜನೇಯನು ರಾಮಲಕ್ಷ್ಮಣರನ್ನು ಕಂಡುದು.





ಬಳಿಕ ಹನುಮಂತನು ಆ ರಾಮಲಕ್ಷ್ಮಣರ ಬಳಿಗೆ ಬಂದು ಅವರ ಗಾಂಭೀರ್ಯಾದಿ ಗುಣಗಳಿಂದ ವಿಸ್ಮಯಾನಂದ ಹೃದಯನಾಗಿ ಅಯ್ಯಾ! ಮಹಾತ್ಮರೇ ನೀವು ಎಲ್ಲಿಂದ ಬಂದಿರಿ ಎಲ್ಲಿಗೆ ಹೋಗುತ್ತೀರಿ ರಾಜಪುತ್ರರಾದವರು ಋಷಿವೇಷವನ್ನು ಧರಿಸಲು ಕಾರಣವೇನು ತಿಳಿಸಬೇಕೆನಲು ಆಗ ರಾಮಚಂದ್ರನು ಆಹಾ ಈತನು ಎಷ್ಟು ವಿನಯದಿಂದ ಶಾಸ್ತ್ರೀಯ ಸಂಬಂಧವಾದ ಮಾತುಗಳನ್ನಾಡುತ್ತಾನೇ ಈತನು ಮಹಾವಿದ್ವಾಂಸನಾಗಿರಬೇಕು ಎಂದು ಯೋಚಿಸಿ ಅಯ್ಯಾ ಕಪಿವರ್ಯನೇ ನಾವು ಕೋಸಲಾಧಿ ನಾಥನಾದ ದಶರಥಮಹಾರಾಜನ ಪುತ್ರರು ರಾಮಲಕ್ಷ್ಮಣರೆಂದು ಪ್ರಸಿದ್ಧರು ಪಿತೃವಾಕ್ಯ ಪರಿಪಾಲನಾರ್ಥವಾಗಿ ದಂಡಕಾರಣ್ಯವನ್ನು ಪ್ರವೇಶಿಸಿ ಪಂಚವಟೀತೀರದಲ್ಲಿ ಪರ್ಣಶಾಲೆಯಲ್ಲಿದ್ದೆವು ಲೋಕಕಂಟಕನಾದ ರಾವಣಾಸುರನಿಂದ ಅಪಹರಿಸಲ್ಪಟ್ಟ ಸೀತೆಯನ್ನು ಹುಡುಕುತ್ತಾ ಸಂಚರಿಸುತ್ತಿದ್ದ ಕಾಲದಲ್ಲಿ ಶಬರೀ ಎಂಬ ಭಕ್ತಳು ಋಷ್ಯಮೂಕಾದ್ರಿಯಲ್ಲಿ ಸುಗ್ರೀವನಿದ್ದಾನೆ ನೀವು ಆತನ ಸ್ನೇಹದಿಂದ ಸುಖಪಡುತ್ತೀರೆಂಬದಾಗಿ ಹೇಳಿದ್ದರಿಂದ ಸುಗ್ರೀವಾನ್ವೇಷಣಾಸಕ್ತರಾಗಿ ಈ ಪ್ರಾಂತ್ಯಕ್ಕೆ ಬಂದೆವು, ನೀನು ಯಾರು ಇಲ್ಲಿಗೆ ಏಕೆ ಬಂದೆ ಎಲ್ಲಿಗೆ ಹೋಗುತ್ತೀಯೆ ಎಂದು ಕೇಳಿದರು ಆಗ ಆಂಜನೇಯನು ಅಯ್ಯಾ ಮಹಾತ್ಮರೇ! ನಾನು ಅಂಜನಾದೇವಿಗೆ ವಾಯುವಿನಿಂದ ಜನಿಸಿದವನು ಆಂಜನೇಯನೆಂದು ನನ್ನ ಹೆಸರು. ನಾನು ಸುಗ್ರೀವನಿಗೆ ಮಂತ್ರಿ ತಮ್ಮ ವೃತ್ತಾಂತವನ್ನು ತಿಳಿಯುವದಕ್ಕಾಗಿ ಸುಗ್ರೀವನಿಂದ ಕಳುಹಿಸಲ್ಪಟ್ಟು ಬಂದೆನು ನಾನು ತಮ್ಮ ದಾಸಾನುದಾಸನು ನನ್ನ ಮಾತುಗಳಲ್ಲಿ ತಪ್ಪುಗಳಿದ್ದರೂ ಕ್ಷಮಿಸಬೇಕೆಂದು ಸಾಷ್ಟಾಂಗಪ್ರಣಾಮವನ್ನು ಮಾಡಿದನು.

## ಶ್ರೀರಾಮ ಸುಗ್ರೀವರ ಸ್ನೇಹ.

ಆಗ ರಾಮಚಂದ್ರನು ಓಹೋ ಮತ್ತೂ ವಿಶೇಷವಾಯಿತು ನಾವು ಸುಗ್ರೀವನ ಬಳಿಗೆ ಹೋಗುವದಕ್ಕೆ ಬಂದೆವು ಆತನು ಎಲ್ಲಿದ್ದಾನೆ ತೋರಿಸೆಂದು ಕೇಳಲು ಆಗ ಹನುಮಂತನು ಮಹಾತ್ಮರೇ ಈ ವಿಷಮಾರಣ್ಯದಲ್ಲಿ ಕಂಟಕ ಮಧ್ಯದಲ್ಲಿ ತಮ್ಮ ಪಾದಕಮಲಗಳಿಂದ ನಡೆದು ಹೋಗಬೇಕೇ ದಾಸನಾದ ನಾನು ಇಲ್ಲವೇ ನನ್ನ ಬೆನ್ನಿನಮೇಲೆ ಕುಳಿತುಕೊಂಡರೆ ಅನಾಯಾಸ ದಿಂದ ಕರೆದುಕೊಂಡು ಹೋಗಿ ಸುಗ್ರೀವನ ಸಮೀಪದಲ್ಲಿಳಿಸುತ್ತೇನೆ ನನ್ನ ಶರೀರವು ಪವಿತ್ರ ವಾಗುತ್ತದೆ ಎಂದು ವಿಜ್ಞಾಪಿಸಲು ರಾಮಚಂದ್ರನು ಲಕ್ಷ್ಮಣ ಸಹಿತನಾಗಿ ಹನುಮಂತನ ಬೆನ್ನಿನ ಮೇಲೆ ಕುಳಿತನು. ಆಂಜನೇಯನು ವಾಯುವೇಗದಿಂದ ಗಿರಿಗಳನ್ನು, ನದಿಗಳನ್ನು, ವನಗಳನ್ನು, ಲತೆಗಳನ್ನು, ಲಂಘಿಸಿ ಋಷ್ಯಮೂಕಾದ್ರಿಗೆ ಬಂದು ಸುಗ್ರೀವನ ಬಳಿಯಲ್ಲಿ ಅವರನ್ನು ಇಳಿಸಿ ದನು. ಆಗ ಸುಗ್ರೀವನು ರಾಮಲಕ್ಷ್ಮಣರನ್ನು ನೋಡಿ ವಿಸ್ಮಿತನಾಗಿ ಸಾಷ್ಟಾಂಗ ಪ್ರಣಾಮ ಮಾಡಲು ರಾಮಚಂದ್ರನು ಕೈ ಹಿಡಿದು ಮೇಲಕ್ಕೆ ಎತ್ತಿ ಆಲಿಂಗನ ಮಾಡಿಕೊಂಡನು. ಪರಸ್ಪರ ವೃತ್ತಾಂತಗಳನ್ನು ತಿಳಿಸಿದರು. ಆಗ ಅಗ್ನಿಸಾಕ್ಷಿಕವಾಗಿ ಮೈತ್ರಿಯುಂಟಾಯಿತು, ಅನಂತರದಲ್ಲಿ ಸುಗ್ರಿವನು ನನಗೆ ವಿರೋಧಿಯಾದ ವಾಲಿಯನ್ನು ಸಂಹರಿಸಬೇಕೆಂದು ಕೇಳಿಕೊಳ್ಳಲು ರಾಮ ಚಂದ್ರನು ಸಮ್ಮತಿಸಿದನು, ಬಳಿಕಾ ಸುಗ್ರೀವನು ವಾಲಿಯು ಬಹು ಬಲಶಾಲಿಯಾದುದರಿಂದ ರಾಮನಿಗೆ ಅವನನ್ನು ಸಂಹರಿಸತಕ್ಕ ಶಕ್ತಿವುಂಟೋ ಇಲ್ಲವೊ ಎಂದು ಸಂದೇಹಿಸಿ ವಾಲಿಯಿಂದ ಸಂಹರಿಸಲ್ಪಟ್ಟ ದುಂದುಭಿ ಎಂಬ ರಾಕ್ಷಸನ ಕಳೇಬರವು ಪರ್ವತಾಕಾರವಾಗಿ ಬಿದ್ದಿದೆ ಇದನ್ನು ಪಾದದಿಂದ ಹೊರಳಿಸಿದರೆ ನೀನು ವಾಲಿಯನ್ನು ಸಂಹಾರಮಾಡಲು ಶಕ್ತನೆ ಸರಿ ಎಂದು ಹೇಳಲು, ಆಗ ರಾಮಚಂದ್ರನು ತನ್ನ ಎಡದ ಪಾದದಿಂದ ಒದೆದ ಕೂಡಲೆ ಆ ದುಂದುಭಿಯ ಶವವು ಯೋಜನದೂರಕ್ಕೆ ಹಾರಿಹೋಯಿತು. ಇದನ್ನು ಕಂಡು ಆಶ್ಚರ್ಯಹೊಂದಿ ಸಪ್ತತಾಳ ಗಳನ್ನು ತೋರಿಸಿ ಇವನ್ನು ಬಾಣದಿಂದ ಭೇದಿಸು ನೋಡೋಣವೆನಲು ರಾಮನು ಶರಪ್ರಯೋಗ ಮಾಡಿದನು. ಆ ಭಾಣವು ಸಪ್ತತಾಳ ವೃಕ್ಷಗಳನ್ನು ಭೇದಿಸಿ ಪರ್ವತಶಿಖರವನ್ನು ಭೇದಿಸಿ ಪಾತಾಳಕ್ಕೆ ಹೋಗಿ ಹಿಂತಿರುಗಿ ಬಂದು ರಾಮನ ಬತ್ತಳಿಕೆಯನ್ನು ಸೇರಲು ರಾಮನ ಪರಾಕ್ರ ಮದಲ್ಲಿ ನಂಬಿಕೆಯುಂಟಾಗಿ ಸುಗ್ರೀವನು ವಾಲಿಯ ಸಂಹಾರವು ರಾಮನಿಂದ ಆದೀತು ಎಂದು ನಿಶ್ಚಯಿಸಿದರು.

ಆಗ ರಾಮಚಂದ್ರನು ವಾಲಿಗೂ ನಿನಗೂ ವಿರೋಧವು ಬರುವದಕ್ಕೆ ಏನು ಕಾರಣ. ಈ ಋಷ್ಯಮೂಕಾದ್ರಿಗೆ ಆತನು ಬಾರದೇ ಇರುವದಕ್ಕೆ ಕಾರವೇನು ? ತಿಳಿಸಬೇಕೆಂದು ಕೇಳಲು, ಓ ಮಹಾತ್ಮಾ ರಾಮಚಂದ್ರ ಶರಣಾಗತರಕ್ಷಕಾ ! ವಾಲಿಯೂ ನಾನೂ ಸಮಾನ ಜನ್ಮರಾ ಗಿಯೂ, ಅನ್ಯೋನ್ಯ ಪ್ರೀತರಾಗಿಯೂ ಕಿಷ್ಕಿಂಧಾ ನಿವಾಸಿಗಳಾಗಿಯೂ ಇರುತ್ತಿದ್ದೆವು. ಹೀಗಿ ರುವಲ್ಲಿ ಒಂದಾನೊಂದು ದಿನ ದುಂದುಭಿ ಎಂಬ ರಾಕ್ಷಸನು ಬಲಗರ್ವಿತನಾಗಿ ಮೇರು ಮಂದ ರಾದ್ರಿ ಪರ್ವತಗಳನ್ನೆಲ್ಲಾ ಮಲ್ಲಯುದ್ಧಕ್ಕೆ ಕರೆದು ಅವು ಬಾರದೇ ಇರುವಕಾರಣ ಅದ್ವಿತೀಯ ನಾಗಿ ಸ್ವೇಚ್ಛಾಸಂಚಾರವನ್ನು ಮಾಡುತ್ತಾ ನನ್ನ ಅಗ್ರಜನಾದ ವಾಲಿಯ ಸಮೀಪಕ್ಕೆ ಬಂದು ತನ್ನ ಪರಾಕ್ರಮವನ್ನು ಹೊಗಳಿಕೊಂಡನು. ಆಗ ವಾಲಿಯು ಭುಜಸ್ಫಾಲನಮಾಡಿ ಯುದ್ಧಕ್ಕೆ ಹೋಗಲು ಈರ್ವರೂ ಪರಸ್ಪರವಾಗಿ ಮುಷ್ಟಿಘಟ್ಟನೆ ಪಾದಪ್ರಹಾರ ನಖಪ್ರಹಾರ ಮೊದಲಾದ ವಿವಿಧ ಪ್ರಹಾರಗಳನ್ನು ಮಾಡುತ್ತಾ ಈ ಪರ್ವತಕ್ಕೆ ಬಂದು ಇದರಲ್ಲಿ ಬಹುಕಾಲ ಯುದ್ಧ ಮಾಡುಮಾಡುತ್ತಿದ್ದರು. ಆಗ ವಾಲಿಯು ಆತನನ್ನು ಹಿಡಿದು ಈ ಪರ್ವತದಲ್ಲಿ ಒಂದು

ಗುಹೆಯ ಒಳಕ್ಕೆ ತಳ್ಳಿಕೊಂಡು ಹೋಗಿ ಅಲ್ಲಿ ಘೋರಯುದ್ಧ ಮಾಡುತ್ತಿದ್ದನು. ನಾನು ಗುಹಾ ಮುಖದಲ್ಲಿ ಒಂದು ವರ್ಷಕಾಲ ಕಾದಿದ್ದು ಒಳಗಿನಿಂದ ಬಂದ ರಕ್ತ ಪ್ರವಾಹವನ್ನು ನೋಡಿ ಭೀತನಾಗಿ ವಾಲಿಯನ್ನು ಸಂಹರಿಸಿ ಅಸುರನು ನನ್ನ ಮೇಲೆ ಬಂದಾನೆಂಬ ಆಲೋಚನೆಯಿಂದ ಗುಹೆಯ ಬಾಯಿಗೆ ಒಂದು ದೊಡ್ಡ ಬಂಡೆಯನ್ನಿರಿಸಿ ಕಿಷ್ಕಿಂಧಾಪುರಿಗೆ ಹೋಗಿ ಪಟ್ಟಾಭಿಷಿಕ್ತನಾಗಿ ಸುಖವಾಗಿರಲು, ಆ ವಾಲಿಯು ಆ ರಾಕ್ಷಸನನ್ನು ಸಂಹರಿಸಿ ಹಿಂತಿರಿಗಿ ಬಂದು ಗುಹಾಮುಖದಲ್ಲಿದ್ದ ಕಲ್ಲನ್ನು ಕಾಲಿನಿಂದ ತಳ್ಳಿ ನನ್ನ ಮೇಲೆ ಕೋಪೋದ್ದೀಪಿತನಾಗಿ ಕಿಷ್ಕಿಂಧಾಪುರಿಗೆ ಬಂದು ಅಭಿಷಿಕ್ತನಾದ ನನ್ನನ್ನು ಸಂಹರಿಸುವುದಕ್ಕೆ ಉದ್ಯುಕ್ತನಾದನು. ಆಗ ನಾನು ಭೀತಿಯಿಂದ ಓಡುತ್ತಿದ್ದರೂ ಹಿಂಬಾಲಿಸಿದನು ಲೋಕವೆಲ್ಲಾ ಸುತ್ತಿದರೂ ಆಸ್ಪದವಿಲ್ಲದೇ ಈ ಮತಂಗಾಶ್ರಮವನ್ನು ಸೇರಿದೆನು ತನ್ನಿಂದ ಸಂಹರಿಸಲ್ಪಟ್ಟ ದುಂದುಭಿಯು ಕಳೇಬರವನ್ನು ಮೇಲಕ್ಕೆ ಎತ್ತಿ ಗಿರಗಿರನೆ ತಿರಿಗಿಸಿ ಹಾರಿಸಿದನು, ಅದರ ರಕ್ತಬಿಂದುಗಳು ಈ ಆಶ್ರಮದಲ್ಲಿ ಬಿದ್ದದ್ದರಿಂದ ಮತಂಗಋಷಿಯು ಕೋಪಗೊಂಡು ಈ ಕೆಲಸವು ಯಾರಿಂದ ನಡೆದುದೋ ಅವನು ಈ ಆಶ್ರಮಕ್ಕೆ ಬಂದರೆ ಅವನ ತಲೆ ನೂರು ಹೋಳಾಗಲಿ ಎಂದು ಶಾಪಕೊಟ್ಟನು. ಆದಕಾರಣ ವಾಲಿಯು ಇಲ್ಲಿಗೆಬರುವುದಕ್ಕೆ ಧೈರ್ಯವಿಲ್ಲದೆ ಕಿಷ್ಕಿಂಧಾಪುರಿಯನ್ನು ಹೊಕ್ಕು ನನ್ನ ಭಾರ್ಯೆಯನ್ನು ಅಪಹರಿಸಿ ಸಕಲ ವಾನರ ಪಟ್ಟಭದ್ರನಾಗಿದಾನೆ. ಹನುಮದಾದಿ ಮಂತ್ರಿಗಳು ಸಹಾ ಇಲ್ಲಿಗೆ ಬಂದು ಸೇರಿದರು. ಆದ್ದರಿಂದ ಮಹಾ ಪಾಪಿಷ್ಠನಾದ ಆತನನ್ನು ಸಂಹರಿಸಬೇಕೆಂದು ಹೇಳಲು ರಾಮಚಂದ್ರನು ಸಕಲ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡತಕ್ಕದ್ದೆ ನನ್ನ ಮುಖ್ಯ ಕೆಲಸವಾಗಿದೆ. ಭ್ರಾತೃ ಭಾರ್ಯಾಪಹಾರಕನಾದ ವಾಲಿಯನ್ನು ಸಂಹರಿಸುವುದರಲ್ಲಿ ಅನ್ಯಾಯ ವಿಲ್ಲವೆಂದು ಸಮ್ಮತಿಸಿ, ಬಳಿಕಾ ಸುಗ್ರೀವನನ್ನು ನೋಡಿ ಅಯ್ಯಾ ವಾನರನೇ ಸಾಮ್ರಾಜ್ಯಾಭಿಷೇಕವನ್ನು ನಿನಗೆ ಈಗಲೇ ಮಾಡುವೆನು ಯೋಚಿಸಬೇಡ ನೀನು ಹೋಗಿ ವಾಲಿಯನ್ನು ಯುದ್ಧಕ್ಕೆ ಕರೆದು ಆತನೂ ನೀನೂ ಪರಸ್ಪರವಾಗಿ ಯುದ್ಧಮಾಡುತ್ತಿದ್ದರೆ ನಾನು ಮರೆಯಾಗಿದ್ದು ಬಾಣಪ್ರಯೋಗ ಮಾಡುವೆನು ನೀನು ಶೀಘ್ರವಾಗಿ ಹೊರಡು ಎನಲು ಸುಗ್ರೀವನು ತಮ್ಮ ಆಜ್ಞಾನುಸಾರವಾಗಿ ನಡೆಯಲು ಸಿದ್ಧನಾಗಿದ್ದೇನೆ ಆದರೆ ವಾಲಿಯು ಹೆಸರೆತ್ತಿದರೆ ನನಗೆ ಭಯ ವಾಗುತ್ತಿದೆ ಆದಕಾರಣ ಆತನಿಗೆದುರಾಗಿ ಹೋಗಿ ಯುದ್ಧಕ್ಕೆ ಕರೆಯಲು ನನಗೆ ಧೈರ್ಯವಿಲ್ಲ ಆದರೂ ತಮ್ಮ ಆಜ್ಞಾನುಸಾರವಾಗಿ ನಡೆಸುವೆನೆಂದು ಹೇಳಿ ಕಿಷ್ಕಿಂಧಾಪುರಿಗೆ ಹೋಗಿ ಪುರದ್ವಾರದಲ್ಲಿ ನಿಂತು ಸಿಂಹನಾದಮಾಡಿದನು.

## ವಾಲಿ ಸುಗ್ರೀವರ ಕಾಳಗ.

ಆಗ ವಾಲಿಯು ಈ ಸಿಂಹನಾದವನ್ನು ಕೇಳಿ ಘಕ್ಕನೆ ನಕ್ಕು ಆಹಾ ಇದೇನಾಶ್ಚರ್ಯ ಸುಗ್ರೀವನ್ನು ನನ್ನಎದುರಾಗಿ ಬಂದು ಯುದ್ಧಕ್ಕೆನಿಂತು ಸಿಂಹನಾದಮಾಡುತ್ತಾನೆ ಇವನಿಗೆ ಇಷ್ಟುಸಾಹಸ ವುಂಟಾಯಿತೆ ಈನಿಮಿಷದಲ್ಲಿ ಹೋಗಿ ಅವನನ್ನುಗೆದ್ದು ಬರುತ್ತೇನೆಂದು ಮಂತ್ರಿಗಳಿಗೆ ಹೇಳಿ ಪಟ್ಟಣದ ಬಹಿರ್ಭಾಗದಲ್ಲಿ ಯುದ್ಧಕ್ಕೆ ಸನ್ನದ್ಧನಾಗಿ ನಿಂತಿರುವ ಸುಗ್ರೀವನನ್ನು ನೋಡಿ ಎಲೈ ಸುಗ್ರೀವನೆ ಈ ಹೊತ್ತು ನನ್ನ ಇಷ್ಟಪೂರ್ತಿಯಾಯಿತು ಒಳ್ಳೆಯ ಕೆಲಸ ಮಾಡಿದೆ ಎಂದು ಹೇಳುತ್ತಾ, ಭುಜಸ್ಫಾಲನೆಯನ್ನು ಮಾಡುತ್ತಾ ಬಂದನು. ಆಗ ವಾಲಿಸುಗ್ರೀವರೀರ್ವರೂ ಪಾಷಾಣಗಳಿಂದ, ಕೆಲವು ಹೊತ್ತು ವೃಕ್ಷಗಳಿಂದ, ಕೆಲವು ಹೊತ್ತು ಮುಷ್ಟಿಗಳಿಂದ ಕೆಲವು ಹೊತ್ತು ನಖಪ್ರಹಾರ ವೀರಲಾಪಗಳಿಂದ ಸಮಾನವಾಗಿ ಯುದ್ಧಮಾಡುತ್ತಿದ್ದರು.

ಇತ್ತಲಾ ರಾಮಚಂದ್ರನು ಆ ಯುದ್ಧರಂಗಕ್ಕೆ ಹೋಗಿ ವೃಕ್ಷಾಂತರವನ್ನು ಮರೆಮಾಡಿ ನಿಂತು ನೋಡುತ್ತಾ ವಾಲಿಸುಗ್ರೀವರೀರ್ವರೂ ರೂಪದಲ್ಲಿಯೂ, ಕಾಂತಿಯಲ್ಲಿಯೂ, ಶರೀರದ

ಲ್ಲಿಯೂ, ಧ್ವನಿಯಲ್ಲಿಯೂ ಸಮಾನರಾಗಿ ಇದ್ದ ಕಾರಣ ಅವರಿಗಿರುವ ಭೇದವು ತಿಳಿಯದೆ ವಾಲಿಯ ಮೇಲೆ ಬಾಣಪ್ರಯೋಗ ಮಾಡಲು ಅನುಕೂಲವಿಲ್ಲದೇ ಸುಮ್ಮನಿದ್ದನು. ಆಗ ಸುಗ್ರೀವನು ವಾಲಿಪೀಡಿತನಾಗಿ ಎದುರಿಸಿ ನಿಲ್ಲಲಾರದೇ ಓಡಿ ಬಂದು ಋಷ್ಯಮೂಕಾದ್ರಿಯನ್ನು ಸೇರಿದನು ವಾಲಿಯು ಜಯಶಾಲಿಯಾಗಿ ಸಿಂಹನಾದ ಮಾಡುತ್ತಾ ಪಟ್ಟಣವನ್ನು ಸೇರಿದನು ರಾಮ ಚಂದ್ರನು ಋಷ್ಯಮೂಕಾದ್ರಿಗೆ ಬಂದು ಸೇರಲು, ಸುಗ್ರೀವನು ಅಶ್ರುಪೂರ್ಣನಯನನಾಗಿ ರಾಮ ಚಂದ್ರನ ಪಾದಗಳ ಮೇಲೆ ಬಿದ್ದು ಹೀಗೆ ಹೇಳಿದನು, ಅಯ್ಯಾ ರಾಮಚಂದ್ರನೇ ನಾನು ಆಗಲೆ ಹೇಳಲಿಲ್ಲವೇ ವಾಲಿ ಅಜೇಯನು ಆತನ ಮುಂದೆ ಹೋಗುವುದಕ್ಕೆ ನನಗೆ ಶಕ್ತಿಯಿಲ್ಲವೆಂದು ಹೇಳಿದರೂ ನನ್ನನ್ನು ಕಳುಹಿಸಿ ನೀನು ಉದಾಸೀನನಾಗಿದ್ದರೆ ನಾನು ಯುದ್ಧ ಪ್ರಯತ್ನವನ್ನು ಮಾಡದೆ ಸುಖದಿಂದಿರುತ್ತಿದ್ದೆನು ನನ್ನ ಶರೀರವೆಲ್ಲಾ ಜರ್ಝರಿತವಾಗಿ ಹೋಯಿತು ಇದು ನಿನಗೆ ನ್ಯಾಯವೆ ಎನಲು ರಾಮಚಂದ್ರನು ಸುಗ್ರೀವನನ್ನು ಆಲಿಂಗನಮಾಡಿ ಓಪ್ರಿಯಮಿತ್ರನೇ ! ನೀನು ಶಂಕಿಸಬೇಡ ನಿನಗೂ ವಾಲಿಗೂ ಭೇದ ತಿಳಿಯದೆ ಸುಮ್ಮನಿದ್ದೆನೆ ಹೊರತು ಭಯಪಟ್ಟು ಸುಮ್ಮನೆ ಇರಲಿಲ್ಲ ಗುರುತುತಿಳಿಯದೆ ಬಾಣಪ್ರಯೋಗಮಾಡಿದರೆ ಯಾರಿಗೆಬೀಳುವದೋ ಎಂದಾ ಲೋಚಿಸುತ್ತಾ ಸುಮ್ಮನಿದ್ದೆನು ಈಗ ನಿನ್ನ ಕಂಠದಲ್ಲಿ ಒಂದು ಅಭಿಜ್ಞಾನಸೂಚಕವಾದ ಲತಾ ಹಾರವನ್ನು ಹಾಕಿಕೊಂಡು ಪುನಃ ಹೋಗಿ ಯುದ್ಧಕ್ಕೆ ಕರೆದು ಯುದ್ಧಮಾಡು ಆಗ ನಾನು ಬಾಣಪ್ರಯೋಗ ಮಾಡುತ್ತೇನೆಂದು ಹೇಳಿದನು ಅದನ್ನು ಕೇಳಿ ಇನ್ನು ನಾನು ವಾಲಿಯಮುಂದೆ ಹೋಗಲಂಜುತ್ತೇನೆ ಈಸಲ ಕಂಡರೆ ಪ್ರಾಣದಿಂದ ಬಿಡುವನೋ ಇಲ್ಲವೊ ತಿಳಿಯದೆಂದು ಖಿನ್ನ ನಾಗಿರಲು, ಲಕ್ಷ್ಮಣಸ್ವಾಮಿಯು ಒಂದು ವಿಚಿತ್ರವಾದ ಮಾಲಿಕೆಯನ್ನು ಮಾಡಿ ತಂದು ಸುಗ್ರೀ ವನ ಕಂಠಕ್ಕೆ ಹಾಕಲು ಅವನು ಧೈರ್ಯವನ್ನವಲಂಬಿಸಿ ಯುದ್ಧೋದ್ಯುಕ್ತನಾಗಿ ಹೊರಟು ಕಿಷ್ಕಿಂಧಾಪುರಿಯ ಬಹಿರ್ಭಾಗದಲ್ಲಿ ನಿಂತು ಸಿಂಹನಾದ ಮಾಡಿದನು ಆಗ ವಾಲಿಯು ಅದನ್ನು ಕೇಳಿ ಕೋಪೋದ್ದೀಪಿತನಾಗಿ ಮತ್ತೂ ಸುಗ್ರೀವನು ಬಂದು ಸಿಂಹನಾದವನ್ನು ಮಾಡುತ್ತಾನೆ ಈಗಲೆ ನನ್ನಿಂದಲೇ ಪೀಡಿತನಾಗಿ ಓಡಿಹೋಗಿ ಮತ್ತೂ ಬಂದಿದ್ದಾನೆ ಏನು ಕಾರಣವೊ ತಿಳಿಯ ಲಿಲ್ಲ ಆದರೂ ಈಗ ಹೋಗಿ ಅವನನ್ನು ಸಂಹಾರ ಮಾಡಿದರೆ ಆ ಮೇಲೆ ನಾನು ಸೌಖ್ಯವಾಗಿರ ಬಹುದು ಅವನು ಸಹಾಯವಂತನಾಗಿ ಇದ್ದರೂ ನನಗೆ ಅಸಾಧ್ಯನಲ್ಲವೆಂದು ವೀರಾಲಾಪಮಾಡಿ ಯುದ್ಧಕ್ಕೆ ಹೊರಟನು.

## ವಾಲಿಗೆ ತಾರೆ ನೀತಿಯನ್ನು ಹೇಳಿದುದು.

ಆಗ ತಾರಾಯೆಂಬ ವಾಲಿಯ ಪತ್ನಿಯು ಬಂದು ಆಲಿಂಗನ ಮಾಡಿಕೊಂಡು ಕೆಲವು ನೀತಿಗಳನ್ನು ಹೇಳತೊಡಗಿದಳು. ಓ ಪ್ರಾಣನಾಥನೇ ! ಸುಗ್ರೀವನ ಮೇಲೆ ಈಗ ನೀನು ಯುದ್ಧಕ್ಕೆ ಹೋಗುವದು ಯುಕ್ತವಲ್ಲ ಅವನಿಗೆ ಯಾರೋ ಸಹಾಯಭೂತರಾಗಿ ಕಳುಹಿಸಿಯಿ ದ್ದಾರೆ ಹೊರತು ಬೇರೆಯಲ್ಲ ಈಗ ಬಂದು ಸೋತುಹೋಗಿ ಮತ್ತೂ ಬರಬೇಕಾದರೆ ಬಲವಾದ ಸಹಾಯವಿಲ್ಲದೇ ಬರಲಾರನು ಮತ್ತು ಯಾರೋ ಇಬ್ಬರು ರಾಜಪುತ್ರರು ಅಸಮಾನತೇಜೋವಂ ತರಾಗಿ ಋಷ್ಯಮೂಕಾದ್ರಿಯಲ್ಲಿ ಸಂಚರಿಸುವಹಾಗೂ ಅವರಿಗೂ ಸುಗ್ರೀವನಿಗೂ ಸ್ನೇಹವುಂಟಾ ಗಿಥೆ ಎಂತಲೂ, ಒಂದು ವರ್ತಮಾನವಿದೆ ಆಮಹಾತ್ಮರು ಯಾರೋ ಏತಕ್ಕಾಗಿ ಬಂದಿದ್ದಾರೋ ಸುಗ್ರೀವನಿಗೂ ಅವರಿಗೂ ಸ್ನೇಹವಾಗುವದಕ್ಕೆ ಕಾರಣವೇನೋ ತಿಳಿಯಲಿಲ್ಲ ಯುದ್ಧದಲ್ಲಿ ಜಯಾಪಜಯಗಳು ಎಷ್ಟು ಬಲವಂತನಿಗಾದರೂ ಸ್ಥಿರವಾದದ್ದಲ್ಲ ಸುಗ್ರೀವನನ್ನು ಕರೆಸಿ ಆತನಿಗೆ ಇಷ್ಟನಾಗಿ ನಡೆದುಕೊಂಡು ಸುಖದಿಂದಿರಬಾರದೇ ನಿನ್ನ ಹಾಗೆ ಆತನು ಈ ಕಿಷ್ಕಿಂಧಾಪಟ್ಟ

ಣಕ್ಕೆ ಬಾಧ್ಯನಲ್ಲವೆ ಅವನ ಸಂಹಾರದಿಂದ ನಿನಗೆ ಬರುವ ಕೀರ್ತಿಯೇನು ಹೇಗಾದರೂ ನೀನು ಮಾಡಿರುವದೇ ಅಯುಕ್ತವಾಗಿಥೆ ತನ್ನ ತಪ್ಪನ್ನು ತಾನು ತಿಳಿದುಕೊಳ್ಳದೇ ಇರುವದು ಅಧರ್ಮ ವಲ್ಲವೇ ಈ ಹಠಯೋಗದಿಂದೇನು ಫಲ ನನ್ನ ಮಾತುಗಳನ್ನು ಕೇಳು ಯುದ್ಧದಿಂದ ವಿಶ್ರಾಂತ ನಾಗಿ ಸುಗ್ರೀವನಿಗೆ ಇಷ್ಟಪಾಗಿರುವದೆ ಯುಕ್ತವೆಂದು ನುಡಿಯಲು ವಾಲಿಯು ಈ ಮಾತುಗ ಳನ್ನು ಕೇಳಿ ನಕ್ಕು ಸುಗ್ರೀವನಿಗೆ ಭೀತನಾಗಿ ಇಷ್ಟನಾಗಿರಬೇಕೆ ನಾನು ವಾಲಿಯೆಂದು ತಿಳಿಯದೇ ನೀಚವಾದ ಪೌರುಷಹೀನವಾದ ವಚನಗಳನ್ನು ನುಡಿಯುತ್ತೀಯಲ್ಲ ನನಗೆ ಯುದ್ಧದಲ್ಲಿ ಅಪಜ ಯವಂದರೇನು ಸರ್ವಲೋಕ ಭಯಂಕರನಾದ ರಾವಣಾಸುರನನ್ನು ಬಾಲದಲ್ಲಿ ಸುತ್ತಿಕೊಂಡು ಚತುಸ್ಸಮುದ್ರಗಳಲ್ಲಿಯೂ ಅದ್ದಿ ತಂದು ಅಂಗದನ ತೊಟ್ಟಿಲಿಗೆ ಕಟ್ಟಿರಲಿಲ್ಲವೇ ಪ್ರತಿದಿನವೂ ಚತು ಸ್ಸಮುದ್ರಗಳಲ್ಲಿಯೂ ನಾಲ್ಕು ಅರ್ಘ್ಯಗಳನ್ನು ಬಿಡುತ್ತಿರಲಿಲ್ಲವೇ ಇಂಥಾ ಬಲಶಾಲಿಯಾದ ನನಗೆ ಭೀತನಾಗಿ ನನ್ನಿಂದ ಜಯಿಸಲ್ಪಟ್ಟು ಋಷ್ಯಮೂಕಾದ್ರಿಯಲ್ಲಿ ಅಡಗಿಕೊಂಡಿರುವ ಸುಗ್ರೀವನಿಗೆ ನಾನು ಭಯಪಡಬೇಕೇ ನೀನು ವೀರಪತ್ನಿಯಾಗಿ ವೀರನಾದ ಅಂಗದನಿಗೆ ತಾಯಿಯಾಗಿ ಇಂಥಾ ಅವಿವೇಕದ ಮಾತನಾಡಬಹುದೇ, ನಾನು ಯುದ್ಧಕ್ಕೆ ಹೋಗುತ್ತಿರುವ ಕಾಲದಲ್ಲಿ ಇನ್ನೂ ಪೌರು ಷದ ಮಾತುಗಳನ್ನಾಡಿ ಸಂಭ್ರಮದಿಂದ ಕಳುಹಿಸಬೇಕಲ್ಲವೆ ಇದು ನಿನಗೆ ಯೋಗ್ಯವಲ್ಲ ಇನ್ನು ಮುಂದೆ ಯಾವಾಗಲೂ ಈಮಾತುಗಳನ್ನುಹೇಳಬೇಡ ಸುಖವಾಗಿ ಅಂತಃಪುರದಲ್ಲಿ ಇದ್ದುಕೊಂಡು ನನ್ನ ಕ್ಷೇಮಚಿಂತೆಯನ್ನು ಮಾಡುತ್ತಾಇರು ಎಂಬದಾಗಿ ಹೇಳಿದನು. ಆಗ ತಾರೆಯು ಆ ಮಾತು ಗಳನ್ನುಕೇಳಿ ಚಿಂತಾಕ್ರಾಂತಳಾಗಿ ವಾಲಿಯಕೈಗಳನ್ನು ಹಿಡಿದುಕೊಂಡು ಇನ್ನೂ ಕೆಲವು ಮಾತು ಗಳನ್ನುಹೇಳಿದಳು. ಓ ಪ್ರಾಣನಾಥನೇ! ಯಾವಾಗಲೂ ಯುದ್ಧದಲ್ಲಿ ನಿನಗೆ ಅಪಜಯವಾಗುತ್ತ ದೆಂಬ ಶಂಕೆಯೇ ನನಗೆ ಇರಲಿಲ್ಲ ಏನುಕಾರಣವೋ ಈಗ ನೀನು ಯುದ್ಧದಲ್ಲಿ ಸೋತುಹೋಗು ತ್ತೀಯೆಂಬ ಯೋಚನೆಯುಂಟಾಗಿಥೆ ಇದು ನಿನಗೆ ಅಪಶಕುನವೇ ಹೊರತು ಶುಭಕರವಾಗುವದಿಲ್ಲ ಈಗ ನನ್ನ ಮಾತುಗಳನ್ನು ಕೇಳಿ ಸುಗ್ರೀವನೊಡನೆ ಸಂಧಿಮಾಡಿಕೊಂಡು ಸುಖವಾಗಿರು ನನಗೆ ಬಲಭುಜವು ಚಲಿಸುತ್ತದೆ ಬಲನೇತ್ರವು ಸ್ಫುರಿಸುತ್ತದೆ ಈಗ ಹೊರಟರೆ ಖಂಡಿತವಾಗಿ ಶುಭವಾ ಗಲಾರದು *ಅತಿಸರ್ವತ್ರವರ್ಜಯೇತ್" ಎಂಬಂತೆ ಅತಿಧೈರ್ಯವೂ ಸುಖಕರವಲ್ಲ ಸಮಯವನ್ನು ನೋಡಿ ಮಾಡಿದರೇ ಕೆಲಸ ನೆರವೇರುತ್ತದೆ ಅಕಾಲದಲ್ಲಿ ಬೀಜಾವಾಪವನ್ನು ಮಾಡಿದರೇನೂ ಫಲವಾಗಲಾರದೆಂದು ಯೋಚಿಸಿ ಖಚಿತವಾಗಿ ಯುದ್ಧಪ್ರಯಾಣದಿಂದ ವಿಶ್ರಾಂತನಾಗು ಎಂಬದಾಗಿ ಪಾದಗಳ ಮೇಲೆ ಬಿದ್ದು ಘೋರನೆ ಅಳುತ್ತಿದ್ದಳು. ಆಗ ವಾಲಿಯು ಸಿಂಹಾಸನ ದಿಂದ ಧುಮಿಕಿ ಮಂತ್ರಿಗಳನ್ನು ಲಕ್ಷ್ಯಮಾಡದೇ ಅಂಗದನನ್ನು ಆಲಿಂಗನೆ ಮಾಡಿಕೊಂಡು ಪತ್ನಿಯೊಡನೆ ಹೇಳದೆ ಭುಜಾಸ್ಫಾಲನೆಮಾಡಿ ಮೀಸೆಗಳನ್ನು ತಿರುವುತ್ತಾ ದಂತಗಳನ್ನು ಪಟ ಪಟನೆ ಕಡಿಯುತ್ತಾ ಕೋಪಾರುಣನೇತ್ರನಾಗಿ ಹೊರಟು ಬಂದು ಪುರದ್ವಾರದಲ್ಲಿ ಯುದ್ಧೋದ್ಯು ಕ್ತನಾಗಿ ಸಿಂಹನಾದ ಮಾಡುತ್ತಾ ನಿಂತಿರುವ ಸುಗ್ರೀವನನ್ನು ನೋಡಿ, ಎಲೈ ಸುಗ್ರೀವನೇ ಪುನಃ ಬಂದೆಯಾ ಈಗತಾನೆ ಸೋತುಹೋಗಿ ಈಗಲೆ ಯುದ್ಧಕ್ಕೆ ಬಂದಿರುವೆಯಲ್ಲವೆ ಈಕ್ಷಣದಲ್ಲಿ ನಿನ್ನನ್ನು ಸಂಹಾರ ಮಾಡುವೆನೆಂದು ಘರ್ಜಿಸಿ ಅವನ ಮೇಲೆ ಬಿದ್ದನು.

## ವಾಲಿಯ ಸಂಹಾರ.

ಆಗ ಸುಗ್ರೀವನು ನೋಡಿ ಎಲೈ ಪಾಪಾತ್ಮನೇ, ಸಹೋದರನಾದ ನನ್ನ ಭಾರ್ಯೆಯನ್ನು ಅಪಹರಿಸಿದೆಯಲ್ಲ! ನ್ಯಾಯಾನ್ಯಾಯ ವಿವೇಚನೆಮಾಡದೆ ನನಗೆ ಶತ್ರುವಾದೆಯಲ್ಲ ಈಗ ನಿನ್ನನ್ನು ಸಂಹರಿಸಿ ನನ್ನ ದುಃಖವನ್ನು ತೀರಿಸಿಕೊಳ್ಳುವೆನೆಂದು ಹೇಳಿ ವೃಕ್ಷಗಳಿಂದಲೂ, ಪಾಷಾ

ಣಗಳಿಂದಲೂ ಪ್ರಹಾರಗಳನ್ನು ಮಾಡುತ್ತಿದ್ದನು. ವಾಲಿಯು ಸುಗ್ರೀವನು ಸಹಾ ಸಮಾನವಾಗಿ ಪರಸ್ಪರ ಜಯಾಕಾಂಕ್ಷಿಗಳಾಗಿ ಹೋರಾಡುತ್ತಿದ್ದರು. ಆಗ ರಾಮಚಂದ್ರನು ವೃಕ್ಷಾಂತರದ ಮರೆಯೆಲ್ಲಿ ನಿಂತು ಈ ಈರ್ವರ ಯುದ್ಧವನ್ನು ನೋಡುತ್ತಿದ್ದು ವಾಲಿ ಪ್ರಾಣನಾಶಕವಾದ ಬಾಣವನ್ನು ಪ್ರಯೋಗಿಸಿದನು. ವಾಲಿಯು ಆ ಬಾಣಗಳಿಂದ ಪೀಡಿತನಾಗಿ ಮೂರ್ಛಾಕ್ರಾಂತನಾಗಿ ನೆಲದಲ್ಲಿ ಬಿದ್ದು ಹೊರಳಾಡುತ್ತಿದ್ದನು. ರಾಮಚಂದ್ರನು ಎದುರಾಗಿ ಬಂದು ನಿಂತುಕೊಂಡನು. ಆಗ ವಾಲಿಯು ರಾಮಚಂದ್ರನನ್ನು ಕಂಡು ಕೆಲವು ಮಾತುಗಳನ್ನು ಹೇಳಲುಪಕ್ರಮಿಸಿದನು.

ಅಯ್ಯಾ ಮಹಾತ್ಮನೇ ನೀನು ಯಾರು ಇಲ್ಲಿಗೆ ಏತಕ್ಕೆ ಬಂದೆ ಎಂದು ಕೇಳಲು, ಆಗ ರಾಮಚಂದ್ರನು ಎಲೈ ವಾನರರಾಜನೇ ನಾನು ಅಯೋಧ್ಯಾಧಿನಾಥನಾದ ದಶರಥನ ಮಗನು ರಾಮನೆಂದು ಪ್ರಖ್ಯಾತಿಪಟ್ಟವನು, ಪಿತೃವಾಕ್ಯ ಪರಿಪಾಲನಾರ್ಥವಾಗಿ ದಂಡಕಾರಣ್ಯಕ್ಕೆ ಬಂದೆನು. ಲೋಕಕಂಟಕನಾದ ರಾವಣಾಸುರನು ನನ್ನ ಪತ್ನಿಯಾದ ಸೀತಾದೇವಿಯನ್ನು ಅಪಹರಿಸಿದ್ದಾನೆ. ಆತನ ಜಯಾರ್ಥವಾಗಿ ನಿನ್ನ ತಮ್ಮನಾದ ಸುಗ್ರೀವನ ಸಹಾಯವನ್ನು ಅಪೇಕ್ಷಿಸಿ ತತ್ಕಳತ್ರಾಪಹಾರಕನಾದ ನಿನ್ನನ್ನು ಸಂಹರಿಸುವುದಕ್ಕಾಗಿ ಬಾಣವನ್ನು ಪ್ರಯೋಗಿಸಿದೆನು ಭ್ರಾತೃಕಳತ್ರಾಪಹಾರಕನಾದ ನಿನ್ನ ಸಂಹಾರದಿಂದ ನನಗೇನೂ ಪಾಪವಿಲ್ಲ ಎಂದು ನುಡಿಯಲು, ವಾಲಿಯು ಅಯ್ಯಾ ! ರಾಮಚಂದ್ರನೇ ನೀನು ಮಹಾಬುದ್ಧಿಶಾಲಿಯಾಗಿ ಇಷ್ಟು ಅನಾಲೋಚಿತನಾಗಿ ಕಾರ್ಯವನ್ನು ಮಾಡಿದೆಯಲ್ಲಾ ರಾವಣಾಸುರನ ಜಯಕ್ಕೋಸ್ಕರವಾಗಿ ಈ ಸುಗ್ರೀವನ ಸಹಾಯಕ್ಕಿಂತಲೂ ನನ್ನ ಸಹಾಯವುಂಟಾಗಿದ್ದರೆ ನಿನಗೆ ಕಷ್ಟವಿಲ್ಲದೇ ಸೀತಾದೇವಿಯನ್ನು ತಂದು ನಿನಗೊಪ್ಪಿಸುತ್ತಿದ್ದೆನಲ್ಲಾ ಭೀತನಾದ ಈ ಸುಗ್ರೀವನಿಂದ ಈ ಕಾರ್ಯವು ಕಷ್ಟಸಾಧ್ಯವೇ ಹೊರತು ಬೇರೇಯಿಲ್ಲಾ ಇದಲ್ಲದೆ ನಿನಗೆ ಯಾವ ವಿಧವಾದ ಅಪರಾಧವನ್ನೂ ನಾನು ಮಾಡದಿದ್ದರೂ ನನ್ನನ್ನು ಸಂಹರಿಸುವುದು ನಿನಗೆ ನೀತಿವಿರೋಧವಲ್ಲವೇ ಆಹಾ ಹೀಗೆ ನೀನು ಬಂದಿರುವುದನ್ನು ನನಗೆ ತಿಳಿಸಿದ್ದರೆ ನಾನು ಭೃತ್ಯನಾಗಿ ಸಕಲ ಕಾರ್ಯಗಳಲ್ಲಿಯೂ ಸಹಾಯಭೂತನಾಗಿರುತ್ತಿದ್ದೆನಲ್ಲ ! ಕೈ ಮಿಂಚಿದ ಕೆಲಸಕ್ಕೆ ದುಃಖಿಸಿ ಉಪಯೋಗವಿಲ್ಲವೆಂದು ಹೇಳಲು ರಾಮಚಂದ್ರನು ಎಲೈ ವಾಲಿಯೇ ಶರಣಾಗತರಕ್ಷಣಕ್ಕಾಗಿ ಎಂಥಾ ಕೆಲಸವನ್ನಾದರೂ ಮಾಡುವುದು ರಘುವಂಶೋತ್ಪನ್ನರಾದವರಿಗೆ ಸಹಜವಾದ ಗುಣವಾಗಿರುತ್ತದೆ. ನಿನ್ನ ಸಂಹಾರಕ್ಕಾಗಿ ಶರಣಾಗತನಾದ ಸುಗ್ರೀವನನ್ನು ರಕ್ಷಿಸುವದು ಮುಖ್ಯಕರ್ತವ್ಯವಾದ್ದರಿಂದ ಬಾಣವನ್ನು ಪ್ರಯೋಗಿಸಿದ್ದೇನೆಂದು ಹೇಳಲು ವಾಲಿಯು ಸುಗ್ರೀವನನ್ನು ನೋಡಿ ಎಲೈ ಸುಗ್ರೀವನೇ, ನಿನಗೆ ನಾನು ಮಾಡಿದ ಅಪರಾಧವನ್ನು ಮರೆತು ನನ್ನ ಪ್ರಿಯಪುತ್ರನಾದ ಶುಭಾಂಗನಾದ ಅಂಗದನನ್ನು ಸಂರಕ್ಷಿಸುವದಲ್ಲದೇ ಸರ್ವವಾನರ ಪಟ್ಟಭದ್ರನಾಗಿ ರಾಮಚಂದ್ರನಿಗೆ ಮಿತ್ರನಾಗಿ ಸುಖವಾಗಿರು ಎಂಬದಾಗಿ ನುಡಿದು, ರಾಮಚಂದ್ರನನ್ನು ನೋಡಿ ಮಹಾತ್ಮನೇ ನಾನು ಕೃತಾರ್ಥನಾದೆನು ನೀನು ಸಾಕ್ಷಾತ್ ನಾರಾಯಣಮೂರ್ತಿಯೇ ಹೊರತು ಮಾನವಮಾತ್ರನಲ್ಲ ಪ್ರಾಣಿಗಳಿಗೆ ಜಾತಸ್ಯಮರಣಂಧ್ರುವಂ ಎಂಬಂತೆ ಮರಣವುಸಿದ್ಧವಾಗಿದೆ ನಿನ್ನಬಾಣದಿಂದ ಮೃತಿಯನ್ನೈದಿದರೆ ಉತ್ತಮಲೋಕ ಪ್ರಾಪ್ತಿಯಾಗುವುದರಲ್ಲಿ ಸಂಶಯವಿಲ್ಲ. ಈ ಭಾಗದಲ್ಲಿ ನನಗೆ ಎಷ್ಟು ಮಾತ್ರವೂ ವ್ಯಾಕುಲವಿಲ್ಲ ನನ್ನ ಶರೀರದಲ್ಲಿ ಹೊಕ್ಕಿರುವ ಈ ಬಾಣವನ್ನು ತೆಗೆದುಹಾಕು ಎನಲು, ರಾಮಚಂದ್ರನು ಹತ್ತಿರಕ್ಕೆ ಬಂದು ಬಾಣವನ್ನು ಕೀಳಲು ಆ ನೋವನ್ನು ಸಹಿಸಲಾರದೇ ವಾಲಿಯು ಮೃತಿಯನ್ನೈದಿದನು. ಈ ವೃತ್ತಾಂತವನ್ನು ಕಿಷ್ಕಿಂಧಾಪುರಿಗೆ ತಿಳಿಸಲು ಅಲ್ಲಿದ್ದ ತಾರಾಪ್ರಮುಖರಾದ ಅಂತಃಪುರದ ಸ್ತ್ರೀಯರು ಮಂತ್ರಿಗಳು ಮಿತ್ರರು ಗುಂಪುಕೂಡಿ

ವಾಲಿಯ ಹತ್ತಿರಕ್ಕೆ ಬಂದು ಆತನಮೇಲೆ ಬಿದ್ದು ಶೋಕಾಗ್ನಿ ಮಗ್ನರಾಗಿ ಹೊರಳಿದರು. ತಾರೆಯು ವಾಲಿಯನ್ನು ಆಲಿಂಗಿಸಿಕೊಂಡು ಹಾ! ಪ್ರಾಣನಾಥ! ನಾನು ಹೇಳಿದ ಮಾತನ್ನು ಕೇಳದೆ ಯಾಕೆ ಯುದ್ಧಕ್ಕೆ ಬಂದೆ ನಿನ್ನ ಸಾಹಸವೂ ಬುದ್ಧಿಯೂ ಈಗಎಲ್ಲಿಹೋಯಿತು. ನನಗೆ ಇನ್ನಾರುಗತಿನಿನ್ನ ಮಗನಸಂಗಡ ಯಾಕೆ ಮಾತಾಡುವದಿಲ್ಲವೆಂದು ಬಹಳವಾಗಿ ಪ್ರಲಾಪಿಸಿ ಮೂರ್ಛಾಕ್ರಾಂತಳಾಗಿ ಬಿದ್ದಿರಲು, ಆಗ ರಾಮಾಜ್ಞಪ್ತನಾದ ಸುಗ್ರೀವನು ಅಂಗದನಿಂದ ವಾಲಿಗೆ ಉತ್ತರಕ್ರಿಯೆಗಳನ್ನು ಮಾಡಿಸಿದನು.

## ಸುಗ್ರೀವನ ಪಟ್ಟಾಭಿಷೇಕ.

ಬಳಿಕಾ ರಾಮಚಂದ್ರನು ಸುಗ್ರೀವನಿಗೆ ಸರ್ವವಾನರ ಸಾಮ್ರಾಜ್ಯಪಟ್ಟವನ್ನು ಕಟ್ಟಿ ಈಗ ವರ್ಷಾಕಾಲವಾದುದರಿಂದ ಶರತ್ಕಾಲ ಬರುವವರೆಗೂ ಸುಖವಾಗಿರು ಎಂದು ಹೇಳಲು ಆತನು ಪುರವನ್ನು ಹೊಕ್ಕು ತಾರಾಪ್ರಭೃತಿ ಪತ್ನಿಯರಿಂದೊಡಗೂಡಿ ಸೌಖ್ಯಪಾರಾವಾರದಲ್ಲಿ ಮುಳಿಗಿದ್ದನು, ರಾಮಚಂದ್ರನು ಲಕ್ಷ್ಮಣಾನುಚರನಾಗಿ ಋಷ್ಯಮೂಕಾದ್ರಿಯಲ್ಲಿ ವಾಸಮಾಡಿಕೊಂಡಿದ್ದನು. ಈ ರೀತಿಯಾಗಿ ವರ್ಷಾಕಾಲವು ಕಳೆದನಂತರ ಶುಭಕರವಾದ ಶರದೃತುವು ಪ್ರಾಪ್ತವಾಯಿತು.

ಬಳಿಕಾ ರಾಮಚಂದ್ರನು ಲಕ್ಷ್ಮಣಸ್ವಾಮಿಯನ್ನು ನೋಡಿ ಅಯ್ಯಾ! ಪ್ರಿಯಸಹೋದರನೇ ಸುಗ್ರೀವನಿಗೆ ನಾವು ಮಾಡಿದ ಉಪಕಾರದಿಂದ ಅಮಿತ ಸೌಖ್ಯವು ಪ್ರಾಪ್ತವಾಯಿತು. ನಮಗೆ ಯಾವಾಗ ಸೀತಾ ಪ್ರಾಪ್ತಿಯಾಗಿ ಶತ್ರುಸಂಹಾರದಿಂದ ಸುಖವುಂಟಾಗುವದೋ ಕಾಣೆ. ಈಗ ಮೂರು ತಿಂಗಳಾಯಿತು. ಸುಗ್ರೀವನು ಮತ್ತನಾಗಿ ನಮ್ಮನ್ನು ವಿಚಾರಿಸದೇ ಮೈಮರೆತು ಇಧಾನೆ ಇಂಥಾ ಕೃತಘ್ನನ ಸಹಾಯದಿಂದ ನಮಗೇನು ಫಲವಾದೀತು ಈಗ ನೀನು ಹೋಗಿ ಅವನನ್ನು ಕಂಡು ಮಾತಾಡಿ ಬರಬೇಕೆಂದು ಆಜ್ಞಾಪಿಸಲು ಆ ಲಕ್ಷ್ಮಣನು ಧನುರ್ಧಾರಿಯಾಗಿ ಕೋಪಾರುಣ ನೇತ್ರನಾಗಿ ಹೊರಟು ಕಿಷ್ಕಿಂಧಾಪುರದ್ವಾರದಲ್ಲಿ ನಿಂತು ಧನುಷ್ಟಂಕಾರ ಮಾಡಿದನು. ಆಗ ವಾನರರು ಆ ಲಕ್ಷ್ಮಣನನ್ನು ನೋಡಿ ಧನುಷ್ಟಂಕಾರದಿಂದ ಭೀತರಾಗಿ ಓಡಿಹೋಗಿ ಮಂತ್ರಿಪರಿವೃತನಾಗಿ ಸಭಾಸ್ಥಾನದಲ್ಲಿ ಕುಳಿತಿರುವ ಸುಗ್ರೀವನನ್ನು ಕಂಡು ಓ ವಾನರರಾಜನೇ ಲಕ್ಷ್ಮಣನು ಕೋಪಿತನಾಗಿ ಧನುರ್ಧಾರಿಯಾಗಿ ಬಂದು ಪುರದ್ವಾರದಲ್ಲಿ ನಿಂತು ಮಧ್ಯಂದಿನದ ಮಾರ್ತಾಂಡನೋಪಾದಿಯಲ್ಲಿ ಸರ್ವಭಯಂಕರನಾಗಿದ್ದಾನೆ ಇನ್ನು ಮುಂದೆ ಏನು ಗತಿಯೋ ಕಾಣೆ ನೀನು ಶೀಘ್ರವಾಗಿ ಹೋಗಿ ಆತನನ್ನು ಸಮಾಧಾನಪಡಿಸಿದರೇ ಸರಿ! ಇಲ್ಲದಿದ್ದರೆ ವಾಲಿಯಗತಿಯೇ ನಮಗೂ ಆದೀತೆಂದು ವಿಜ್ಞಾಪಿಸಲು ಆಗ ಸುಗ್ರೀವನು ಭಯಾವಿಷ್ಟನಾಗಿ ಏನೂ ತೋರದೇ ಸಿಂಹಾಸನದಿಂದಿಳಿದು ಅಂತಃಪುರಕ್ಕೆ ಹೋಗಿ ತಾರೆಗೆ ಈ ವೃತ್ತಾಂತವನ್ನು ತಿಳಿಸಲೂ ಆ ತಾರೆಯು ನೀನು ಭಯಪಡಬೇಕಾದ ಕೆಲಸವಿಲ್ಲಾ, ನಾನು ಹೋಗಿ ಆತನನ್ನು ಸಮಾಧಾನ ಮಾಡುವೆನೆಂದು ಹೇಳಿ ಪರಿವಾರ ಸಮೇತಳಾಗಿ ತೆರಳಿ ಪುರದ್ವಾರದಲ್ಲಿ ನಿಂತಿರುವ ಲಕ್ಷ್ಮಣಸ್ವಾಮಿಯನ್ನು ಕಂಡು ಪಾದಗಳಿಗೆರಗಿ ಓ ಮಹಾತ್ಮನೇ! ಕೋಪವನ್ನು ಬಿಡು ಸುಗ್ರೀವನು ಮತ್ತನಾಗಿ ಮೂರುತಿಂಗಳಿಂದ ತಮ್ಮ ಸನ್ನಿಧಾನಕ್ಕೆ ಬಾರದೆ ಸ್ತ್ರೀಲೋಲನಾಗಿ ಇದಾನೆ ಈಗ ನಿಮಗೆದುರಾಗಿ ಬರುವದಕ್ಕೆ ಲಜ್ಜಿತನಾಗಿರುತ್ತಾನೆ ಇನ್ನು ಮುಂದೆ ನಿಮ್ಮ ಕಾರ್ಯಾತುರದಲ್ಲೇ ಇರುತ್ತಾನೆ ಇದುವರೆಗೆ ಏನು ಅಪರಾಧಮಾಡಿದ್ದರೂ ಕ್ಷಮಿಸಬೇಕು. ಆಜ್ಞಾನುಸಾರವಾಗಿ ಆತನನ್ನು ಕಳುಹಿಸುವೆನೆಂದು ಹೇಳಿದಳು. ಆಗ ಲಕ್ಷ್ಮಣನು ಕೋಪೋಪಶಮನನಾಗಿ ಆತನನ್ನು ಋಷ್ಯಮೂಕಾದ್ರಿಗೆ ಕಳುಹಿಸಬೇಕೆಂದು ಹೇಳಿ

ಮುಂದೆ ಹೊರಟನು. ಬಳಿಕಾ ತಾರೆಯು ಗ್ರಾಮಕ್ಕೆ ಬಂದು ಸುಗ್ರೀವನನ್ನು ಕಳುಹಿಸಲು ಆತನು ಕಪಿಬಲಸಹಿತ ಸಚಿವ ಪರಿವೃತನಾಗಿ ಋಷ್ಯಮೂಕಾದ್ರಿಯನ್ನು ಸೇರಿ ಅಲ್ಲಿ ಕುಳಿತಿರುವ ಲಕ್ಷ್ಮಣಸೇವಿತನಾದ ರಾಮಚಂದ್ರನ ಪಾದಗಳಮೇಲೆ ಬಿದ್ದು ಓ ಮಹಾತ್ಮನೇ ! ನನ್ನ ತಪ್ಪನ್ನು ಕ್ಷಮಿಸಬೇಕೆಂದು ಬದ್ಧಾಂಜಲಿಯಾಗಿ ನಿಂತನು. ಆಗ ರಾಮಚಂದ್ರನು ದಯಾಪೂರಿತ ಹೃದಯನಾಗಿ, ಆತನನ್ನು ನೋಡಿ ಅಯ್ಯಾ ಪ್ರಿಯಮಿತ್ರನೇ ! ನೀನು ಭಯಪಡಬೇಡ ಶರಣಾಗತರಕ್ಷಣ ತತ್ಪರನಾದ ನನ್ನ ಮುಂದೆ ವಿಧೇಯನಾದ ನಿನಗೇನು ಭಯ ಮೂರು ತಿಂಗಳಿಂದ ನೀನು ಬಾರದೆ ಇದ್ದಕಾರಣ ಲಕ್ಷ್ಮಣನನ್ನು ಕಳುಹಿಸಿದೆನು. ಇದುವರೆಗೂ ನಿನ್ನ ಕಾರ್ಯವು ಸಫಲವಾಯಿತು, ಇನ್ನು ಮೇಲೆ ನಮ್ಮ ಕೆಲಸಕ್ಕೆ ನೀನು ಉದ್ಯುಕ್ತನಾಗಿ ನೆರವೇರಿಸಬೇಕೆಂದು ಹೇಳಲು, ಸುಗ್ರೀವನು ಓ ಮಹಾತ್ಮನೆ ವರ್ಷಾಕಾಲವು ಕಳೆಯಿತು. ಈಗತಾನೆಶರದೃತುವು ಪ್ರಾಪ್ತವಾಗಿದೆ ಇನ್ನುಮೇಲೆ ಸೀತಾನ್ವೇಷಣಾತುರನಾಗಿ ಎಲ್ಲಾ ಕೆಲಸಗಳನ್ನು ಮಾಡುವೆನು ಎಂಬದಾಗಿ ಹೇಳಿ ಭೂಮಂಡಲದಲ್ಲಿರುವ ಸಕಲವಾದ ವಾನರವೀರರನ್ನು ಬೇಗನೆ ಕರೆಸಬೇಕೆಂದು ತನ್ನ ಮಂತ್ರಿಗಳಿಗೆ ಆಜ್ಞೆಯನ್ನಿತ್ತನು. ಬಳಿಕಾ ಹನುಮಂತಾದಿ ಮಂತ್ರಿಗಳು ವಾನರಭಟರನ್ನು ಕಳುಹಿಸಿ ಸಪ್ತದ್ವೀಪಗಳಲ್ಲಿರುವ ಎಲ್ಲಾ ವಾನರರನ್ನೂ ಕರೆಸಿದರು

## ಸೀತೆಯನ್ನು ಹುಡುಕುವುದಕ್ಕೆ ಕಪಿಗಳನ್ನು ಕಳುಹಿಸಿದುದು.

ತರುವಾಯ ಸುಗ್ರೀವನು ಕೆಲವು ವಾನರರನ್ನು ನೋಡಿ ಓ ವನಚರರುಗಳಿರಾ, ನೀವು ಹೊರಟುಹೋಗಿ ವಿಂಧ್ಯಾದಿಪರ್ವತಗಳಲ್ಲಿಯೂ ಗಂಗಾನದೀತೀರಗಳಲ್ಲಿಯೂ ಸಕಲ ಪಟ್ಟಣಗಳಲ್ಲಿಯೂ ರಾಮಚಂದ್ರನ ಪತ್ನಿಯಾದ ಸೀತಾದೇವಿಯನ್ನು ಹುಡಿಕಿ ಆಕೆಯನ್ನು ನೋಡಿ ರಾಮನ ಕ್ಷೇಮವನ್ನು ಅವಳಿಗೆ ತಿಳಿಸಿ ಆಕೆಯ ವೃತ್ತಾಂತವನ್ನು ತಿಳಿದುಕೊಂಡು ಒಂದು ತಿಂಗಳೊಳಗಾಗಿ ಇಲ್ಲಿಗೆ ಬರಬೇಕು. ತಾವಕಾಶವಾದರೇ ಪ್ರಾಣದಂಡನೆಯಾಗುವದರಲ್ಲಿ ಸಂಶಯವಿಲ್ಲವೆಂದುಹೇಳಿ ಪೂರ್ವದಿಕ್ಕಿಗೆ ಕೆಲವರನ್ನು ಪಶ್ಚಿಮದಿಕ್ಕಿಗೆ ಕೆಲವರನ್ನು ಕಳುಹಿಸಿದನು, ಹನುಮಂತ ಜಾಂಬವಂತ ಅಂಗದ ನೀಲ ಮೊದಲಾದ ಕೆಲವರನ್ನು ದಕ್ಷಿಣದಿಕ್ಕಿಗೆ ಕಳುಹಿಸಿದನು. ರಾಮಚಂದ್ರನು ಆಂಜನೇಯನಿಂದ ಈ ಕೆಲಸ ನೆರವೇರುವುದೆಂದೆಣಿಸಿ ತನ್ನ ಅಂಗುಳ್ಯಾಭರಣವನ್ನು ಅಭಿಜ್ಞಾನ ಸೂಚಕವಾಗಿ ಆತನ ಕೈಗೆ ಕೊಟ್ಟು ಕಳುಹಿಸಲು ಅವರೆಲ್ಲರು ತಮ್ಮ ಪರಿವಾರದಿಂದೊಡಗೂಡಿ ಕೆಲವರು ಉತ್ತರಕ್ಕೆ ಹೊರಟರು ಕೆಲವರು ಪೂರ್ವಕ್ಕೆ ಹೊರಟರು ಕೆಲವರು ಪಶ್ಚಿಮಕ್ಕೆ ಹೊರಟರು ಕೆಲವರು ದಕ್ಷಿಣಕ್ಕೆ ಹೊರಟರು. ಬಳಿಕ ಎಲ್ಲರೂ ತಮ್ಮ ಶಕ್ತಿಗನುಗುಣವಾಗಿ ಸೀತೆಯನ್ನು ಹುಡಿಕಿ ತಿಂಗಳ ಒಳಗಾಗಿ ಬಂದು ಸೇರಿದರು ದಕ್ಷಿಣದಿಕ್ಕಿಗೆ ಹೋದ ಹನುಮಂತಾದಿಗಳು ಸೀತಾನ್ವೇಷಣತತ್ಪರರಾಗಿ ಗಿರಿಗಳನ್ನು ನದಿಗಳನ್ನೂ ಹುಡುಕುತ್ತಾ ಒಂದಾನೊಂದು ಅರಣ್ಯದಲ್ಲಿ ದಾರಿತಪ್ಪಿ ಒಂದು ಗುಹೆಯೊಳಕ್ಕೆ ಹೊಕ್ಕು ಹೋಗುತ್ತಿದ್ದು ಆನಂದನೋದ್ಯಾನಕ್ಕೆ ಸಮಾನವಾದ ಆರಾಮದಲ್ಲಿ ವಾಸಮಾಡುತ್ತಿರುವ ಸ್ವಯಂಪ್ರಭಾ ಎಂಬ ದೇವಕನ್ಯೆಯನ್ನು ನೋಡಿ ಆಕೆಯ ಕಾಂತಿಯಿಂದ ವಿಸ್ಮಿತರಾಗಿ ಆಕೆಯ ಸಂಗಡ ಮಾತನಾಡಲಾರಂಭಿಸಿ ಓ ವನಿತಾರತ್ನವೇ ಈ ಆರಾಮವು ಯಾರದು ನೀನು ಯಾರು ದೇವಕನ್ಯಕೆಯೊ ನಾವು ಸೀತಾನ್ವೇಷಣ ತತ್ಪರರಾಗಿ ಬಂದಿರುತ್ತೇವೆ ಆ ಸೀತಾದೇವಿ ಎಲ್ಲಿರುವಳು ನಿನ್ನ ವೃತ್ತಾಂತವೇನು ? ಇದೆಲ್ಲವನ್ನೂ ತಿಳಿಸಬೇಕೆನಲು ಆ ಸ್ವಯಂಪ್ರಭೆಯು, ಅಯ್ಯಾ ವನಚರರುಗಳಿರಾ ನಾನು ಸ್ವಯಂಪ್ರಭಾ ಎಂಬ ದೇವಕನ್ಯೆಕೆಯು ಈ ಉದ್ಯಾನವು ನನ್ನ ಶಕ್ತಿಯಿಂದ ನಿರ್ಮಿತವಾದದ್ದು ನಾವು

ಪತ್ನಿಯಾದ ಸೀತಾದೇವಿಯು ರಾವಣಾಸುರನಿಂದ ಅಪಹೃತಳಾಗಿ ದಕ್ಷಿಣ ಸಮುದ್ರದ ದಡದಲ್ಲಿರುವ ಲಂಕಾದ್ವೀಪದಲ್ಲಿ ಅಶೋಕವನದಲ್ಲಿ ವಾಸಿಸುತ್ತಾಳೆ ನೀವು ಇದೇ ಮಾರ್ಗದಲ್ಲಿ ಹೋಗಿ ಆಕೆಯನ್ನು ನೋಡಿ ಮಾತನಾಡಿ ಬರಬಹುದು, ಈ ಸಂಗತಿಯು ನನ್ನ ಪರಶಕ್ತಿಯಿಂದ ತಿಳಿಯಿತು ನಿಮ್ಮಂಥಾ ಪರಾಕ್ರಮಶಾಲಿಗಳೇ ಹಿಂದಕ್ಕೆ ಹೋದರೆ ಈ ಕೆಲಸ ಇನ್ನಾರಿಂದ ನೆರವೇರೀತು ರಾಮಕಾರ್ಯ ದುರಂಧರರಾಗಿ ಕೃತಾರ್ಥರಾಗಿ ಎಂದು ಹೇಳಿದಳು. ಬಳಿಕಾ ವಾನರರು ಓ ತಾಯಿಯೇ ! ಈ ಉದ್ಯಾನದಿಂದ ಹೊರಗೆ ಹೋಗುವದಕ್ಕೆ ದಾರಿ ತಿಳಿಯಲಿಲ್ಲ ನಾವು ದಿಗ್ಭ್ರಾಂತರಾಗಿ ಏನೂ ತೋರದೆ ನಮ್ಮ ಶೌರ್ಯವು ನಿಷ್ಫಲವಾಗಿದೆ ಎಂದು ನುಡಿಯಲು ಆಗ ಸ್ವಯಂಪ್ರಭೆಯು ಅಯ್ಯಾ ನೀವುಗಳೆಲ್ಲರೂ ಕಣ್ಣುಮುಚ್ಚಿಕೊಂಡರೇ ದಾರಿ ತಿಳಿಯುತ್ತದೆ ಎಂದಳು. ಆಗ ಎಲ್ಲರೂ ಕಣ್ಣುಮುಚ್ಚಿಕೊಂಡು ಆಕೆಯ ಮಹಾತ್ಮ್ಯದ ದೆಶೆಯಿಂದ ಹೊರಗೆ ಬಂದು ದಾರಿಯಲ್ಲಿ ನಿಂತರು. ಆಗ ವಿಸ್ಮಿತರಾಗಿ ಆಹಾ ! ಇದೇನು ವಿಚಿತ್ರ ನಾವು ಇದ್ದ ಉದ್ಯಾನವನವು ಎಲ್ಲಿ ಹೋಯಿತು ನಾವು ಹೇಗೆ ನಮ್ಮ ದಾರಿಗೆ ಬಂದೆವು ಆಗಲಿ ಸಮುದ್ರತೀರಕ್ಕೆ ಹೋಗಿ ಹುಡುಕಬೇಕೆಂದಾಲೋಚಿಸುತ್ತಾ ಸಮುದ್ರತೀರದ ಅರಣ್ಯಗಳಲ್ಲಿ ಸೀತಾದೇವಿಯನ್ನು ಹುಡುಕುತ್ತಾ ಎಲ್ಲಿಯೂ ಕಾಣದೇ ಮಹೇಂದ್ರಪರ್ವತದಲ್ಲಿ ಕುಳಿತು ಖಿನ್ನರಾಗಿ ಅಂಗದಾದಿ ವಾನರರು ಆಲೋಚನೆಯನ್ನುಮಾಡಲುಪಕ್ರಮಿಸಿದರು. ಆಹಾ ದೈವತಂತ್ರವು ಅಸಾಧ್ಯವಾದದ್ದು. ಅಯೋಧ್ಯಾಧಿನಾಥನಾದ ರಾಮಚಂದ್ರನು ಏಕೆ ಅರಣ್ಯಕ್ಕೆ ಬಂದನೋ ಪಾಪಿಷ್ಟನಾದ ರಾವಣಾಸುರನು ಸೀತಾದೇವಿಯನ್ನು ಏಕೆ ಅಪಹರಿಸಿದನೋ ಆ ರಾಮನಿಗೂ ನಮ್ಮ ರಾಜನಾದ ಸುಗ್ರೀವನಿಗೂ ಏಕೆ ಮೈತ್ರಿಯುಂಟಾಯಿತೋ ಈ ಸೀತಾದೇವಿಯನ್ನು ಹುಡುಕುವುದಕ್ಕೆ ನಮ್ಮನ್ನು ಏಕೆ ಕಳುಹಿಸಿದನೋ ಜಟಾಯುವು ಈ ವೃತ್ತಾಂತವನ್ನು ರಾಮನಿಗೆ ಏಕೆ ತಿಳಿಸಿದನೋ ? ಸುಗ್ರೀವಾಜ್ಞಾನುಸಾರವಾಗಿ ತಿಂಗಳ ಒಳಗಾಗಿ ಸೇರುವದಕ್ಕೆ ಇಲ್ಲದೇ ಸಾವಕಾಶವಾಯಿತು, ಇನ್ನು ಹೋದರೇನು ಆತನು ಸಂಹಾರ ಮಾಡದೇ ಬಿಡುವನಲ್ಲ. ಹೇಗಾದರೂ ಸಾಯುವದೇ ನಿಜ ಆತನಿಂದ ಮೃತಿಯನ್ನೈದುವದಕ್ಕಿಂತಲೂ ನಾವೇ ಪ್ರಾಣತ್ಯಾಗಮಾಡಿಕೊಂಡರೆ ಒಳ್ಳೆಯದೆಂದು ಪ್ರಲಾಪಿಸುತ್ತಿದ್ದರು, ಆಗ ಆ ಪರ್ವತನಿವಾಸಿಯಾದ ಜಟಾಯುವಿನ ಸಹೋದರನಾದ ಸಂಪಾಪತಿಯೆಂಬ ಪಕ್ಷಿರಾಜನು ಎದ್ದು ಬಂದು ಅಯ್ಯಾ ಮಹಾತ್ಮರೇ ನೀವು ಯಾರು ? ಎಲ್ಲಿಂದ ಬಂದಿರಿ ? ನಮ್ಮ ತಮ್ಮನಾದ ಜಟಾಯುವಿನ ವೃತ್ತಾಂತವನ್ನು ಸಂಗ್ರಹವಾಗಿ ತಿಳಿಸಿರಿ, ಈಗ ಆ ಜಟಾಯುವು ಎಲ್ಲಿರುತ್ತಾನೆ ಎಂದು ಕೇಳಲು ವಾನರರು ಅಯ್ಯಾ ಜಟಾಯುವು ರಾವಣಾಸುರನಿಂದ ಸಂಹರಿಸಲ್ಪಟ್ಟನು ಎಂದು ಹೇಳಿದರು.

ಆಗ ಸಂಪಾತಿಯು ಸಹೋದರನ ವಿಯೋಗದಿಂದ ಮೂರ್ಛಾಕ್ರಾಂತನಾಗಿ ತರುವಾಯ ಎಚ್ಚರಗೊಂಡು ಜಟಾಯುವಿಗೆ ತಿಲೋದಕಾದಿ ಕ್ರಿಯೆಗಳನ್ನು ನೆರವೇರಿಸಿದನು. ಬಳಿಕ ವಾನರರು ಅಯ್ಯಾ ಗೃಧ್ರರಾಜನೇ ! ಜಟಾಯುವು ನೀನು ಸಹೋದರರಾದರೆ ನೀನು ಇಲ್ಲಿ ವಾಸಮಾಡುವದಕ್ಕೆ ಏನು ಕಾರಣವೆಂದು ಕೇಳಲು ಸಂಪಾತಿಯು ಅಯ್ಯಾ ಮಹಾತ್ಮರೇ ! ಪೂರ್ವಕಾಲದಲ್ಲಿ ನಾವಿಬ್ಬರೂ ಬಲಗರ್ವಿತರಾಗಿ ಸೂರ್ಯಮಂಡಲದವರೆಗೂ ಹಾರಬೇಕೆಂದಾಲೋಚಿಸಿ ರೆಕ್ಕೆಗಳಿಂದ ಹಾರಿಹೋಗುತ್ತಾ ಸೂರ್ಯಮಂಡಲದ ಸಮೀಪಕ್ಕೆ ಹೋದೆವು ಆಗ ತಮ್ಮನಾದ ಜಟಾಯುವು ಸೂರ್ಯಕಿರಣಗಳಿಂದ ಭಸ್ಮವಾದನೆಂದೆಣಿಸಿ ನನ್ನ ರೆಕ್ಕೆಗಳನ್ನು ಆತನಿಗೆ ಅಡ್ಡವಾಗಿ ಚಾಚಿದೆನು ಆಗ ನನ್ನ ರೆಕ್ಕೆಗಳು ಸೂರ್ಯಕಾಂತಿಯಿಂದ ಸುಟ್ಟು ದಗ್ಧವಾಗಿಹೋದವು ಕೂಡಲೆ ಈ ಮಹೇಂದ್ರಪರ್ವತದಲ್ಲಿ ಬಿದ್ದೆನು ಆ ಜಟಾಯುವು ಎಲ್ಲಿ ಹೋದನೋ ನನಗೆ ತಿಳಿಯಲೇ ಇಲ್ಲ, ಇದು ನನ್ನ ವೃತ್ತಾಂತ ಈಗ ಲಂಕಾದ್ವೀಪದಲ್ಲಿ ಅಶೋಕವನದಲ್ಲಿ ಸೀತಾದೇವಿಯು

ಹಾಸಿಸುತ್ತಾಳೆ ಶತಯೋಜನ ಪರ್ಯಂತರವೂ ದೃಷ್ಟಿಪ್ರಸರಣೆಯುಂಟಾಗಿ ನನಗೆ ತಿಳಿಯುತ್ತದೆ ನೀವು ಸಮುದ್ರವನ್ನು ಲಂಘಿಸಿ ಲಂಕಾದ್ವೀಪಕ್ಕೆ ಹೋದರೆ ಸೀತಾದೇವಿಯು ಸಿಕ್ಕುವದರಲ್ಲಿ ಸಂಶಯುವಿಲ್ಲವೆಂದು ಹೇಳಲು ಆಗ ವಾನರರು ಎದ್ದು ಧೀರರಾಗಿ ಕುಳಿತು ಸಮುದ್ರಲಂಘನೆ ಯನ್ನು ಮಾಡಲುದ್ಯೋಗಿಸಿದರು. ಆಗ ಜಾಂಬವಂತನು ಈ ವಾನರರುಗಳಲ್ಲಿ ಸಮುದ್ರವನ್ನು ಲಂಘಿಸುವದಕ್ಕೆ ಯಾರು ಶಕ್ತರೆಂದು ಪ್ರಶ್ನೆಮಾಡಿದನು. ಅಂಗದನು ಆಹಾ ಸಮುದ್ರವನ್ನು ಲಂಘಿಸುವದರಲ್ಲಿ ಎಲ್ಲರೂ ಸಮರ್ಥರಾದವರೇ, ನಳ, ನೀಲ, ಮೈಂದ, ದ್ವಿವಿದಾದಿಗಳು ಅದ್ವಿತೀಯ ಬಲಸಂಪನ್ನರಲ್ಲವೇ ಹನುಮದಾದಿ ವಾನರರು ಈ ಕೆಲಸವನ್ನು ಎಷ್ಟು ಲಕ್ಷ್ಯವಾಗಿ ಮಾಡಾರು ನಾನೇ ಹೋಗಿ ಲಂಕಾದ್ವೀಪದಲ್ಲಿ ಸೀತಾನ್ವೇಷಣವನ್ನು ಮಾಡಿ ಬರುತ್ತೇನೆ ನಾನು ಇರುವಾಗ ನೀವೆಲ್ಲರೂ ಯೋಚನೆ ಮಾಡಬೇಕಾಗಿಲ್ಲ ಎಂದು ಹೇಳಿದನು. ಬಳಿಕ ಜಾಂಬವಂತನು ಈ ಕೆಲಸ ಇತರರಿಂದ ಆಗತಕ್ಕದ್ದಲ್ಲ ವಾಯುಪುತ್ರನಾದ ಆಂಜನೇಯನಿಂದಲೆ ಆಗಬೇಕು ಆತನು ಸ್ತುತಿಪ್ರೀತನು ಆದಕಾರಣ ಆತನನ್ನು ಶ್ಲಾಘನೆಯಿಂದ ಸಂತೋಷಪಡಿಸಬೇಕೆಂದಾಲೋಚಿಸಿ ಅಯ್ಯಾ ಭೃತ್ಯರಾದ ನಾವುಗಳೆಲ್ಲರೂ ಇರುವಾಗ ಯುವರಾಜನಾದ ನೀನು ಸಮುದ್ರಲಂಘನೆಯನ್ನು ಮಾಡುವದು ಯುಕ್ತವಲ್ಲ ಈ ವಾಯುಪುತ್ರನು ಎಲ್ಲಾ ವಾನರರಿಗಿಂತಲೂ ಶೌರ್ಯದಲ್ಲಿಯೂ ಧೈರ್ಯದಲ್ಲಿಯೂ ಬುದ್ಧಿಯಲ್ಲಿಯೂ ಯೋಚನೆಯಲ್ಲಿಯೂ ಸಮರ್ಥನು. ಬಾಲ್ಯದಲ್ಲಿ ಸೂರ್ಯನನ್ನು ನುಂಗುವದಕ್ಕೆ ಹೋದನು. ಆಗ ಇಂದ್ರನು ತನ್ನ ವಜ್ರಾಯುಧದಿಂದ ಒಂದು ಕೆನ್ನೆಯನ್ನು ಛೇದಿಸಿದನು. ಆದರಿಂದ ವಾಯುದೇವರಿಗೆ ಕೋಪಬಂದು ಜಗತ್ತನ್ನೆಲ್ಲಾ ಸ್ತಂಭಿಸಿದನು. ಆ ಕಾಲದಲ್ಲಿ ಬ್ರಹ್ಮಾದಿಗಳು ಬಂದು ವಾಯುದೇವರನ್ನು ಸ್ತುತಿಸಿ ತತ್ಪುತ್ರನಾದ ಈತನಿಗೆ ಸಕಲಾಸ್ತ್ರಶಸ್ತ್ರಗಳಿಂದ ಯಾವ ವಿಧವಾದ ಬಾಧೆಯು ಇಲ್ಲದಂತೆ ವರವನ್ನು ಕೊಟ್ಟನು. ಇಂಥಾ ಸಾಮರ್ಥ್ಯವುಳ್ಳವನು ಇಲ್ಲಿ ಇನ್ನಾರೂ ಇಲ್ಲ, ಈತನನ್ನು ಕಳುಹಿಸಬೇಕೆಂದು ಹೇಳಲು, ಅಂಗದನು ಅಯ್ಯಾ ಸಮೀರನಂದನನೇ ನೀನು ಈ ಮಹಾ ಕಾರ್ಯವನ್ನು ಮಾಡಿ ನಮ್ಮೆಲ್ಲರಿಗೂ ಆನಂದವನ್ನುಂಟುಮಾಡಬೇಕು ಎಂದು ಹೇಳಲು, ಮಾರುತಿಯುಎದ್ದು ಸಾಷ್ಟಾಂಗ ಪ್ರಣಾಮಮಾಡಿ ಓ ಅಂಗದನೇ ಈ ಕೆಲಸಕ್ಕೆ ಇಷ್ಟು ಆಲೋಚನೆ ಮಾಡಬೇಕೇ ನಾನು ಹೋಗಿ ಲಂಕಾದ್ವೀಪದಲ್ಲಿ ಸೀತಾದೇವಿಯ ದರ್ಶನಮಾಡಿ ಬರುವೆನು, ನೀವೆಲ್ಲರೂ ಇಲ್ಲಿಯೇ ಸುಖವಾಗಿರಿ ನಾಳೆ ಸಾಯಂಕಾಲದ ಒಳಗಾಗಿ ನಿಮ್ಮ ದರ್ಶನಾರ್ಥಿಯಾಗಿ ಇಲ್ಲಿಗೆ ಬರುವೆನು ಎಂದು ಹೇಳಿ ಪ್ರಯಾಣ ಸಿದ್ಧನಾದನೆಂದು ಮಾರ್ಕಂಡೇಯ ಋಷಿಯು ಧರ್ಮರಾಯನಿಗೆ ಹೇಳಿ ಸುಮ್ಮನಾದನು.

ಶ್ರೀರಾಮಾಯಣ ಕಥಾಸಂಗ್ರಹದಲ್ಲಿ ಕಿಷ್ಕಿಂಧಾಕಾಂಡಂ ಸಂಪೂರ್ಣಂ.



ಶ್ರೀರಸ್ತು.

ಶ್ರೀ ರಾಮಚಂದ್ರಾಯ ನಮಃ.



# ರಾಮಾಯಣ ಕಥಾಸಂಗ್ರಹ.



ವಚನದಲ್ಲಿ

## ಸುಂದರಕಾಂಡವು.



ಎಲೈ ಧರ್ಮನಂದನನೇ ? ಮುಂದಣ ಕಥಾಚಮತ್ಕಾರವನ್ನು ಏಕಾಗ್ರಚಿತ್ತದಿಂದ ಕೇಳು, ಬಳಿಕ ಆಂಜನೇಯನು ಜಾಂಬವಾದಿಗಳಿಗೆ ನಮಸ್ಕರಿಸಿ ಭುಜಾಸ್ಫಾಲನಂಗೈದು ಎಳ್ಳೆ

ಮಹನೀಯರೇ ತಾವು ಚಿಂತಿಸುವುದೇಕೆ ಯಾವ ಶ್ರೀರಾಮಚಂದ್ರನ ನಾಮಸ್ಮರಣಮಾತ್ರದಿಂದಲೇ ಸಕಲ ಜೀವಗಳು ಅಪಾರವಾದ ಸಂಸಾರಸಾಗರವನ್ನು ದಾಟುವರು ಎನ್ನುವಲ್ಲಿ ರಾಮದೂತರಾದ ನಾವು ರಾಮಕಾರ್ಯಾರ್ಥವಾಗಿ ಬಂದು ಯಃಕಶ್ಚಿತ ಶತಯೋಜನ ವಿಸ್ತೀರ್ಣವಾದ ಸಮುದ್ರವನ್ನು ದಾಟಿ ಸೀತಾನ್ವೇಷಣ ಮಾಡಿಕೊಂಡು ಬರುವುದೇನಾಶ್ಚರ್ಯ ಆ ಮಹಾರಾಯನ ದಯವೊಂದಿದ್ದರೆ ಸಾಕು ಕ್ಷಣಾರ್ಧದಲ್ಲಿ ಕುಲ ಪರ್ವತಗಳನ್ನು ಚೂರ್ಣಮಾಡಬಹುದು ದಿಗ್ಗಜಗಳನ್ನು ಸ್ಥಳಫಲಾಯನಮಾಡಿಸಬಹುದು ಸೂರ್ಯ ಚಂದ್ರ ಮಂಡಲಗಳನ್ನು ಪಿಂಡೀಕರಿಸಬಹುದು ಇರಲಿ ತಮ್ಮನುಗ್ರಹ ಮಾತ್ರದಿಂದ ಈ ಮಹೇಂದ್ರ ಪರ್ವತವನ್ನೇರಿ ಭಯಂಕರ ರೂಪವನ್ನು ತಾಳಿ ಪಾದಪ್ರಹಾರಯೋಗದಿಂದ ಈ ಪರ್ವತವನ್ನು ಭೂಮಿಗಿಳುಹಿ ಗಹನವಾದ ಲವಣಸಮುದ್ರವನ್ನು ಲಂಘಿಸಿ ರಾಮಕಾರ್ಯವನ್ನು ನೆರವೇರಿಸಿಕೊಂಡು ಬರುವೆನು ತಾವೆಲ್ಲರೂ ನೋಡುತ್ತಿರಿ ಎಂದು ಹೇಳಲು ಅಂಗದ ಜಾಂಬವಾದಿಗಳು ಮಾರುತಿಯ ಧೈರ್ಯಕ್ಕೂ ಸಾಹಸಕ್ಕೂ ಶ್ರೀರಾಮನಲ್ಲಿರುವ ಭಕ್ತಿಗೂ ಬೆರಗಾಗಿ ಮಾರುತಿಯನ್ನು ಆಲಿಂಗಿಸಿದ ಬಳಿಕ ಆಂಜನೇಯನು ನಮಸ್ಕರಿಸಿ ಫಲಪುಷ್ಪಕಿಸಲಯ ಭಾಸುರವಾದ ಮರಗಳಿಂದಲೂ ಕಂಠೀರವ ವ್ಯಾಘ್ರ ಶರಭಾದಿ ಮೃಗಗಳಿಂದಲೂ ಸುರಾಸುರ ಗಂಧರ್ವ ಯಕ್ಷ ವಿದ್ಯಾಧರರುಗಳಿಂದಲೂ ಹಂಸ ಮರಾಳ ಕಾಕ ಘೂಕಾದಿ ಪಕ್ಷಿವ್ರಾತಂಗಳಿಂದಲೂ ದರ್ಪಣ ನಿರ್ಮಲ ಕಮಲಾಕರಗಳಿಂದಲೂ ಪ್ರಕಾಶಮಾನವಾದ ಮಹೇಂದ್ರಪರ್ವತದ ಶಿಖರವನ್ನು ಹತ್ತಿ ರಾಮದೇವರ ಚರಣಕಮಲವನ್ನು ಧ್ಯಾನಮಾಡುತ್ತಾ ಜನಕಾತ್ಮಜೆಯ ಪಾದದರ್ಶನವನ್ನಪೇಕ್ಷಿಸಿ ಭುಜಸ್ಫಾಲನೆಮಾಡಿ ಮೇಲಕ್ಕೆ ಕುಪ್ಪಳಿಸಿ ಹಾರಿದನು. ಬಳಿಕ ಆ ಪರ್ವತದ ಶಿಖರದಿಂದ ದೊಡ್ಡ ಗುಂಡುಗಳು ಕೆಳಕ್ಕೆ ಹೊರಳಿದವು ಪಕ್ಷಂಗಳು ಆತನು ಪೋಗುವ ವೇಗದಿಂದ ಒಂದು ಯೋಜನ ದೂರದವರೆಗೆ ಹೋಗಿ ಸಮುದ್ರದಲ್ಲಿ ಬಿದ್ದವು, ಇಂದ್ರಾದಿ ಬೃಂದಾರಕರು ಮಹದಾನಂದಮಗ್ನರಾಗಿ ನೋಡುತ್ತಿದ್ದರು, ಆ ಪರ್ವತವು ಭೂಮಿಗೆ ಸಮವಾಗಿ ಇಳಿದು ಹೋಯಿತು, ಈ ಪ್ರಕಾರ ಲಂಘಿಸಿ ವಾಯು ಪಥದಲ್ಲಿ ಹೋಗುವಂಥವರಾಗಿ ಬಹು ವೇಗದಿಂದ ಲಂಕಾಪುರವನ್ನು ಸೇರಿ ಅಲ್ಲಿ ಸೀತಾದೇವಿಯನ್ನು ಹುಡುಕಿ ಮಾತನಾಡಿ ಬರುವೆನು, ಅಲ್ಲಿ ಸಿಕ್ಕದಿದ್ದರೆ ಇದೇ ವೇಗದಿಂದಲೇ ಸ್ವರ್ಗಪಾತಾಳಂಗಳನ್ನು ಸಹಾ ನೋಡಿ ಅಲ್ಲಿಯೂ ಸಿಕ್ಕದಿದ್ದರೇ, ಲಂಕಾಪುರವನ್ನು ರಾವಣ ಸಹಿತವಾಗಿ ಕಿತ್ತು ತರುತ್ತೇನೆಂದು ಹೇಳುತ್ತಾ ತನ್ನ ವಾಲದಂಡವನ್ನ ಝಳಪಿಸುತ್ತಾ ನೇತ್ರಗಳನ್ನು ಕೆಂಪಗೆ ಮಾಡಿಕೊಂಡು ಲಂಕೆಯನ್ನು ನೋಡುತ್ತಾ ಮೇಘಂಗಳನ್ನು ಹೊಕ್ಕ ಅಪರಸೂರ್ಯನ ಹಾಗೆ ಪ್ರಳಯಕಾಲದ ಮೇಘದೋಪಾದಿಯಲ್ಲಿ ಆರ್ಭಟಿಸುತ್ತಾ ಲವಣಸಮುದ್ರದ ಮೇಲೆ ಹೋಗುತ್ತಿರಲು ಆಗ ಸಮುದ್ರರಾಜನು ತನಗೆ ಕಾರಣಭೂತರಾದ ಸಗರ ಪುತ್ರ ವಂಶದಲ್ಲಿ ಜನಿಸಿದ ಶ್ರೀ ರಾಮದೇವರ ಕಾರ್ಯಾರ್ಥವಾಗಿ ಮಹಾಸಾಹಸದೊಡನೆ ಹೋಗುತ್ತಿರುವ ಈ ಆಂಜನೇಯನಿಗೆ ಸಹಾಯಮಾಡಬೇಕೆಂದು ಆಲೋಚಿಸಿ ತನ್ನಲ್ಲಿರುವ ಮೈನಾಕಪರ್ವತವನ್ನು ನೋಡಿ ಎಲೈ ಮೈನಾಕನೆ ನೀನು ರಾಮಕಾರ್ಯಧುರಂಧರನಾದ ಆಂಜನೇಯನು ನನ್ನಮೇಲೆ ಹಾರಿ ಹೋಗುತ್ತಲಿದಾನೆ ಆತನಿಗೆ ಆಧಾರವಾಗಿ ಮೇಲಕ್ಕೆದ್ದು ನಿನ್ನಲ್ಲಿರುವ ಫಲಪುಷ್ಪಗಳಿಂದ ಆತನನ್ನು ಪೂಜಿಸಿ ವಿಶ್ರಾಂತಿ ಸುಖವನ್ನು ಕೊಟ್ಟು ಆತನ ಪಾದಸ್ಪರ್ಶದಿಂದ ಪೂತನಾಗಿ ಬಾ! ಎಂದು ಹೇಳಿದನು. ಬಳಿಕಾ ಮೈನಾಕಪರ್ವತವು ಮೇಲಕ್ಕೆದ್ದು ಬಂದು ನೀರಿನಮೇಲೆ ತೇಲಾಡುತ್ತಾ, ಓ ಮಹಾನುಭಾವ ಬಾಹುಬಲವಂತ ಹನುಮಂತನೇ, ನಿನ್ನ ಪ್ರೀತಿಗಾಗಿ ಸಮುದ್ರರಾಜನಿಂದ ಕಳುಹಿಸಲ್ಪಟ್ಟು ಬಂದಿರುವೆನು ನನ್ನ ಶಿಖರದಲ್ಲಿ ಕುಳಿತು ಫಲಗಳನ್ನು ಭುಂಜಿಸಿ ಕೊಂಚ ವಿಶ್ರಾಂತಿ ಸುಖವನ್ನನುಭವಿಸಿ ನನ್ನನ್ನು ಪರಿಶುದ್ಧನನ್ನಾಗಿ ಮಾಡಬೇಕು ನಾನು

ಮೈನಾಕನೆಂಬ ಪರ್ವತರಾಜನು ಸಮುದ್ರದಲ್ಲಿ ಮುಳುಗಿಕೊಂಡಿರುವೆನೆಂದು ವಿಜ್ಞಾಪಿಸಲು ಬುದ್ಧಿವಂತನಾದ ಹನುಮಂತನು ವಿಘ್ನಬಂತೆಂದೆಣಿಸಿ ತನ್ನ ವಜ್ರಸಮಾನವಾದ ಮುಷ್ಟಿಯಿಂದ ಆ ಪರ್ವತವನ್ನು ಹೊಡೆದನು. ಬಳಿಕಾ ಪರ್ವತವು ಕಳವಳಗೊಂಡು ಓ ಮಹಾತ್ಮಾ ನಾನು ಮೈನಾಕನೆಂಬುವನು ಪೂರ್ವಕಾಲದಲ್ಲಿ ಇಂದ್ರನು ವಜ್ರಾಯುಧದಿಂದ ಪರ್ವತಗಳ ಪಕ್ಷಗಳನ್ನು ಛೇದಿಸುತ್ತಾ ಬಂದನು, ಆಗ ನಾನು ಓಡಿಬರುತ್ತ ನಿನ್ನ ತಂದೆಯಾದ ವಾಯುವಿನಿಂದ ತರಲ್ಪಟ್ಟು ಈ ಸಾಗರದಲ್ಲಿ ಸೇರಿದೆನು ಆದಕಾರಣ ನಿನ್ನ ತಂದೆಯು ನನ್ನ ಸ್ನೇಹಿತನಾದನು ಆತನ ಮಗನಾದ ನೀನು ಪ್ರಿಯನಾದವನೇ ಸರಿಯೆನಲು, ಹನುಮಂತನು ದಯಾವಂತನಾಗಿ ನಿನ್ನ ಮಾತುಗಳಿಂದ ನನಗೆ ಬಹಳ ಸಂತೋಷವಾಯಿತು ನೀನು ನನಗೆ ಸ್ನೇಹಿತನೇ ಸರಿ ಕಾರ್ಯಾತುರದಿಂದ ಹೋಗುತ್ತಿದೇನೆ ಕ್ಷಮಿಸಬೇಕು ಎಂದು ಹೇಳಿ ಮುಂದೆ ಹೊರಟನು.

## ಆಂಜನೇಯನು ಸುರಸೆಯನ್ನೂ ಛಾಯೆಯನ್ನೂ ಜಯಿಸಿದುದು.

ಬಳಿಕ ಮಾರ್ಗಮಧ್ಯದಲ್ಲಿ ಹೋಗುತ್ತಿರಲು ದೇವತೆಗಳು, ಈ ಆಂಜನೇಯನ ಸಾಹಸವನ್ನು ಪರೀಕ್ಷಿಸಬೇಕೆಂಬ ಆಲೋಚನೆಯಿಂದ ಸುರಸೆ ಎಂಬ ನಾಗಮಾತೆಯನ್ನು ಕರೆದು ರಾಮಕಾರ್ಯ ಧುರಂಧರನಾದ ವಾಯುಪುತ್ರನು ವಾಯುಮಾರ್ಗದಲ್ಲಿ ಹೋಗುತ್ತಿದ್ದಾನೆ ಆತನ ಬಲವನ್ನು ಪರೀಕ್ಷೆಮಾಡಬೇಕೆಂದು ಹೇಳಲು ಆಕೆಯು ವಿಕಾರವಾದ ರಾಕ್ಷಸಸ್ತ್ರೀ ವೇಷವನ್ನು ಧರಿಸಿ ಆತನಿಗೆದುರಾಗಿ ಬಂದು ನಿಂತು ಎಲೈ! ವಾನರಶ್ರೇಷ್ಠನೇ ನನ್ನ ಬಾಯಿಯಲ್ಲಿ ಪ್ರವೇಶಿಸಿ ಹೊರಟುಹೋಗು ಇಲ್ಲವಾದರೆ ನಿನ್ನನ್ನು ಬಿಡುವುದಿಲ್ಲವೆಂಬದಾಗಿ ಹೇಳಿದಳು ಅದನ್ನು ಕೇಳುತ್ತಾ ಆಂಜನೇಯನು ಓ ತಾಯಿ ನಾನು ರಾಮಕಾರ್ಯಾರ್ಥವಾಗಿ ಹೋಗುತ್ತೇನೆ ಈಗ ಸಾವಕಾಶವಿಲ್ಲ ಲಂಕಾಪ್ರವೇಶಮಾಡಿ ಸೀತಾದರ್ಶನಮಾಡಿ ಮತ್ತೆ ಬರುತ್ತೇನೆ ಆಗ ನಿನ್ನ ಕೋರಿಕೆಯನ್ನು ತೀರಿಸುವೆನೆಂದು ಹೇಳಿದನು. ಬಳಿಕ ಸುರಸಾದೇವಿಯು ಆ ಮಾತಿಗೆ ಸಮ್ಮತಿಸದೇ ಬಾಯಿತೆರೆದು ಘೋರರೂಪವಾಗಿ ಅಡ್ಡಗಟ್ಟಿದಳು, ಆಗ ವಾಯುಪುತ್ರನು ಕುಪಿತನಾಗಿ ಹತ್ತುಯೋಜನ ಪ್ರಮಾಣ ಶರೀರಿಯಾದನು. ಆಕೆಯು ಬಾಯಿಯನ್ನು ಇಪ್ಪತ್ತು ಯೋಜನ ಅಗಲವಾಗಿ ಮಾಡಿದಳು. ವಾಯುಪುತ್ರನು ಮುವ್ವತ್ತು ಯೋಜನ ಪ್ರಮಾಣ ಶರೀರಿಯಾದನು ಆಕೆಯು ಐವತ್ತು ಯೋಜನ ಪ್ರಮಾಣ ವಕ್ತ್ರಳಾದಳು. ಆತನು ತೊಂಭತ್ತುಯೋಜನದವರೆಗೂ ಬೆಳೆದನು ಆಕೆ ನೂರು ಯೋಜನ ವಕ್ತ್ರವುಳ್ಳವಳಾದಳು. ಬಳಿಕ ಆ ಆಂಜನೇಯನು ಈಕೆಯನ್ನು ಮೋಸದಿಂದ ಜಯಿಸಬೇಕೆಂದು ಯೋಚಿಸಿ ಸೂಕ್ಷ್ಮರೂಪನಾಗಿ ಆಕೆಯ ಬಾಯಿಯಲ್ಲಿ ಪ್ರವೇಶಿಸಿ ಕ್ಷಿಪ್ರದಲ್ಲಿ ಹೊರಗೆ ಬಂದನು. ಈ ಲಾಘವವನ್ನು ನೋಡಿ ಆ ಸುರಸಾದೇವಿಯು ಸಂತೋಷಿಸಿ ಶ್ಲಾಘನೆಮಾಡುತ್ತಾ ಎಲೈ ಮಹಾತ್ಮನೇ ಲಂಕಾಪಟ್ಟಣಕ್ಕೆ ಹೋಗಿ ರಾಕ್ಷಸರನ್ನು ಗೆದ್ದು ಸೀತಾದರ್ಶನವನ್ನು ಮಾಡಿ ಬರತಕ್ಕ ಸಾಹಸ ನಿನಗುಂಟು. ಈ ಕೆಲಸವನ್ನು ನೀನು ಮಾಡಿ ಶಾಶ್ವತವಾದ ಕೀರ್ತಿಯನ್ನು ಪಡೆಯುವೆ ಎಂದು ನುಡಿದಳು. ಬಳಿಕಾತನು ಮುಂದೆ ಹೊರಟು ಸಮುದ್ರದಮೇಲೆ ವಾಯುಸಮಾನ ವೇಗವುಳ್ಳವನಾಗಿ ಗರುತ್ಮಂತನೋಪಾದಿಯಲ್ಲಿ ಗಗನಗಮನವುಳ್ಳವನಾಗಿ ಹೋಗುತ್ತಿರಲು ಛಾಯಾಗ್ರಾಹಿಯೆಂಬ ರಾಕ್ಷಸಿಯು ಈತನ ಛಾಯೆಯನ್ನು ಬಿಗಿಹಿಡಿಯಲು ಮುಂದಕ್ಕೆ ಹೋಗುವದಕ್ಕೆ ಅವಶಕ್ಯವಾಯಿತು ಆಗ ವಾಯುಪುತ್ರನು ಇದು ಸುಗ್ರೀವನು ಹೇಳಿದ ಛಾಯಾಗ್ರಾಹಿ ಗ್ರಹವಿರಬೇಕು ಇದನ್ನು ಸಂಹರಿಸಬೇಕೆಂದು ಆಲೋಚಿಸುತ್ತಾ ಸುತ್ತಮುತ್ತಲೂ ನೋಡಲು ಆಗ ಬಾಯಿ ತೆರೆದು ನುಂಗುವುದಕ್ಕೆ ಎದುರಾಗಿ ಬಂದ ಸಿಂಹಿಕೆಯೆಂಬ ಭೂತವನ್ನು ನೋಡಿ ತನ್ನ ಶರೀರವನ್ನು ಸೂಕ್ಷ್ಮನಾಗಿ ಮಾಡಿ ಅದರ ಬಾಯಿಯೊಳಗೆ ಹೊರಟು

ಉದರಪ್ರದೇಶವನ್ನು ನಖಗಳಿಂದ ಛೇದಿಸಿ ಹೊರಟು ರಕ್ತಸಿಕ್ತಾಂಗನಾಗಿ ಬಾಲಸೂರ್ಯಸಮಾನನಾಗಿ ಪ್ರತಾಪದುರ್ನಿರೀಕ್ಷನಾಗಿ ಸರ್ವ ರಾಕ್ಷಸ ಭಯಂಕರನಾಗಿ ರಾಮಕಾರ್ಯ ದುರಂಧರನಾಗಿ ತಿಮಿತಿಮಿಂಗಲಾದಿ ಜಲಚರಗಳನ್ನು ತಂಡೋಪತಂಡವಾದ ತೆರೆಗಳನ್ನು ನೋಡುತ್ತಾ ಹಾರಿಹೋಗಿ ದಕ್ಷಿಣತೀರದಲ್ಲಿರುವ ಸುವೇಲಾದ್ರಿಯಲ್ಲಿ ಇಳಿದು ವಿಶ್ರಾಂತಿಗಾಗಿ ಕುಳಿತುಕೊಂಡಿರಲು ಸೂರ್ಯನು ಅಸ್ತಂಗತನಾದನು.

## ಆಂಜನೇಯನು ಲಂಕಿಣಿಯನ್ನು ಗೆದ್ದು ಸೀತೆಯನ್ನು ಹುಡುಕಿದುದು.

ಆ ಆಂಜನೇಯನು ಹಾಗೆ ಕುಳಿತು ಲಂಕಾಪುರಿಯನ್ನು ನೋಡಿ ಕೆಲವು ಆಲೋಚನೆಗಳನ್ನು ಮಾಡತೊಡಗಿದನು. ನಾನು ಇಷ್ಟು ಪ್ರಯಾಸಪಟ್ಟು ಜಲನಿಧಿಯನ್ನು ದಾಟಿದ್ದು ನಿಷ್ಫಲವಾಯಿತಲ್ಲಾ ಈ ಪಟ್ಟಣ ಪ್ರವೇಶ ಮಾಡುವುದಕ್ಕೆ ದೇವತೆಗಳಿಗೂ ಅಶಕ್ಯವಾಗಿರುತ್ತದೆ ಮೂರುಕೋಟಿ ಶಿವಾಲಯಗಳಿಂದಲೂ ತಾಮ್ರಪ್ರಾಕಾರದಿಂದಲೂ ಹಿತ್ತಾಳೆಯ ಪ್ರಾಕಾರದಿಂದಲೂ ಉಕ್ಕಿನ ಪ್ರಾಕಾರದಿಂದಲೂ ಕಬ್ಬಿಣದ ಪ್ರಾಕಾರದಿಂದಲೂ ಅನೇಕ ಬುರುಜುಗಳಿಂದಲೂ ಸಂಖ್ಯಾತೀತವಾದ ರಾಕ್ಷಸರಿಂದಲೂ ಕೂಡಿ ಇರುವ ಈ ಪಟ್ಟಣವನ್ನು ಪ್ರವೇಶಿಸಿ ಸೀತಾದೇವಿಯನ್ನು ಹೇಗೆ ನೋಡುವೆನು ವಾನರರು ಬಂದು ಇಲ್ಲಿ ಏನುಮಾಡುವರೊ ರಾಮಚಂದ್ರನಾದರೂ ಏನುಮಾಡುವನೋ ತಿಳಿಯಲಿಲ್ಲ. ಹೇಗಾದರೂ ಪ್ರವೇಶಮಾಡಿ ಸೀತಾದೇವಿಯನ್ನು ನೋಡಿ ರಾಮಚಂದ್ರನಿಗೆ ಸಂತೋಷವನ್ನುಂಟುಮಾಡಿ ಕೃತಕೃತ್ಯನಾಗುವೆನೆಂದೆಣಿಸಿ ಧೈರ್ಯವನ್ನವಲಂಬಿಸಿ ಈ ರೂಪದಿಂದ ಹೋಗುವದಕ್ಕೆ ಸಾಧ್ಯವಿಲ್ಲವೆಂದೆಣಿಸಿ ಸೂಕ್ಷ್ಮರೂಪವನ್ನವಲಂಬಿಸಿ ಲಂಕೆಯೊಳಗೆ ಪ್ರವೇಶಿಸಿ ಹೋಗುತ್ತಿರಲು ಪುರದ್ವಾರದಲ್ಲಿ ಕಾವಲಾಗಿರುವ ಲಂಕಿಣಿ ಎಂಬ ರಾಕ್ಷಸಿಯು ಈತನನ್ನು ಕಂಡು ಎಲೈ ವಾನರನೇ ನನ್ನನ್ನು ಜಯಿಸದೆ ಒಳಕ್ಕೆ ಹೋಗಕೂಡದೆಂದು ಗರ್ಜಿಸುತ್ತಾ ಎದುರಾಗಿ ಬಂದು ನಿಲ್ಲಲು ವಾಯುಪುತ್ರನು ಲಂಕಾಪಟ್ಟಣವನ್ನು ನೋಡಬೇಕೆಂಬ ತಾತ್ಪರ್ಯದಿಂದ ಬಂದಿದ್ದೇನೆ ಪಟ್ಟಣ ದರ್ಶನಾನಂತರ ಪುನಃ ಬಂದು ನಿನ್ನ ಇಷ್ಟಪ್ರಕಾರ ಯುದ್ಧಮಾಡುತ್ತೇನೆಂದು ಹೇಳಲು ಅವಳು ಕೇಳದೆ ಹಿಡಿದುಕೊಳ್ಳುವುದಕ್ಕೆ ಬಂದಳು ಆಗ ಆಂಜನೇಯನು ಹೆಂಗಸು ಯುದ್ಧಕ್ಕೆ ಯೋಗ್ಯವಾದವಳಲ್ಲವೆಂದು ಉದಾಸೀನನಾಗಿ ಕೈಯಿಂದ ಹೊಡೆಯಲು ಅವಳು ರಕ್ತವನ್ನು ಕಾರಿ ಪ್ರಾಣವನ್ನು ಬಿಟ್ಟಳು.

ಬಳಿಕ ಆಕೆ ಸ್ವಸ್ವರೂಪವನ್ನು ಧರಿಸಿ ಓ ಆಂಜನೇಯನೇ ನೀನು ಲಂಕಾಪ್ರವೇಶಮಾಡಿ ಸೀತಾದರ್ಶನದಿಂದ ಖ್ಯಾತನಾಗಿ ಸುಖವಾಗಿ ಅಂಗದಾದಿಗಳಿಂದ ಕೂಡಿ ಸುಖವಾಗಿರು ನಾನು ಬ್ರಹ್ಮದೇವರ ಅನುಗ್ರಹದಿಂದ ಮತ್ತೂ ಸ್ವಸ್ವರೂಪವು ಪಡೆದೆನು ನಿನ್ನ ಹಸ್ತಸ್ಪರ್ಶದಿಂದ ನಾನು ಪರಿಶುದ್ಧಳಾದೆನು ಎಂದು ನುಡಿಯಲು ವಾಯುಪುತ್ರನು ಇದನ್ನು ನೋಡಿ ವಿಸ್ಮಯಾಕ್ರಾಂತನಾಗಿ ಮುಂದೆ ಹೊರಟು ಪಟ್ಟಣದಲ್ಲಿ ಹೋಗುತ್ತಿರಲು ಚಂದ್ರೋದಯವಾಯಿತು. ಚಂದ್ರನು ರಾಮಕಾರ್ಯಾರ್ಥಿಯಾದ ವಾಯುಪುತ್ರನಿಗೆ ತಾನು ಸಹಾಯ ಮಾಡಬೇಕೆಂಬ ತಾತ್ಪರ್ಯದಿಂದ ಬಂದು ಬೆಳಕನ್ನುಂಟುಮಾಡಿದನೊ ಎಂಬಂತೆ ಬೆಳದಿಂಗಳನ್ನು ತೋರಿಸಿದನು. ರಾತ್ರಿಕಾಲದಲ್ಲಿ ರಾಕ್ಷಸರಿಗೆ ಬಹಳ ಬಲವಾದದ್ದರಿಂದ ಕಲಕಲಧ್ವನಿಯು ಬಹಳವಾಗಿತ್ತು. ಆಗ ಆಂಜನೇಯನು ರಾಕ್ಷಸಗೃಹಗಳನ್ನು ನೋಡುತ್ತಾ ಕುಂಭಕರ್ಣನ ಮನೆಯನ್ನು ನೋಡಿ ಶುಕಸಾರಣರ ಮನೆಯನ್ನು ವಿರೂಪಾಕ್ಷ, ಘನ, ವಿಘನ, ವಜ್ರದಂಷ್ಟ್ರ, ನರಾಂತಕ, ಸುರಾಂತಕ, ಅತಿಕಾಯ, ಪ್ರಹಸ್ತ, ಕುಂಭ, ನಿಕುಂಭ, ಮಹೋದರ, ಮಹಾಪಾರ್ಶ್ವ ಮೊದಲಾದವರ ಗೃಹಗಳನ್ನು ನೋಡಿ ಇಂದ್ರಜಿತು ಮೊದಲಾದ ರಾವಣ ಪುತ್ರರು ಮೊದಲಾದವರುಗಳ ಭವನಂಗಳನ್ನು ಪರೀ

ಕ್ಷಿಸಿ ತರುವಾಯ ಲೋಕರಾವಣನಾದ ರಾವಣಾಸುರನ ಭವನವನ್ನು ಕಂಡು ಒಳಕ್ಕೆ ಪ್ರವೇಶಿಸಿದನು. ಆ ಭವನದಲ್ಲಿ ಮತ್ತೇಭಗಳೊಂದು ಕಡೆ ಜಾತ್ಯಶ್ವಗಳೊಂದು ಕಡೆ ವರಹಾದಿ ಮೃಗಗಳೊಂದು ಕಡೆ ಪಾರಾವತಾದಿಗಳೊಂದು ಕಡೆ, ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಮೊದಲಾದ ಪದಾರ್ಥಗಳೊಂದು ಕಡೆ ಖಡ್ಗಾಯುಧ ಧಾರಿಗಳೊಂದು ಕಡೆ ಗೃಹಪಾಲಕರಾದ ವಿಕೃತಾಕಾರವಾದ ರಾಕ್ಷಸ ಸಂಘಗಳೊಂದು ಕಡೆ ರಾವಣಾಸುರನಿಂದ ಅಪಹರಿಸ್ಪಟ್ಟ ದೇವಾಂಗನೆಯರೊಂದು ಕಡೆ ಹೀಗೆ ತುಂಬಿರುವ ಕಕ್ಷ್ಯಗಳನ್ನು ಹುಡುಕಿ ಸೀತಾದೇವಿಯನ್ನು ಕಾಣದೆ ಮತ್ತು ಒಳಕ್ಕೆಹೋಗಿ ವಿಶ್ವಕರ್ಮ ನಿರ್ಮಿತವಾದ ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗಾದಿ ನವರತ್ನ ಖಚಿತವಾದ ಪರಿಮಳ ಧೂಪದೀಪಮಿಳಿತವಾದ ಕಾಮಚಾರಿಯಾದ ಮೇರುಸಮಾನವಾದ ಪುಷ್ಪಕವಿಮಾನವನ್ನು ಹೊಕ್ಕು ಅದರಲ್ಲಿ ಕೆಲವರು ವಸ್ತ್ರಹೀನರಾಗಿಯೂ ಕೆಲವರು ಪರಸ್ಪರಾಲಿಂಗನಗಳನ್ನು ಮಾಡಿದವರಾಗಿಯೂ ಕೆಲವರು ವೀಣಾದಿ ವಾದ್ಯಗಳನ್ನು ಬಾರಿಸುತ್ತಿದ್ದು ಅವುಗಳನ್ನು ಸ್ತನಗಳಮೇಲೆ ಇಟ್ಟುಕೊಂಡು ನಿದ್ರೆಹೋಗುತ್ತಿರುವವರಾಗಿಯೂ ಕೆಲವರು ಸುರಾಪಾನಮಾಡಿ ಕೇಶಪಾಶಗಳಲ್ಲಿಪುಷ್ಪಹಾರಗಳನ್ನು ಬಿಚ್ಚಿದವರಾಗಿಯೂ ಸಂಜಾತಕರ್ಮ ಶರೀರರಾಗಿಯೂ ನಾನಾವಿಧವಾಗಿ ಮಲಗಿ ನಿದ್ರಿಸುತ್ತಿರುವ ರಾವಣ ಸ್ತ್ರೀಯರನ್ನು ನೋಡಿ ಜಿಗುಪ್ಸಿತನಾಗಿ ಯೋಚನೆಯನ್ನು ಮಾಡಲುಪಕ್ರಮಿಸಿದನು. ಪರದಾರದರ್ಶನವು ಮಹಾಪಾಪಕರವಲ್ಲವೇ ಈಗ ನಾನು ಈ ಅಂತಃಪುರ ದರ್ಶನದಿಂದ ಪಾಪಕ್ಕೆ ಗುರಿಯಾದೆನಲ್ಲ ಆದರೂ ಮನಃಪ್ರವೃತ್ತಿ ಇಲ್ಲದಿದ್ದರೆ ದೋಷವಿಲ್ಲವೆಂಬದಾಗಿ ಶಾಸ್ತ್ರದಲ್ಲಿ ಹೇಳಿರುತ್ತದೆ, ಪಾಪ ಏನುವಿರೋಧ ಸ್ತ್ರೀಯರನ್ನು ಸ್ತ್ರೀಯರ ಗುಂಪಿನಲ್ಲಿ ಹುಡುಕಬೇಕಾದದ್ದರಿಂದ ಇಲ್ಲಿಗೆ ಬಂದೆನು ಇದರಿಂದ ಪಾಪಸಂಘಟನೆಯಾಗಲಾರದೆಂದೆಣಿಸಿ ಮತ್ತು ಒಳಕ್ಕೆ ಪ್ರವೇಶಿಸಿದನು. ಅಲ್ಲಿ ರಾವಣನ ಕಾಂತಿಯಿಂದಲೂ ದೀಪದಕಾಂತಿಯಿಂದಲೂ ರತ್ನಕಾಂತಿಯಿಂದಲೂ ಪ್ರಕಾಶಮಾನವಾದ ಹಂಸತೂಲಿಕಾತಲ್ಪದಲ್ಲಿ ಮಲಗಿ ನಿದ್ರಿಸುತ್ತ ಕಿರೀಟಯುತಗಳಾದ ದಶಶಿರಸ್ಸುಗಳನ್ನು ದಿಂಬುಗಳಲ್ಲಿ ಇಟ್ಟುಕೊಂಡು ಜಲಜಾದಿರೇಖಾಲಂಕೃತಗಳಾದ ವಿಂಶತಿಕರಂಗಳನ್ನು ಚಾಚಿಕೊಂಡು ಇರುವ ರಾವಣಾಸುರನನ್ನು ನೋಡಿ ಆಂಜನೇಯನು ವಿಸ್ಮಿತನಾಗಿ ಆಹಾ ಈತನ ರೂಪವೇನು ಪರಾಕ್ರಮವೇನು ಧೈರ್ಯವೇನು ತೇಜಸ್ಸೇನು ಇಂಥಾ ಮಹಾತ್ಮನನ್ನು ಇದುವರೆಗೂ ಎಲ್ಲಿಯೂ ನೋಡಿಲ್ಲ ಕೇಳಿಯೂ ಇಲ್ಲ. ಈತನು ಧರ್ಮದಲ್ಲಿ ನಿರತನಾಗಿ ಇದ್ದರೇ, ಇಂದ್ರಪದವಿಗಾದರೂ ಅರ್ಹನಾದಾನು ಇಂಥಾವನಾದ್ಧರಿಂದಲೇ ರಾಮಚಂದ್ರನಿಗೆ ಅಪಕಾರಮಾಡಿ ಸೀತಾದೇವಿಯನ್ನು ತರುವದಕ್ಕೆ ಧೀರನಾದನೆಂಬದಾಗಿ ಆಲೋಚಿಸುತ್ತಾ ಸಮೀಪಕ್ಕೆ ಹೋಗುವದಕ್ಕಂಜುತ್ತಾ ಆತನ ಪಾರ್ಶ್ವದಲ್ಲಿ ಮಲಗಿರುವ ತ್ರಿಲೋಕಸುಂದರಿಯಾದ ಪತಿವ್ರತೆಯಾದ ಮಂಡೋದರಿಯನ್ನು ನೋಡಿ ಸೀತಾದೇವಿಯನ್ನು ಕಂಡೆನೆಂದು ಭ್ರಾಂತಿಪಟ್ಟು ಆನಂದವನ್ನು ಹೊಂದಿ ನಾನು ಬಂದ ಕೆಲಸ ಸಫಲವಾಯಿತು, ಸೀತಾದರ್ಶನವಾಯಿತೆಂದು ನಿಶ್ಚಯಿಸಿ ತನ್ನ ಬಾಲದಂಡವನ್ನು ನೆಲಕ್ಕೆ ಅಪ್ಪಳಿಸಿ ಗಂತು ಹಾಕುತ್ತಾ ಮತ್ತು ಕೆಲವುಹೊತ್ತು ಯೋಚಿಸಿದನು, ಆಹಾ ಸೀತಾದೇವಿಯು ರಾಮಚಂದ್ರನನ್ನು ಬಿಟ್ಟು ಇವನ ಸಂಗಡ ಮಲಗುವದುಂಟೇ ಆ ಮಹಾತ್ಮನ ಕರಗೃಹೀತೆಯಾಗಿ ಇತರ ಪುರುಷರನ್ನು ಪಾದದಿಂದಕೂಡಾ ಮುಟ್ಟಲಾರಳು ಮಂಡೋದರಿಯೆಂದು ಪ್ರಸಿದ್ಧಳಾಗಿ ರಾವಣ ಪ್ರಿಯಪತ್ನಿಯಾದ ಯುವತೀರತ್ನವಿರಬಹುದು, ನಾನು ಭ್ರಾಂತನಾಗಿ ಸೀತೆಯೆಂದು ತಿಳಿದು ಅವಿಚಾರಕ್ಕೆ ಗುರಿಯಾದೆನೆಂದು ನಿಶ್ಚಯಿಸಿ ಆ ರಾವಣಾಂತಃಪುರವನ್ನೆಲ್ಲಾ ಹುಡುಕುತ್ತಾ ಎಲ್ಲಿಯೂ ಜಗನ್ಮಾತೆಯಾದ ಸೀತಾದೇವಿಯನ್ನು ಕಾಣದೇ ವ್ಯಾಕುಲನಾಗಿದ್ದನು

## ಆಂಜನೇಯನು ಉದ್ಯಾನವನವನ್ನು ಹುಡುಕಿ ನೋಡಿದುದು.

ಬಳಿಕ ಅಂತಃಪುರವನ್ನು ಬಿಟ್ಟು ಸಮೀಪದಲ್ಲಿ ಕಾಣುತ್ತಿರುವ ಉದ್ಯಾನವನದಲ್ಲಿ ಇದ್ದಾಳೆಂದೂಹಿಸಿ ಪ್ರಾಕಾರವನ್ನು ಲಂಘಿಸಿ ಅಶೋಕವನವನ್ನು ನೋಡಿ ಸ್ವರ್ಣವೃಕ್ಷಗಳನ್ನು ರಜತ





ವೃಕ್ಷಗಳನ್ನು ಕಮಲಾಕರಗಳಿಂದ ಕೂಡಿ ರಾಜಹಂಸಯುತಗಳಾದ ಸರೋವರಗಳನ್ನು ನೋಡುತ್ತಾ ಶಿಂಶುಪಾ ಎಂಬ ಸ್ವರ್ಣವೃಕ್ಷವನ್ನು ನೋಡಿ ಅದರ ಕೆಳಗೆ ಏಕಾಕ್ಷಿಗಳಾಗಿಯೂ, ಏಕಕರ್ಣಗಳಾಗಿಯೂ ಗಜಪಾದಗಳಾಗಿಯೂ, ಅಜಮುಖಿಗಳಾಗಿಯೂ, ಮಹಿಷಮುಖಿಗಳಾಗಿಯೂ, ಅತಿ ಮಾತ್ರ ಶಿರಸ್ಸುಳ್ಳವರಾಗಿಯೂ, ಅತಿಮಾತ್ರ ಕುಚಗಳುಳ್ಳವರಾಗಿಯೂ, ರಕ್ತಕಬರಿಗಳುಳ್ಳವರಾಗಿಯೂ, ದೀರ್ಘ ಜಿಹ್ವೆಗಳಾಗಿಯೂ, ಅತಿ ನಾಶಿಕಗಳಾಗಿಯೂ, ಅನಾಶಿಕಗಳಾಗಿಯೂ, ತಿರ್ಯಜ್ನಾಶಿಕಗಳಾಗಿಯು, ದ್ವಿನಾಶಿಕಗಳಾಗಿಯು, ಏಕಹಸ್ತವುಳ್ಳವರಾಗಿಯೂ, ದೀರ್ಘದಂತಗಳುಳ್ಳವರಾಗಿಯೂ, ಏಕಪಾದರಾಗಿಯೂ, ಕುಬ್ಜರಾಗಿಯೂ, ಪಿಂಗಳಾಕ್ಷರಾಗಿಯೂ, ಶಸ್ತ್ರಕೇಶಿಗಳಾಗಿಯೂ ಇರುವ ರಾಕ್ಷಸಸ್ತ್ರೀಯರನ್ನು ನೋಡಿ ಇವರ ಮಧ್ಯದಲ್ಲಿ ಉಪವಾಸದಿಂದ ಕೃಶಳಾಗಿಯೂ, ಏಕವೇಣೀಧರಳಾಗಿಯೂ, ಮಲಿನವಸ್ತ್ರ ಧಾರಿಯೂಗಿಯೂ, ಭೂಷಣವಿಹೀನಳಾಗಿಯೂ, ಪತಿದರ್ಶನಾಕಾಂಕ್ಷಿಣಿಯಾಗಿ, ಸಿಂಹದ ಮಧ್ಯದಲ್ಲಿ ಇರುವ ಹೆಣ್ಣಾನೆಯೋಪಾದಿಯಲ್ಲಿ ಅಶ್ರುಪೂರ್ಣ ನೇತ್ರಳಾಗಿ ಕುಳಿತಿರುವ ಸೀತಾದೇವಿಯನ್ನು ನೋಡಿ, ನಾನು ಶತಯೋಜನ ವಿಸ್ತಾರವಾದ ಸಮುದ್ರವನ್ನು ಲಂಘಿಸಿ ಯಾರಿಗೋಸ್ಕರ ಬಂದೆನೋ ಆ ಸೀತಾದೇವಿಯು ಸಿಕ್ಕಿದಳು, ನಾನು ಕೃತಾರ್ಥನಾದೆನು. ಘನವಾದ ಕೀರ್ತಿಗೆ ಪಾತ್ರನಾದೆನು. ಅಹಾ! ಇಂಥಾ ಸೀತೆಯನ್ನು ಬಿಟ್ಟು ನಿಮಿಷವಾದರೂ ರಾಮನು ಜೀವಿಸಲಾರನು. ಹಾಗಿದ್ದರೂ ಈಗ ಬದುಕಿರುವುದು ಆಶ್ಚರ್ಯವೇ ಸರಿ. ರಾಮಚಂದ್ರನು ಧೀರನೆಂಬುವದಕ್ಕೆ ಸಂಶಯವಿಲ್ಲ, ಇಂಥಾ ಸೀತೆಯು ರಾಮನನ್ನು ಬಿಟ್ಟು ಲಂಕೆಯಲ್ಲಿ ರಾಕ್ಷಸರಿಂದ ಬಂಧಿತಳಾಗಿ ದುಃಖಿತಳಾಗಿ ಇರುವದುಂಟೇ ವಿಧಿಕೃತಕ್ಕೆ ಯಾರಯತ್ನವೂ ಇಲ್ಲ. ಇವಳು ರಾಮಚಂದ್ರನು ಹೇಳಿದ್ದ ಲಕ್ಷಣಗಳಿಂದ ಕೂಡಿರುತ್ತಾಳೆ ಈಕೆ ಸೀತಾದೇವಿ ಎಂಬುದರಲ್ಲಿ ಸಂಶಯವಿಲ್ಲವೆಂದು ಆಲೋಚಿಸಿ ಇನ್ನೂ ಕೆಲವು ಸಂದರ್ಭಗಳಲ್ಲಿ ಪರೀಕ್ಷಿಸಿ ನೋಡೋಣವೆಂದು ಸುಮ್ಮನಿದ್ದನು.

## ರಾವಣನು ನಿಶಿರಾತ್ರಿಯಲ್ಲಿ ಸೀತೆಯನ್ನು ನೋಡಿ ಕಾಮಾತುರನಾದುದು.

ಅತ್ತಲಾ ರಾವಣಾಸುರನು ನಿದ್ರಿಸುತ್ತಿದ್ದ ರಾಕ್ಷಸರ ಭೀಕರ ಘೋಷಗಳಿಂದಲೂ ಅಪರರಾತ್ರಿಯಲ್ಲಿ ಎದ್ದು ಕೂಗುವ ತಾಮ್ರಚೂಡಾದಿ ವಿಹಂಗಮ ಶಬ್ದಗಳಿಂದಲೂ ಎಚ್ಚರಗೊಂಡು ಸ್ರಸ್ತಮಾಲ್ಯನಾಗಿ ಕಿರೀಟಗಳನ್ನು ಸವರಿಕೊಳ್ಳುತ್ತಾ ಮಾಷರಾಶಿಗೆ ಸಮನಾದ ತನ್ನ ಶರೀರವನ್ನು ಮುರಿಯುತ್ತಾ ಸೀತಾದೇವಿಯನ್ನು ನೆನೆದು ಕಾಮಮೋಹಿತನಾಗಿ ಪರ್ಯಂಕದಿಂದಿಳಿದು ಅಶೋಕವನಕ್ಕೆ ಹೊರಟನು. ಬಳಿಕ ಮಂಡೋದರೀ ಪ್ರಮುಖರಾದ ರಾವಣಸ್ತ್ರೀಯರು ಗಾಬರಿಯಿಂದ ಎದ್ದು ಛತ್ರವನ್ನು ಕೆಲವರು, ಚಾಮರಗಳನ್ನು ಕೆಲವರು, ಕರದೀಪಗಳನ್ನು

ಕೆಲವರು, ತೆಗೆದುಕೊಡು ಗಂಡಾನೆಯ ಹಿಂದೆ ಹೊರಡುವ ಹೆಣ್ಣಾನೆಗಳಂತೆ ಹೊರಟು ಮಾರ್ಗದಲ್ಲಿ ಆತನಿಗೆ ಹಸ್ತಲಾಘವವನ್ನು ಕೊಡುತ್ತಾ ಅನೇಕವಾದ ಆತನ ಚರಿತ್ರೆಗಳನ್ನು ಹೊಗಳುತ್ತಾ ಆಲಿಂಗನಾದಿಗಳಿಂದ ತೃಪ್ತಿಪಡಿಸುತ್ತಾ ಹಿಂದೆ ಹೋಗುತ್ತಿದ್ದರು. ಆತನು ಅಶೋಕವನವನ್ನು ಪ್ರವೇಶಿಸಿ ಅಲ್ಲಿರುವ ರಾಕ್ಷಸಸಂಘಗಳಿಂದ ನಮಸ್ಕರಿಸಲ್ಪಟ್ಟು ಶಿಂಶುಪಾವೃಕ್ಷದ ಸಮೀಪಕ್ಕೆ ಬಂದು ಸೀತಾದೇವಿಯನ್ನು ನೋಡಿ ಕೆಲವು ಮಾತುಗಳನ್ನು ಹೇಳತೊಡಗಿದನು. ವೃಕ್ಷದಮೇಲೆ ಇರುವ ಆಂಜನೇಯನು ಅದನ್ನು ನೋಡುತ್ತಾ ನಿಶ್ಶಬ್ದನಾಗಿ ಕುಳಿತುಕೊಂಡಿದ್ದನು. ಆಗ ರಾವಣಾಸುರನು ಓ ವನಿತಾಮಣಿಯೇ ! ನನ್ನನ್ನು ನೋಡಿ ಭೀತಳಾಗಿ ಸ್ತನೋದರಗಳನ್ನು ಮುಚ್ಚಿಕೊಂಡು ಯಾಕೆ ದುಃಖಿಸುತ್ತೀಯೆ ನಿನ್ನ ರೂಪವನ್ನು ನೋಡಿ ನಾನು ಬಹಳವಾಗಿ ಮೋಹಿಸಿ ನಿನ್ನನ್ನು ತಂದೆನು, ಮಲಿನವಸ್ತ್ರವೂ ಉಪವಾಸವೂ ನಿನ್ನಂಥಾವಳಿಗೆ ಯೋಗ್ಯವಲ್ಲಾ, ನನ್ನನ್ನು ಅಂಗೀಕರಿಸಿ ದಿವ್ಯದುಕೂಲಗಳನ್ನು ಅನರ್ಘ ಮಣಿಭೂಷಣಗಳನ್ನು ಮಾಲ್ಯಾದಿಗಳನ್ನು ಧರಿಸಿ ಸುಖದಿಂದಿರಬಾರದೇ ಈ ಯೌವನವು ಶಾಶ್ವತವಲ್ಲ. ಕಳೆದು ಹೋದಮೇಲೆ ಪುನಃ ಬರಲಾರದು ನಿನ್ನ ಸೌಂದರ್ಯವು ಲೋಕತ್ರಯದಲ್ಲಿ ಯಾರಿಗೂ ಇಲ್ಲ. ನಿನ್ನನ್ನು ಕಂಡರೆ ಬ್ರಹ್ಮನಾದರೂ ಮೋಹಿಸದೇ ಇರುವನೇ ನಿನ್ನ ಯಾವ ಅಂಗವನ್ನು ನೋಡಿದರೂ ಮನಸ್ಸು ಆ ಅಂಗದಲ್ಲೆ ನಾಟಿಹೋಗುವುದು. ನನ್ನ ಪತ್ನಿಯರಿಗೆಲ್ಲರಿಗೂ ನೀನು ಯಜಮಾನಿಯಾಗಿರು ನಿನಗೋಸ್ಕರವಾಗಿ ಸಕಲ ರಾಜ್ಯಗಳನ್ನು ಜಯಿಸಿ ಜನಕರಾಯನಿಗೆ ಒಪ್ಪಿಸಿಕೊಡುವೆನು ರಾಮನು ಚೀರಧಾರಿಯಾಗಿ ಕಂದಮೂಲಾದಿಗಳನ್ನು ಭುಜಿಸುತ್ತ ಋಷಿಚರ್ಯದಲ್ಲಿ ಇದ್ದರೂ ಆತನನ್ನು ಕೋರುತ್ತೀಯಲ್ಲ, ನನ್ನಿಂದ ನಿನ್ನನ್ನು ಬಿಡಿಸಿಕೊಂಡು ಹೋಗುವುದಕ್ಕೆ ರಾಮನು ಶಕ್ತನಲ್ಲ. ರಾಮನು ದ್ರವ್ಯದಲ್ಲಿಯೂ, ಪರಾಕ್ರಮದಲ್ಲಿಯೂ, ಬುದ್ಧಿಯಲ್ಲಿಯೂ, ಕೀರ್ತಿಯಲ್ಲಿಯೂ ನನಗೆ ಸಮಾನನೇ ಅಲ್ಲ, ನೀನೆ ಯೋಚಿಸು ಎಂದು ನುಡಿದನು.

## ಸೀತೆ ರಾವಣನಿಗೆ ಬುದ್ಧಿವಾದ ಹೇಳಿದುದು.

ಬಳಿಕ ಸೀತಾದೇವಿಯು ದೀನಳಾಗಿ ದುಃಖದಿಂದ ಕುದಿಯುತ್ತ ರಾವಣನನ್ನು ಕುರಿತು ಹೀಗೆ ಹೇಳತೊಡಗಿದಳು. ಪತಿವ್ರತೆಯಾಗಿ ರಾಮನಿಗೆ ಪತ್ನಿಯಾಗಿರುವ ನಾನು ನಿನಗೆ ಹೇಗೆ ಪತ್ನಿಯಾದೇನು, ನೀನು ಮಾಡಿದ ಅಪರಾಧದಿಂದ ಲಂಕಾಪಟ್ಟಣವೆಲ್ಲ ನಾಶವಾಗಬೇಕಾಗಿದೆ ನಾನು ಐಶ್ವರ್ಯದಿಂದಲೂ ಧನದಿಂದಲೂ ಸ್ವಾಧೀನವಾಗತಕ್ಕವಳಲ್ಲ ಸೂರ್ಯನನ್ನು ಬಿಟ್ಟು ಛಾಯೆಯು ಹೇಗೆ ಇರುವುದಿಲ್ಲವೊ ಹಾಗೆ ರಾಮನನ್ನು ಬಿಟ್ಟು ನಾನಿರುವುದಿಲ್ಲ, ನಾನು ರಾಮಚಂದ್ರನ ಪತ್ನಿಯಾಗಿ ಪರಪುರುಷನನ್ನು ಹೇಗೆ ಹೊಂದೇನು, ನೀನು ಕೆಲವು ದಿನಗಳು ಕ್ಷೇಮವಾಗಿರಬೇಕಾದರೆ ನನ್ನನ್ನು ಕರೆದುಕೊಂಡು ಹೋಗಿ ರಾಮಚಂದ್ರನ ಪಾದಗಳಿಗೊಪ್ಪಿಸಿದರೆ ಶರಣಾಗತವತ್ಸಲನಾದ ರಾಮನು ನಿನ್ನನ್ನು ರಕ್ಷಿಸುವನು. ಇಲ್ಲವಾದರೆ ರಾಮನ ಧನುಷ್ಟಂಕಾರವನ್ನು ಕೇಳಿ ಗುಂಡಿಗೆ ಕರಗಿ ನೀರುನೀರಾಗಿ ನಾಶವಾಗುತ್ತೀಯಲ್ಲವೇ, ರಾಕ್ಷಸರೆಂಬ ಸರ್ಪಗಳನ್ನು ರಾಮನೆಂಬ ಗರುಡನು ಬಾಣಗಳೆಂಬ ಉಗುರುಗಳಿಂದ ಕೀಳುತ್ತಾ ಬಾಣಾಗ್ನಿಯಿಂದ ಲಂಕಾಪಟ್ಟಣವನ್ನು ದಗ್ಧವಾಗಿ ಮಾಡುತ್ತಾನೆ ಆತನು ಆಶ್ರಮದಲ್ಲಿ ಇಲ್ಲದಿರುವ ಕಾಲದಲ್ಲಿ ಚೋರವೃತ್ತಿಯಿಂದ ನನ್ನನ್ನು ತೆಗೆದುಕೊಂಡು ಬಂದೆಯಲ್ಲವೆ, ರಾಮಚಂದ್ರನು ಹಾಗಿರಲಿ, ಲಕ್ಷ್ಮಣನೆದುರಾಗಿ ನೀನು ಬಂದಿದ್ದರೆ ನಿನ್ನ ಗತಿ ಏನಾಗುತ್ತಿತ್ತೊ ತಿಳಿಯದು ನೀನು ಕುಬೇರನ ಪಟ್ಟಣದಲ್ಲಿಯಾಗಲಿ, ಪಾತಾಳದಲ್ಲಿಯಾಗಲಿ, ಸಮುದ್ರದಲ್ಲಿಯಾಗಲಿ, ಸ್ವರ್ಗದಲ್ಲಿ ಆಗಲಿ ಹೊಕ್ಕರೂ ರಾಮಪ್ರೇರಿತನಾದ ಲಕ್ಷ್ಮಣನ ಬಾಣಗಳು ನಿನ್ನನ್ನು ಬಿಡುತ್ತಿರಲಿಲ್ಲ. ಈ

ದುರ್ಬುದ್ಧಿ ನಿನಗೆ ಹುಟ್ಟಿದ್ದು ನಿನ್ನ ನಾಶಕ್ಕೆ ಕಾರಣವಾಯಿತು ನನ್ನನ್ನು ಕುರಿತು ಇಂಥಾ ನೀಚವಾದ ಮಾತುಗಳನ್ನು ಆಡಿದ ನಿನ್ನ ನಾಲಗೆಯು ಬಿದ್ದು ಹೋಗದಿರದು, ನೀನು ಮೋಹಿತನಾಗಿ ನನ್ನ ಅಂಗಗಳನ್ನು ನೋಡುತ್ತಿರುವ ನಿನ್ನ ನಯನಗಳು ಉರಿದುಹೋದೀತು. ನಾನು ನಿನ್ನ ಪ್ರಾಣಾಪಹಾರಕ್ಕಾಗಿ ಬಂದ ಕಾಳರಾತ್ರಿಯೆಂದು ತಿಳಿ, ನನ್ನ ಪಾತಿವ್ರತ್ಯದಿಂದ ನಿನ್ನ ವಂಶವು ದಹಿಸಿ ಹೋಗುವದರಲ್ಲಿ ಸಂಶಯವಿಲ್ಲವೆಂಬದಾಗಿ ನುಡಿದಳು. ಬಳಿಕಾ ರಾವಣಾಸುರನು ಆ ಮಾತುಗಳನ್ನು ಕೇಳಿ ಕೋಪಾರುಣ ನೇತ್ರನಾಗಿ ದಂತಗಳನ್ನು ಪಟಪಟನೆ ಕಡಿಯುತ್ತಾ ನನ್ನನ್ನು ಈ ರೀತಿ ತಿರಸ್ಕಾರಮಾಡಿ ಮಾತಾಡಿದೆಯಲ್ಲಾ ಈಗ ನಿನ್ನನ್ನು ಸಂಹಾರ ಮಾಡುವೆನೆಂದು ಬದ್ಧಮುಷ್ಟಿಯಾಗಿ ತಿವಿಯುವದಕ್ಕೆ ಬಂದನು, ಆಗ ಮಂಡೋದರಿಯು ಥಕ್ಕನೆ ಬಂದು ಆತನನ್ನು ಆಲಿಂಗನ ಮಾಡಿಕೊಂಡು ಮಹಾರಾಜನೆ ನನ್ನ ಸಂಗಡ ಕ್ರೀಡಿಸಬಾರದೇ ಮನುಷ್ಯಸ್ತ್ರೀಯಲ್ಲಿ ವ್ಯಾಮೋಹಿತನಾಗಿ ಈ ಪಾಪದಮಾತುಗಳಿಗೆ ಗುರಿಯಾಗಬಹುದೇ ಇದರಿಂದ ಸ್ತ್ರೀಹತ್ಯಮಾಡಿದ ಮಹಾಪಾತಕವು ಪ್ರಾಪ್ತವಾದೀತೆಂದು ಹೇಳಲು ಆತನು ಹಿಂದಿರುಗಿ ರಾಕ್ಷಸ ಸ್ತ್ರೀಯರಿಗೆ ಆಜ್ಞೆಯನ್ನಿತ್ತನು. ಓ ರಾಕ್ಷಸ ಸ್ತ್ರೀಯರುಗಳಿರಾ ನೀವುಗಳೆಲ್ಲರೂ ಸಾಮ ದಾನ ಭೇದದಂಡಗಳಿಂದ ಈ ಸೀತಾದೇವಿಯನ್ನು ನನಗೆ ಸ್ವಾಧೀನವಾಗ ವಂತೆಮಾಡಿ ಇನ್ನೆರಡು ತಿಂಗಳೊಳಗಾಗಿ ಸ್ವಾಧೀನಳಾಗಿಸಬೇಕು ಇಲ್ಲದಿದ್ದರೆ ನೀವುಗಳೆಲ್ಲರೂ ಇದ್ದೇನುಫಲ ಎಂಬದಾಗಿ ಹೇಳಿ ಮಂಡೋದರಿ ಸಹಿತವಾಗಿ ಅರಮನೆಗೆ ತೆರಳಿದನು. ಆಗ ರಾಕ್ಷಸಸ್ತ್ರೀಯರೆಲ್ಲರು ಬಂದು ಸೀತಾದೇವಿಯನ್ನು ನೋಡಿ ಬಹು ಕ್ರೂರವಾದ ವಚನಗಳನ್ನು ಹೇಳತೊಡಗಿದರು. ಎಲೌ ಸೀತೆಯೇ! ಸಾಕ್ಷಾತ್ ಜಗತ್ಕರ್ತನಾದ ಬ್ರಹ್ಮದೇವರಿಗೆ ಮೊಮ್ಮಗನಾಗಿ ಲೋಕತ್ರಯವನ್ನು ಜಯಿಸಿದವನಾಗಿ ಸಕಲ ಪರಿವಾರಸಮೇತನಾಗಿ ಮಹಾವೈಭವದಿಂದಿರುವ ರಾವಣಾಸುರನು ಬಂದು ನಿನ್ನನ್ನು ಬೇಡಿಕೊಂಡರೂ ನೀನು ಅವನನ್ನು ಒಪ್ಪದೆ ಮನುಷ್ಯನಾಗಿ ಜಟಾಚೀರ ಧಾರಿಯಾಗಿ ಋಷಿ ಚರ್ಯದಿಂದಿರುವ ರಾಮನನ್ನು ಕೋರುತ್ತಿ





ರುವೆಯಲ್ಲ ಈಗ ನಿನ್ನನ್ನು ತಿಂದು ಬಿಟ್ಟು ನಾವೆಲ್ಲರೂ ಸೀತೆ ಸತ್ತಳೆಂದು ರಾವಣಾಸುರನಿಗೆ ಹೇಳಿ ಸುಖದಿಂದಿರುವೆವು, ಇದು ನಿಜವೆಂದು ನುಡಿಯಲು, ಆಗ ಸೀತಾದೇವಿಯು ದೀನನಾಗಲಿ ರಾಜ್ಯಹೀನನಾಗಲಿ ರಾಮಚಂದ್ರನೇ ಗತಿ ಮನುಷ್ಯಳಾದ ನಾನು ರಾಕ್ಷಸನಾದ ರಾವಣನಿಗೆ ಅರ್ಹಳಲ್ಲ, ಅರುಂಧತಿದೇವಿಯು ವಸಿಷ್ಠನಿಗೆ ಹೇಗೋ, ದಮಯಂತಿಯು ನಳಮಹಾರಾಜನಿಗೆ ಹೇಗೋ, ಕೇಶಿನೀದೇವಿಯು ಸಗರನಿಗೆ ಹೇಗೋ, ಸುವರ್ಚಲಾದೇವಿಯು ಸೂರ್ಯನಿಗೆ ಹೇಗೋ, ಶಚೀದೇವಿಯು ಇಂದ್ರನಿಗೆ ಹೇಗೋ, ಲೋಪಾಮುದ್ರೆಯು ಅಗಸ್ತ್ಯನಿಗೆ ಹೇಗೋ,

ಸಾವಿತ್ರಿಯು ಸತ್ಯವಂತನಿಗೆ ಹೇಗೋ ಹಾಗೆಯೇ ನಾನೂ ದಶರಥಪುತ್ರನಾದ ರಾಮಚಂದ್ರನ ಮೇಲೆ ಪತಿಭಕ್ತಿಯಿಂದ ಕೂಡಿದವಳಾಗಿರುತ್ತೇನೆ, ನೀವು ಏನುಮಾಡಿದರೂ ನಿಮ್ಮ ಮಾತುಗಳು ನಡೆಯುವುದಿಲ್ಲ, ರಾಮನ ಪಾದಾರವಿಂದಗಳನ್ನು ಬಿಟ್ಟು ನನ್ನ ಮನಸ್ಸು ಹೊರಕ್ಕೆ ಬರುವದಿಲ್ಲ, ಭಿನ್ನಭಿನ್ನವಾಗಿ ಕತ್ತರಿಸಿದರೂ ನಾನು ನಿಮ್ಮ ಮಾತುಗಳನ್ನು ಕೇಳುವುದಿಲ್ಲವೆಂದು ಹೇಳಿದಳು.

## ತ್ರಿಜಟೆಯು ಕನಸುಕಂಡು ಸೀತಾಮಹಿಮೆಯನ್ನು ವಿಸ್ತರಿಸಿ ಹೇಳಿದುದು.

ಆಗ ತ್ರಿಜಟೆಯೆಂಬ ರಾಕ್ಷಸಿಯು, ನಿದ್ರಿಸುತ್ತಿದ್ದು, ಎಚ್ಚರಗೊಂಡು ಎಲೈ ರಾಕ್ಷಸಸ್ತ್ರೀಯರೇ! ನೀವು ಲೋಕಮಾತೆಯಾದ ಸೀತಾದೇವಿಯನ್ನು ಇಂಥಾ ಮಾತುಗಳನ್ನಾಡಿ ಅವಮಾನ ಮಾಡುವದು ಸರಿಯಲ್ಲ ಈಗ ನನಗೆ ಒಂದು ಸ್ವಪ್ನವಾಯಿತು ಹೇಗೆಂದರೆ ರಾಮಚಂದ್ರನು ಗಜದಂತಮಯವಾದ ಸಿಬಿಕೆಯನ್ನು ಅಧಿರೋಹಿಸಿ, ಸೀತಾದೇವಿಯೊಡನೆ ಶುಕ್ಲಾಂಬರಧರನಾಗಿ ಶುಕ್ಲಮಾಲ್ಯಾಲಂಕೃತನಾಗಿ, ಉತ್ತರದಿಕ್ಕಿಗೆ ಹೋಗುತ್ತಾ ಅಂತರಿಕ್ಷಕ್ಕೆ ಎತ್ತಿದ ತನ್ನ ಕರಂಗಳಿಂದ ಮೇಘಗಳನ್ನು ಮುಟ್ಟುತ್ತ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟು ಸಂತುಷ್ಟನಾಗಿದ್ದನು. ಆ ರಾಮನು ಪರಬ್ರಹ್ಮನೇ ಹೊರತು ಮನುಷ್ಯನಲ್ಲ ಈ ಸೀತಾದೇವಿಯು ಲೋಕಮಾತೆಯೇ ಹೊರತು ಮನುಷ್ಯಮಾತ್ರದವಳಲ್ಲ ಇದು ಹಾಗಿರಲಿ ರಾವಣಾಸುರನು ರಕ್ತವಸ್ತ್ರಧಾರಿಯಾಗಿ, ರಕ್ತಮಾಲಾಧಾರಿಯಾಗಿ, ಕಾಳಿಯಿಂದ ಎಳೆಯಲ್ಪಟ್ಟು, ದಕ್ಷಿಣಕ್ಕೆ ಹೋಗುತ್ತಾ ಗೋಮಯದಲ್ಲಿ ಬಿದ್ದು ಭೀತನಾಗಿ ಅಳುತ್ತಿದ್ದನು. ಕುಂಭಕರ್ಣನು ಒಂಟೆಯಮೇಲೂ, ಇಂದ್ರಜಿತ್ತಾದಿ ರಾವಣಪುತ್ರರೆಲ್ಲರೂ, ಗಾರ್ಧಭಂಗಳಮೇಲೂ ಕುಳಿತವರಾಗಿ ತೈಲಸಿಕ್ತಾಂಗರಾಗಿ ದಕ್ಷಿಣಾಭಿಮುಖವಾಗಿ ಹೋದರು ರಾಮದೂತನಾದ ವಾನರನಿಂದ ಲಂಕಾಪುರಿಯು ದಹಿಸಲ್ಪಟ್ಟು ರೋದನಧ್ವನಿಯಿಂದ ಪೂರಿತವಾಗಿತ್ತು ಇಂಥಾ ಸ್ವಪ್ನವು ಎಂದಿಗೂ ಸುಳ್ಳಾಗಲಾರದು, ಇನಲ್ಲದೇ ಸೀತಾದೇವಿಯ ವಾಮಭುಜವು ಚಲಿಸುತ್ತದೆ ವಾಮನಯನ ಸ್ಫುರಿಸುತ್ತದೆ, ಈ ಲಕ್ಷಣಗಳಿಂದ ಆಕೆಗೆ ಶುಭವಾಗುವುದರಲ್ಲಿ ಸಂಶಯವಿಲ್ಲವೆಂದು ಹೇಳಿ ಸುಮ್ಮನಾದಳು, ಬಳಿಕಾ ಸೀತಾದೇವಿಯು ದುಃಖಿತಳಾಗಿ, ಅಕಾಲದಲ್ಲಿ ಮೃತ್ಯುವು ಪ್ರಾಪ್ತವಾಗುವದಿಲ್ಲವಲ್ಲಾ ರಾಮಚಂದ್ರನು ನನ್ನ ವಿಯೋಗದಿಂದ ದುಃಖಿತನಾಗಿ ಮೃತಿಯನ್ನು ಹೊಂದಿದನೋ ನನ್ನ ದೌರ್ಭಾಗ್ಯದಿಂದ ಮರೆತುಹೋದನೋ ಹಾ! ಜನಕನೇ, ಹಾ! ಕೌಸಲ್ಯೆ, ಹಾ! ಕೈಕಯಿ, ಹಾ! ಸುಮಿತ್ರೆ, ಹಾ! ಭರತ, ಹಾ! ಶತ್ರುಘ್ನ, ಹಾ! ಲಕ್ಷ್ಮಣಾ, ಹಾ! ಪ್ರಾಣನಾಥ ರಾಮಚಂದ್ರಾ! ಎಂದು ಪ್ರಲಾಪ ಮಾಡುತ್ತಾ, ತನ್ನ ಜಡೆಯನ್ನು ಕೊರಳಿಗೆ ಸುತ್ತಿ ಶಿಂಶುಪಾವೃಕ್ಷದ ಕೊಂಬೆಗೆ ಕಟ್ಟಿ ಪ್ರಾಣತ್ಯಾಗ ಮಾಡಿಕೊಳ್ಳಬೇಕೆಂದು ಯೋಚಿಸಿ ಸ್ವಲ್ಪ ಹೊತ್ತು ಮೂರ್ಛೆಯನ್ನೈದಿ ನಿರ್ವಿಣ್ಣಳಾಗಿದ್ದಳು.

## ಆಂಜನೇಯನು ಸೀತೆಯನ್ನು ಕಂಡು ರಾಮನ ಮುದ್ರಿಕೆಯನ್ನು ಕೊಟ್ಟುದು.

ಬಳಿಕ ಆ ವೃಕ್ಷದಮೇಲೆ ಕುಳಿತಿದ್ದ ಧೀಮಂತನಾದ ಹನುಮಂತನು ಹೀಗೆ ಯೋಚನೆ ಮಾಡಲುಪಕ್ರಮಿಸಿದನು, ಆಗ ಸೀತಾದೇವಿಯನ್ನು ಈಗಲೇ ನಾನು ನೋಡಿ ಮಾತನಾಡಿಸಿ ರಾಮಚಂದ್ರನ ಕ್ಷೇಮವನ್ನು ತಿಳಿಸದಿದ್ದರೆ ಪ್ರಾಣತ್ಯಾಗ ಮಾಡುವುದರಲ್ಲಿ ಸಂಶಯವಿಲ್ಲ, ಆದಕಾರಣ ನಾನು ಈಗ ಆಕೆಗೆ ನಮಸ್ಕರಿಸಿ ರಾಮನ ವೃತ್ತಾಂತವನ್ನು ತಿಳಿಸಬೇಕು ನನ್ನನ್ನು ಕಂಡರೆ ರಾವಣನೆಂಬ ಭೀತಿಯಿಂದ ಕೂಗಿಕೊಂಡರೆ ರಾಕ್ಷಸರು ಆಯುಧಪಾಣಿಗಳಾಗಿ ಬಂದು ಯುದ್ಧಕ್ಕೆ ನಿಂತರು ಯುದ್ಧದಲ್ಲಿ ಜಯಾಪಜಯಗಳು ನಿಶ್ಚಯವಾಗಿ ತಿಳಿಯಬಾರದುದಾಗಿದೆ



ಇದಕ್ಕೇನು ಮಾಡಬೇಕೊ! ತಿಳಿಯಲಿಲ್ಲ ಆದರೂ
ಇಲ್ಲಿಯೇ ಕೂತು ರಾಮಚಂದ್ರನ ವಂಶವಿಸ್ತಾರವನ್ನೂ
ಗುಣಗಳನ್ನು ಹೊಗಳಿದರೇ, ಆಕೆಗೆ ಸಂಕ್ಷೇಪವಾಗಿ
ನನ್ನ ಮೇಲೆ ಪ್ರೀತಿ ಹುಟ್ಟಬಹುದು ಆರೀತಿ ಮಾಡಬೇ
ಕೆಂದು ಹೊಗಳುವದಕ್ಕೆ ಪ್ರಾರಂಭಿಸಿದನು, ಅಯೋ
ಧ್ಯಾಪುರದಲ್ಲಿ ದಶರಥನೆಂಬರಾಜನು ರಾಜ್ಯವನ್ನಾಳು
ತ್ತಿದ್ದನು. ಆತನಿಗೆ ರಾಮ, ಲಕ್ಷ್ಮಣ, ಭರತ, ಶತ್ರು
ಘ್ನರೆಂಬ ನಾಲ್ವರು ಪುತ್ರರು ಜನಿಸಿದರು, ರಾಮನಿಗೆ
ಸೀತಾದೇವಿಯು ಲಕ್ಷ್ಮಣನಿಗೆ ಊರ್ಮಿಳೆಯು,
ಭರತನಿಗೆ ಮಾಂಡವಿಯು, ಶತ್ರುಘ್ನನಿಗೆ ಶೃತಕೀ
ರ್ತಿಯು ಪತ್ನಿಯರಾದರು, ಆಗ ದಶರಥನು ಜ್ಯೇಷ್ಠ
ಪುತ್ರನಾದ ರಾಮಚಂದ್ರನಿಗೆ ಪಟ್ಟಾಭಿಷೇಕಮಾಡ
ಬೇಕೆಂದು ಪ್ರಯತ್ನಮಾಡಲು ಪತ್ನಿಯಾದ ಕೈಕ
ಯಿಯು ಹಠಯೋಗದಿಂದ ವಿಘ್ನಮಾಡಿ ರಾಮನನ್ನು ಅರಣ್ಯಕ್ಕೆ ಕಳುಹಿಸಿದಳು, ಪತ್ನೀ
ಸಮೇತನಾಗಿ ಲಕ್ಷ್ಮಣಾನುಚರನಾಗಿ ದಂಡಕಾರಣ್ಯ ಮಧ್ಯದಲ್ಲಿ ರಾಮನು ವಾಸಮಾಡು
ತ್ತಿರಲು, ಲೋಕಕಂಟಕನಾದ ರಾವಣಾಸುರನು ಮಾಯೆಯಿಂದ ಬಂದು ಸೀತಾಪಹಾರವನ್ನು
ಮಾಡಿದನು, ಬಳಿಕ ರಾಮಚಂದ್ರನು ಲಕ್ಷ್ಮಣ ಸಮೇತನಾಗಿ ಸೀತೆಯನ್ನು ಹುಡುಕುತ್ತಾ
ಋಷ್ಯಮೂಕಾದ್ರಿಗೆ ಬಂದನು, ಅಲ್ಲಿ ವಾಸವಾಗಿದ್ದ ಸುಗ್ರೀವನೆಂಬ ವಾನರರಾಜನು ನನ್ನನ್ನು
ಕಳುಹಿಸಿದನು, ಬಳಿಕ ನಾನು ಅವರ ಬಳಿಗೆ ಹೋಗಿ ನಮಸ್ಕರಿಸಿ ಸುಗ್ರೀವನು ತಮ್ಮನ್ನು
ಕರೆದುಕೊಂಡು ಬರಬೇಕೆಂದು ಹೇಳಿರುವನೆಂದು ವಿಜ್ಞಾಪಿಸಿ ಬೆನ್ನಿನ ಮೇಲೆ ಕುಳ್ಳಿರಿಸಿಕೊಂಡು
ಬಂದು ರಾಮಲಕ್ಷ್ಮಣರನ್ನು ಸುಗ್ರೀವನ ಹತ್ತಿರ ಬಿಟ್ಟೆನು, ಆ ಬಳಿಕ ಸುಗ್ರೀವನಿಗೂ ರಾಮ
ಚಂದ್ರನಿಗೂ ಪರಸ್ಪರ ಮೈತ್ರಿಯುಂಟಾಯಿತು, ಆಗ ರಾಮಚಂದ್ರನು ಸುಗ್ರೀವನಿಗೆ ವಿರೋಧಿ
ಯಾದ ವಾಲಿಯನ್ನು ಸಂಹಾರಮಾಡಿ ಸುಗ್ರೀವನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಬಳಿಕ
ಸುಗ್ರೀವನು ಸೀತಾದೇವಿಯನ್ನು ಹುಡುಕುವುದಕ್ಕಾಗಿ ದಿಕ್ಕುದಿಕ್ಕುಗಳಿಗೂ ವಾನರರನ್ನು ಕಳುಹಿ
ಸಿದನು. ನಾನು ಮೊದಲಾಗಿ ಕೆಲವರು ದಕ್ಷಿಣದಿಕ್ಕಿಗೆ ಬಂದು ಸೀತೆಯನ್ನು ಹುಡುಕುತ್ತಾ
ಎಲ್ಲಿಯೂ ಕಾಣದೇ ಲಂಕಾಪುರಿಯಲ್ಲಿರುವ ಹಾಗೆ ಕೇಳಿ ಸಮುದ್ರವನ್ನು ಲಂಘಿಸಿ ಲಂಕೆಯಲ್ಲಿ
ಹುಡಿಕಿ ಅಲ್ಲಿಯೂ ಕಾಣದೆ ಈ ವನಕ್ಕೆ ಬಂದೆನು ಈ ವೃಕ್ಷದ ಕೆಳಗೆ ರಾಕ್ಷಸೀ ಪರಿವೃತಳಾಗಿ
ಕುಳಿತಿರುವ ಸೀತಾದೇವಿಯನ್ನು ನೋಡಿ ಕೃತಾರ್ಥನಾದೆನೆಂದು ಹೇಳುತ್ತಿರಲು ಸೀತಾದೇವಿಯು
ರಾಮಸಂಕೀರ್ತನ ಪ್ರಭಾವದಿಂದ ಹರ್ಷಿತಳಾಗಿ ಮೇಲಕ್ಕೆ ನೋಡಿ ಆಂಜನೇಯನನ್ನು ನಿರೀಕ್ಷಿಸಿ
ಭೀತಳಾಗಿ ಸ್ವಪ್ನದಲ್ಲಿ ಶಾಖಾಮೃಗವನ್ನು ನೋಡಿದರೆ ಅಶುಭಕರವೆಂದು ಶಾಸ್ತ್ರದಲ್ಲಿ ಹೇಳಿರುವು
ದರಿಂದ ನಾನು ಸ್ವಪ್ನದಲ್ಲಿ ವಾನರನನ್ನು ನೋಡಿದೆನಲ್ಲ ರಾಮಚಂದ್ರನು ಲಕ್ಷ್ಮಣ ಸಮೇತನಾಗಿ
ಸುಖದಿಂದಿರುವರೇ ಜನಕರಾಯನಿಗೆ ಶುಭವಾದೀತೇ ಭರತ ಶತ್ರುಘ್ನರಿಗೆ ಕುಶಲವಾದೀತೇ
ಆಹಾ ದೈವವೇ ನಿನಗೆ ನಾನು ಏನು ಅಪರಾಧ ಮಾಡಿದೆ ನನಗೆ ಯಾವಾಗ ಶುಭವುಂಟಾದೀ
ತೆಂದು ದುಃಖಿಸುತ್ತಿರಲು ಆಂಜನೇಯನು ವೃಕ್ಷದಿಂದ ಕೆಳಗೆ ಇಳಿದು ಬಂದು ಸೀತಾದೇವಿಗೆ
ನಮಸ್ಕಾರಮಾಡಿ ಬದ್ಧಾಂಜಲಿಯಾಗಿ ಓ ತಾಯಿಯೇ! ನೀನು ಅರುಂಧತಿಯೋ ಶಚೀದೇ
ವಿಯೋ ಅಥವ ರಾವಣಾಪಹೃತಳಾದ ಸೀತೆಯೋ ನಿನ್ನ ಪತಿ ಯಾರು ತಂದೆ ಯಾರು ಇಲ್ಲಿಗೇಕೆ

ಬಂದೆ ಎಂದು ಕೇಳಲು ಸೀತಾದೇವಿಯು ನಾನು ರಾಮಚಂದ್ರನಿಗೆ ಪತ್ನಿ, ಮಿಥಿಲಾನಾಥಂಗೆ ಪುತ್ರಿ, ದಶರಥನಿಗೆ ಸೊಸೆ ಸೀತಾದೇವಿಯೆಂಬ ಹೆಸರಿನಿಂದ ಪ್ರಸಿದ್ಧಳಾದವಳು ರಾವಣನಿಂದ ಅಪಹರಿಸಲ್ಪಟ್ಟು ಈ ಲಂಕಾದ್ವೀಪಕ್ಕೆ ಬಂದೆನು. ನೀನಾರು ಯಾತಕ್ಕೆ ಬಂದಿರುವೆ ಎಂದು ಕೇಳಿದಳು, ಆಗ ಆಂಜನೇಯನು ಅಮ್ಮಾ ನಾನು ಸುಗ್ರೀವನಿಗೆ ಮಂತ್ರಿ, ರಾಮಚಂದ್ರನಿಗೆ ಭೃತ್ಯ, ವಾಯುದೇವರಿಗೆ ಪುತ್ರ, ಆಂಜನೇಯನೆಂದು ಪ್ರಸಿದ್ಧನಾದವನು ಎಂದು ಹೇಳುತ್ತಾ ಸಮೀಪಕ್ಕೆ ಬಂದನು, ಆಗ ಸೀತೆಯು ರಾವಣಾಸುರನು ರೂಪಾಂತರದಿಂದ ಬಂದನೆಂದು ಭಯ ಪಡುತ್ತ ನೀನು ರಾಮಭೃತ್ಯನಾದದ್ದೇ ನಿಜವಾದರೇ ರಾಮ ಲಕ್ಷ್ಮಣರ ಗುಣಗಳನ್ನು ಅವಯವಂಗಳನ್ನು ವಿವರಿಸೆನಲು, ಹನುಮಂತನು ಓ ತಾಯಿಯೇ! ರಾಮಚಂದ್ರನು ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನವಾಗಿ ರೂಪದಲ್ಲಿ ಮನ್ಮಥನಿಗೆ ಸಮಾನವಾಗಿ ಶಾಂತಿಯಲ್ಲಿ ಭೂಮಿಗೆ ಸಮಾನವಾಗಿ ಕೀರ್ತಿಯಲ್ಲಿ ಪುರಂದರ ಸಮಾನವಾಗಿ ನೀತಿಜ್ಞನಾಗಿ ಘನಶ್ಯಾಮನಾಗಿ ಮೇಘ ಗಂಭೀರಧ್ವನಿಯಾಗಿ ಕಂಬುಗ್ರೀವನಾಗಿ ರಕ್ತಾಂತ ನಯನನಾಗಿ ಆಜಾನುಬಾಹುವಾಗಿ ಶರಣಾಗತವತ್ಸಲನಾಗಿ ಜಲಜಾದಿ ರೇಖಾಲಂಕೃತ ಆ ತಾಮ್ರಕರತಲನಾಗಿ ದೀರ್ಘನಾಸಿಕನಾಗಿ ಗೂಢ ಜತ್ರುವಾಗಿ ವಿಶಾಲಾಕ್ಷನಾಗಿ ಸಮವಿಭಕ್ತಾಂಗನಾಗಿ ಪ್ರಿತಾಳಿಸಿಧಾಗಜ್ಞನಾಗಿ ಪಿತೃಭಕ್ತನಾಗಿ ಇರುತ್ತಾನೆ ಲಕ್ಷ್ಮಣನು ಧವಳವರ್ಣವಾಗಿ ಎಲ್ಲದರಲ್ಲಿಯೂ ರಾಮ ಸಮಾನವಾಗಿ ಅಗ್ರಜ ಪೂಜಾಧುರಂಧರನಾಗಿರುತ್ತಾನೆ ನಿನ್ನ ಯೋಗಕ್ಷೇಮವನ್ನರಿಯುವದಕ್ಕಾಗಿ ನನ್ನನ್ನು ಕಳುಹಿಸಿರುವನು ರಾಮಚಂದ್ರನು ಈ ಅಂಗುಳೀಯಕವನ್ನು ನಿನಗೆ ಕಳುಹಿಸಿದನು ನೋಡೆಂದು ಉಂಗುರವನ್ನು ಕೊಟ್ಟನು. ಬಳಿಕ ಸೀತೆಯು ಅದನ್ನು ತಂದು ರಾಮಚಂದ್ರನು ನನಗೆ ಸಿಕ್ಕಿದನೆಂದು ತಿಳಿದು ಬಹಳ ಸಂತೋಷವನ್ನೈದಿದಳು. ಆಂಜನೇಯನನ್ನು ಭೃತ್ಯನನ್ನಾಗಿ ನಿಶ್ಚಯಿಸಿ ಮುಕ್ತಾ ರಾಮಚಂದ್ರನ ವೃತ್ತಾಂತವನ್ನು ತಿಳಿಸೆನಲು ಆಂಜನೇಯನು ಸೀತೆಯನ್ನು ಕುರಿತು ಹೇಳತೊಡಗಿದನು, ಓ ತಾಯಿಯೇ! ರಾಮಚಂದ್ರನು ನೀನು ವಸ್ತ್ರದಲ್ಲಿ ಕಟ್ಟಿ ಹಾಕಿದ್ದ ಭೂಷಣಂಗಳನ್ನು ನೋಡಿ ವಿಷಾದವನ್ನು ಹೊಂದಿ ವಿಶ್ವಾಸಾಕುಲವಾಗಿ ಶುಷ್ಕವಸ್ತ್ರವಾಗಿ ಹಾ ಪ್ರಿಯೇ ಸೀತಾ ಎಂಬದಾಗಿ ವ್ಯಾಕುಲಪಡುತ್ತಾ ಮನೋಹರವಾದ ಪುಷ್ಪವನ್ನಾಗಲಿ ಫಲವನ್ನಾಗಲಿ ನೋಡಿದಾಗ ನಿನ್ನನ್ನು ನೆನಸಿಕೊಂಡು ಒಂದು ದಿನವನ್ನು ಒಂದು ಯುಗವಾಗಿ ಕಳೆಯುತ್ತಿರುತ್ತಾನೆ, ನಾನು ಇಲ್ಲಿಂದ ಹೋಗುತ್ತಲೆ ರಾಮಚಂದ್ರನನ್ನು ಕರೆದುಕೊಂಡು ಬರುತ್ತೇನೆ ಎಂಬದಾಗಿ ನುಡಿದು, ತಾಯಿಯೇ! ನನ್ನ ಬೆನ್ನಿನ ಮೇಲೆ ಕೂತುಕೊಂಡರೇ ರಾಮಚಂದ್ರನ ಬಳಿಗೆ ಕರೆದುಕೊಂಡು ಹೋಗುತ್ತೇನೆಂದು ಹೇಳಲು ಆಗ ಸೀತಾದೇವಿಯು ಇದೇ ನಿನ್ನ ಕಪಿಕೃತ್ಯಕ್ಕೆ ಲಕ್ಷಣವು ನಾವು ಎಷ್ಟು ನೀನು ಎಷ್ಟು ನನ್ನನ್ನು ಎತ್ತಿಕೊಂಡು ಹೇಗೆ ಹೋಗುತ್ತೀಯೆಂದು ನುಡಿಯಲು ಇದನ್ನು ಕೇಳಿ ಆಂಜನೇಯನು ನನ್ನ ಶಕ್ತಿಯನ್ನು ತಿಳಿಯದೇ ಮಾತಾಡುತ್ತಾಳೆ ನನ್ನ ರೂಪವನ್ನು ತಿಳಿಸುವೆನೆಂದಾಲೋಚಿಸಿ ಮೇರುಮಂದರ ಸಂಕಾಶನಾಗಿ ವಜ್ರದಂಷ್ಟ್ರನಖನಾಗಿ ಉದ್ದಂಡವಾಲ ದಂಡವುಳ್ಳವನಾಗಿ ತಾಮ್ರವಕ್ತ್ರನಾಗಿ ಹೂಂಕರಿಸಿ ರಾವಣ ಸಮೇತಳಾಗಿ ಲಂಕಾಪುರಿಯನ್ನು ತೆಗೆದುಕೊಂಡು ಹೋಗುವುದಕ್ಕೆ ಶಕ್ತಿವುಂಟೆಂದು ನುಡಿದನು. ಆಗ ಸೀತಾದೇವಿಯು ನೋಡಿ ವಿಸ್ಮಿತಳಾಗಿ ಎಲೈ ಆಂಜನೇಯನೇ! ನಿನ್ನ ಶಕ್ತಿಯು ಅಸಮಾನವಾದದ್ದು ಸಮುದ್ರವನ್ನು ಲಂಘಿಸಿ ಇಲ್ಲಿಗೆ ಬರುವದಕ್ಕೆ ನೀನು ಯೋಗ್ಯನೇಸರಿ ನನ್ನನ್ನು ಎತ್ತಿಕೊಂಡು ಹೋಗಲು ನಿನಗೆ ಶಕ್ತಿಯುಂಟು ಆದರೂ ನಾನು ರಾಮನನ್ನು ಬಿಟ್ಟು ಪರಪುರುಷನನ್ನು ಸ್ಪರ್ಶಮಾಡುವದಿಲ್ಲವೆಂದು ನುಡಿಯಲು ಆಂಜನೇಯನು ತಾಯಿಯೇ ಈ ಮಾತು ನಿನಗೆ ಅರ್ಹವಾದದ್ದು ಸರಿ ಆ ಮಹಾತ್ಮನಾದ ರಾಮಚಂದ್ರನೇ ಇಲ್ಲಿಗೆ ಬರುವನು ನನಗೆ ಆಜ್ಞೆಯುತ್ತರೆ ನಾನು ಹೋಗುತ್ತೇನೆ ಎಂದನು.

## ಸೀತೆಯು ಕಾಕಾಸುರನ ರಹಸ್ಯವನ್ನು ಹೇಳಿದುದು.

ಎಲೌ ಜಗನ್ಮಾತೆಯಾದ ಸೀತಾದೇವಿಯೆ ನಾನು ನಿನ್ನೆಡೆಗೆ ಬಂದುದಕ್ಕಾಗಿ ರಾಮನಿಗೆ ತೋರಿಸುವದಕ್ಕೋಸ್ಕರ ಏನಾದರೂ ಒಂದು ಗುರುತನ್ನು ಕೊಡಬೇಕೆಂದು ಬಿನ್ನೈಸಲು, ಜನಕಾತ್ಮಜೆಯು ಮಾರುತಿಯೇ ನನ್ನೆಡೆಯಲ್ಲಿ ಯಾವ ಪದಾರ್ಥವೂ ಇಲ್ಲ ಪರಂತು ಇದೊಂದು ಚೂಡಾಮಣಿ ಮಾತ್ರ ಇದೆ ಇದನ್ನು ತೆಗೆದುಕೊಂಡು ಹೋಗಿ ರಾಮಭದ್ರನಿಗೆ ತೋರಿಸು ಎಂದು ತನ್ನ ಸೆರಗಿನಲ್ಲಿ ಕಟ್ಟಿಕೊಂಡಿದ್ದ ರತ್ನವನ್ನು ಕೊಟ್ಟು ಆಂಜನೇಯನೆ ಒಂದು ಚರಿತ್ರೆಯನ್ನು ಹೇಳುವೆನು ಕೇಳು. ಇದು ಶ್ರೀರಾಮನಿಗೂ ನನಗೂ ಇಬ್ಬರಿಗೂ ಗೊತ್ತಲ್ಲದೆ ಅನ್ಯರಿಗೆ ಗೊತ್ತಿಲ್ಲ, ಅದೇನೆಂದರೆ ಹಿಂದೆ ನಾವೀರ್ವರೂ ಚಿತ್ರಕೂಟಪರ್ವತದಲ್ಲಿ ಸಂಚರಿಸುವ ಕಾಲದಲ್ಲಿ ಶ್ರೀರಾಮನು ನಿದ್ರಾತುರನಾಗಿ ನನ್ನ ವಾಮಾಂಕದಲ್ಲಿ ಶಿರಸ್ಸನ್ನಿಟ್ಟು ಶಯನಮಾಡಿದನು, ಆ ಕಾಲದಲ್ಲಿ ನನ್ನ ರೂಪಲಾವಣ್ಯಾದಿಗಳಿಗೆ ಬೆರಗಾಗಿ ಕಾಕಾಸುರನೆಂಬ ದೈತ್ಯಾಧಮನು ಕಾಕವೇಷವನ್ನು ಧರಿಸಿ ನನ್ನೆಡೆಗೆ ಬಂದು ತನ್ನ ಚಂಚುಪುಟದಿಂದ ನನ್ನ ಸ್ತನಗಳನ್ನು ಚುಚ್ಚಲಾಗಿ ನನ್ನ ಪಯೋಧರದಿಂದ ರಕ್ತಸ್ರಾವವಾಗಿ ರಾಮನ ಮೇಲೆ ಬಿದ್ದಿತು ಶ್ರೀರಾಮನು ಎಚ್ಚತ್ತು ದೈತ್ಯನ ನೀಚಕೃತ್ಯಕ್ಕೆ ಕೋಪಗೊಂಡು ಒಂದು ದರ್ಭಾಂಕುರವನ್ನು ಮಂತ್ರಿಸಿ ಪ್ರಯೋಗಿಸಲು ಅದು ಬ್ರಹ್ಮಾಸ್ತ್ರವಾಗಿ ರಕ್ಕಸನ ಬೆನ್ನಟ್ಟಿತು ಆ ದೈತ್ಯಾಧಮನು ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳನ್ನು ತಿರುಗಿದರೂ ಅದ ಬಿಡಲಿಲ್ಲವಾದಕಾರಣ ನನ್ನ ಪ್ರಾಣವು ಉಳಿಯುವದಿಲ್ಲವೆಂದು ನಿಶ್ಚೈಸಿ ಕಡೆಗೆ ಶ್ರೀರಾಮಭದ್ರನ ಬಳಿಗೆ ಬಂದು ಶರಣಾಗತನಾಗಲು ಕರುಣಾಸಾಗರನಾದ ದಾಶರಥಿಯು ಅವನ ಅಪರಾಧವನ್ನು ಕ್ಷಮಿಸಿ ಅವನ ಒಂದು ನೇತ್ರವನ್ನು ತನ್ನ ಅಸ್ತ್ರಕ್ಕೆ ಆಹುತಿಯಾಗಿ ಕೊಟ್ಟು ದೈತ್ಯನನ್ನು ಉಳಿಸಿದನು, ಈ ಚರಿತ್ರೆಯು ಅನ್ಯರಿಗೆ ಯಾರಿಗೂ ತಿಳಿದಿಲ್ಲ ನಾನು ಹೇಳಿದ ಆಖ್ಯಾನವನ್ನು ಶ್ರೀರಾಮನಿಗೆ ತಿಳಿಸಿದಲ್ಲಿ ನಿಶ್ಚಯವಾಗಿ ನನ್ನ ದರ್ಶನವಾಗಿದೆಯೆಂದು ತಿಳಿಯುವನು. ಈ ಚರಿತ್ರೆಯನ್ನು ನನ್ನ ಪ್ರಾಣಪ್ರಿಯನಿಗೆ ರಹಸ್ಯದಲ್ಲಿ ತಿಳುಹೆನಲು, ಮಾರುತಿಯು ತಥಾಸ್ತು ಎಂದು ನನ್ನ ಚೂಡಾಮಣಿಯನ್ನು ಭದ್ರಪಡಿಸಿಕೊಂಡು ಸೀತೆಗೆ ನಮಸ್ಕರಿಸಲು ಜಾನಕಿಯು ಚಿರಂಜೀವಿಯಾಗೆಂದು ಆಶೀರ್ವದಿಸಿದಳು, ಹನುಮಂತನು ಜಗನ್ಮಾತೆಯ ಅನುಗ್ರಹವನ್ನು ಪಡೆದು ಪ್ರದಕ್ಷಿಣ ನಮಸ್ಕಾರಮಾಡಿ ತೆರಳಿದನು.

## ಆಂಜನೇಯನು ಅಶೋಕವನವನ್ನು ಧ್ವಂಸಮಾಡಿದುದು.

ಅನಂತರದಲ್ಲಿ ಹನುಮಂತನು ಹೊರಟು ಅಶೋಕವನವನ್ನು ಪ್ರವೇಶಿಸಿ ಭಯಂಕರಮೂರ್ತಿಯಾಗಿ ನೆಗೆದು ಹಾರುತ್ತ ವೃಕ್ಷಗಳನ್ನು ಕೀಳುತ್ತಾ ಕಮಲಾಕರಗಳನ್ನು ಕೆಡಿಸುತ್ತಾ ಪ್ರಾಸಾದಗಳನ್ನು ತಳ್ಳುತ್ತಾ ಪ್ರಳಯಕಾಲದ ಮೇಘದಂತೆ ಗರ್ಜಿಸುತ್ತಾ ರಾಕ್ಷಸರನ್ನು ಬೆದರಿಸುತ್ತಾ ಕಾಮಚಾರಿಯಾಗಿ ಸ್ವೇಚ್ಛಾವಿಹಾರವನ್ನು ಮಾಡುತ್ತಿದ್ದನು. ಆಗ ರಾಕ್ಷಸ ಸ್ತ್ರೀಯರು ಸೀತಾದೇವಿಯನ್ನು ನೋಡಿ ಎಲೈ ಸೀತೆಯೇ ನಿನ್ನ ಸಂಗಡ ಮಾತಾಡುತ್ತಿದ್ದ ವಾನರನು ಯಾರು ಉದ್ಯಾನವನವನ್ನು ನಾಶಮಾಡುತ್ತಾನೆಂದು ಕೇಳಲು ಸೀತಾದೇವಿಯು ರಾಕ್ಷಸರ ಮಾಯೆಗಳನ್ನು ನಾನರಿಯೆ, ಹಾವಿನ ಪಾದಗಳನ್ನು ಹಾವೇ ಬಲ್ಲುದು ಎನ್ನುವಂತೆ ನಿಮ್ಮ ರಾವಣನೇ ಬಂದು ಈರೀತಿ ಮಾಡುತ್ತಾನೆಂದು ಹೇಳಿದಳು, ರಾಕ್ಷಸಸ್ತ್ರೀಯರು ಈ ಆಂಜನೇಯನ ರಭಸಕ್ಕೆ ತಾಳಲಾರದೇ ಓಡಿಹೋಗಿ ರಾವಣಾಸುರನಿಗೆ ವಿಜ್ಞಾಪಿಸಿದರು, ಓ ರಾಕ್ಷಸಪಟ್ಟಭದ್ರನೇ ಲಂಕಾಧಿನಾಥನೇ ಅಶೋಕವನದಲ್ಲಿ ಒಬ್ಬ ವಾನರನು ಒಂದು ಜನಕಾತ್ಮಜೆಯ ಸಂಗಡ ಮಾತನಾಡಿ ಮನೋಹರವಾದ ನಿನ್ನ ಉದ್ಯಾನವನ್ನು ನಾಶಮಾಡುತ್ತಾ ಕಾಲರುದ್ರನಂತೆ ಭಯಂಕರ

ನಾಗಿ ವಿಲಕ್ಷಣ ಪುರುಷನಾಗಿ ಇರುತ್ತಾನೆ ಅವನನ್ನು ನಿವಾರಿಸದೆಹೋದರೆ ಲಂಕಾಪಟ್ಟಣವನ್ನೆ ನಾಶಮಾಡುತ್ತಾನೆಂಬದಾಗಿ ತಿಳಿಸಲು, ರಾವಣಾಸುರನು ಕೋಪಾರುಣ ನೇತ್ರನಾಗಿ ದಶವದನ ಗಳಲ್ಲಿ ಕೋರೆಗಳನ್ನು ಸವರಿಕೊಳ್ಳುತ್ತಾ ಪರಾಕ್ರಮದಲ್ಲಿ ತನಗೆ ಸಮಾನರಾದ ಹನುಮದ್ಗ್ರ ಹಣವ್ಯಗ್ರರಾದ ಕಿಂಕರರೆಂಬ ರಾಕ್ಷಸರನ್ನು ಕಳುಹಿಸಿದನು. ಬಳಿಕಾ ರಾಕ್ಷಸರು ರಥಾರೂಢ ರಾಗಿ ಖಡ್ಗಾದ್ಯಾಯುಧಗಳನ್ನು ಧರಿಸಿ ಸೈನ್ಯಸಮೇತನಾಗಿ ಹೊರಟು ಬಂದು ಅಶೋಕವನವನ್ನು ಪ್ರವೇಶಿಸಿ ಅಲ್ಲಿನ ಚೈತನ್ಯಪ್ರಾಸಾದದ ಶಿಖರದಲ್ಲಿ ಕುಳಿತು ಅರ್ಗಳಪಾಣಿಯಾಗಿ ಮಧ್ಯಂದಿನದ ಮಾರ್ತಾಂಡನೋಪಾದಿಯಲ್ಲಿರುವ ಹನುಮಂತನನ್ನು ನೋಡಿ ಬಾಣವರ್ಷವನ್ನು ಸುರಿಸುತ್ತಾ ಬರಲು, ವಾಯುಪುತ್ರನು ಸಿಂಹನಾದಮಾಡಿ ನಿಂತುಕೊಂಡು ಒಂದು ಕೈಲಿರುವ ಪ್ರಾಸಾದದ ಅಡ್ಡಮರದಿಂದ ಕೆಲವರನ್ನು ಸಂಹರಿಸಿ, ಗಜಗಳಿಂದ ಗಜಗಳನ್ನೂ, ರಥಗಳಿಂದ ರಥಗಳನ್ನೂ, ಅಶ್ವದಿಂದ ಅಶ್ವವನ್ನು, ಭಟರಿಂದ ಭಟರನ್ನು ನಾಶಮಾಡುತ್ತಾ, ರಾಮಚಂದ್ರನು ಜಯಿಸು ತ್ತಾನೆ, ಲಕ್ಷ್ಮಣನು ಪ್ರಕಾಶಿಸುತ್ತಾನೆ, ಸುಗ್ರೀವನು ವಾನರಸಮೇತನಾಗಿ ಬಂದು ಲಂಕೆಯ ನಾಶವನ್ನು ಮಾಡುತ್ತಾನೆ ಸೀತಾದೇವಿಯನ್ನು ಹುಡುಕುವದಕ್ಕಾಗಿ ದಿಕ್ಕುದಿಕ್ಕುಗಳಲ್ಲಿಯೂ ತಂಡೋಪತಂಡವಾಗಿ ವಾನರರು ಹೊರಟಿರುತ್ತಾರೆ, ನನಗಿಂತಲೂ ಕಡಿಮೆಯಾದವರು ಯಾರೂ ಇಲ್ಲಾ ನಾನು ಶತಯೋಜನವಾದ ಸಮುದ್ರವನ್ನು ಲಂಘಿಸಿ ಸೀತಾದೇವಿಯನ್ನು ನೋಡಿ ನಿಮಗೆ ನನ್ನ ಶಕ್ತಿಯನ್ನು ತೋರಿಸುವದಕ್ಕಾಗಿ ವನಭಂಗಮಾಡಲುಪಕ್ರಮಿಸಿದನು ಇನ್ನು ಪರಿಣಾಮವಾಗಲಾರದೆಂದು ನುಡಿಯುತ್ತಾ ಬಂದಿದ್ದ ರಾಕ್ಷಸ ಸಂಘವನ್ನು ಸಂಹರಿಸಿ ಪುನಃ ಚೈತ್ಯಪ್ರಾಸಾದ ಶಿಖರದಲ್ಲಿ ಕುಳಿತನು.

## ಆಂಜನೇಯನು ಅಕ್ಷಯಕುಮಾರನನ್ನು ಕೊಂದುದು.

ಬಳಿಕ ಹತಶೇಷರಾದ ರಾಕ್ಷಸರು ಓಡಿಹೋಗಿ ಓಲಗದಲ್ಲಿ ಸಿಂಹಾಸನಾರೂಢನಾಗಿ ಮಂತ್ರಿ ಪ್ರಮುಖ ಪರಿವಾರ ಸಮೇತನಾಗಿ ತೇಜೋಸಮನ್ವಿತನಾಗಿರುವ ರಾವಣಾಸುರನಿಗೆರಗಿ ಓ ರಾಕ್ಷಸರಾಜನೇ ನಿನ್ನಿಂದ ಕಳುಹಿಸಲ್ಪಟ್ಟ ಕಿಂಕರರೆಂಬ ರಾಕ್ಷಸರು ಸೈನ್ಯಸಮೇತರಾಗಿ ವಾಯುಪುತ್ರನಿಂದ ಸಂಹರಿಸಲ್ಪಟ್ಟರೆಂದು ತಿಳಿಸಲು ವಿಸ್ಮಿತನಾಗಿ ಅಹಾ ಎಂಥಾ ವಾನರನು, ಕಿಂಕರರೆಂಬುವರು ನನಗೆ ಸಮಾನರಾದವರಲ್ಲವೇ ಇಂಥಾವರನ್ನು ಒಬ್ಬಂಟಿಗನಾದ ವಾನರನು ಹೇಗೆ ಸಂಹರಿಸಿದನು, ಇದು ಆಶ್ಚರ್ಯವಾಗಿ ತೋರುತ್ತದೆ. ಆಗಲಿ ಮತ್ತೂ ಕೆಲವರನ್ನು ಕಳುಹಿಸೋಣ ಎಂದಾಲೋಚಿಸಿ ಮಂತ್ರಿಪುತ್ರರಾದ ಏಳುಮಂದಿ ರಾಕ್ಷಸರನ್ನು ಸೈನ್ಯಸಮೇತ ವಾಗಿ ಕಳುಹಿಸಲು, ಆ ರಾಕ್ಷಸರು ಬಂದು ಚೈತ್ಯಪ್ರಾಸಾದದಮೇಲೆ ಕುಳಿತಿರುವ ವಾಯುಪುತ್ರ ನನ್ನು ನೋಡಿ ಅರ್ಭಟಿಸುತ್ತಾ ಧನುಷ್ಟಂಕಾರವನ್ನು ಮಾಡುತ್ತಾ ಬಾಣವರ್ಷಗಳನ್ನು ಸುರಿ ಯುತ್ತಾ ಎದುರಾಗಿ ನಿಂತರು. ಆಗ ವಾಯುಪುತ್ರನು ಗರ್ಜಿಸುತ್ತಾ ಲಂಘಿಸಿ ಕರಗಳಿಂದ ಕೆಲವರನ್ನು, ಪಾದಗಳಿಂದ ಕೆಲವರನ್ನು, ಮುಷ್ಟಿಯಿಂದ ಕೆಲವರನ್ನು, ನಖಗಳಿಂದ ಕೆಲವರನ್ನು ವಕ್ಷಸ್ಥಳದಿಂದ ಕೆಲವರನ್ನು, ತೊಡೆಗಳಿಂದ ಕೆಲವರನ್ನು ಸಂಹರಿಸುತ್ತಾ ಬಂದನು. ಈ ರಾಕ್ಷ ಸರು ರಕ್ತವನ್ನು ಕಾರುತ್ತಾ ಕರಪಾದಗಳನ್ನು ಕಳೆದುಕೊಂಡು ಯಮಪುರಿಗೆ ಸೇರಿದರು. ಹತಶೇಷರಾದವರು ಈ ವೃತ್ತಾಂತವನ್ನು ರಾವಣನಿಗೆ ತಿಳಿಸಲು, ನೇತ್ರಗಳಿಂದ ಬೆಂಕಿಯನ್ನು ಸುರಿಸುತ್ತಾ ವಿರೂಪಾಕ್ಷ, ಯೂಪಾಕ್ಷ, ದುರ್ಧರ, ಪ್ರಭ, ಭಾಸಕರ್ನರೆಂಬ ಪಂಚ ಸೇನಾ ನಾಯಕರನ್ನು ಪರಿವಾರ ಸಮೇತರಾಗಿ ಕಳುಹಿಸಲಾಲೋಚಿಸಿ, ಅವರನ್ನು ಕರೆಸಿ ಅವರ ಸಂಗಡ ಕೆಲವು ಮಾತುಗಳನ್ನು ಹೇಳಲುಪಕ್ರಮಿಸಿದನು. ಎಲೈ ಸೇನಾಪತಿಗಳಿರಾ ಆ ವಾಯುಪುತ್ರನು

ವೀರಾದ್ಭುತ ಪರಾಕ್ರಮಶಾಲಿಯಾಗಿ ಇರ್ಧಾನೆ. ಇಂದ್ರನಿಂದ ಕಳುಹಿಸಲ್ಪಟ್ಟನೋ, ಬ್ರಹ್ಮ ದೇವರು ಲಂಕೆಯನ್ನು ನಾಶಮಾಡಬೇಕೆಂದು ವಾನರರೂಪವಾದ ವ್ಯತ್ಯವನ್ನು ಸೃಷ್ಟಿಸಿ ಕಳುಹಿ ಸಿದನೋ ನೀವು ಮಹಾ ಜಾಗರೂಕರಾಗಿ ಪ್ರಯತ್ನಪುರಸ್ಸರವಾಗಿ ಆ ಕಪಿಯನ್ನು ಹಿಡಿದು ತರಬೇಕು. ವಾಲಿ, ಸುಗ್ರೀವ, ನೀಲ, ನಳ, ಕುಮುದಾದಿಗಳನ್ನು ನಾನು ನೋಡಿದೇನೆ ಈ ರೂಪ, ಈ ಪರಾಕ್ರಮಗಳು ಯಾರಿಗೂ ಇಲ್ಲ, ನೀವು ಅಸಮಾನ ಪರಾಕ್ರಮಿಗಳಾದಕಾರಣ ನಿಮ್ಮನ್ನು ಕಳುಹಿಸುತ್ತೇನೆಂದು ಹೇಳಲು, ಆ ರಾಕ್ಷಸರು ಬಂದು ಅಶೋಕವನವನ್ನು ಪ್ರವೇಶಿಸಿ ನಾನಾ ಪ್ರಹರಣಗಳಿಂದ ಯುದ್ಧಮಾಡುತ್ತಾ ಎದುರಾಗಿ ಬರಲು ಹನುಮಂತನು ಕೂಗಿ ಘುಮಿಕಿ ಕೈಲಿರುವ ಅರ್ಗಳದಿಂದ ಕೆಲವರನ್ನು ಪಾದಪ್ರಹಾರದಿಂದ ಕೆಲವರನ್ನು ವೃಕ್ಷಗಳಿಂದ ಕೆಲವರನ್ನು ಸಮಾಪದಲ್ಲಿದ್ದ ಪಾಷಾಣಗಳಿಂದ ಕೆಲವರನ್ನು ಸಂಹರಿಸುತ್ತಾ ವಿರೂಪಾಕ್ಷ, ಯೂಪಾಕ್ಷರನ್ನು ಮುಷ್ಟಿಯುದ್ಧದಿಂದ ಕೊಂದನು. ಬಳಿಕ ದುರ್ಧರ, ಪ್ರಸಭಭಾಸ ಕರ್ಣರನ್ನು ತನ್ನ ಕೈಲಿದ್ದ ಅಷ್ಟಮರದಿಂದ ಬಡಿದು ಕೊಂದನು, ಹತಶೇಷರಾದವರು ರಾವಣಾಸುರನ ಬಳಿಗೆ ಹೋಗಿ ಓ ರಾಜನೇ ಸೇನಾನಾಯಕರಾದ ವಿರೂಪಾಕ್ಷ, ಯೂಪಾಕ್ಷ, ದುರ್ಧರ, ಪ್ರಸಭಭಾಸ ಕರ್ಣರೆಂಬುವರು ಆ ಮಾರುತಿಯಿಂದ ಮಡಿದರು, ಸಕಲ ಸೈನ್ಯವೂ ನಾಶವಾಯಿತು ನಾವು ಹತಶೇಷರಾಗಿ ಬಂದೆವು, ಮುಂದೆ ಚಿತ್ತಾನುಸಾರ ಮಾಡಬಹುದು, ಆತನು ಅಜೇಯ ನಾಗಿ ನಮ್ಮ ಲಂಕಾ ನಾಶನಕ್ಕಾಗಿ ಬಂದವನೇ ಹೊರತು ಸಾಮಾನ್ಯ ವಾನರನಲ್ಲ. ಆತನನ್ನು ನೋಡಿದಮಾತ್ರದಿಂದಲೇ ರಾಕ್ಷಸರು ತೇಜೋಹೀನರಾಗಿ ಪ್ರಾಣಗಳನ್ನು ಬಿಡುತ್ತಿರುವರು. ಉದಾಸೀನನಾಗಿದ್ದರೆ ನಿನ್ನ ಲಂಕೆಯು ನಾಶವಾಗುವದರಲ್ಲಿ ಸಂದೇಹವಿಲ್ಲವೆಂದು ವಿಜ್ಞಾಪಿಸಲು ರಾವಣಾಸುರನು ಬಾಷ್ಪಪೂರಿತನೇತ್ರನಾಗಿ ಹಾ ! ದೈವವೇ ! ಒಬ್ಬ ವಾನರನು ಲಂಕಾಪಟ್ಟಣ ವನ್ನು ಪ್ರವೇಶಿಸಿ, ಕಿಂಕರ ರಾಕ್ಷಸರನ್ನು ಮಂತ್ರಿಪುತ್ರರಾದ ಮಹಾ ಬಲವಂತರಾದವರನ್ನು ಸೇನಾಧಿಪತಿಗಳನ್ನು ಸೈನ್ಯಸಮೇತವಾಗಿ, ಸಂಹರಿಸಿದುದನ್ನು ನೋಡಿದರೆ ನನಗೆ ಜಯಕಾಲವು ಕಳೆದಹಾಗೆ ಕಾಣುತ್ತದೆ, ಇಂಥಾ ಸೇನಾಪತಿಗಳು ಯಾವಕಾಲಕ್ಕೂ ಸೋಲರು, ಮಂತ್ರಿಪು ತ್ರರು ಮಹಾಬಲಸಂಪನ್ನರು ಎಲ್ಲರೂ ಮಡಿದರಲ್ಲ. ಈಗ ಅಕ್ಷಯಕುಮಾರನನ್ನು ಕಳುಹಿ ಸಿದರೆ ಈ ವಾನರನನ್ನು ಜಯಿಸುವುದರಲ್ಲಿ ಸಂಶಯವಿಲ್ಲ ಎಂದು ಯೋಚಿಸಿ ಆತನನ್ನು ಕರೆಸಿ, ಎಲೈ ಪ್ರಿಯಪುತ್ರನೇ ಒಬ್ಬ ವಾನರನಿಂದ ಲಂಕಾಪಟ್ಟಣವು ನಾಶವಾಗುವದಕ್ಕೆ ಪ್ರಾರಂಭ ವಾಗಿದೆ ನೀನು ಹೋಗಿ ಅವನನ್ನು ಸಂಹರಿಸಿ ನನಗೆ ಸುಖವನ್ನುಂಟುಮಾಡಬೇಕೆನಲು ಅಕ್ಷಯಕುಮಾರನು ತಂದೆಯ ಪಾದಗಳಿಗೆರಗಿ ಇಷ್ಟುಮಾತ್ರಕ್ಕೆ ಆಲೋಚಿಸಬೇಕಾಯಿತೆ, ನಾನು ಹೋಗಿ ನಿಮಿಷಮಾತ್ರದಲ್ಲಿ ಅವನನ್ನು ಸಂಹರಿಸಿ ನಿನ್ನ ಋಣವನ್ನು ತೀರಿಸಿಕೊಳ್ಳುತ್ತೇನೆಂದು ನುಡಿದು ಮೀಸೆಗಳನ್ನು ಹುರಿಮಾಡುತ್ತಾ ನಕ್ಕು ತಂದೆಯಿಂದಾಲಿಂಗಿತನಾಗಿ ಕಿರೀಟಾದಿ ಭೂಷ ಣಗಳಿಂದಲಂಕೃತನಾಗಿ ಯುದ್ಧಸನ್ನದ್ಧನಾಗಿ ರಥಾರೂಢನಾಗಿ ಅಕ್ಷೋಹಿಣೀ ಶತಪರಿವೃತನಾಗಿ ಲಂಕಾಪುರದಿಂದ ಹೊರಟು ಅಶೋಕವನವನ್ನು ಪ್ರವೇಶಿಸಿ ಪ್ರಚಂಡ ಮಾರ್ತಾಂಡನೋಪಾದಿ ಯಲ್ಲಿ ಗೋಪುರದಮೇಲೆ ಕುಳಿತಿರುವ ಮಾರುತಿಯನ್ನು ಕಂಡು ಆಶ್ಚರ್ಯಯುಕ್ತನಾಗಿ, ಟಂಕಾರ ಯುಕ್ತವಾದ ಧನುಸ್ಸಿನಿಂದ ಜ್ವಾಲೆಗಳನ್ನು ಸುರಿಸುತ್ತಾ ಎದುರಾಗಿ ಬಂದು ನಿಂತನು. ಬಳಿಕಾ ಮಾರುತಿಯು ರಾಮದೂತನಾದ ಸುಗ್ರೀವನ ಮಂತ್ರಿಯಾದ ಆಂಜನೇಯನು ಲಂಕಾನಾಶ ಮಾಡು ವದಕ್ಕಾಗಿ ಬಂದಿದ್ದಾನೆಂದು ಘರ್ಜಿಸುತ್ತಾ ಪಾಷಾಣಗಳಿಂದಲೂ, ವೃಕ್ಷಗಳಿಂದಲೂ, ಸೈನ್ಯ ನಾಶ ಮಾಡುವದಕ್ಕೆ ಪ್ರಾರಂಭಿಸಿದನು. ಆಗ ರಾವಣಪುತ್ರನು ಕೋಪಗೊಂಡು ಬಾಣಗಳಿಂದ ಹೊಡೆದನು ಆಂಜನೇಯನು ಬಾಣಪ್ರಹಾರದಿಂದ ನೊಂದು ಪಾಷಾಣಗಳಿಂದ ಸಾರಥಿಯನ್ನೂ

ರಥವನ್ನೂ ಸಹ ತುಂಡುತುಂಡಾಗಿ ಮಾಡಿದನು. ಅಕ್ಷಯಕುಮಾರನು ಪಾದಚಾರಿಯಾಗಿ ಖಡ್ಗಾದಿಗಳನ್ನು ಧರಿಸಿ ಮಾರುತಿಯನ್ನು ಹೊಡೆದನು. ಆ ಮಾರುತಿಯು ಪುಷ್ಪಿತ ಕಿಂಶುಕ ಸಮಾನನಾಗಿ ಮತ್ತಷ್ಟು ಕೋಪಗೊಂಡು ದೊಡ್ಡಪಾಷಾಣದಿಂದ ಹೊಡೆದು ಸಿಂಹನಾದಮಾಡಲು ಆರಾಕ್ಷಸಕುಮಾರನು ರಕ್ತವನ್ನುಕಾರುತ್ತಾ ನೆಲಕ್ಕೆಬಿದ್ದು ಚೇತರಿಸಿಕೊಂಡೆದ್ದು ಖಡ್ಗದಿಂದ ಹೊಡೆಯಲು ಹನುಮಂತನು ರಕ್ತಸಿಕ್ತಾಂಗನಾಗಿ ಮೇಲೆ ಘುಮಿಕಿ ಕರತಲದಿಂದ ಕೆನ್ನೆಗೆ ಹೊಡೆಯಲು ಅವನ ತಲೆಯು ದೂರಕ್ಕೆ ಹಾರಿಹೋಗಿ ಪ್ರಾಣದಿಂದ ವಿಮುಕ್ತನಾದನು, ಹತಶೇಷರು ರಾವಣನ ಬಳಿಗೆ ಹೋಗಿ ಈ ಸಮಾಚಾರವನ್ನು ತಿಳಿಸಿದರು.

## ಮೇಘನಾದನು ಆಂಜನೇಯನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿದುದು.

ರಾವಣಾಸುರನು ಮೂರ್ಛಿತನಾಗಿ ಸಿಂಹಾಸನದಿಂದ ಕೆಳಗೆಬಿದ್ದು ಎಚ್ಚರಗೊಂಡು ಕಳವಳಗೊಳ್ಳುತ್ತಾ ಹಾ ಪ್ರಿಯಪುತ್ರನೇ ನಾನು ಕಿಗೆಯುನಾಗಿ ನಾನು ಹೋಗದೇ ನಿನ್ನನ್ನು ಕಳುಹಿಸಿದೆನಲ್ಲಾ ನನ್ನೆದುರಿಗೆ ನೀನು ಸಾಯಬೇಕಾಯಿತಲ್ಲಾ; ವಾನರನಿಂದ ಎಷ್ಟು ಸಂಕಟವುಂಟಾಯಿತೊ ಮಂಡೋದರಿಗೆ ಅಕ್ಷಯಕುಮಾರನು ಯುದ್ಧದಲ್ಲಿ ಮಡಿದನೆಂದು ಹೇಗೆ ತಿಳಿಸಲಿ, ಇಂದ್ರಜಿತುವಿಗೆ ಹೇಗೆ ಹೇಳಲಿ ಇನ್ನು ಮುಂದೆ ಯುದ್ಧಕ್ಕೆ ಯಾವನ್ನಾದರೂ ಕಳುಹಿಸಲು ನಾಚಿಗೆಕೇಡಾಯಿತಲ್ಲಾ ಲೋಕಕಂಟಕನಾದ ನನಗೆ ಇಂಥಾ ಮರ್ದನೆ ಪ್ರಾಪ್ತವಾಗುವುದೇ ಜಯಾಪಜಯಗಳು ಶಾಶ್ವತವಾದದ್ದಲ್ಲವೆಂದಾಲೋಚಿಸಿ ಧೈರ್ಯವನ್ನವಲಂಬಿಸಿ ಇಂದ್ರಜಿತುವನ್ನು ಕರೆದು ಎಲೈ ಕುಮಾರನೇ ನಿನ್ನ ತಮ್ಮನಾದ ಅಕ್ಷಯಕುಮಾರನನ್ನು ಸಂಹಾರಮಾಡಿದ ಆಂಜನೇಯನನ್ನು ನೀನು ಹೋಗಿ ಜಯಿಸಿ ಸೆರೆಹಿಡಿದು ತರಬೇಕೆಂದು ಆಜ್ಞೆಮಾಡಿದನು, ಬಳಿಕ ಇಂದ್ರಜಿತುವು ತಂದೆಗೆ ನಮಸ್ಕರಿಸಿ ಅತನಿಂದ ಬೀಳ್ಕೊಂಡು ಮಹಾರಥನಾಗಿ ಪರಿವಾರದಿಂದೊಡಗೂಡಿ ಹೊರಟು ಅಶೋಕವನದಲ್ಲಿ ಪ್ರಕಾಶಿಸುತ್ತಿರುವ ಆಂಜನೇಯನನ್ನು ನೋಡಿ ಆತನ ತೇಜಸ್ಸಿನಿಂದ ವಿಸ್ಮಿತನಾಗಿ ಬಾಣಪ್ರಯೋಗ ಮಾಡತೊಡಗಿದನು. ಆಂಜನೇಯನು ಗೋಪುರದಿಂದ ಧುಮುಕಿ ನಿಂತಿರುವ ನಾನು ರಾಮದೂತನಾದ ನನಗೆದುರಾಗಿ ಬಂದೆಯಾ ಈಗ ನಿನ್ನ ಗರ್ವವನ್ನು ಇಳಿಸುವೆನು, ಸರಿಯಾಗಿ ನಿಂತುಕೋ ಎನಲು ಬ್ರಹ್ಮಾದ್ಯಸ್ತ್ರ ಪ್ರಯೋಗ ಮಾಡುತ್ತಾ ಆ ಮಾರುತಿಯಿಂದ ಅನೇಕ ಪ್ರಹಾರಗಳನ್ನು ಪಡೆಯುತ್ತಾ ಈತನು ಅಸಾಧ್ಯನೆಂದು ತಿಳಿದು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು, ಬಳಿಕಾ ವಾಯುಪುತ್ರನು ಬ್ರಹ್ಮಾಸ್ತ್ರ ಪೀಡಿತನಾಗಿ ನಿಶ್ಚೇಷ್ಟನಾಗಿ ಭೂಮಿಯಲ್ಲಿ ಬಿದ್ದು ಬಳಿಕ ಇಂದ್ರಜಿತುವಿನಿಂದ ಬಿಡಲ್ಪಟ್ಟ ರಾಕ್ಷಸರು ಬಂದು ಈತನನ್ನು ಹಗ್ಗದಿಂದ ಕಟ್ಟಿ ಎಳೆದುಕೊಂಡು ಹೋಗುತ್ತಿರಲು, ಆ ಮಾರುತಿಯು ಎಚ್ಚರಗೊಂಡು ನಾನು ರಾವಣಾಸುರನನ್ನು ನೋಡಬೇಕಾಗಿರುತ್ತದೆ, ಇವರೇ ಕರೆದುಕೊಂಡು ಹೋಗಲಿ ನನಗೆ ಅನುಕೂಲವೇ ಆಯಿತು ನಾನೇ ಆದರೆ ಹುಡುಕುತ್ತ ಹೋಗಬೇಕಾಗಿತ್ತೆಂದು ಆಲೋಚಿಸಿ ಸುಮ್ಮನಿದ್ದನು.

## ಆಂಜನೇಯನಿಗೂ ರಾವಣನಿಗೂ ನಡೆದ ಸಂಭಾಷಣೆ.

ಆ ರಾಕ್ಷಸರು ಆಂಜನೇಯನನ್ನು ಕರೆದುಕೊಂಡು ಹೋಗುತ್ತಿರಲು ಯಾರು ಎಲ್ಲಿಂದಬಂದನು. ಎಲ್ಲಿಗೆ ಹೋಗುತ್ತಾನೆ ಇಲ್ಲಿಗೆ ಯಾತಕ್ಕಾಗಿ ಬಂದನೆಂದು ಕೇಳಲ್ಪಡುವವನಾಗುತ್ತಿರಲು ರಾವಣಾಸುರನ ಹತ್ತಿರಕ್ಕೆ ಕರೆದುಕೊಂಡುಹೋಗಿ ನಿಲ್ಲಿಸಿದರು, ಆಗ ರಾವಣಾಸುರನು ಈತನನ್ನು ನೋಡಿ ಆಹಾ ಎಷ್ಟು ತೇಜಸ್ವಿಯಾಗಿದಾನೆ ಕೈಲಾಸಪರ್ವತದಲ್ಲಿ ನನಗೆ ಶಾಪವನ್ನಿತ್ತ ನಂದೀಶ್ವರನೇ ಇಲ್ಲಿಗೆ

ಬಂದನೋ ಲಂಕಾನಾಶಕ್ಕೆ ಇವನೇ ಮೂಲಕಾರಣನೊ ಇವನೊಬ್ಬನೇ ಇಷ್ಟು ಪರಾಕ್ರಮಶಾಲಿ ಯಾದರೇ ಉಳಿದ ವಾನರರೂ ಸೇರಿದರೆ ಏನು ಗತಿಯಾದೀತು ಎಂದಾಲೋಚಿಸುತ್ತಿದ್ದನು, ಆಗ ಮಾರುತಿಯು ರಾವಣನನ್ನು ಕಂಡು ವಿಸ್ಮಿತನಾಗಿ ಎಷ್ಟು ವೈಭವದಿಂದ ಕುಳಿತಿದ್ದಾನೆ. ಆಹಾ ಇವನು ಕೋಪಗೊಂಡರೆ ಭುವನತ್ರಯವನ್ನು ಮುಳುಗಿಸುವದರಲ್ಲಿ ಸಂಶಯವಿಲ್ಲ, ಈ ಮಂತ್ರಿಗಳೇನು ಈ ಆಪ್ತರೇನು, ಇವನ ಕುಮಾರವರ್ಗವೇನು, ಭಟಸಮೂಹವೇನು, ವಿಂಶತಿಭುಜಗಳೇನು, ಎಷ್ಟು ತೇಜಸ್ವಿಯಾಗಿದಾನೆಂದು ಆಲೋಚಿಸುತ್ತಾ ಆತನಿಗೆ ಎದುರಾಗಿ ತನ್ನ ವಾಲದಂಡವನ್ನು ಸುತ್ತಿ ಆಸನವಾಗಿ ಮಾಡಿಕೊಂಡು ಅದರ ಮೇಲೆ ಕುಳಿತು ಧೀರನಾಗಿ ಇದ್ದನು, ಆಗ ಪ್ರಹಸ್ತ ನನ್ನು ನೋಡಿ ಈ ದುಷ್ಟನು ಯಾತಕ್ಕೆ ಬಂದನೋ ಕೇಳೆನಲು ಪ್ರಹಸ್ತನು ನೀನು ಯಾರು ಯಾತಕ್ಕೆ ಬಂದೆ ನಿಜವಾಗಿ ಹೇಳು ನಿನ್ನಪ್ರಾಣಕ್ಕೆ ಭಯವಿಲ್ಲವೆಂದು ಕೇಳಲು ಮಾರುತಿಯು ಹೇಳತೊಡಗಿದನು; ಅಯ್ಯಾ ರಾಕ್ಷಸರಾಜನೇ ನಾನು ಸುಗ್ರೀವನಿಗೆ ಮಂತ್ರಿಯಾಗಿ ರಾಮಚಂದ್ರನಿಗೆ ಭೃತ್ಯನಾಗಿ ವಾಯುವಿಗೆ ಪುತ್ರನಾಗಿರುವ ಹನುಮಂತನು ರಾಮಸುಗ್ರೀವರಿಂದ ಕಳುಹಿಸಲ್ಪಟ್ಟು ನಿನಗೆ ಶುಭವನ್ನು ಮಾಡಬೇಕೆಂದು ಬಂದಿದೇನೆ, ರಾಮಚಂದ್ರನು ದಂಡಕಾರಣ್ಯದಲ್ಲಿ ಇಲ್ಲದಕಾಲದಲ್ಲಿ ಆತನನ್ನು ಮೋಸಗೊಳಿಸಿ ಚೌರ್ಯದಿಂದ ಸೀತಾಪಹರಣ ಮಾಡಿದ್ದು ಹೇಡಿತನವಲ್ಲವೇ ರಾಮನು ಜನಸ್ಥಾನದಲ್ಲಿ ಖರಾದಿ ರಾಕ್ಷಸರನ್ನು ಮುಹೂರ್ತಕಾಲ ದಲ್ಲಿ ಸಂಹರಿಸಿದನಲ್ಲವೇ ವಾಲೀ ವೃತ್ತಾಂತವು ನಿನಗೆ ಚೆನ್ನಾಗಿ ತಿಳಿದಿರುವುದಷ್ಟೆ, ಅಂಥಾ ವಾಲಿಯನ್ನು ಒಂದು ಬಾಣದಿಂದಲೆ ಸಂಹರಿಸಿದನಲ್ಲ ಸುಬಾಹು ಮಾರೀಚರೆಂಬ ರಾಕ್ಷಸರ ವೃತ್ತಾಂತವು ವಿದಿತವಾಗಿಯೇ ಇರಬಹುದು ವಿರಾಧನ ಸಂಗತಿಯು ತಿಳಿದಿರಬಹುದು, ನಿನ್ನ ಸ್ತ್ರೀಯರು ನಿನಗೆ ಸಾಲದೇ ಈ ಸೀತಾದೇವಿಯನ್ನು ಯಾತಕ್ಕೆತಂದೆ ಈಸೀತೆ ಲಂಕಾಪುರಿಗೆ ಕಾಳ ರಾತ್ರಿ ಎಂದು ತಿಳಿದು ಸೀತೆಯನ್ನುಬೇಗನೆ ರಾಮಚಂದ್ರನ ಪಾದಾರವಿಂದಗಳಿಗೆ ಒಪ್ಪಿಸಿದರೇ ನಿನ್ನ ಪ್ರಾಣ ಉಳಿದೀತು ಇಲ್ಲವಾದರೆ ಉಳಿಯಲಾರದು ನಿನಗೆ ಭಯವಾಗಿದ್ದರೆ ನಾನು ಬರುತ್ತೇನೆ ನಡೆ ರಾಮನ ಬಳಿಗೆ ಹೋಗೋಣ ಸೀತಾದೇವಿಯು ನಿನಗೆ ಸಾಧ್ಯಳಲ್ಲ ನಿನಗೆ ಬಂದಿರುವ ಶಾಪಗಳನ್ನು ನೆನಿಸಿಕೊಂಡು ಈ ಕೆಲಸದಿಂದ ವಿರಾಮವನ್ನು ಹೊಂದು ಸ್ತ್ರೀಮೋಹಿತನಾಗಿ ಬಂಧು, ಭಾತೃ, ಮಿತ್ರ, ಪುತ್ರ ಸಮೇತನಾಗಿ ನಾಶವಾಗಬೇಡ, ನೀನು ಎಷ್ಟು ಸಮರ್ಥನಾ ದರೂ ರಾಮಪ್ರೇರಿತನಾದ ಲಕ್ಷ್ಮಣನ ಮುಂದೆ ನಿನ್ನ ಸಾಹಸವೇನೂ ನಡೆಯುವುದಿಲ್ಲ. ಮಹಾ ಪರಾಧಿಯಾದ ನಿನ್ನನ್ನು ರಾಮಚಂದ್ರನು ಎಲ್ಲಿ ಹೊಕ್ಕರೂ ಬಿಡುವುದಿಲ್ಲ ಇದುವರೆಗೂ ನೀನು ಏನುಮಾಡಿದರೂ ನಡೆಯಿತು ಇಲ್ಲಿಗೆ ನಿನ್ನ ಶಕ್ತಿಯು ಮುಗಿಯಿತು ಎಂಬದಾಗಿ ನುಡಿಯಲು, ರಾವಣಾಸುರನು ಕೈಕಚ್ಚಿಕೊಂಡು ಹಲ್ಲುಗಳನ್ನಗಿಯುತ್ತ ಅರುಣನೇತ್ರನಾಗಿ ಪ್ರಹಸ್ತನನ್ನು ನೋಡಿ, ಈ ದುರಾತ್ಮನನ್ನು ಸಂಹರಿಸಬೇಕೆಂದು ಹೇಳಿದನು.





## ವಿಭೀಷಣನು ಅಣ್ಣನಿಗೆ ಹೇಳಿದ ನೀತಿ.

ಆಗ ವಿಭೀಷಣನು ಕೆಲವು ನೀತಿಗಳನ್ನು ಹೇಳಿದನು, ಅಯ್ಯಾ ರಾಕ್ಷಸಪಟ್ಟಭದ್ರನೇ ನೀತಿ ತಪ್ಪಿ ನುಡಿಯುವುದು ಪ್ರಭುಗಳಿಗೆ ಯುಕ್ತವಲ್ಲ ನಿನ್ನ ಕೋಪವನ್ನು ಶತ್ರುಗಳಮೇಲೆ ತೋರಿಸಬೇಕೇ ಹೊರತು ದೂತನಮೇಲೆ ಪ್ರಯೋಗಿಸಕೂಡದು. ಇವನನ್ನು ಕೊಂದರೆ ಇಲ್ಲಿಗೆ ಬರತಕ್ಕವನು ಇನ್ನಾರೂ ಇಲ್ಲ ದೂತರಿಗೆ ಅನೇಕವಿಧವಾದ ಅಂಗವಿಕಾರಮಾಡುವುದು ಮೊದಲಾದ ದಂಡನೆಗಳುಂಟು ಇವನಿಗೆ ಯಾವದಾದರೂ ಅಂಥಾ ದಂಡನೆಯನ್ನು ವಿಧಿಸಬಹುದು ಕೋಪವಿಲ್ಲದೆ ನನ್ನ ಮಾತನ್ನಂಗೀಕರಿಸಿ ಇವನನ್ನು ಸಂಹಾರಮಾಡದೆ ಉಳಿಸಬೇಕೆಂದು ಹೇಳಿದನು.

## ಆಂಜನೇಯನು ಲಂಕೆಯನ್ನು ದಹಿಸಿದುದು.

ರಾವಣಾಸುರನು ನಿಶ್ವಾಸಗಳನ್ನು ಬಿಡುತ್ತಾ ತನಗೆ ತಮ್ಮನೂ ಯುಕ್ತಾಯುಕ್ತ ವಿವೇಕಿಯೂ ಪಾಪಭೀತನೂ ಆದ ವಿಭೀಷಣನ ಮಾತುಗಳನ್ನು ಅಂಗೀಕರಿಸಿ ಎಲೈ ಪ್ರಹಸ್ತನೇ!



ವಾನರಗಳಿಗೆಲ್ಲಾ ಬಾಲವು ಮುಖ್ಯಾಂಗವಾಗಿರುತ್ತದೆ ಇದಕ್ಕೆ ತೈಲಪಲ್ಲ ಅದ್ದಿದ ವಸ್ತ್ರವನ್ನು ಸುತ್ತಿ ಬೆಂಕಿಯನ್ನು ಹತ್ತಿಸಿದರೆ ಸುಡಲ್ಪಟ್ಟಬಾಲವುಳ್ಳ ಇವನನ್ನು ನೋಡಿ ಅಂಗದಾದಿಗಳು ಭಗ್ನೋತ್ಸಾಹರಾಗಿ ಇವನನ್ನು ಹಾಸ್ಯಮಾಡಲಿ ಎಂದು ನುಡಿಯಲು ಪ್ರಹಸ್ತನು ಭಟರಿಗೆ ಆರೀತಿ ಆಜ್ಞೆಯನ್ನಿತ್ತನು. ಆಗ ಭಟರು ಮಹಾ ಸಂಭ್ರಮದೊಡನೆ ಓಡಾಡುತ್ತಾ ತೈಲಸಿಕ್ತಂಗಳಾದ ವಸ್ತ್ರಗಳಿಂದ ಅಂಜನೇಯನ ಬಾಲವನ್ನು ಸುತ್ತಿ ಬೆಂಕಿಯನ್ನು ಹತ್ತಿಸಲು ಜಾಜ್ವಲ್ಯಮಾನವಾಗಿ ಅಗ್ನಿಯು ವೃದ್ಧಿಯನ್ನೈದಿ ಪ್ರದಕ್ಷಿಣಶಿಖನಾಗಿ ಉರಿಯುತ್ತಿದ್ದನು ಆಗ ಸೀತಾದೇವಿಗೆ ರಾಕ್ಷಸಸ್ತ್ರೀಯರು ಈ ವೃತ್ತಾಂತವನ್ನು ತಿಳಿಸಲು ಸೀತೆಯು ಹೀಗೆ ಯೋಚನೆ ಮಾಡತೊಡಗಿದಳು ಹಾ! ಹಾ! ದೈವಪ್ರಾತಿಕೂಲ್ಯದಿಂದ ಜೀವಕೋಟಿಗೆ ದುಃಖಗಳು ಬರುತ್ತವೆ ನಾನು ಪತಿವ್ರತೆಯಾಗಿದ್ದರೆ ಶ್ರೀರಾಮನು ರಾವಣಾಸುರನನ್ನು ಜಯಿಸಿ ನನ್ನನ್ನುಅಯೋಧ್ಯಾಪುರಕ್ಕೆ ಕರೆದುಕೊಂಡು ಹೋಗುವುದು ನಿಜವಾಗಿದ್ಧರೆ ನನಗೆ ಇನ್ನೂಅದೃಷ್ಟವಿಶೇಷವಿದ್ದರೆ ಈ ಆಂಜನೇಯನಿಗೆ ಅಗ್ನಿಯು ಶೀತಳವಾಗಲಿ ಎಂದು ಅಗ್ನಿದೇವರ ಧ್ಯಾನವನ್ನು ಮಾಡಿದಳು, ಬಳಿಕ ಜ್ವಾಲಾಗ್ನಿಯು ಚಂದನಶೀತಲವಾಗಿ ವಾಯುಪುತ್ರನಿಗೆ ತಣ್ಣಗೆ ಇತ್ತು ಆಮಾರುತಿಯು ವಿಜೃಂಭಿಸಿ ಪರ್ವತಾಕಾರವಾಗಿ ಭೀಮದಂಷ್ಟ್ರನಾಗಿ ಸರ್ವರಾಕ್ಷಸಭಯಂಕರನಾಗಿ ಲಂಘಿಸಿ ರಾಕ್ಷಸಭವನಗಳ ಮೇಲೆ ಸಂಚರಿಸುತ್ತಾ ಪ್ರಹಸ್ತ, ದೇವಾಂತಕ, ನರಾಂತಕ, ಅತಿಕಾಯ, ಕುಂಭ, ನಿಕುಂಭ, ಮಹೋದರ, ಮಹಾಪಾರ್ಶ್ವ, ಕುಂಭಕರ್ಣಾದಿಗಳ ಭವನಗಳನ್ನು ಸುಡುತ್ತಾ ಕುಂಭಕರ್ಣನ ಭವನವನ್ನು ಹೊಕ್ಕು ರಾವಣಾಸುರನ ಭವನವನ್ನು ತಾಕಿ ಮತ್ತಷ್ಟು ಬೆಂಕಿಯನ್ನು ಹತ್ತಿಸಿ ಸುಡುತ್ತಾ ಬಂದು ವಿಭೀಷಣನ ಗೃಹವನ್ನು ಮಾತ್ರ ಬಿಟ್ಟು ಲಂಕಾಪುರವನ್ನೆಲ್ಲಾ ಸಂಪೂರ್ಣವಾಗಿ ಸುಟ್ಟು ಸಂಚರಿಸುತ್ತಾ ರಾಕ್ಷಸರುಗಳನ್ನು ಸಿಂಹನಾದಗಳಿಂದ ಭಯಪಡಿಸುತ್ತಿದ್ದನು.

ಆಗ ಲಂಕಾಪುರಿಯಲ್ಲಿ ರಾಕ್ಷಸಸ್ತ್ರೀಯರು ಹಾ! ತಾತ, ಹಾ! ಪುತ್ರ, ಹಾ! ಕಾಂತ, ಹಾ! ಮಿತ್ರ ಎಂಬದಾಗಿ ಕೂಗುತ್ತಾ ಕೆಲವರು ಓಡುತ್ತಾ ಕೆಲವರು ಬೆಂಕಿಗೆ ಸಿಕ್ಕಿ ಮೃತರಾದರು ಪಟ್ಟಣದಲ್ಲಿ ಎಲ್ಲಿನೋಡಿದರೂ ಧೂಮವು ತುಂಬಿ ಅಂಧಕಾರಮಯವಾಗಿತ್ತು ವಾಜಿಶಾಲೆ, ಗಜಶಾಲೆ, ರಥಶಾಲೆ, ಆಯುಧಶಾಲೆ ಮೊದಲಾದ ಭವನಗಳು ಹತ್ತಿಕೊಂಡು ಧೂಮಸಮೇತವಾದ ಬೆಂಕಿಯಕೆಂಡಗಳೂ ಹಾರುತ್ತಿತ್ತು ರಾವಣಾಸುರನು ಭೀತನಾಗಿ ವಿಷ್ಣುವಿನಿಂದ ಕಳುಹಿಸಲ್ಪಟ್ಟ ವಾನರರೂಪನಾದ ಅಗ್ನಿಯೆ ಹೊರತು ಅನ್ಯನಲ್ಲವೆಂದು ಏನೂತೋರದೆ ಸುಮ್ಮನಿದ್ದನು ಆಗ ಆಂಜನೇಯನು ಲಂಕಾಪಟ್ಟಣವನ್ನು ದಹಿಸಿ ತ್ವರಿತವಾಗಿ ಸಮುದ್ರದಲ್ಲಿ ತನ್ನ ಬಾಲವನ್ನದ್ದಿ ಅಗ್ನಿಯನ್ನು ಶಾಂತಮಾಡಿದನು. ಬಾಲದಲ್ಲಿದ್ದ ಕೂದಲು ಒಂದಾದರೂ ಬೆಂಕಿಯಿಂದ ಸುಡದಿರುವುದನ್ನು ನೋಡಿ ವಿಸ್ಮಿತನಾಗಿ ಲಂಕಾಪುರಿಯ ಗೋಪುರದ ಮೇಲೆ ಕುಳಿತು ಕೆಲವು ಯೋಚನೆ ಮಾಡಲುಪಕ್ರಮಿಸಿದನು. ಆಹಾ! ಇಂಥ ಅಗ್ನಿಯು ನನಗೆ ಕೊಂಚವಾದರೂ ಬಾಧೆಕೊಡಲಿಲ್ಲ ಶ್ರೀರಾಮಚಂದ್ರನ ಕೃಪಾರಸಶೀಲನಾಗಿ ತಣ್ಣಗೆ ಇದ್ದರೂ ಸೀತಾದೇವಿಯ ಪಾತಿವ್ರತ್ಯಕ್ಕೆ ಅಂಜಿದವನಾಗಿ ತದ್ಭಕ್ತನಾದ ನನಗೆ ಶೀತಲನಾಗಿ ಇದ್ದನೋ ನನ್ನ ಸಾಹಸದಿಂದ ಆಗತಕ್ಕ ಕಾರ್ಯವಲ್ಲ ಆದರೆ ನಾನು ಅನಾಲೋಚಿತನಾಗಿ ಕೆಲಸಮಾಡಿದೆನಲ್ಲಾ ಲಂಕಾಪುರಿಯಲ್ಲಿ ಸೀತಾದೇವಿಯು ಸಿಕ್ಕಿಹೋದಳೋ ಹೇಗೋ ಕೋಪವೆಂಬುದು ಮನುಷ್ಯನಿಗೆ ಕೆಟ್ಟದು ಎಂಬ ಶಾಸ್ತ್ರವು ನಿಜವಾದದ್ದೇಸರಿ ನಾನು ಕೋಪಗೊಂಡು ಲಂಕಾಪುರಿಯನ್ನು ಸೀತಾಸಮೇತನಾಗಿ ದಹಿಸಿದೆನಲ್ಲಾ ಎಂಥಾ ಕೋಪಿಷ್ಠನು ಅಕೃತ್ಯಕ್ಕಾದರೂ ಹಿಂತೆಗೆಯುವುದಿಲ್ಲ ಆಹಾ ಸ್ವಾಮಿಕಾರ್ಯ ಘಾತಕನಾದೆನಲ್ಲಾ ನನ್ನ ಬುದ್ಧಿಯು ಬಲವು ಸಾಹಸವು ನಿಷ್ಫಲವಾಯಿತೆಂದಾಲೋಚಿಸುತ್ತಿರಲಾಗಿ ಅಂತರಿಕ್ಷದಲ್ಲಿ ದೇವತೆಗಳು ಮಾಡುತ್ತಿದ್ದ ಜಯಧ್ವನಿಯನ್ನು ಸೀತೆಯು ಕೇಳಿ ಸುಖವಾಗಿರದಿದ್ದರೆ ಜಯಶಬ್ದಗಳಿಗೆ ಕಾರಣವಿಲ್ಲವೆಂದು ಆಲೋಚಿಸಿ ಅಶೋಕವನಕ್ಕೆ ಹೋಗಿ ಸೀತಾದೇವಿಯನ್ನುನೋಡಿ ಅವಳ ಆಜ್ಞೆಯನ್ನು ಪಡೆದು ಹೊರಡಬೇಕೆಂದಾಲೋಚಿಸಿ ಶಿಂಶುಪವೃಕ್ಷದಮೇಲೆ ಧುಮಿಕಿ ಸೀತಾದೇವಿಗೆರಗಿ ಪ್ರಯಾಣ ಮಾಡಿದನು ಬಳಿಕ ಸೀತಾದೇವಿಯು ಆತನನ್ನು ನೋಡಿ ಅಶ್ರುಪೂರ್ಣನಯನಳಾಗಿ ಓ ಆಂಜನೇಯನೆ ನೀನು ರಾಮಚಂದ್ರನಿಗೆ ಭಕ್ತಿಯಿಂದ ನನ್ನ ವೃತ್ತಾಂತವನ್ನು ತಿಳಿಸಿ ಆತನನ್ನು ಕರೆದುಕೊಂಡು ಬಂದು ನನ್ನ ವ್ಯಾಕುಲವನ್ನು ತೀರಿಸಬೇಕೆಂಬುದಾಗಿ ಹೇಳಿ ನಾನಾತರದಿಂದ ಸ್ತುತಿಸಿ ಕಳುಹಿಸಿದಳು, ಆಂಜನೇಯನು ಸೀತಾದೇವಿಯ ಅನುಗ್ರಹದಿಂದ ದ್ವಿಗುಣವಾದ ಬಲವುಳ್ಳವನಾಗಿ ರಾಮಚಂದ್ರನ ಪಾದಕಮಲವನ್ನು ಧ್ಯಾನಮಾಡುತ್ತಾ ಅಂಗದಾದಿ ವಾನರರನ್ನು ನೆನೆಯುತ್ತಾ ಸುವೇಲಾದ್ರಿಯನ್ನು ಆರೋಹಣಮಾಡಿ ಭುಜಸ್ಫಾಲನ ಪೂರ್ವಕವಾಗಿ ಮೇಘಮಂಡಲಕ್ಕೆ ಹಾರುತ್ತಾ ಬಾಲವನ್ನುಚಾಚಿ ಝಳಿಪಿಸುತ್ತಾ ಪ್ರಳಯಕಾಲದ ಮೇಘದಂತೆ ಗರ್ಜಿಸುತ್ತಾ ಅಂತರಿಕ್ಷನಿವಾಸಿಗಳಾದ ದೇವತೆಗಳಿಂದ ಸ್ತುತಿಸಲ್ಪಡುತ್ತಾ ಕೆಲವು ಹೊತ್ತು ಮೇಘಗಳಲ್ಲಿ ಹೊಕ್ಕು ಕೆಲವು ಹೊತ್ತು ಮೇಘಮಂಡಲಾತೀತನಾಗಿ ಸಮುದ್ರದಲ್ಲಿನ ತಿಮಿತಿಮಿಂಗಲಾದಿ ಚರಾಚರಗಳನ್ನು ನೋಡುತ್ತಾ ಬರುತ್ತಿದ್ದನು. ಉತ್ತರ ತೀರದಲ್ಲಿ ಜಾಂಬವಾದಿಗಳು ಅಂಜನಾಪುತ್ರನ ಆಗಮನವನ್ನು ನಿರೀಕ್ಷಿಸುತ್ತಾ ಆತನ ಊರು ವೇಗದ ಧ್ವನಿಯನ್ನು ಕೇಳಿ ಹನುಮಂತನು ಬರುತ್ತಾನೆ ಈ ಶಬ್ದವು ಆತನ ವೇಗದಿಂದುಂಟಾದದ್ದು ಎಂದೆಣಿಸಿ ಎದುರು ನೋಡುತ್ತಿದ್ದರು ಆಗ ವಾಯುಪುತ್ರನು ಮಿತ್ರರಾದ ಅಂಗದಾದಿಗಳ ಸಮೀಪಕ್ಕೆ ಬಂದಿಳಿದನು.

## ಆಂಜನೇಯನು ಅಂಗದಾದಿಗಳಿಗೆ ಲಂಕೆಯ ಸಮಾಚಾರವನ್ನು ತಿಳಿಸಿದುದು.

ಬಳಿಕ ಎಲ್ಲಾ ವಾನರರೂ ಅಮಿತ ಸಂತೋಷದಿಂದ ಹನುಮಂತನನ್ನು ಆಲಿಂಗನಾದಿಗಳಿಂದ ಸಂಭಾವಿಸಿ ಪ್ರೇಮಪೂರ್ವಕವಾಗಿ ಆತನ ಮುಖಾರವಿಂದವನ್ನು ತಮ್ಮ ನಯನಚಂಚರೀಕಗಳಿಂದ ತುಂಬಿಸುತ್ತಾ ವೃಕ್ಷಗಳಂ ಅಧಿರೋಹಿಸಿ ಕೆಳಕ್ಕೆ ಲಂಘಿಸುವದು ಕಲ್ಲುಮೇಲಿನಿಂದ ಮತ್ತೊಂದು ಕಲ್ಲಿನ ಮೇಲಕ್ಕೆ ಹಾರುವದು, ಕುಪ್ಪಗಂತುಗಳು ಹಾಕುವುದು ಮೊದಲಾದ ಕಪಿಚೇಷ್ಟೆಗಳನ್ನು ಮಾಡುತ್ತಾ ಲಂಕಾಪುರದ ವೃತ್ತಾಂತವನ್ನು ಕೇಳುವ ಇಚ್ಛೆಯುಳ್ಳವರಾಗಿ ಇದ್ದರು, ಆಗ ಸ್ವರ್ಣಾಂಗದನಾದ ಅಂಗದ ಕುಮಾರನು ವಾಯುಪುತ್ರನನ್ನು ನೋಡಿ ಅಯ್ಯಾ ಸಚಿವೋತ್ತಮನೇ ನೀನು ಇಲ್ಲಿಂದ ಹೊರಟದ್ದು ಮೊದಲು ಇದುವರೆಗೆ ನಡೆದ ಸಂಗತಿಗಳೆಲ್ಲವನ್ನು ಸಾವಧಾನದಿಂದ ಹೇಳಬೇಕೆನಲು ವಾಯುಪುತ್ರನು ಕುಳಿತು ಸಕಲ ವಾನರಪರಿವೃತನಾಗಿ ಸೀತಾದೇವಿಗೆರಗಿ ಹೀಗೆ ಪೇಳತೊಡಗಿದನು ಅಯ್ಯಾ ಯುವರಾಜನೇ ತಮ್ಮ ಮುಂದೆ ನಾನು ಲಂಕಾದ್ವೀಪಕ್ಕೆ ಹೋಗಬೇಕೆಂಬ ಕುತೂಹಲದಿಂದ ತಮ್ಮಗಳಿಂದ ಆಜ್ಞಪ್ತನಾಗಿ ಸಮುದ್ರದ ಮೇಲೆ ಹಾರಿಹೋಗಿ ಸಮುದ್ರಮಧ್ಯದಲ್ಲಿ ಮೈನಾಕಪರ್ವತವನ್ನು ದರ್ಶನ ಮಾಡಿಕೊಂಡು ಬಳಿಕಾ ಸುರಸಾದೇವಿಯನ್ನು ಗೆದ್ದು ಮುಂದೆ ಛಾಯಾಗ್ರಾಹಿಯೆಂಬ ಗ್ರಹವನ್ನು ಜಯಿಸಿ ಸಾಯಂಕಾಲಕ್ಕೆ ಲಂಕಾಪುರಿಯ ಸಮೀಪಕ್ಕೆ ಹೋದೆನು. ಬಳಿಕ ಲಂಕಾಪುರಿಯನ್ನು ಪ್ರವೇಶಮಾಡುವ ಕಾಲದಲ್ಲಿ ಲಂಕಿಣಿಯೆಂಬ ರಾಕ್ಷಸಿಯನ್ನು ಕೊಂದು ಗ್ರಾಮದಲ್ಲಿನ ರಾಕ್ಷಸ ಭವನಗಳನ್ನು ಶೋಧಿಸುತ್ತ ರಾವಣಾಸುರನ ಭವನವನ್ನು ಹೊಕ್ಕು ಸೀತಾದೇವಿಯನ್ನು ಕಾಣದೆ ಚಿಂತಾಕ್ರಾಂತನಾಗಿ ಅಶೋಕವನವನ್ನು ಪ್ರವೇಶಿಸಿ ಅಲ್ಲಿ ಶಿಂಶುಪಾ ವೃಕ್ಷದ ಕೆಳಗೆ ರಾಕ್ಷಸಸ್ತ್ರೀಪರಿವೃತಳಾಗಿ ಕುಳಿತಿರುವ ಸಾಕ್ಷಾಜ್ಜಗನ್ಮಾತೆಯಾದ ಸೀತಾದೇವಿಯನ್ನು ದರ್ಶನಮಾಡಿ ಕೃತಾರ್ಥನಾಗಿ ಆ ಅಶೋಕವನವನ್ನು ನಾಶಮಾಡಲು ಉಪಕ್ರಮಿಸಲು ರಾಕ್ಷಸಶ್ರೇಷ್ಠನಾದ ರಾವಣಾಸುರನಿಂದ ಕಳುಹಿಸಲ್ಪಟ್ಟ ಸರ್ವರಾಕ್ಷಸರನ್ನೂ ಸಂಹಾರ ಮಾಡಿದ ಬಳಿಕ ರಾವಣಾಸುರನ ಬಳಿಗೆ ಹೋದೆನು. ಆ ಬಳಿಕ ಆತನ ಸಂಗಡ ಕೆಲವು ನೀತಿವಚನಗಳನ್ನು ಹೇಳಲು ಆತನು ವಿಧಿಪ್ರೇರಿತನಾಗಿ ನನ್ನ ಬಾಲಕ್ಕೆ ಬೆಂಕಿಯನ್ನು ಹಚ್ಚಿಸಲು ನಾನು ಕೋಪೋದ್ದೀಪಿತನಾಗಿ, ಲಂಕಾಪುರಿಯನ್ನೆಲ್ಲಾ ವಾಲಾಗ್ನಿಯಿಂದ ದಹಿಸಿ ಪುನಃ ಸೀತಾದೇವಿಯ ದರ್ಶನವನ್ನು ಮಾಡಿಕೊಂಡು ತರುವಾಯ ಸಮುದ್ರವನ್ನು ಲಂಘಿಸಿ ತಮ್ಮ ಕೃಪಾರಸದಿಂದ ಇಲ್ಲಿಗೆ ಬಂದೆನು. ಇನ್ನು ಮುಂದೆ ಆಗತಕ್ಕ ಕೆಲಸಗಳನ್ನು ತಮ್ಮ ಚಿತ್ತಾನುಸಾರ ಮಾಡಬಹುದೆಂದು ಹೇಳಲು ಎಲ್ಲರೂ ಎದ್ದು ಆತನನ್ನು ಆಲಿಂಗನ ಮಾಡಿಕೊಂಡು ರಾಮಚಂದ್ರನ ಬಳಿಗೆ ಹೊರಟುಹೋಗುತ್ತಿದ್ದರು. ಆಗ ಮಾರ್ಗಮಧ್ಯದಲ್ಲಿ ವಾನರ ಪಟ್ಟಭದ್ರನಾದ ಸುಗ್ರೀವನಿಗೆ ಕುಲಕ್ರಮಾಗತವಾದ ಮಧುವನವೆಂಬ ಉದ್ಯಾನವನವನ್ನು ಪ್ರವೇಶಿಸಿ ಅಲ್ಲಿನ ಫಲಗಳನ್ನು ಕಿತ್ತು ತಿನ್ನುತ್ತಾ ಮಧುಪಾನ ಮಾಡುತ್ತಾ ಸ್ವೇಚ್ಛಾವಿಹಾರ ಮಾಡುತ್ತಿರಲು ಆ ವನಪಾಲಕನಾದ ಸುಗ್ರೀವನಿಗೆ ಮಾತುಳನಾದ ದಧಿಮುಖನೆಂಬ ವಾನರನು ಪರಿವಾರ ಸಮೇತನಾಗಿ ಯುದ್ಧಕ್ಕೆ ಬಂದನು. ಆ ವಾನರರೆಲ್ಲರು ಅವನನ್ನು ನಾನಾವಿಧವಾಗಿ ಹೊಡೆದು ಅವಮಾನಪಡಿಸಿದರು. ಆಗ ದಧಿಮುಖನು ವಾನರ ರಾಜನಾದ ಸುಗ್ರೀವನ ಬಳಿಗೆ ಓಡಿಹೋಗಿ ಈ ವೃತ್ತಾಂತವನ್ನು ತಿಳಿಸಲು ಸುಗ್ರೀವನು ರಾಮ ಲಕ್ಷ್ಮಣ ಸಮೇತನಾಗಿ ಆಲೋಚಿಸಿ ಅವರನ್ನು ಕಳುಹಿಸಬೇಕೆಂದು ಹೇಳಿದನು. ಬಳಿಕಾ ದಧಿಮುಖನು ಬಂದು ಮಧುಪಾನಮತ್ತರಾಗಿ ಇರುವ ಅಂಗದಾದಿ ವಾನರ ವೀರರನ್ನು ನಮಸ್ಕರಿಸಿ ಓ ವಾನರವರ್ಯರೇ ನನ್ನ ಅಪರಾಧವನ್ನು ಕ್ಷಮಿಸಬೇಕು ನಿಮ್ಮ ವೃತ್ತಾಂತವು ನನಗೆ ತಿಳಿಯದೇ ಬಾಧೆ ಉಂಟಾಯಿತು ಕ್ಷಮಿಸು, ಸುಗ್ರೀವನು ನಿಮಗೆ ಶೀಘ್ರವಾಗಿ ಬರಬೇಕೆಂದಾಜ್ಞೆ

ಮಾಡಿ ರಾಮಲಕ್ಷ್ಮಣ ಸಮೇತನಾಗಿ ನಿಮ್ಮ ಆಗಮನವನ್ನು ನಿರೀಕ್ಷಿಸುತ್ತಿದ್ದಾನೆಂದು ಹೇಳಲು ಎಲ್ಲರೂ ಎದ್ದು ಪಕ್ಷಸಹಿತವಾದ ಪರ್ವತಗಳಂತೆ ಅಂತರಿಕ್ಷಕ್ಕೆ ಹಾರಿ ಕಿಲಕಿಲಧ್ವನಿಯನ್ನು ಮಾಡುತ್ತಾ ಪ್ರಸ್ರವಣಾದ್ರಿಯನ್ನು ಸೇರಿದರು.

## ಆಂಜನೇಯನು ಶ್ರೀರಾಮರಿಗೆ ಸೀತೆಯ ವೃತ್ತಾಂತವನ್ನು ಹೇಳಿದುದು.

ಅತ್ತಲಾ ಸುಗ್ರೀವನು ರಾಮಲಕ್ಷ್ಮಣ ಸಮೇತನಾಗಿ ಹನುಮದಾಗಮನವನ್ನು ನಿರೀಕ್ಷಿಸುತ್ತಾ ಅಂಗದಾದಿ ವೀರರು ಹೋಗಿದ್ದ ಕಡೆ ನಿಷ್ಫಲವಾಗಲಾರದೆಂತಲೂ ಕೃತಕೃತ್ಯರಾಗದಿದ್ದರೆ ಮಧುವನದಲ್ಲಿ ಸ್ವೇಚ್ಛಾವಿಹಾರವನ್ನು ಮಾಡಲಾರರೆಂತಲೂ ಹೇಳುತ್ತಾ ಕುಳಿತಿದ್ದನು, ಆಗ ವಾನರವೀರರು ಬಂದು ರಾಮಚಂದ್ರನಿಂದಾಜ್ಞಪ್ತರಾಗಿ ಕುಳಿತುಕೊಂಡರು, ಬಳಿಕ ರಾಮಚಂದ್ರನು ಸೀತಾವೃತ್ತಾಂತವೇನು ಅವಳು ಎಲ್ಲಿದ್ದಾಳೆ ಹೇಗಿದ್ದಾಳೆ ಅದೆಲ್ಲವನ್ನೂ ಸವಿಸ್ತಾರವಾಗಿ ಹೇಳಬೇಕೆಂದು ಆಜ್ಞೆಮಾಡಲು ಅಲ್ಲಿದ್ದ ವಾನರರು ಸೀತಾವೃತ್ತಾಂತವನ್ನು ಬಲ್ಲವನಾದ ಅಂಜನಾಪುತ್ರನನ್ನು





ಪ್ರೇರಿಸಿದರು, ಆತನು ಸೀತಾದೇವಿಗೆರಗಿ ರಘುವಂಶಸೋಮನೇ ರಾಮಚಂದ್ರನೇ ಲಂಕಾದ್ವೀಪದಲ್ಲಿ ರಾವಣಾಸುರನ ಅಶೋಕವನದಲ್ಲಿ ಶಿಂಶುಪಾವೃಕ್ಷದ ಕೆಳಗೆ ರಾಕ್ಷಸಸ್ತ್ರೀಪರಿವೃತಳಾಗಿ ಉಪವಾಸಕೃಶಳಾಗಿ ಹಾಡ್ಯಮಿಯಲ್ಲಿ ಓದುವ ವಿದ್ಯೆಯಂತೆ ಸದಾ ನಿನ್ನ ಧ್ಯಾನಾಸಕ್ತಳಾಗಿ ನಿನ್ನ ಆಗಮನವನ್ನೆ ನಿರೀಕ್ಷಿಸುತ್ತ ಇದ್ದಾಳೆ ಈ ರತ್ನವನ್ನು ನಿನಗೆ ಕೊಡಬೇಕೆಂದು ನನಗೆ ಕೊಟ್ಟಳು ತೆಗೆದುಕೋ ಇದಲ್ಲದೆ ಚಿತ್ರಕೂಟಾದ್ರಿಯಲ್ಲಿ ನಡೆದ ಮಹಾಪರಾಧಿಯಾದ ಕಾಕಾಸುರನ ವೃತ್ತಾಂತವನ್ನು ಹೇಳಿ ಇಂದಿಗೆ ಎರಡು ತಿಂಗಳೊಳಗಾಗಿ ಲಂಕಾದ್ವೀಪಕ್ಕೆ ಬಂದು ಶತ್ರುಸಂಹಾರಮಾಡಿ ತನ್ನನ್ನು ಕರೆದುಕೊಂಡು ಹೋಗಬೇಕೆಂದು ತಮ್ಮ ಸನ್ನಿಧಿಯಲ್ಲಿ ವಿಜ್ಞಾಪನೆ ಮಾಡಲು ನನಗೆ ಆಜ್ಞೆಯನ್ನಿತ್ತಳು, ಇನ್ನು ಮುಂದೆ ಪ್ರಯಾಣ ಸಮಯವನ್ನು ಆಲೋಚಿಸಿ ಸಮುದ್ರಲಂಘನೆ ಮಾಡಿ ಲಂಕಾಪುರಿಯ ಮೇಲೆ ಯುದ್ಧಕ್ಕೆ ಹೋಗಬೇಕೆಂದು ಹೇಳಿದನು ಬಳಿಕಾ ರಾಮಚಂದ್ರನು ಆಂಜನೇಯನನ್ನು ಅನೇಕರೀತಿಯಾಗಿ ಶ್ಲಾಘಿಸುತ್ತಾ ಯುದ್ಧಕ್ಕೆ ಪ್ರಯಾಣ ಬೆಳಸಬೇಕೆಂಬದಾಗಿ ಸುಗ್ರೀವನಿಗೆ ಆಜ್ಞೆಮಾಡಿದನು. ಈ ಸುಂದರಕಾಂಡದ ವೃತ್ತಾಂತವನ್ನು ಓದಿದರೂ ಕೇಳಿದರೂ ಬರೆದರೂ ಸಕಲ ಪಾಪಗಳೂ ನಾಶವಾಗಿ ಮೋಕ್ಷವು ಕರತಲಾಮಲಕವಾಗುತ್ತದೆಂದು ಮಾರ್ಕಂಡೇಯನು ಧರ್ಮರಾಯನಿಗೆ ಹೇಳಿದನು.

ಇಂತು ಶ್ರೀರಾಮಾಯಣ ಕಥಾಸಂಗ್ರಹದಲ್ಲಿ ಸುಂದರಕಾಂಡ ಕಥೆ ಸಂಪೂರ್ಣಂ.



ಶ್ರೀ ರ ಸ್ತು .

ಶ್ರೀ ರಾಮಚಂದ್ರಾಯ ನಮಃ.

 ರಾಮಾಯಣ ಕಥಾಸಂಗ್ರಹ. 

ವ ಚ ನ ದ ಲ್ಲಿ

## ಯುದ್ಧಕಾಂಡ ಪ್ರಾರಂಭ.

ಅನಂತರದಲ್ಲಿ ಧರ್ಮರಾಯನು ಪುನಃ ಪ್ರಶ್ನೆಮಾಡಲು ಮಾರ್ಕಂಡೇಯ ಮುನೀಶ್ವರನು ಮುಂದಿನ ಕಥೆಯನ್ನು ಹೀಗೆ ಹೇಳತೊಡಗಿದನು.

ಶ್ರೀ ರಾಮಚಂದ್ರನು ಲಕ್ಷ್ಮಣ ಸುಗ್ರೀವಾದಿಗಳೊಡನೆ ಆಂಜನೇಯನ ಮುಖದಿಂದ ಸೀತಾ ವೃತ್ತಾಂತವನ್ನೂ ಲಂಕಾ ವೃತ್ತಾಂತವನ್ನೂ ವಿಸ್ತಾರವಾಗಿ ಕೇಳಿದವನಾಗಿ ಸಂತೋಷ ಗೊಂಡು ಆ ರಾತ್ರಿ ಅಲ್ಲಿಯೇ ದೊಡ್ಡ ಸಭೆಯನ್ನು ಮಾಡಿ ಕಪಿರಾಜನಾದ ಸುಗ್ರೀವನನ್ನು ಕುರಿತು ಎಲೈ ಸುಗ್ರೀವನೇ! ನೀನು ನನಗೆ ಅಭಯವನ್ನು ಕೊಟ್ಟಮೇರೆಗೆ ಸೀತೆಯನ್ನು ಹುಡಿಕಿಸಿ ತದ್ವೃತ್ತಾಂತವನ್ನು ತಿಳಿಸಿದವನಾದೆ, ಇಲ್ಲಿಂದ ಮುಂದೆ ನನ್ನ ಪ್ರಿಯಸತಿಯು ದುಃಖ ಪಡುವುದನ್ನು ನಾನೊಂದು ನಿಮಿಷವಾದರೂ ಸಹಿಸಿಕೊಂಡಿರಲಾರೆನು, ನನ್ನ ಶತ್ರುವಾದ ಆ ನೀಚ ರಾವಣನನ್ನು ಕೊಂದು ಪ್ರಿಯಳಾದ ಸೀತೆಯನ್ನು ಯಾವಾಗ ಕರೆದುಕೊಂಡು ಬರು ವೆನೋ? ಎಂಬ ಆತುರವು ನನಗೆ ಅಧಿಕವಾಗಿದೆ ಅದಕ್ಕಾಗಿ ನೀನು ಏನು ಯೋಚನೆ ಮಾಡಿ ದ್ದೀಯೆ ಎನಲು ಸುಗ್ರೀವನು ಎದ್ದು ಕೈಮುಗಿದು ಸ್ವಾಮಿ ನಿನ್ನ ಅಮಾನುಷ ಪರಾಕ್ರಮಕ್ಕೆ ಬ್ರಹ್ಮಾಂಡವೇ ವಶವರ್ತಿಯಾಗಿರುವದು ಅಮೋಘವಾದ ನಿನ್ನ ಬಾಣಕ್ಕೆ ಚತುರ್ದಶಭುವನಗಳೂ ಗಡಗಡನೆ ನಡುಗುವುವು. ಹೀಗಿರುವಲ್ಲಿ ಈ ಬಣಗುರಾಕ್ಷಸನನ್ನು ಕೊಲ್ಲುವದು ಒಂದು ದೊಡ್ಡಗೇ, ತಮ್ಮ ಅನುಗ್ರಹದಿಂದ ನನ್ನಲ್ಲಿರುವ ವಾನರವೀರರೂ ಬಹು ಸಮರ್ಥರಾಗಿಯೇ ಇದ್ದಾರೆ ನಿಮ್ಮ ಅಪ್ಪಣೆಯಾದರೆ ಎಷ್ಟು ಅಸಾಧ್ಯವಾದ ಕೆಲಸವನ್ನಾದರೂ ನಿರಾಯಾಸವಾಗಿ ಮಾಡಿ ಮೂರುದಿನಗಳಲ್ಲಿ ಕಲ್ಲುಗುಂಡುಗಳಿಂದ ಕಡಲಂ ತುಂಬಿಸುವೆನು ಲಕ್ಷ್ಮಣನೊಡನೆ ತಾವು ಲಂಕೆಗೆ ಹೋಗಿ ಹಗೆಗಳನ್ನು ಕೊಲ್ಲಬಹುದು, ನನ್ನೊಡನೆ ಸಕಲ ಕಪಿಸೈನಿಕರೂ ನಿಮ್ಮ ಕೆಲಸಕ್ಕಾಗಿ ಬರುತ್ತಾರೆ, ನಮ್ಮ ಪ್ರಾಣಗಳನ್ನು ತೃಣಕ್ಕಿಂತಲೂ ಕಡೆಯಾಗಿ ಎಣಿಸಿದ್ದೇವೆ, ಇಗೊ ಈ ನೀಲನೆಂಬುವನು ಅಗ್ನಿಕುಮಾರನು ಮಹಾಪರಾಕ್ರಮಶಾಲಿ ಮತಿವಂತನು, ಈತನಿಗೆ ಸಕಲ ಕಪಿಸೈನ್ಯದ ಆಧಿಪತ್ಯವನ್ನು ಕೊಡಿಸಿ ಪಟ್ಟಾಭಿಷೇಕ ಮಾಡಿಸಬೇಕು. ಮುದುಕನಾದ ಈ ಜಾಂಬವಂತನು ಸಕಲ ರಾಜನೀತಿಗಳನ್ನೂ ತಿಳಿದವನು, ಆಲೋಚನೆಗೆ ತಕ್ಕವನು ಆದ್ದರಿಂದ ಮಂತ್ರಾಲೋಚನೆಗೆ ಇವನನ್ನು ಇರಿಸಬೇಕು. ಈ ವಾಲಿಯ ಮಗನಾದ ಅಂಗದನು ಮೇಲು ವಿಚಾರಣೆ ಮಾಡಿಕೊಂಡು ಎಲ್ಲರಿಗೂ ಮೈಗಾವಲಾಗಿರುವಂತೆ ನಿಯಮಿಸಬೇಕು, ವಾಯುಪು ತ್ರನಾದ ಆಂಜನೇಯನು ಈಶ್ವರನಿಗೆ ಸಮವಾದ ಪರಾಕ್ರಮವುಳ್ಳವನಾದ್ದರಿಂದ ನಿಮ್ಮ ಮೈಗಾ ವಲಿಗೆ ಆತನೇ ಇರಬೇಕು ಎಂದನು ಶ್ರೀರಾಮಚಂದ್ರನು ಸುಗ್ರೀವನು ಹೇಳಿದ ಮಾತಿಗೊ ಡಂಬಟ್ಟು ಜಾಂಬವಂತ ಅಂಗದ ಆಂಜನೇಯರಿಗೆ ಆಯಾ ಕೆಲಸಗಳನ್ನು ನಿಯಮಿಸಿ ನೀಲನಿಗೆ ಶುಭ ಮುಹೂರ್ತದಲ್ಲಿ ಚತುಸ್ಸಮುದ್ರೋದಕಗಳನ್ನು ಗಂಗಾದಿ ದಿವ್ಯ ನದೀ ಜಲಗಳನ್ನೂ ತರಿಸಿ ಅಭಿಷೇಕಮಾಡಿ ಸೇನಾಪತಿ ಪಟ್ಟವನ್ನು ಕಟ್ಟಿದನು. ಆಗ ಸಕಲ ಸೇನಾನಾಯಕರು

ಬಂದು ದಳಪತಿಯಾದ ನೀಲನನ್ನು ಕಾಣಿಸಿಕೊಂಡು ಕಪ್ಪ ಕಾಣಿಕೆಗಳನ್ನೂ, ಫಲಪುಷ್ಪಗಳನ್ನೂ ಸಮರ್ಪಿಸಿದರು. ತರುವಾಯ ನೀಲನು ಎದ್ದುಬಂದು ರಾಮಲಕ್ಷ್ಮಣರಿಗೂ, ಸುಗ್ರೀವನಿಗೂ, ಜಾಂಬವಂತನಿಗೂ, ಸಾಷ್ಟಾಂಗ ಪ್ರಣಾಮಮಾಡಿ ಸಕಲ ಕಪಿಸೇನಾ ನಾಯಕನಾಗಿ ಅಗ್ನಿಯಂತೆ ಪ್ರಕಾಶಿಸುತ್ತಿದ್ದನು, ತರುವಾಯ ಮಾರ್ಗಶಿರ ಶುದ್ಧ ಅಷ್ಟಮೀ ಉತ್ತರಾನಕ್ಷತ್ರದಲ್ಲಿ ಮಧ್ಯಾಹ್ನ ಅಭಿಜಿನ್ಮುಹೂರ್ತ ಸಮಯದಲ್ಲಿ ವಿಜಯಪ್ರಯಾಣ ಮಾಡಿದರು. ಶ್ರೀರಾಮನನ್ನು ಹನುಮಂತನೂ, ಲಕ್ಷ್ಮಣನನ್ನು ಅಂಗದನೂ ಹೆಗಲಮೇಲೆ ಕುಳ್ಳಿರಿಸಿಕೊಂಡು ಹೊರಟರು ಸಮಸ್ತ ಕಪಿಸೇನೆಯೂ ನೀಲನ ಅಪ್ಪಣೆಯಮೇರೆಗೆ ಹೆಮ್ಮರಗಳನ್ನೂ, ಬೆಟ್ಟಗಳನ್ನೂ ಬುಡಮುಟ್ಟ ಕಿತ್ತು ಕೈಗಳಲ್ಲಿ ಹಿಡಿದುಕೊಂಡು ಬರುತ್ತಿದ್ದರು. ಆ ಕಪಿಸೈನ್ಯದಲ್ಲಿ ಕರಡಿಗಳೆ ಆನೆಗಳು, ಕೋಡಮುಸವಗಳೇ ಕುದುರೆಗಳು, ಸಿಂಗಳೀಕಗಳೇ ತೇರುಗಳು, ಮಿಕ್ಕಕಪಿಗಳೇ ಕಾಲುಬಲವಾಗಿ ಬರುವ ಚತುರಂಗಬಲಕ್ಕೆ ತೋಳುಗಳೇ ಗದೆಗಳು, ಬಾಲಗಳೇ ಶಬಲಗಳು, ಉಗುರುಗಳೇ ಗರಗಸ, ಕೋರೆಗಳೇ ಕತ್ತಿಗಳು, ಬೆಟ್ಟ, ಗುಡ್ಡ, ಮರ, ಗುಂಡುಗಳೇ ಉಕ್ಕಿನ ಆಯುಧಗಳು ಆಗಿ ಚತುರಂಗಬಲವು ಪ್ರಕಾಶಿಸುತ್ತಿದ್ದಿತು, ಆ ಕಪಿಸೈನ್ಯದ ಕಾಲುತುಳಿತಕ್ಕೆ ಆದಿಶೇಷನ ಕೊರಳು ಕುಗ್ಗಿತು, ಕುಲಾದ್ರಿಗಳು ಕುಸಿದುವು, ಆದಿಕೂರ್ಮನು ತಗ್ಗಿ ತಲೆಬಾಗಿದನು, ದಿಗ್ದಂತಿಗಳ ತಲೆಗಳು ಕುಸಿಯಬಿದ್ದವು, ಬ್ರಹ್ಮಾಂಡಮಂಡಲವು ಭಯದಿಂದ ಬೆದರಿತು. ಕಡಲುಗಳು ಧೂಳುಮುಸುಕಿ ಮುಚ್ಚಿಹೋದುವು, ಮೇರುವದರಿತು, ಮೇಲಣಲೋಕವು ತಲ್ಲಣಗೊಂಡಿತು ಈ ರೀತಿಯಾಗಿ ಸೈನ್ಯವು ಯುದ್ಧೋನ್ಮುಖವಾಗಿ ಹೊರಟಿತು.

## ವಿಭೀಷಣನು ರಾವಣನಿಗೆ ಬುದ್ಧಿ ಹೇಳಿದುದು.

ರಾವಣನು ಓಲಗದ ಚಾವಡಿಗೆ ಬಂದ ಸುದ್ದಿಯನ್ನು ಕೇಳಿ ವಿಭೀಷಣನು ಸಭೆಗೆ ಬಂದು ಶ್ರೀರಾಮನಿಗೆ ಸೀತೆಯನ್ನು ಕೊಟ್ಟು ಬಾಳು ಎಂದು ಬೋಧಿಸಲು ರಾವಣನಿಗೆ ಕೋಪಹೆಚ್ಚಿ ನೀನು ನನ್ನ ಹಗೆಯನ್ನು ನನ್ನೆದುರಿಗೆ ಸ್ತೋತ್ರಮಾಡುತ್ತಿದ್ದೀಯೆ ಸೀತೆಯನ್ನು ಏಕೆ ಕೊಡಬೇಕು ಇಂಥ ಕರ್ಣಕಠೋರವಾದ ಮಾತುಗಳನ್ನು ನನ್ನೊಡನೆ ಆಡಬಹುದೆ ಎಂದು ಕೋಪಗೊಂಡು ಅಂತಃಪುರಕ್ಕೆ ಹೊರಟುಹೋದನು, ಮಾರನೆಯದಿನ ಎಂದಿನಂತೆ ರಾವಣನು ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಓಲಗದ ಚಾವಡಿಗೆ ಬಂದು ಕುಳಿತಿರುವಾಗ ಕುಂಭಕರ್ಣನು ಎಚ್ಚರವಾಗಿರುವ ಸಂಗತಿಯನ್ನು ಚಾರರಿಂದ ತಿಳಿದು ಅವನನ್ನು ಕರೆಯಿಸಲು ಆತನು ಬಂದು ಉಚಿತಾಸನದಲ್ಲಿ ಕುಳಿತುಕೊಂಡನು, ಆಗ ವಿಭೀಷಣನೂ ಬಂದು ಮತ್ತೊಂದು ಗದ್ದುಗೆಯ ಮೇಲೆ ಮಂಡಿಸಿದನು, ಆಗ ದುಷ್ಟರಾವಣನು ತಾನು ಸೀತೆಯನ್ನು ತಂದ ಸಂಗತಿಯನ್ನೂ ಹೇಳಿ, ಎಲೈ ತಮ್ಮನೇ ಈಗ ರಾಮನು ಕೋತಿಗಳ ಸೈನ್ಯವನ್ನು ಸೇರಿಸಿಕೊಂಡು ನನ್ನ ಮಹಿಮೆಯೊಂದನ್ನೂ ತಿಳಿಯದೆ, ನನಗಿರುವ ನಿನ್ನ ಸಹಾಯವನ್ನೂ ಲಕ್ಷಿಸದೆ ಸಮುದ್ರತೀರಕ್ಕೆ ಬಂದಿಳಿದಿದಾನೆ ಇದಕ್ಕೆ ಏನುಮಾಡಬೇಕು ಎನಲು ಕುಂಭಕರ್ಣನು ಎಲೈ ಅಣ್ಣನೇ ನೀನು ಇಂಥ ನೀಚಕೆಲಸವನ್ನು ಮಾಡಿ ಬದುಕಿಬಂದದ್ದು ನಮ್ಮ ಭಾಗ್ಯವಲ್ಲವೇ ವೃಥಾ ವೈರವನ್ನೇಕೆ ಬೆಳಸಿದೆ ರಾಮನು ವಿಷ್ಣುಸ್ವರೂಪನಲ್ಲದೆ ಮನುಷ್ಯನಲ್ಲ ಆದರೂ ಆದದ್ದು ಆಗಿಹೋಯಿತು. ಇನ್ನು ಮುಂದಿನ ಕೆಲಸ ನನ್ನದು, ಎಲ್ಲದಕ್ಕೂ ನಾನಿದ್ದೇನೆ, ನೀನು ಯಾವದಕ್ಕೂ ಹೆದರಬೇಡ ಎಂದು ಹೇಳಿ ನಿದ್ರೆಯನ್ನು ತಡೆಯಲಾರದೆ ಮಲಗಿಕೊಳ್ಳಲು ಹೊರಟುಹೋದನು, ಆಗ ವಿಭೀಷಣನು ರಾವಣನೊಡನೆ ಅಣ್ಣಾ! ನಿನ್ನೊಡನೆ ಮಂತ್ರಿಗಳು ಹಿತವನ್ನು ಹೇಳಲು ಹೆದರುವರು, ನಾನು ನಿನಗೆ ಹಿತವನ್ನು ಹೇಳುವೆನು ಕೇಳು, ನಾಳೆ ನಿನಗೊಂದು ಕೇಡುಂಟಾದರೆ ನಾನು ನೋಡಲಾರೆ,

ನೀನು ಸುಖವಾಗಿ ರಾಜ್ಯಭಾರ ಮಾಡಿಕೊಂಡಿದ್ದರೆ ನನಗೆ ಸಂತೋಷ, ಮೂರ್ಖನಾಗದೆ ನನ್ನ ಮಾತನ್ನು ಅಂಗೀಕರಿಸು ಹೋಮಗುಂಡದಲ್ಲಿ ಅಪ್ರಕಾಶವಾಗಿ ಹೊಗೆಯು ಹೊರಡುತ್ತಲಿದೆ, ಹದ್ದುಗಳು, ನರಿಗಳು, ಗೂಬೆಗಳು ಹಗಲ ಹೊತ್ತಿನಲ್ಲಿ ಕೂಗುತ್ತಿವೆ, ನಾಯಿಗಳು ತಲೆಯನೆತ್ತಿಕೊಂಡು ಅಳುತ್ತಲಿವೆ, ರಥಗಳಲ್ಲಿಯೂ ದೇವಾಲಯಗಳಲ್ಲಿಯೂ, ಮನೆಗಳಲ್ಲಿಯೂ ನಿಷ್ಕಾರಣವಾಗಿ ಉರಿಕಾಣುತ್ತಿವೆ, ಕುದುರೆಗಳಿಗೆ ಮದ ಹೆಚ್ಚುತ್ತಲಿವೆ, ಆನೆಗಳಿಗೆ ಮದ ತಗ್ಗುತ್ತಲಿದೆ, ಈ ದುಶ್ಶಕುನ ಶಮನಕ್ಕಾಗಿ ಶ್ರೀರಾಮನಿಗೆ ಸೀತೆಯನ್ನು ಒಪ್ಪಿಸಿ ಶರಣುಹೊಂದಿದರೆ ನಿನಗೆ ಶುಭವುಂಟಾಗುವದು. ಆತನು ಆದಿನಾರಾಯಣ ಸ್ವರೂಪನು, ನಿನಗೂ ಜಗತ್ತಿಗೂ ಕೂಡ ರಕ್ಷಕನು ನನ್ನ ಮಾತನ್ನು ನಂಬು, ಸುಮ್ಮನೆ ಕೆಟ್ಟುಹೋಗಬೇಡ ಎಂದು ಹೇಳಿದನು.

## ರಾವಣನು ವಿಭೀಷಣನನ್ನು ಲಂಕೆಯಿಂದ ಓಡಿಸಿದುದು.

ಸತ್ಪುರುಷನಾದ ವಿಭೀಷಣನು ಹೇಳಿದ ಬುದ್ಧಿವಾದವನ್ನು ಕೇಳುತ್ತಲೆ ದುಷ್ಟನಾದ ರಾವಣನಿಗೆ ಕೋಪೋದ್ರೇಕವುಂಟಾಗಿ ಉರಿಹತ್ತಿತು. ಅವನು ಹಲ್ಲುಗಳನ್ನು ಕಡಿದು ಕಣ್ಣುಗಳಲ್ಲಿ ಕಿಡಿಗಳನ್ನು ಸುರಿಸುತ್ತ ಎಲಾ ದುರಾತ್ಮನೆ ತಮ್ಮನೆಂಬ ವಾತ್ಸಲ್ಯದಿಂದ ನಿನ್ನನ್ನು ಸಲಹಿದುದಕ್ಕೆ ಫಲವಾಗಿ ನನಗೆ ನೀನೆ ಶತ್ರುವಾದೆಯಲ್ಲಾ! ಇಂಥ ನಿನ್ನನ್ನು ಈಗಲೆ ಕಡಿದುಹಾಕಿ ನಮ್ಮ ಕುಲಕ್ಕೆ ಬಂದಿರುವ ಕಳಂಕವನ್ನು ನಾಶಮಾಡುವೆನು. ಅಣ್ಣನಿಗೆ ಅಲ್ಲದುದನ್ನು ಹೇಳುವ ನೀನು ಭ್ರಾತೃದ್ರೋಹಿಯಲ್ಲವೆ? ನಿನ್ನನ್ನು ಕೊಂದರೆ ಯಾವ ಪಾಪವೂ ಇಲ್ಲ ಎಂದು ಸಿಂಹಾಸನದಿಂದೆದ್ದು ಖಡ್ಗವನ್ನು ಹಿಡಿದು ಜಳಪಿಸುತ್ತ ಬರಲು ಆಗ ಮಂತ್ರಿಯಾದ ಪ್ರಹಸ್ತನು ರಾವಣನಿಗೆ ಅಡ್ಡವಾಗಿ ಬಂದು ಕೈಹಿಡಿದು ತಮ್ಮನಮೇಲೆ ಇಷ್ಟು ಕೋಪವೇಕೆ, ಅಜ್ಞಾನದಿಂದ ಅವನು ಆಡಿದ ಮಾತನ್ನು ಲೆಕ್ಕಕ್ಕೆ ತರಬಾರದು ಈಗ ಬಂದ ಕೋಪವನ್ನು ಬಂದಹಾಗೆ ಬಿಡದೆ ಅವನನ್ನು ಮನ್ನಿಸು ಎಂದು ಬಹುವಿಧವಾಗಿ ಕೇಳಿಕೊಂಡರೂ ಬಿಡದೆ, ನೀಚನಾದ ರಾವಣನು ಉಕ್ಕಿಬರುತ್ತಿರುವ ಕೋಪವನ್ನು ತಾಳಲಾರದೆ ಮತ್ತೊಂದು ಖಡ್ಗವನ್ನು ಸೆಳೆದು ವಿಭೀಷಣನನ್ನು ಕಡಿಯುವುದಕ್ಕೆ ಹೊರಟನು. ಆಗ ಮಂತ್ರಿಯಾದ ಪ್ರಹಸ್ತನು ಇನ್ನು ಸುಮ್ಮನಿದ್ದರೆ ಕೆಲಸ ಕೆಟ್ಟೀತು, ಎಂದು ಯೋಚಿಸಿ ಬೇಗನೆ ಬಂದು ರಾವಣನ ಕತ್ತಿಯನ್ನು ಕಿತ್ತುಕೊಂಡು ಪಾದಗಳಿಗೆರಗಿ ನಮಸ್ಕರಿಸಿ ಸ್ವಾಮಿ! ರಾಜನಾದವನಿಗೆ ಭ್ರಾತೃವಧೆಯೂ ಅತಿಕೋಪವೂ ಒಳ್ಳೆಯದಲ್ಲ ಆದಕಾರಣ ನನ್ನ ಮಾತನ್ನು ಕೇಳಿ ಇವನನ್ನು ಮನ್ನಿಸು ಎಂದು ಬೇಡಿಕೊಳ್ಳಲು ರಾವಣನು ಹಾಗಾದರೆ ಈ ದುಷ್ಟನಾದ ವಿಭೀಷಣನನ್ನು ಪರಿವಾರಸಹಿತ ನನ್ನ ಪಟ್ಟಣದಿಂದ ಹೊರಡಿಸು ಎಂದು ಆಜ್ಞಾಪಿಸುತ್ತ ಹಾರಿ ಬಂದು ತಮ್ಮನನ್ನು ಎಡಗಾಲಿನಿಂದ ಒದೆದು ಕೆಡಹಿದನು. ಆಗ ಭಕ್ತಿವಂತನಾದ ವಿಭೀಷಣನು ಭಗವಂತನನ್ನು ಧ್ಯಾನಮಾಡುತ್ತ ಇನ್ನು ಇಲ್ಲಿರುವುದು ಸರಿಯಲ್ಲ? ಎಂದು ತನ್ನ ಮಂತ್ರಿಗಳೊಂದಿಗೆ ಹೊರಟು ರಾಮನ ಬಳಿಗೆ ಬರುವಾಗ ರಾವಣನನ್ನು ಕುರಿತು ಅಣ್ಣಾ! ಈಗ ನನ್ನ ಮಾತುಗಳು ನಿನಗೆ ಕರ್ಣಕಠೋರವಾಗಿ ರಾಕ್ಷಸರ ವಾಕ್ಯಗಳು ಅಮೃತ





ಪ್ರಾಯವಾಗಿವೆ. ಆದರೆ ಇನ್ನು ಮುಂದೆ ರಾಮಬಾಣದಿಂದ ನಿನ್ನ ಸರ್ವಸ್ವವೂ ಹಾಳಾಗಿ ಹತ್ತು ತಲೆಗಳೂ ಕತ್ತರಿಸಿ ಬೀಳುವಾಗ ನನ್ನ ಮಾತುಗಳನ್ನು ನೆನೆದುಕೊ, ಮರೆಯಬೇಡ ನಾನು ಹೊರಡುತ್ತೇನೆ ಎಂದು ಹೇಳಿ ರಾಮದರ್ಶನಾರ್ಥವಾಗಿ ಹೊರಟನು.

## ಶ್ರೀರಾಮನು ಕಪಿಸೈನ್ಯದೊಡನೆ ಲಂಕೆಗೆ ಬಂದುದು.

ಶ್ರೀರಾಮ ಲಕ್ಷ್ಮಣರು ಕಪಿಸೈನ್ಯಸಹಿತವಾಗಿ ಅಲ್ಲಿಂದ ಹೊರಟು ಮಲಯ ಪರ್ವತದ ತಪ್ಪಲುಗಳಲ್ಲಿ ಚಂದ್ರಕಾಂತ ಶಿಲೆಯಮೇಲೆ ಇಳಿದು ಆ ರಾತ್ರಿ ಅಲ್ಲಿಯೇ ಇದ್ದು ಮಾರನೆಯ ದಿನ ಅರುಣೋದಯಕಾಲದಲ್ಲಿ ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಅಲ್ಲಿಂದ ಮುಂದಕ್ಕೆ ಹೊರಟು ಪ್ರಯಾಣವಾಗಿ ಮೂರುದಿನಗಳಲ್ಲಿ ಸಮುದ್ರದ ದಡವನ್ನು ಸೇರಿದರು, ಆ ಸಮುದ್ರರಾಜನು ಅಲೆಗಳೆಂಬ ಗುಡಿಗಳಿಂದಲೂ, ಬೆಳ್ನೊರೆಯೆಂಬ ಶ್ವೇತಚತ್ರದಿಂದಲೂ, ತುಂತುರುಗಳೆಂಬ ಚೌರಿಗಳಿಂದಲೂ, ಅಲೆಗಳ ಹೊಡೆತದ ಘೋಷವೆಂಬ ಭೇರಿಧ್ವನಿಗಳಿಂದಲೂ, ಶ್ರೀರಾಮನನ್ನು ಇದಿರ್ಗೊಳ್ಳುವಹಾಗೆ ಕಾಣಿಸಿದನು. ಆಗ ಸಕಲ ಸೈನ್ಯವೂ ಕಡಲದಡದಲ್ಲಿ ನಿಂತು ಶ್ರೀರಾಮನಿಗೂ ಲಕ್ಷ್ಮಣನಿಗೂ ಚಿಗುರುಗಳಿಂದ ದಿವ್ಯವಾದ ಅರಮನೆಯನ್ನೂ ಓಲಗದ ಚಾವಡಿಯನ್ನೂ ರಚಿಸಿದರು. ಆಗ ಎರಡನೆಯ ಸಮುದ್ರದಂತೆ ಪ್ರಕಾಶಿಸುತ್ತಿರುವ ಕಪಿಸೈನ್ಯವನ್ನು ರಾವಣನ ಕಡೆಯ ಉಕ್ಕಡದ ಕಾವಲಿನ ರಕ್ಕಸರು ಹೆದರಿ ಓಡಿಹೋಗಿ ಲಂಕೆಯನ್ನು ಸೇರಿ, ಓಲಗದಲ್ಲಿ ಕುಳಿತಿರುವ ರಾವಣಾಸುರನನ್ನು ಕಂಡು ಕೈಮುಗಿದುಕೊಂಡು ಜೀಯಾ; ಇಂದ್ರಾದಿಗಳನ್ನು ಕೂಡ ಲಕ್ಷ್ಯಮಾಡದೆ ಇರುವವರಾಗಿಯೂ, ಕಾಮರೂಪಿಗಳಾಗಿಯೂ, ಬೆಟ್ಟಗಳು ಮರಗಳೆ ಆಯುಧವಾಗುಳ್ಳವರಾಗಿಯೂ ಇರುವ ವಾನರಸೈನ್ಯವು ಸಮುದ್ರದೋಪಾದಿಯಲ್ಲಿ ಬಂದು ಕಡಲತಡಿಯಲ್ಲಿ ನಿಂತಿದೆ. ಆ ಸೈನ್ಯದಲ್ಲಿ ಮೃತ್ಯುಮುಖದವರೂ ಪೂರ್ವದಲ್ಲಿ ಲಂಕೆಯನ್ನು ಸುಟ್ಟು ಬೂದಿಮಾಡಿದ ಕಪಿಯಂಥವರೂ ಅನೇಕಕೋಟಿ ತುಂಬಿಕೊಂಡಿದ್ದಾರೆ ಆ ಸೇನೆಯು ತಾವು ಕದ್ದು ತಂದ ಸೀತೆಯ ಗಂಡನಾದ ರಾಮನದಂತೆ, ಅದಕ್ಕೆ ಸುಗ್ರೀವನು ಒಡೆಯನಂತೆ, ಅಪ್ಪಪ್ಪ ಅದೆಂಥ ಕೋಡಗಗಳು: ಅಬ್ಬಬ್ಬ ಅದೆಂಥಾ ಸಿಂಗಳೀಕಗಳು, ಅಯ್ಯೋ ಅವರ ಹೊಡೆತಕ್ಕೆ ಯಾರು ತಡೆಯಾರ, ನಮಗೆ ಮಹಾ ಭಯವಾಗಿ ಓಡಿಬಂದು ನಿನಗೆ ಹೇಳಿದೆವು ಮನ್ನಿಸಬೇಕು ಎಂದು ಹೇಳಿದರು. ಆ ಮಾತನ್ನು ಕೇಳಿ ರಾವಣಾಸುರನು ಹುಲುಮನುಜರ ಮತ್ತು ಕೋತಿಗಳ ಗಂಪಿಗೆ ಹೆದರಿಕೊಂಡು ಓಡಿಬಂದಿರಂತೆ, ಈ ಹೇಡಿಗಳ ಬಾಯಿಮೇಲೆ ಹೊಡೆಯಿರಿ ಎಂದು ಗರ್ಜಿಸುತ್ತಾ ಕೋಪದಿಂದ ಕುದಿಯುತ್ತ ಸಿಂಹಾಸನದಿಂದೆದ್ದು ಒಳಕ್ಕೆ ಹೊರಟುಹೋದನು.

ಆಗ ರಾವಣಾಸುರನು ಮನಸ್ಸಿನಲ್ಲಿ ಮಹಾಭಯವನ್ನು ತಾಳಿ ಓಲಗದ ಚಾವಡಿಗೆ ಬಂದು ಮಂತ್ರಿಗಳನ್ನು ಕರೆಯಿಸಿಕೊಂಡು ಆಲೋಚಿಸುತ್ತಿರುವಾಗ ವಿಭೀಷಣನು ಆ ವಾರ್ತೆಯನ್ನು ಕೇಳಿ ರಥವನ್ನೇರಿ ಸತ್ವರದಿಂದ ಬಂದು ಓಲಗದ ಚಾವಡಿಯಲ್ಲಿ ಯೋಗ್ಯಾಸನದಲ್ಲಿ ಕುಳಿತುಕೊಂಡು ಇದ್ದನು. ಆಗ ರಾವಣಾಸುರನು ಮಂತ್ರಿಗಳನ್ನು ಕುರಿತು, ಎಲೈ ಪ್ರಧಾನರೇ ಒಂದು ಕಪಿಯು ಬಂದು, ಅಶೋಕವನಭಂಗಮಾಡಿ ಅಕ್ಷಯಕುಮಾರ ಮೊದಲಾದವರನ್ನು ಕೊಂದು ಲಂಕಾಪಟ್ಟಣವೆಲ್ಲವನ್ನು ಸುಟ್ಟು ಸಮುದ್ರವನ್ನು ಹಾರಿಹೋಗಿ, ತನ್ನವರಿಗೆ ಈ ವರ್ತಮಾನವನ್ನೆಲ್ಲ ಹೇಳಿ ಸಕಲ ಕಪಿಗಳೊಡನೆ ರಾಮಲಕ್ಷ್ಮಣರನ್ನು ಕರೆದುಕೊಂಡು ಬಂದು ಸಮುದ್ರದಡದಲ್ಲಿ ನಿಲ್ಲಿಸಿತಲ್ಲಾ, ಶ್ರೀರಾಮನು ಸಮುದ್ರವನ್ನು ಹಾರಿಯಾಗಲಿ, ಸೇತುವೆಯನ್ನು ಕಟ್ಟಿಯಾಗಲಿ, ದಾಟಿ ಬರಬಲ್ಲನೆ, ಬಂದಮೇಲೆ ಬಹಳ ಅನರ್ಥಗಳುಂಟಾಗುವುವು, ಇದಕ್ಕೇನು

ಉಪಾಯ ಹೇಳಿ ಎಂದು ಕೇಳಲು, ಪ್ರಹಸ್ತಾದಿ ರಾಕ್ಷಸರು, ಎಲೈ ರಾಕ್ಷಸೇಶ್ವರನೇ, ಆ ವಾನರ ನೆಷ್ಟುರವನು, ನಾವು ಅಸಡ್ಡೆಮಾಡಿದುದರಿಂದ ಕೋತಿಯು ಪುನಃ ಹೋಯಿತಲ್ಲವೇ ನಮ್ಮ ಮುಂದೆ ಎಷ್ಟು ಕೋತಿಗಳು ಬಂದರೇನು, ನಾವು ಲಕ್ಷ್ಯಮಾಡುವೆವೋ ರಾಮ ಲಕ್ಷ್ಮಣರು ನಮಗೆ ಆಹಾರವಾದ ಮನುಷ್ಯರಲ್ಲವೇ ನಮಗೆ ಅಪ್ಪಣೆ ಕೊಟ್ಟರೆ ಈಗಲೇ ಹೋಗಿ ವಾನರ ಬಲದೊಡನೆ ರಾಮಲಕ್ಷ್ಮಣರನ್ನು ಕೊಂದು ಬರುವೆವು, ಎಂದು ಹೊರಡಲುದ್ಯುಕ್ತರಾದರು. ಆಗ ವಿಭೀಷಣನು ನೋಡಿ ಓಹೋ ರಕ್ಕಸರೇ, ಸಾಮ ದಾನ ಭೇದ ದಂಡಗಳೆಂಬ ನಾಲ್ಕು ಉಪಾಯಗಳಲ್ಲಿ ಒಂದರಹಿಂದೆ ಒಂದನ್ನು ಮಾಡುವುದು ಯುಕ್ತವಾಗಿರುವಾಗ ಮೊದಲೇ ದಂಡೋಪಾಯವನ್ನು ಮಾಡಬಹುದೇ ಹಾಗಿದ್ದರೂ ಮಹಾಬಲಶಾಲಿಗಳಾದ ಖರದೂಷಣ ತ್ರಿಶಿರರನ್ನು ಕೊಂದ ರಾಮನು ಮಹಾವಿಷ್ಣುವೇ ಅಲ್ಲದೆ ಮನುಷ್ಯ ಮಾತ್ರದವನೇ, ಅದೊಂದು ಕೋಡಗಬಂದು ನಾವು ಪಟ್ಟಿಪಾಡು ಮರೆತುಹೋಯಿತೆ, ಕಪಿಸೈನ್ಯದಲ್ಲಿ ಆ ಕೋಡಗಕ್ಕಿಂತಲೂ ಶೂರರಾದವರು ಬಹುಮಂದಿ ಇದಾರೆಂದು ಕೇಳುತ್ತೇನೆ ಎಲೈ ರಾಕ್ಷಸೇಶ್ವರನೇ ಇವರ ಮಾತು ಗಳಲ್ಲಿ ಪ್ರೀತಿಯನ್ನು ಇಡಬೇಡ, ಶ್ರೀರಾಮನಿಗೆ ಸೀತೆಯನ್ನು ಒಪ್ಪಿಸಿ ಶರಣಾಗತನಾಗಿ ಬಾಳು ಮೃತ್ಯುವು ನಿನ್ನ ತುರುಬುಗಳನ್ನು ಹಿಡಿದು ಎಳದಾಡುವಾಗ ನನ್ನ ಮಾತುಗಳು ನಿನಗೆ ನಿಜವಾಗಿ ತೋರುವವಲ್ಲದೆ ಈಗ ಹಿತವಾಗುವುದೆ ಎಂದು ಅಣ್ಣನಿಗೆ ನಮಸ್ಕಾರಮಾಡಿ ನಾನು ಹೋಗಿ ಕರುಣಾಸಮುದ್ರನಾದ ಶ್ರೀರಾಮಚಂದ್ರನ ಚರಣಗಳನ್ನು ಶರಣುಹೊಂದುವೆನು ಇನ್ನುಮೇಲಾ ದರೂ ಸದ್ಬುದ್ಧಿಯಿಂದ ವರ್ತಿಸುತ್ತ ರಕ್ಕಸರು ಹೇಳುವ ದುರಾಲೋಚನೆಯನ್ನು ಕೇಳದೆ ನಾನು ಹೇಳಿದ ನೀತಿಯನ್ನು ಮರೆಯದೆ ಇದ್ದರೆ ನಿನಗೆ ಬಹು ಸುಖವುಂಟು ಎಂದು ಹೇಳಿ ತಾಯಿಯಬಳಿಗೆ ಹೋಗಿ ವ್ಯಸನದಿಂದ ಬಾಡಿದಮುಖದೊಡನೆ ತಾಯಿಗೆ ಮಣಿದು, ಅಣ್ಣನು ತಾನು ಹೇಳಿದ ನೀತಿಯನ್ನು ಕೇಳದೆ ತನ್ನನ್ನು ಒದೆದು ಕಳುಹಿಸಿದ ವೃತ್ತಾಂತವೆಲ್ಲವನ್ನೂ ಹೇಳಿ ಘಟ್ಟಿಯಾಗಿ ಅತ್ತು ನಾನು ಇನ್ನು ಭವಾಬ್ಧಿತಾರಕನಾದ ಶ್ರೀರಾಮನನ್ನು ಶರಣುಹೊಂದಿ ಪುನೀ ತನಾಗುವೆನು. ನನಗೆ ಅಪ್ಪಣೆಯನ್ನು ಕೊಡಬೇಕೆನಲು ಕೈಕಸೆಯು ಮಗನನ್ನು ನೋಡಿ ವ್ಯಸನ ಪಟ್ಟು ಅವನ ಒಳ್ಳೆಯ ಗುಣಕ್ಕೆ ಸಂತೋಷಿಸಿ ರಾವಣನನ್ನು ದೂಷಿಸಿ, ಮಗನಾದ ವಿಭೀಷಣ ನನ್ನು ಆಶೀರ್ವದಿಸಿ ಕಳುಹಿಸಿಕೊಟ್ಟಳು.

## ವಿಭೀಷಣನು ಶ್ರೀರಾಮನನ್ನು ಮರೆಹೊಕ್ಕುದು.

ಆಗ ಸದ್ಗುಣಸಂಪನ್ನನಾದ ವಿಭೀಷಣನು ತನ್ನ ನಾಲ್ಕುಮಂದಿ ಮಂತ್ರಿಗಳೊಡನೆ ಆಕಾಶ ಮಾರ್ಗದಲ್ಲಿ ಹೊರಟು ಬಂದು ಶ್ರೀರಾಮನನ್ನು ಕಂಡು ನಮಸ್ಕರಿಸಿ, ಎಲೈ ರಘುರಾಮನೆ ಆಶ್ರಿತಜನ ಹೃತ್ಸರೋಜಾಭಿರಾಮನೆ, ಅಖಿಲಾಂಡಕೋಟಿ ಬ್ರಹ್ಮಾಂಡಧಾಮನೆ ರಾಜಲಲಾ ಮನೇ ಪೂರ್ಣಕಾಮನೇ ದೇವಾಧಿದೇವನೇ ನಿನ್ನ ಶತ್ರುವಿನ ತಮ್ಮನಾಗಿಯೂ ಮಹಾಕಷ್ಟದಲ್ಲಿ ಸಿಕ್ಕಿದವನಾಗಿಯೂ ರಾಕ್ಷಸನಾಗಿಯೂ ವಿಭೀಷಣನೆಂಬ ಹೆಸರುಳ್ಳವನಾಗಿಯೂ ಇರುವ ನಾನು ನಿಮ್ಮ ಸೀತೆಯನ್ನು ಕೊಂಡೊಯ್ದು ಸೆರೆಯಾಗಿಟ್ಟಿರುವ ದುರುಳನಾದ ರಾವಣನಿಗೆ ತಮ್ಮನಾಗಿ ಅವನಿಗೆ ಇದುವರೆಗೂ ಹಿತಬೋಧನೆ ಮಾಡಿ ಎಲೈ ರಾವಣನೇ ! ಶ್ರೀರಾಮನು ಮನುಷ್ಯನೆಂದು ತಿಳಿಯಬೇಡ ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಯಿಂದ ಶ್ರೀಮನ್ನಾರಾಯಣನು ಈ ರೂಪದಿಂದ ಅವತರಿಸಿ ದುಷ್ಟಶಿಕ್ಷಣ ಶಿಷ್ಟಪರಿಪಾಲನೆ ಮಾಡುವುದಕ್ಕೆ ಬಂದಿರುವ ಪುರುಷೋತ್ತಮನೆ ಆದ ಕಾರಣ ದೇವತೆಗಳೆಲ್ಲ ಕಪಿರೂಪವನ್ನು ಧರಿಸಿ ಅವತರಿಸಿದಾರೆ ನೀನು ಜಗಜ್ಜನನಿಯಾದ ಸೀತೆ ಯನ್ನು ಶ್ರೀರಾಮಚಂದ್ರನಿಗೆ ಒಪ್ಪಿಸಿ ರಾಮನನ್ನು ಶರಣುಹೊಂದು ಕರುಣಾರ್ದ್ರಮಾನಸನಾದ

ಶ್ರೀರಾಮಚಂದ್ರನು ನಿನ್ನನ್ನು ಸಲಹುವನು ಎಂದು ಎಷ್ಟು ವಿಧವಾಗಿ ಹೇಳಿದರೂ ಕೇಳದೇ ದುಷ್ಟ ರಾಕ್ಷಸರ ದುರ್ಬೋಧನೆಗಳನ್ನು ಕೇಳಿಕೊಂಡು ನನ್ನಮೇಲೆ ಕೋಪಮಾಡಿ ನನ್ನನ್ನು ಕಾಲಿನಿಂದ ಒದೆದು ನೆಲಕ್ಕುರುಳಿಸಿ ಅವಮಾನಪಡಿಸಿ



ದುದರಿಂದ ನಾನು ಅಲ್ಲಿರಲಾರದೆ ಹೊರಟು ತಾಯಿಯ ಬಳಿಗೆ ಹೋಗಿ ನಡೆದ ವೃತ್ತಾಂತವೆಲ್ಲವನ್ನೂ ಆಕೆಗೆತಿಳಿಸಲು ಅವಳು ತಮ್ಮ ಪ್ರಭಾವವನ್ನು ನನಗೆ ಹೇಳಿ ಆಶೀರ್ವದಿಸಿ ಕಳುಹಿಸಿದಳು. ಆಕೆಯ ಅಪ್ಪಣೆಯಂತೆ ನಾನು ಇಲ್ಲಿಗೆ ಬಂದು ತಮ್ಮನ್ನು ಮರೆ ಹೊಕ್ಕು ಜೀವಿಸಬೇಕೆಂದಿರುವೆನು ನೀರಿನಲ್ಲಿ ಹಾಕಿದರೂ ನೀನೇ ಗತಿ ಹಾಲಿನಲ್ಲಿ ಹಾಕಿದರೂ ನೀನೇ ಗತಿ ನಿನ್ನಹೊರತು ಅನ್ಯರಿಲ್ಲವೆಂದು ಬೇಡಿಕೊಳ್ಳಲು ಕಪಿಗಳೆಲ್ಲರೂ ಕೋಪದಿಂದ ಅವನಮೇಲೆ ಬೀಳಲು, ಸುಗ್ರೀವನು ಅವರನ್ನು ತಡೆದು ಶ್ರೀರಾಮನ ಬಳಿಗೆ ಬಂದು, ಎಲೈ ಪ್ರಭುವೇ, ರಾವಣನ ತಮ್ಮನಂತೆ ಅವನ ಹೆಸರು ವಿಭೀಷಣನಂತೆ ತಾನು ಹೇಳಿದ ನೀತಿಯನ್ನು ಕೇಳದೆ ಅಣ್ಣನು ಅವಮಾನಪಡಿಸಿದ ದರಿಂದ ಅದನ್ನು ಸಹಿಸಲಾರದೇ ತಮ್ಮ ಚರಣವನ್ನು ಮರೆಹೊಗಲು ಬಂದಿದ್ದಾನಂತೆ ಆತನು ನಭೋಮಾರ್ಗದಲ್ಲಿ ಬಂದಿರುವನು. ಅಪ್ಪಣೆಯಾದರೆ ಕರೆದುಕೊಂಡು ಬರುವೆನು ಹಾಗಲ್ಲವೆ ನಿಗ್ರಹಿಸುವಂತೆ ಹೇಳಿದರೆ ನಿಗ್ರಹಿಸುವೆನು. ಎಂದು ಹೇಳಲು, ಶ್ರೀರಾಮನು ಹನುಮಂತನನ್ನು ನೋಡಿದನು. ಆಗ ಆಂಜನೇಯನು ಸ್ವಾಮಿ ಆತನು ಶತ್ರುವಿನ ತಮ್ಮನಾದರೂ ಸೀತೆಯನ್ನು ಹುಡುಕುವದಕ್ಕೆ ಹೋಗಿದ್ದ ಕಾಲದಲ್ಲಿ ರಾವಣನು ನನ್ನನ್ನು ಹಿಡಿದು ಕಟ್ಟಿಸಿ ಆಸ್ಥಾನದೊಳಗಿಡಿಸಿದಮೇಲೆ ನಾನು ಆಡಿದ ನಾನಾ ವಿಧವಾದ ಮಾತುಗಳನ್ನು ಕೇಳಿ ರಾವಣನು ನನ್ನನ್ನು ಕೊಲ್ಲುವಂತೆ ಆಜ್ಞಾಪಿಸಲು ವಿಭೀಷಣನು ಬೇಡವೆಂದು ಹೇಳಿ ಅದನ್ನು ತಪ್ಪಿಸಿ ನನಗೆ ತುಂಬ ಸಹಾಯಮಾಡಿದನು. ಈತನು ನಿಜವಾಗಿ ತಮ್ಮ ದಾಸನು ಮನ್ನಿಸಿ ರಕ್ಷಿಸುವುದಕ್ಕೆ ತಕ್ಕವನು ತಮ್ಮ ಪ್ರಸಾದಕ್ಕರ್ಹನು, ನಿಗ್ರಹಕ್ಕೆ ಅರ್ಹನಲ್ಲ ಇಷ್ಟರ ಮೇಲೆ ದೇವರಚಿತ್ತ, ಎಂದು ಹೇಳಲು ಶ್ರೀರಾಮನು ಆಂಜನೇಯನ ಮಾತುಗಳನ್ನು ಕೇಳಿ ಸುಗ್ರೀವನನ್ನು ಕರೆದು ವಿಭಿಷಣನನ್ನು ಬೇಗನೆ ಕರೆದುಕೊಂಡು ಬಾಯೆನಲು, ಸುಗ್ರೀವನು ಅದೇ ಪ್ರಕಾರ ಮಾಡಲು ವಿಭೀಷಣನು ತನ್ನ ನಾಲ್ವರು ಮಂತ್ರಿಗಳೊಡನೆ ಸುಗ್ರೀವನ ಸಂಗಡ ಬಂದು ಶ್ರೀರಾಮನ ಪಾದಾರವಿಂದಗಳ ಮೇಲೆ ತನ್ನ ಮುಖವನ್ನಿಟ್ಟು ನಿನ್ನನ್ನು ನಂಬಿ ಬಂದಿದ್ದೇನೆ ನನ್ನನ್ನು ರಕ್ಷಿಸಬೇಕು, ರಾವಣನು ನೀತಿಯನ್ನು ಹೇಳಿದ ನನ್ನನ್ನು ಹೊಡೆದು ಕಳುಹಿಸಿದನು. ಈಗ ನಿನ್ನ ಪಾದನೇಗತಿ ಕರುಣಾಮಯನಾದ ರಾಮನೆ! ನನ್ನನ್ನು ರಕ್ಷಿಸು ಎಂದು ಬೇಡಿಕೊಳ್ಳಲು ಶ್ರೀರಾಮಚಂದ್ರನು ಕರುಣಿಸಿ ಬ್ರಹ್ಮ ಮೊದಲಾದದೇವತೆಗಳಿಗೆ ಅಲಭ್ಯವಾದ ಮಹಾ ಪ್ರಸಾದದಿಂದ ತನ್ನ ಕಟಾಕ್ಷದ ಅಮೃತಧಾರೆಯಿಂದ ಅಭಿಷೇಕಮಾಡಿ ಲಕ್ಷ್ಮಣ ಸುಗ್ರೀವರನ್ನು ಕುರಿತು ಇವನಿಗೆ ಲಂಕಾರಾಜ್ಯ ಪಟ್ಟಾಭಿಷೇಕ ಮಾಡಿ ಎಂದು ಅಪ್ಪಣೆಮಾಡಿದನು.

## ವಿಭೀಷಣನ ಪಟ್ಟಾಭಿಷೇಕ ವರ್ಣನೆ.

ಬಳಿಕ ಲಕ್ಷ್ಮಣ ಸುಗ್ರೀವಾದಿಗಳು ವಿಭೀಷಣನನ್ನು ದಿವ್ಯವಾದ ರತ್ನಮಯ ಪೀಠದ ಮೇಲೆ ಕುಳ್ಳಿರಿಸಿ ಸಕಲ ಸಮುದ್ರೋದಕಗಳನ್ನೂ ದಿವ್ಯ ನದೀ ಜಲಗಳನ್ನೂ ತರಿಸಿ ಲಂಕಾಧಿಪತಿ

ಜ್ಯದ ಪಟ್ಟವನ್ನು ಕಟ್ಟಿ ಅಭಿಷೇಕ ಮಾಡಿದರು, ಆ ಕಾಲದಲ್ಲಿ ದೇವತೆಗಳು ದಿವ್ಯ ಗಂಧೋದಕಗಳನ್ನು ಸುರಿಸಿ ಪಾರಿಜಾತ ಪುಷ್ಪವೃಷ್ಟಿಯನ್ನು ಕರೆದು ದೇವ ದುಂದುಭಿ ಮೊದಲಾದ ವಾದ್ಯಗಳನ್ನು ಬಾರಿಸಿದರು. ನಾರದರು ದಿವ್ಯವಾದ ವೀಣೆಯಿಂದ ಗಾನವನ್ನು ಮಾಡಿದರು ಅಪ್ಸರಸ್ತ್ರೀಯರೆಲ್ಲರೂ ನಾಟ್ಯವಾಡಿದರು, ಅನಂತರ ವಿಭೀಷಣನು ಶರಚ್ಚಂದ್ರ ಚಂದ್ರಿಕಾ ಧವಳೋಪಮಾನವಾದ ಮುಖಕಾಂತಿಯುಳ್ಳವನಾಗಿ ಶ್ರೀರಾಮನ ಬಳಿಗೆ ಬಂದು ನಮಸ್ಕರಿಸಲು, ಶ್ರೀರಾಮನು ಆತನನ್ನು ಆಲಿಂಗಿಸಿಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿ ಆನಂದಭಾಷ್ಪಗಳಿಂದ ಅವನಿಗೆ ಅಭಿಷೇಕಮಾಡಿ ಬ್ರಹ್ಮಕಲ್ಪವಿರುವವರೆಗೂ ಚಿರಂಜೀವಿಯಾಗಿ ಲಂಕಾರಾಜ್ಯವನ್ನು ಪಾಲಿಸುತ್ತಿರು ಎಂದು ಆಶೀರ್ವದಿಸಿ, ಎಲೈ ವಿಭೀಷಣನೇ ನಾವು ರಾವಣನಮೇಲೆ ಮಾಡುವ ರಾಜಕಾರ್ಯಕ್ಕೆ ಸಮುದ್ರರಾಜನು ಅಡ್ಡಿಯಾಗಿರುವನು, ನೂರುಯೋಜನ ವಿಸ್ತಾರವಾದ ಈ ಸಮುದ್ರವನ್ನು ಅನಾಯಾಸವಾಗಿ ನಮ್ಮ ಸೈನ್ಯದೊಡನೆ ದಾಟಿ ಲಂಕೆಗೆ ಮುತ್ತಿಗೆ ಹಾಕಬೇಕಾದರೆ ಏನು ಮಾಡಬೇಕೆಂದು ಕೇಳಲು ವಿಭೀಷಣನು ಎಲೈ ಮಹಾನುಭಾವನೇ ಸಂಸಾರ ಸಾಗರದಲ್ಲಿ ಮುಳುಗಿದ ನಿನ್ನ ಭಕ್ತರನ್ನು ಉದ್ಧರಿಸುವ ಶಕ್ತಿಯುಳ್ಳ ನೀನು ಈ ಸಮುದ್ರವನ್ನು ದಾಟುವದೊಂದು ದೊಡ್ಡದೇ? ಎಂದಿಗೂ ಇಲ್ಲ ಆದರೂ ನರನಾಟಕಸೂತ್ರಧಾರಿಯಾಗಿ ಮನುಷ್ಯಾವತಾರಮಾಡಿದ ನೀನು ಸಮುದ್ರರಾಜನನ್ನು ಪ್ರಾರ್ಥಿಸಿದರೆ ಅವನು ಪ್ರತ್ಯಕ್ಷನಾಗುವನು. ಆ ಬಳಿಕ ನೀನು ಅನಾಯಾಸವಾಗಿ ಸಮುದ್ರವನ್ನು ದಾಟುವುದು ಎಂದು ನನಗೆ ತೋರುತ್ತಿದೆ ಎಂದು ಹೇಳಿದನು.

## ಶ್ರೀರಾಮನು ದರ್ಭಶಯನದಲ್ಲಿ ಮಲಗಿದುದು.

ಶ್ರೀರಾಮಚಂದ್ರನು ವಿಭೀಷಣನ ಮಾತುಗಳನ್ನು ಕೇಳಿ ತನ್ನ ಮನಸ್ಸಿನಲ್ಲಿದ್ದಂತೆ ಆತನೂ ಹೇಳಿದನೆಂದು ಸಂತೋಷಪಟ್ಟು ಕೂಡಲೇ ಎದ್ದು ಕೈಕಾಲುಗಳನ್ನು ತೊಳೆದುಕೊಂಡು ಶುದ್ಧಾಚಮನಮಾಡಿ ಸಮುದ್ರತೀರದಲ್ಲಿ ದರ್ಭೆಗಳನ್ನು ಹಾಸಿಕೊಂಡು ಮಲಗಿ ಸಮುದ್ರರಾಜನನ್ನು ಕುರಿತು ಎಲೈ ಸರಿತ್ಪತಿಯೇ ಎಲೈ ಸರ್ವಲೋಕರಕ್ಷಕನಾದ ರತ್ನಾಕರನೇ ನಾನು ನಿನಗೆ ಶರಣಾಗತನಾಗಿರುವೆನು ನನ್ನಲ್ಲಿ ದಯವಿಟ್ಟು ಲಂಕೆಗೆಹೋಗುವದಕ್ಕೆ ದಾರಿಯನ್ನು ಕೊಟ್ಟು ನನ್ನನ್ನು ಕಾಪಾಡು ನೀನು ಹಾಗೆ ಮಾಡದಿದ್ದರೆ ನಿನ್ನ ಬಳಿಯಲ್ಲೆ ಅನ್ನಾಹಾರಗಳನ್ನು ಬಿಟ್ಟು ಪ್ರಾಣವನ್ನೊಪ್ಪಿಸುವೆನು ಎಂದು ಮಲಗಿಕೊಂಡನು ಹೀಗೆ ಮೂರು ದಿನಗಳವರೆಗೂ ಪ್ರಾರ್ಥನೆ ಮಾಡುತ್ತಾ ಆಹಾರವಿಲ್ಲದೆ ಮಲಗಿದ್ದರೂ ಸಮುದ್ರರಾಜನು ಪ್ರಸನ್ನನಾಗಿ ವೈದೋರದಿರಲು ಶ್ರೀರಾಮಚಂದ್ರನು ಸಮುದ್ರರಾಜನು ತನ್ನನ್ನು ಅಲಕ್ಷ್ಯಮಾಡಿದನೆಂದು ಕ್ರೋಧಾವೇಶವನ್ನು ತಾಳಿ ಕಣ್ಣುಗಳಲ್ಲಿ ಕಿಡಿಗಳನ್ನು ಸುರಿಸುತ್ತಾ ಈ ಸಮುದ್ರವನ್ನು ಶೋಷಿಸು



ವಂತೆ ಮಾಡುವೆನು ಇಂಥವರಲ್ಲಿ ಕರುಣವಿಡಬಾರದು ಲೋಕದಲ್ಲಿ ಮದಗರ್ವಿತನಾದವನನ್ನು ಯಾರೂ ಲಕ್ಷ್ಯಮಾಡುವದಿಲ್ಲ ಅಂಥವನನ್ನು ಮಕ್ಕಳು ಕೂಡಾ ನಿರಾಕರಿಸುವರು ಭಯದಿಂದ ಲೋಕವೆಲ್ಲ ನಡಗುವದು ಎಂದು ತಮ್ಮನನ್ನು ನೋಡಿ ನನ್ನ ಧನುರ್ಭಾಣಗಳನ್ನು ತೆಗೆದುಕೊಂಡು ಬಾ ಈ ಸಮುದ್ರವನ್ನು ಈಗಲೇ ಬತ್ತಿಸಿ ಬರಿದುಮಾಡುವೆನು ಕಪಿಸೈನ್ಯವೆಲ್ಲ ಕಾಲಿನಿಂದಲೇ ನಡೆದುಹೋಗಲಿ ಎಂದು ಧನುರ್ಭಾಣಗಳನ್ನು ತೆಗೆದುಕೊಂಡು ಬಿಲ್ಲಿಗೆ ಹೆದೆಯನ್ನೇರಿಸಿ ಧನುಷ್ಟಂಕಾರನಾಡಿ ಬಾಣವನ್ನು ಅಗ್ನಿಮಂತ್ರದಿಂದಭಿಮಂತ್ರಿಸಿ ಬಿಡಲುದ್ಯುಕ್ತನಾದನು. ಆಗ ಸಮುದ್ರದೊಳು ಉರಿಹೆಚ್ಚಿ ಅಲೆಗಳನ್ನು ಕುಡಿಯುತ್ತಾ ಛಟಛಟಛಟ ಎಂದು ಉರಿಬರುವ ವೇಗದಿಂದ ತುಂತುರ್ವನಿಗಳನ್ನೆಲ್ಲ ಕುಡಿದು ಬಡಬಾನಲನೊಡನೆ ಜಲಜಂತುಗಳನ್ನೆಲ್ಲ ಸುಟ್ಟು ನೀರಿನಸಮುದ್ರವು ಕರಿಯಾಗುತ್ತಾ ಒಂದು ಕ್ಷಣಮಾತ್ರದಲ್ಲಿ ಉರಿಗಡಲಾಗಲು ಗಂಗೆಯು ಹಾ! ಪ್ರಿಯನೇ ಸರಿತ್ಪತಿಯೇ ಎಂದು ತಳಿಕೂದಲನ್ನು ಕೆದರಿಕೊಂಡು ಘೋರ್ಗರೆವುತ್ತ ಎಲೈ ಮಹಾಪಾಪಿಯೇ ಏಕೆ ಮತ್ತನಾಗಿ ಮೈಮರೆತಿರುವುದನ್ನೂ ಕಾಣದೆ ಬಿದ್ದಿರುವೆ ರಾಮನು ದುಷ್ಟರನ್ನು ಸಂಹರಿಸಿ ಶಿಷ್ಟರನ್ನು ಪಾಲಿಸಲೋಸುಗ ಅವತರಿಸಿರುವ ಮಹಾವಿಷ್ಣುವಲ್ಲವೆ ಅವನು ಪ್ರಳಯಕಾಲದ ರುದ್ರರೂಪನಾಗಿ ಸುಡುತ್ತಿರುವಾಗಲು ಕೂಡ ನಿನ್ನ ಗಂಭೀರವನ್ನು ಬಿಡದೆ ಇರುವೆಯಲ್ಲ ಬೇಗಹೊರಡು ಎಂದು ಹೇಳಿ ತನ್ನ ಸಂಗಡ ಕರೆದುಕೊಂಡು ಶ್ರೀರಾಮನ ಬಳಿಗೆ ಬಂದು ಕರ್ಣಭೂಷಣಗಳನ್ನು ರಾಮನೆದುರಿಗಿಟ್ಟು ನಮಸ್ಕರಿಸಿ ರಾಮನನ್ನು ಕುರಿತು ಎಲೈ ರಘುಕುಲತಿಲಕನೇ! ಕರುಣಾಂತರಂಗನೇ! ನಾನು ನಿನ್ನ ಮಗಳಲ್ಲವೆ ತಂದೆಯಾದ ನಿನಗೆ ನನ್ನ ಮೇಲೆ ಇಷ್ಟು ನಿರ್ದಯವುಂಟೆ ನನ್ನ ಒಲಿಯಮೇಲಾದರೂ ಕರುಣವಿಡಬಾರದೇ ಅಳಿಯನ ಮೇಲೆ ಕೋಪವನಾಡಿಕೊಂಡು ಮಗಳ ಮಾಂಗಲ್ಯವನ್ನು ಕೆಡಿಸಬಹುದೇ ಮಗಳಿಗೆ ಅನಿಷ್ಟವಾಗಿ ತಂದೆಯಿಂದ ಅನರ್ಥನಡೆದರೆ ನಾಡಿಗರು ನಗರೇ ಸಾಕು ಸ್ವಾಮಿ ನನಗೆ ಮುತ್ತೈದೆತನವನ್ನು ಕೊಟ್ಟು ಸಲಹು ಮರೆಹೊಕ್ಕವರನ್ನು ಕಾಪಾಡುವವನೆಂಬ ಬಿರುದನ್ನು ದಕ್ಕಿಸಿಕೊ ಇಗೊ ನನ್ನ ಗಂಡನಾದ ಸಮುದ್ರರಾಜನು ಬಂದಿರ ನನು ಇವನು ನಿನ್ನಲ್ಲಿ ಶರಣಾಗತನಾಗಿ ಬಂದವನು ನನ್ನ ಮಂಗಳ ಸೂತ್ರವನ್ನು ಹರಿಯಬೇಡ ನಮ್ಮನ್ನು ಕಾಪಾಡು ಎಂದು ಹೇಳಿ ಸಮುದ್ರರಾಜನನ್ನು ಕರೆದುತಂದು ಶ್ರೀರಾಮನ ಕಾಲುಗಳಮೇಲೆ ಕೆಡಹಿದಳು. ಆಗ ಶ್ರೀರಾಮನು ಅವನನ್ನು ಆಲಿಂಗಿಸಿಕೊಂಡು ಎಲೈ ಸಮುದ್ರರಾಜನೇ! ನಾನು ಮನುಷ್ಯನು ನೀವು ದೇವತೆಗಳು ನನ್ನ ಮಡದಿಯನ್ನು ದುಷ್ಟನಾದ ರಾವಣನು ಕದ್ದುಕೊಂಡು ಹೋಗಿ ನನ್ನನ್ನು ಬಹು ಕಷ್ಟಪಡಿಸಿದ್ದಾನೆ ಅವನನ್ನು ಕೊಲ್ಲಬೇಕು ಅದಕ್ಕೆ ಸಹಾಯವಾಗಿ ನೀನು ನನ್ನ ಮೇಲೆ ದಯವಿಟ್ಟು ಲಂಕೆಗೆ ಹೋಗಲು ದಾರಿಯನ್ನು ಕೊಡಬೇಕೆಂದು ಬೇಡಿಕೊಳ್ಳಲು ಸಮುದ್ರರಾಜನು ಎಲೈ ರಾಮಚಂದ್ರನೇ! ದೇವಶಿಲ್ಪಿಯಾದ ವಿಶ್ವಕರ್ಮನ ಮಗನಾದ ನಳನೆಂಬ ಕಪಿನಾಯಕನಿಂದ ಸೇತುವೆಯನ್ನು ಕಟ್ಟಿಸು ಈ ನಳನು ಕೈಮುಟ್ಟಿ ಹಾಕಿದ ಕಲ್ಲುಗಳೂ ಬೆಟ್ಟಗಳೂ ನೀರಿನಲ್ಲಿ ತೇಲುವುವು ವಿಶ್ವಕರ್ಮನು ಅವನಿಗೆ ಮೊದಲು ವರವನ್ನು ಕೊಟ್ಟಿರುವನು ಈಗ ನೀನು ನನ್ನ ಮೇಲೆ ತೊಟ್ಟಿರುವ ಅನಲಾಸ್ತ್ರವನ್ನು ನನ್ನಲ್ಲಿ ಬಂದು ಸೇರಿರುವ ದ್ವೀಪವಾಸಿಗಳಾದ ಕಿರಾತರು ನನ್ನನ್ನು ಬಹಳವಾಗಿ ನೋಯಿಸುತ್ತಿದ್ದಾರೆ ಆದಕಾರಣ ಅವರಮೇಲೆ ಪ್ರಯೋಗಿಸೆನಲು ರಾಮನು ಅದೇ ಮೇರೆಗೆ ಪ್ರಯೋಗಿಸಿ ಆ ಕಿರಾತರನ್ನು ಕೊಂದು ಸಮುದ್ರರಾಜನಿಗೆ ಸಂತೋಷವನ್ನುಂಟುಮಾಡಿದನು.

## ಕಪಿಗಳು ಸಮುದ್ರಕ್ಕೆ ಸೇತುವೆ ಕಟ್ಟಿದುದು.

ತರುವಾಯ ಶ್ರೀರಾಮಚಂದ್ರನು ಕೋಡಗಂಗಳಿಗೊಡೆಯನಾದ ಸುಗ್ರೀವನನ್ನು ಕುರಿತು ಎಲೈ ವಾನರಾಧಿಪನೇ! ಸಮುದ್ರವನ್ನು ದಾಟುವುದಕ್ಕೆ ಮುಂದೆ ಏನು ಯೋಚನೆ ಮಾಡಿರುವೆ ಎನಲು

ಕಪಿರಾಜನು, ಎಲೈ ಲೋಕನಾಯಕನೇ! ಬೆಟ್ಟಗುಡ್ಡಗಳೂ, ಮರಗಳೂ, ಬೇಕಾದಷ್ಟಿವೇ ಕಪಿ ಭಟರಿಗೆ ಬಾಹುಬಲವು ಹೇರಳವಾಗಿದೆ, ಅಪ್ಪಣೆಯಾದರೆ ಕ್ಷಣಮಾತ್ರದಲ್ಲಿ ಕಡಲನ್ನು ಹೂಣಿಸಿ ಸೇತುವೆ ಕಟ್ಟಿಸುವೆನು, ಹಾಗೆ ರಾವಣನನ್ನು ಎಳತಂದು ನಿನ್ನೆದುರಿಗೆ ಬಿಡುವೆವು ಬೇಕಾದರೆ ಮನ್ನಿಸು ಬೇಡವಾದರೆ ಕೊಲ್ಲು ಎಂದನು ಆಗ ಗವಾಕ್ಷನೆಂಬ ಕಪಿವೀರನಾಯಕನೆದ್ದು ಎಲೈ ಜಗತ್ಕರ್ತನೇ! ಸುಗ್ರೀವನು ನುಡಿದಮಾತು ಸರಿಯಲ್ಲ ಈ ಕಡಲನ್ನು ಕಷ್ಟಪಟ್ಟು ಏಕೆ ಹೂಳ ಬೇಕು ನನ್ನ ಉದ್ದವಾದ ಬಾಲವನ್ನು ಲಂಕೆಗೆ ಕಳುಹಿಸಿ ರಾವಣನನ್ನು ಹಿಡಿದು ತರಿಸುವೆನು, ಎಂದನು, ಆಗ ಗವಯನೆಂಬ ಕಪಿನಾಯಕನು ಗವಾಕ್ಷನನ್ನು ಕುರಿತು ಛೀ ಏನು ಮಾತನಾಡಿದೆ ಒಡೆಯನಿದಿರಿಗೆ ನಾಚಿಕೆಯಿಲ್ಲದೆ ಒಬ್ಬನನ್ನು ಹಿಡಿತರುವೆನೆಂದು, ಹೇಗೆ ಹೇಳಿದೆ ನಿನ್ನ ಪೌರುಷವು ವ್ಯಕ್ತವಾಯಿತು ಇಗೋ ನೋಡು ಆ ಖಳನನ್ನು ಅವನ ಬಲವನ್ನೂ ಲಂಕೆಯನ್ನೂ ಒಂದು ನಿಮಿಷದಲ್ಲಿ ತಂದು ರಾಮನೆದುರಿಗೆ ಇರಿಸದಿದ್ದರೆ ನಾನು ಶೂರನಲ್ಲ ಎಂದು ಬೊಬ್ಬಿರಿದನು; ಈ ಕಡಲನ್ನು ಬಿಟ್ಟು ಇತರ ಕಡಲನ್ನೂ ಕುಡಿದು ರಾವಣನ ತಲೆಗಳನ್ನೂ ತರಿದು ತಂದೊಪ್ಪಿಸುವೆನು ಎಂದು ಶರಭನು ಹೇಳಿದನು. ಇದನ್ನೆಲ್ಲಾ ಕೇಳಿ ಸೇನಾಪತಿಯಾದ ನೀಲನು ನೀವು ಹೇಳಿದುದೇನೂ ದೊಡ್ಡದಲ್ಲ ಒಡೆಯನ ಅಪ್ಪಣೆಯಾದರೆ ಈ ಬ್ರಹ್ಮಾಂಡವನ್ನೇ ತಲೆಕೆಳಕಾಗಿ ಮಾಡುವೆನು ಎಂದನು ಈ ಮೇರೆ ಸೇನಾನಾಯಕರೆಲ್ಲರೂ ತಮ್ಮತಮ್ಮ ಪೌರುಷಗಳನ್ನು ಹೇಳಿಕೊಳ್ಳುತ್ತಿದ್ದರು, ಆಗ ಶ್ರೀರಾಮಚಂದ್ರನು ಆಂಜನೇಯನ ಮುಖವನ್ನು ನೋಡಲು ಮಹಾಶೂರರಲ್ಲಿ ನಾನು ಒಂದು ತೃಣಮಾತ್ರದವನು ಸ್ವಾಮಿಯವರ ಆಜ್ಞಾನುಸಾರ ನಡೆಯ ತಕ್ಕವನು ಎಂದು ಬಿನ್ನೈಸಲು, ಶ್ರೀರಾಮನು ಅವನ ಮಾತುಗಳಿಗೆ ಸಂತೋಷಿಸಿ ಸುಗ್ರೀವನೊಡನೆ ಎಲೈ ಸಖನೇ ಕಪಿಬಲಕ್ಕೆ ಬೆಟ್ಟಗುಡ್ಡಗಳನ್ನು ತಂದೊದಗಿಸಿ ಕೊಡುವಂತೆಯೂ, ನಳನಿಗೆ ಸೇತುವೆ ಕಟ್ಟುವಂತೆಯೂ ಅಪ್ಪಣೆಮಾಡಿ ಸೇತುವೆಯನ್ನು ಕಟ್ಟಿಸು ಎನಲು ಸುಗ್ರೀವನು ಕಪಿಗಳನ್ನು ಕರೆಯಿಸಿ ಶ್ರೀರಾಮನ ಆಜ್ಞೆಯನ್ನು ಹೇಳಿದನು.

## ಕಪಿ ಸಹಾಯದಿಂದ ನಳನು ಸೇತುವೆಯನ್ನು ಕಟ್ಟಿದುದು.

ಆಗ ನಳನು ಶ್ರೀರಾಮಚಂದ್ರನಿಗೆ ನಮಸ್ಕಾರಮಾಡಿ ಅಲ್ಲಿಂದ ಆಂಜನೇಯನು ಲಂಕೆಗೆ ಹಾರಿಬಂತ ಮಹೇಂದ್ರಪರ್ವತಕ್ಕೆ ಹಾರಿ ಅದನ್ನು ಕಿತ್ತುಕೊಂಡೊಯ್ದು ಸಮುದ್ರದ ಉತ್ತರದಿಕ್ಕಿನಲ್ಲಿಟ್ಟು ಸೇತುವೆಯನ್ನು ಕಟ್ಟುವದಕ್ಕೆ ಪ್ರಾರಂಭಿಸಿದನು. ಆ ಕಾಲದಲ್ಲಿ ಆಕಾಶದಲ್ಲಿದ್ದ ದೇವತೆಗಳಾತನ ಸಾಹಸವನ್ನು ಕಂಡು ಅತ್ಯಾಶ್ಚರ್ಯಯುಕ್ತರಾಗಿ ನಳನನ್ನು ಹೊಗಳಿದರು. ಆಗ ಶತಬಲಿಯೆಂಬ ಕಪಿನಾಯಕನು ಇದೇನು ಮಹಾದೊಡ್ಡದು ಎಂದು ಹತ್ತು ಯೋಜನ ವಿಸ್ತಾರವಾದ ಒಂದು ಪರ್ವತವನ್ನು ತಂದು ಮಹೇಂದ್ರಪರ್ವತದ ಬಳಿಯಲ್ಲಿ ಹಾಕಿದನು ಗಜಗವಯಾದಿ



ಕಪಿನಾಯಕರೆಲ್ಲರೂ ಒಬ್ಬರಮೇಲೊಬ್ಬರು ಹುರಡಿನಿಂದ ದೊಡ್ಡದೊಡ್ಡ ಪರ್ವತಗಳನ್ನು ವೇಗವಾಗಿ ತಂದುಕೊಡುತ್ತಿದ್ದರೂ, ನಳನು ಲಕ್ಷ್ಯವಿಲ್ಲದೆ ಆ ಪರ್ವತಗಳನ್ನು ಕೈಯಲ್ಲಿ ಹಿಡಿದು

ಜೋಡಿಸುತ್ತ ಬಂದನು. ಕಪಿಗಳೆಲ್ಲರೂ ದೊಡ್ಡದೊಡ್ಡ ಬೆಟ್ಟಗಳನ್ನೂ ಗುಡ್ಡಗಳನ್ನೂ ಮಹಾ ವೇಗದಿಂದೆಸೆಯುತ್ತಿರಲು, ಅವುಗಳು ಸಮುದ್ರದಲ್ಲಿ ಬಿದ್ದಪೆಟ್ಟಿಗೆ ಸಮುದ್ರವೆಲ್ಲಾ ಕದಡಿ ಕಲ್ಲೋಲವಾಗಿ ತುಂತುರು ಹನಿಗಳು ಆಕಾಶವನ್ನು ವ್ಯಾಪಿಸಿ ಸೊಗಯಿಸುತಿದ್ದವು ಆ ಸೇತುವೆಯು ಸಮುದ್ರದಲ್ಲಿದ್ದ ಜಲಜಂತುಗಳೆಲ್ಲವೂ ಓಡಿಹೋಗುತ್ತಿದ್ದವು. ಅಂಗ, ವಂಗ, ಕಳಿಂಗ, ಕುರು, ಕಾಮರೂಪ, ಕಾಂಭೋಜ, ಸಿಂಧು, ನೇಪಾಳ, ಪಾಂಚಾಳ, ಮಾಳವ, ಗೌಳ, ಗೂರ್ಜರ, ಗಾಂಧಾರ, ಯವನ, ಕೇರಳ, ಆಂಧ್ರ ಮುಂತಾದ ಸಮಸ್ತ ದೇಶಗಳಲ್ಲಿದ್ದ ಬೆಟ್ಟಗುಡ್ಡಗಳನ್ನೆಲ್ಲ ತಂದು ಸಮುದ್ರಕ್ಕೆ ಹಾಕಿದರು ಸೇತುವೆಯು ಆಗನೆ ಇಪ್ಪತ್ತರಿಂದ ಸಿದ್ಧರು, ಕಿನ್ನರರು, ಕಿಂಪುರುಷರು, ಗುಹ್ಯಕರು, ಯಕ್ಷರು, ವಿದ್ಯಾಧರರು, ಗರುಡರು, ಗಂಧರ್ವರು ಮುಂತಾದವರು ವಾಸಮಾಡುವ ದಿವ್ಯಭೂಮಿಗಳಿಗೆಲ್ಲಾ ಹೋಗಿ ಅಲ್ಲಿದ್ದ ಪರ್ವತಗಳನ್ನೆಲ್ಲ ತಂದೊಡ್ಡಿದರು. ಹೀಗೆ ಎಷ್ಟುವೇಗವಾಗಿ ಬೆಟ್ಟಗಳನ್ನು ಕಪಿವೀರರು ತಂದು ಕೊಡುತ್ತಿದ್ದರೂ ಒಂದಕ್ಕೊಂದಕ್ಕೆ ಜೋಡಿಸಿ ಸರಿಮಾಡುತ್ತಾ ಬಂದರೂ ಸಾಲದೆಂದು ನಳನು ಬೊಬ್ಬಿರಿಯುತ್ತಾ ಕಪಿನಾಯಕರ ಮೇಲೆ ಕೋಪಮಾಡುತ್ತಾ ಬೇಗಬೇಗ ಬೆಟ್ಟಗಳನ್ನು ತೆಗೆದುಕೊಂಡು ಬನ್ನಿರೆಂದು ಆರ್ಭಟಿಸುತ್ತಾ ಇರಲು ಸುಗ್ರೀವನು ಆ ನಳನ ಸೇತುಬಂಧನಾಟೋಪವನ್ನು ಕೇಳಿ ಸೇತುವೆಯು ಬೇಗಆಗುವದಿಲ್ಲ, ಬೆಟ್ಟಗಳೂ ಸಾಲವು ಎಂದು ರೋಷದಿಂದೆದ್ದು, ಉದಯಾದ್ರಿಗೆ ಹಾರಿ ಅದರ ಶಿಖರವನ್ನು ಕಿತ್ತು ಎಡಗೈಲಿಟ್ಟುಕೊಂಡು ಅಲ್ಲಿಂದ ಅಸ್ತಾದ್ರಿಗೆ ಹೋಗಿ ಅದರ ಶಿಖರವನ್ನು ಕಿತ್ತು ಬಲಗೈಯಲ್ಲಿ ತೆಗೆದುಕೊಂಡು ಬಂದು ನಳನ ಕೈಯಲ್ಲಿ ಕೊಡಲು ಅವನು ಅದನ್ನು ಸೇತುವಿಗೆ ಜೋಡಿಸಿದನು. ಬಳಿಕ ಶತಕೋಟಿ ಎಂಬ ಪರ್ವತವನ್ನೂ, ಸುಷೇಣನು ಸುದರ್ಶನಾದ್ರಿಯನ್ನು ನೀಲನು ಮಲಯ ಮಹೀಧರವನ್ನೂ, ವೃಷಭನು ವೃಷಗಿರಿಯನ್ನೂ, ಗವಯನು ಗೋವರ್ಧನಾಚಲವನ್ನೂ, ಗವಾಕ್ಷನು ಅಂಜನಾದ್ರಿಯನ್ನು, ನೀಲನು ಬುಡದಿಂದ ಕಿತ್ತು ತಂದು ನಳನ ಕೈಗೆ ಕೊಡುತ್ತಿರಲು ಅವನು ಅದನ್ನು ಎತ್ತಿ ಜೋಡಿಸುತ್ತಿರುವಾಗ ಭೂಮಿದೇವಿಯು ತಿರಿಗಲ್ಲಾಡುತ್ತಿರುವಹಾಗೆ ತೋರುತ್ತಿತ್ತು. ವಾನರರ ಬಲವೂ, ಸಾಹಸವೂ ಇಷ್ಟೆಂದು ಬಣ್ಣಿಸಲಾಗದೆ ಗಜ ಗಂಧ ಸುಮುಖ ದುರ್ಮುಖ ತಾರ ದಧಿಮುಖ ಕುಮುದ ಮೈಂದ ದ್ವಿವಿದ ಶತಬಲಿ ರುಮನ್ವಂತ, ಜ್ಯೋತಿರ್ಮುಖ, ಗಜ ಗಂಧಮಾದನ ಮುಂತಾದ ಕಪಿನಾಯಕರು ಮೇರುಪರ್ವತವನ್ನು ಬಳಸಿರುವ ಸಮುದ್ರದ ಮಧ್ಯದ ಗಿರಿಗಳನ್ನೆಲ್ಲಾ ತಂದು ಸೇತುವೆಗೆ ಸೇರಿಸಿದರು. ವಾಲಿಯ ಕುಮಾರನಾದ ಅಂಗದನ ಸಾಮರ್ಥ್ಯವನ್ನು ಏನು ಹೇಳಲಿ ಆಹಾ ಆತನು ಕೈಲಾಸಕ್ಕೆ ಹೋಗಿ ತನ್ನ ಬಾಹುಗಳಿಂದ ಅಲ್ಲಾಡಿಸಲು ಮೇಲಿದ್ದ ಶಿವನಗಿರಿಯು ಕಂಪಿಸಿತು ಅದನ್ನು ಕಂಡು ಶಿವನು ಅಂಗದನ ಬಳಿಗೈದಿ ನೀನು ಯಾರು ಈ ಬೆಟ್ಟವನ್ನು ಕೀಳಲು ನಿನಗೆ ಯಾರು ಹೇಳಿದರು ನೀನಿಲ್ಲಿಗೆ ಬರುವದಕ್ಕೆ ಕಾರಣವೇನು ಎಂದು ಕೇಳಲು, ಅಂಗದನು ನಗೆಮೊಗದಿಂದ ಶಿವನನ್ನು ನೋಡಿ ಲಕ್ಷ್ಯಮಾಡದೆ ಗಿರಿಯನ್ನು ಬೇರು ಸಹಿತ ಕಿತ್ತು ಹೊರಡಲೆಯಲು, ಶಿವನು ಬೇಗಾಗಿ ಪೂರ್ವದಲ್ಲಿ ರಾವಣನು ಎತ್ತಿ ಅವನ ಕೈಗಳು ಸಿಕ್ಕಿ ಹೋಗಿದ್ದವು ಇವನನ್ನು ನೋಡಿದರೆ ಮಹಾಶೂರನಾಗಿ ಕಾಣುತ್ತಾನೆ, ಎಂದುಕೊಂಡು ಅಂಗದನನ್ನು ಕುರಿತು ಎಲೈ ವಾನರಶೂರನೇ ಈ ಗಿರಿಯು ನಮ್ಮದು ನಾವು ನಿನ್ನ ರಾಮನ ಮಿತ್ರರು, ಪ್ರೀತಿಯಿಂದ ನಮ್ಮನ್ನು ನೋಡೆಂದು ನಿಜರೂಪವನ್ನು ತೋರಿಸಿದನು ಆಗ ಅಂಗದನು ನಾನೇನು ಅರಿಯದವನೇ ನೀನು ಶಂಕರನೆಂಬುವದನ್ನೂ ಬಲ್ಲೆ ಈ ಗಿರಿಯು ನಿನ್ನದೆಂಬುವದನ್ನೂ ಬಲ್ಲೆ ನೀನು ನಮ್ಮೊಡೆಯನಿಗೆ ಮಿತ್ರನು ಎಂಬುವದನ್ನೂ ಬಲ್ಲೆ ಆದರೆ ನೀನು ನಮ್ಮೊಡೆಯನಿಗೆ ಮಿತ್ರನಾದ ಮೇಲೆ ಈ ಗಿರಿಯು ಆತನಿಗೆ ಸಲ್ಲದೇ ನಾವು ಸ್ವಾಮಿಕಾರ್ಯವನ್ನು ಬಿಡುವವರಲ್ಲ ನಮ್ಮೊಡೆಯ

ನಿರುವದು ದೂರವಿಲ್ಲ ಆತನ ಅಪ್ಪಣೆಯಾದರೆ ಬಿಡುವೆನು ಎಂದನು ಆಗ ಶಿವನು ಸಮೀಪದಲ್ಲಿದ್ದ ಗುಹಗಣಪತಿಗಳನ್ನು ನೋಡಲು ಅವರು ಕೂಡಲೆ ರಾಮಲಕ್ಷ್ಮಣರ ರೂಪಗಳನ್ನು ತಾಳಿ ಅಂಗದನನ್ನು ಕುರಿತು ಎಲೈ ಕಂದನೇ ! ಈ ಶಿವನೂ ನಾನೂ ಒಂದೆ ನಮ್ಮಿಬ್ಬರಿಗೂ ಭೇದವಿಲ್ಲ ಆದ ಕಾರಣ ನಾನೇ ಶಿವನು, ಶಿವನೇ ನಾನಾಗಿದ್ದೇನೆ ಅದನ್ನು ಬಿಟ್ಟು ಅದರ ಸುತ್ತಮುತ್ತಲಿರುವ ಗಿರಿಗಳನ್ನು ಕಿತ್ತುಕೊಂಡು ಹೋಗು ಎಂದು ಹೇಳಿದನು, ಆಗ ಅಂಗದನು ಸಂತುಷ್ಟನಾಗಿ ಆ ಕೈಲಾಸವನ್ನು ಅಲ್ಲಿಯೆ ಬಿಟ್ಟು ಸುತ್ತುಮುತ್ತಿರುವ ಪರ್ವತಗಳನ್ನು ತೆಗದುಕೊಂಡು ಹೋಗಿ ನಳನ ಕೈಗೆ ಕೊಡಲು ಅವನು ಅವುಗಳನ್ನೆಲ್ಲಾ ಕ್ರಮವಾಗಿ ಜೋಡಿಸಿದನು ಅದರಿಂದ ಹತ್ತು ಯೋಜನ ಸೇತುವೆಯ ಕೆಲಸ ನಡೆಯಿತು ತರುವಾಯ ಬ್ರಹ್ಮನ ಮಗನಾದ ಜಾಂಬವಂತನು ಹಿಮವತ್ಪರ್ವತಕ್ಕೆ ಹೋಗಿ ಕಣ್ಣುಗಳಿಗೆ ಮುಚ್ಚಿಕೊಂಡಿರುವ ಹುಬ್ಬುಗಳನ್ನು ಮೇಲಕ್ಕೆತ್ತಿ ಆ ಗಿರಿಯನ್ನು ನೋಡಿ ನಾನು ಮುದುಕ ಇದಕ್ಕಿಂತಲೂ ದೊಡ್ಡ ಬೆಟ್ಟವನ್ನು ಹೊರಲಾರೆ ಎಂದು ಕೊಂಡು, ಎರಡುಸಾವಿರ ಯೋಜನ ಎತ್ತರವುಳ್ಳದ್ದಾಗಿ, ಹತ್ತುಸಾವಿರ ಯೋಜನಗಳ ಉದ್ದವುಳ್ಳ ಆ ಗಿರಿಯನ್ನು ಎತ್ತಲು ಹಿಮವಂತನ ಹೆಂಡತಿಯಾದ ಮೇನಕೆಯು ಬೇಗನೆ ಎದ್ದು ಜಾಂಬವಂತನ ಬಳಿಗೆ ಬಂದು ಎಲೈ ವೃದ್ಧನೇ ! ನೀನು ಬೆಟ್ಟವನ್ನು ಕೀಳಬಹುದೇ ನೀನು ಶಿವ ಭಕ್ತನಾಗಿದ್ದಿಯೆ, ಶಿವನ ಹೆಂಡತಿಯಾದ ಪಾರ್ವತಿಯು ನನ್ನ ಮಗಳು ಎಲ್ಲವನ್ನೂ ಬಲ್ಲ ನಿನಗೆ ಹೇಳತಕ್ಕದ್ದೇನಿಥೆ ಎನಲು ಜಾಂಬವಂತನು ಆಕೆಗೆ ಕೈಮುಗಿದು ಶಿವನ ಚಿತ್ತಕ್ಕೆ ವಿರೋಧವಾಗಿ ಏಕೆ ನಡೆಯಬೇಕೆಂದು ಅದನ್ನಲ್ಲೇ ಇರಿಸಿ ಸುತ್ತಲೂ ಇರುವ ಬೆಟ್ಟಗಳನ್ನು ಕಿತ್ತು ತಲೆಯ ಮೇಲೆಂಟು ಎಡಭುಜದ ಮೇಲೆ ನಾಲ್ಕು ಬಲಭುಜದಮೇಲೆ ನಾಲ್ಕು, ಎಡದಕಂಕುಳಲ್ಲಿ ಎರಡು, ಬಲದಕಂಕುಳಲ್ಲಿ ಎರಡು, ಎಡಗೈಯಲ್ಲಿ ಒಂದು, ಬಲಗೈಯಲ್ಲಿ ಒಂದು ಹೀಗೆ ಇಪ್ಪತ್ತೆರಡು ಬೆಟ್ಟಗಳನ್ನು ಹೊತ್ತುಕೊಂಡು ಎರಡು ಕಾಲುಗಳಿಂದೂ ಎರಡು ಪರ್ವತಗಳನ್ನು ಉರುಳಿಸಿ ಕೊಂಡು ಬರುತ್ತಿರಲು ಅದನ್ನು ನೋಡಿ ದೇವತೆಗಳು ಬೆರಗಾದರು, ಶ್ರೀರಾಮನು ಆಶ್ಚರ್ಯ ಪಟ್ಟರು ನಳನು ಮಹಾಭಕ್ತಿಯಿಂದ ಓಡಿಹೋಗಿ ಜಾಂಬುವಂತನು ತಂದ ಗಿರಿಗಳನ್ನು ಒಂದೊಂದಾಗಿ ಹೊತ್ತುಕೊಂಡು ಬಂದು ಸಮುದ್ರದಲ್ಲಿ ಹಾಕಿ ಸಂದುಗಳಿಗೆ ಸಣ್ಣಸಣ್ಣ ಗುಡ್ಡಗಳನ್ನು ಜೋಡಿಸಿ ಕಟ್ಟುತ್ತಾ ಬಂದನು ಅದು ಹತ್ತುಯೋಜನವಾಯಿತು. ಅದುವರೆಗೆ ಮೂವತ್ತು ಯೋಜನ ಸೇತುವೆಯನ್ನು ಕಟ್ಟಿದನು ಗವಯ, ದಧಿಮುಖ, ಕುಮುದ, ಮೈಂದರೇ ಮೊದಲಾದವರು ತಂದ ಬೆಟ್ಟಗಳಿಂದ ಮೂವತ್ತು ಯೋಜನ ಅಂತು ಅರವತ್ತು ಯೋಜನದಗಲವಾದ ಸೇತುವೆಯಾಯಿತು ಇನ್ನು ನಾಲ್ವತ್ತು ಯೋಜನ ಸೇತುವೆ ಕಟ್ಟಿದರೆ ಲಂಕೆಗೆ ಹೋಗಬಹುದು ಕಪಿಗಳೆಲ್ಲರೂ ಬಹಳ ಶ್ರಮಪಟ್ಟಿದ್ದಾರೆ ಎಂದು ಶ್ರೀರಾಮನು ಸುಗ್ರೀವ ಜಾಂಬವಂತ ವಿಭೀಷಣರೊಡನೆ ಯೋಚನೆಮಾಡುತ್ತ ಕಾಲುಗಳನ್ನು ಹಿಸುಕುತ್ತಿದ್ದ ಅಂಜನೇಯನ ಮುಖವನ್ನು ನೋಡಲು ಆತನು ಘುಗ್ಗನೆದ್ದು ಮೇರುಪರ್ವತಕ್ಕೆ ಹಾರಿ ಅದನ್ನು ಅಡಿಯಿಂದ ತುದಿಯುವರೆಗೆ ನೋಡಿ ಇದು ಲಕ್ಷಯೋಜನ ಉದ್ದ ಲಕ್ಷಯೋಜನದಗಲವಿದೆ ಇದನ್ನು ತೆಗದುಕೊಂಡು ಹೋಗಿ ಸಮುದ್ರಕ್ಕೆ ಹಾಕಿದರೆ ಕೂಡಲೇ ಹೂಣಿಹೋಗುವದು ಎಂದುಕೊಂಡು ಈ ಮಹಾಪರ್ವತಕ್ಕೆ ಸಮಾನವಾದ ಆಕಾರವನ್ನು ತಾಳಿ ತನ್ನ ಬಾಲವನ್ನು ಆ ಪರ್ವತಕ್ಕೆ ಮೂರುಸುತ್ತು ಸುತ್ತಿ ಹೂಂಕರಿಸಿ ತೂಗಾಡಿಸಿ ಕೀಳಲು ಕೆಳಗಿನ ಏಳುಲೋಕಗಳು ಮೇಲಿನ ಏಳು ಲೋಕಗಳು ಅಲ್ಲೋಲಕಲ್ಲೋಲವಾಗಿ ಸತ್ಯಲೋಕದ ಸಿಂಹಾಸನದಮೇಲೆ ಸರಸ್ವತಿಯೊಡನೆ ಕುಳಿತಿದ್ದ ಬ್ರಹ್ಮನು ಕೆಳಕ್ಕೆ ಉರಳಿಬಿದ್ದು ಆಯ್ಯೋ ಇದೇನಾಶ್ಚರ್ಯ ಹದಿನಾಲ್ಕು ಲೋಕಗಳಿಗೂ ಅವಸಾನ ಕಾಲ ಬಂದಹಾಗಿದೆ ಎಂದು ಯೋಚಿಸಿ ಜ್ಞಾನದೃಷ್ಟಿಯಿಂದ ನೋಡಿ ಶ್ರೀಮಹಾವಿಷ್ಣುವಿನ

ಮಾನುಷ್ಯಲೀಲೆಯೆಂದರಿತು ಸರ್ವರೊಡನೆ ಹನುಮಂತನ ಬಳಿಗೆ ಬಂದು ಇದೇನಯ್ಯಾ? ನೀನೇನು ಹುಚ್ಚನೋ ಮೂರ್ಖನೋ, ಅಥವಾ ರಾಮನಿಗೆ ಅಹಿತನೋ, ನೀನು ಮಾಡಿದ ಕೆಲಸ ವೇನು? ಎನಲು ಹನುಮಂತನು ಬ್ರಹ್ಮನನ್ನು ಕುರಿತು ನಾನು ಹೇಳಿದರೆ ನೀವು ಮಾಡುವದೇನು ನಮ್ಮ ವಿಚಾರ ನಿಮಗೇಕೆ ನನ್ನನ್ನು ಕೇಳುವ ಬಾಧ್ಯತೆ ನಿಮಗೆಲ್ಲಿವೆ ಮುಂದಕ್ಕೆ ಹೊರಡು ಎನಲು ಬ್ರಹ್ಮನು ನೀನು ಹುಡುಗನಾಗಿದ್ದೀಯೆ ಬುದ್ಧಿ ಸಾಲದು ಇದು ಸಮಸ್ತ ಲೋಕಗಳಿಗೂ ಆಧಾ ರವಾಗಿರುವ ಮೇರುಪರ್ವತ ಇದನ್ನು ಕಿತ್ತರೆ ನೀನೆಲ್ಲಿರುವೆ ನಾನೆಲ್ಲಿರುವೆನು ಲೋಕಗಳೆಲ್ಲಿರುವುವು ಕಡಲೆಲ್ಲಿರುವುದು ರಾಮನೆಲ್ಲಿರುವನು, ಲಂಕೆಯೆಲ್ಲಿರುವುದು ರಾವಣನೆಲ್ಲಿರುವನು, ಅವನನ್ನು ರಾಮನು ಕೊಲ್ಲುವುದು ಹೇಗೆ ಸೀತೆಯನ್ನು ತರುವುದು ಹೇಗೆ ಸ್ವಾಮಿಕಾರ್ಯವನ್ನೇ ಹಾಳು ಮಾಡುವ ಯೋಚನೆ ಮಾಡಿದೆಯಲ್ಲ! ಇದು ಸರಿಯಲ್ಲ, ಬಿಡು ಎನಲು ಆಂಜನೇಯನು ಬ್ರಹ್ಮ ನನ್ನು ಕುರಿತು ಎಲೈ ನೀವು ಲೋಕಗಳನ್ನೆಲ್ಲಾ ಸೃಷ್ಟಿಸಿ ವೃದ್ಧರಾಗಿದ್ದಾಗ್ಯೂ ನಿಮ್ಮ ಬುದ್ಧಿವಿವೇ ಕಗಳು ಇಷ್ಟೆ ಇದರ ಸಂಗತಿ ನನಗೆ ತಿಳಿಯದೆನ್ನುವಿರೋ ಹಾಗಾದರೆ ಕೇಳಿ ಈ ಗಿರಿಯನ್ನು ಕಿತ್ತು ಇದನ್ನು ಆಧಾರಮಾಡಿಕೊಂಡಿರುವ ಲೋಕಗಳನ್ನೆಲ್ಲಾ ನನ್ನ ಬಾಲದಲ್ಲಿ ನಿಲ್ಲಿಸಿಕೊಂಡು ಕರಚರಣಗಳಿಂದ ರಾಮನ ಸೇವೆಮಾಡುತ್ತಾ, ಹಗೆಯಾದ ರಾವಣನನ್ನು ಕೊಂದಮೇಲೆ ಈ ಗಿರಿಯನ್ನು ಯಥಾಪ್ರಕಾರ ಇಲ್ಲಿಗೆ ತಂದಿರಿಸಿ ಅದರಲ್ಲಿ ಲೋಕಗಳನ್ನು ಮೊದಲಿನಂತೆ ನೆಲೆ ಗೊಳಿಸಿ ನನ್ನ ಬಾಲವನ್ನು ಬಿಡಿಸಿಕೊಂಡು ರಾಮನೊಡನೆ ಅಯೋಧ್ಯೆಗೆ ಹೋಗಲು ನಿಶ್ಚಯ ಮಾಡಿಕೊಂಡು ಇದ್ದೇನೆ ನೀವು ಬಂದ ದಾರಿಯಲ್ಲಿ ಹೋಗಿ ಎಂದನು. ಬ್ರಹ್ಮನು ಮಾತನಾ ಡುವದಕ್ಕೆ ತೋರದೆ ಸೌಮ್ಯದಿಂದ ಆಂಜನೇಯನನ್ನು ಕುರಿತು ಎಲೈ ಸ್ವಾಮಿಕಾರ್ಯಧುರಂ ಧರನೇ, ನಿಮ್ಮೊಡೆಯನಾದ ಶ್ರೀಮನ್ನಾರಾಯಣನು ಈ ಕಲ್ಪಕ್ಕೆ ನನ್ನನ್ನು ಒಡೆಯನಾಗಿ ಮಾಡಿ ದ್ದಾನೆ ಮುಂದಿನ ಕಲ್ಪಕ್ಕೆ ನಿನ್ನನ್ನು ಒಡೆಯನಾಗಿ ನಿಯಮಿಸಿದಾನೆ ನಿನಗೆ ಅಧಿಕಾರ ಬಂದಾಗ ನಿನ್ನ ಇಷ್ಟಬಂದಂತೆ ಮಾಡು ನನ್ನ ಅಧಿಕಾರದಲ್ಲಿ ನನ್ನ ಮಾತನ್ನು ನಡೆಯಿಸು ಎಂದು ಹೇಳಿ ತಬ್ಬಿಕೊಂಡನು, ಆಗ ಮಾರುತಿಯು ಇದೊಂದುಸಾರಿ ನಿಮ್ಮಪ್ಪಣೆಯನ್ನು ಮನ್ನಿಸುವೆನು. ನೀವು ನಮ್ಮಯ್ಯನ ಹಾಗೆ ಪೂಜ್ಯರು ನಿಮ್ಮೊಡನೆ ವಾದವೇಕೆ ಎನ್ನುತ್ತ ಎತ್ತಿದ್ದ ಗಿರಿಯನ್ನು ಯಥಾಪ್ರಕಾರ ಅಲ್ಲಿಯೆ ನಿಲ್ಲಿಸಿ ಬ್ರಹ್ಮನನ್ನು ಕಳುಹಿಸಿ ಆ ಪರ್ವತದ ಒಂದು ಶಿಖರವನ್ನು ತಂದು ನಳನ ಕೈಗೆ ಕೊಡಲು, ಅವೊಂದು ಶಿಖರದಿಂದ ನಲವತ್ತು ಯೋಜನದ ಸೇತುವೆಯನ್ನು ಕಟ್ಟಿ ಸಿದ್ಧಪಡಿಸಿದನು. ಈರೀತಿ ನಳನಿಂದ ನೂರು ಯೋಜನ ಉದ್ದವಾದ ಸೇತುವೆಯೂ ಸಂಪೂರ್ಣವಾಗಿ ಕಟ್ಟಲ್ಪಟ್ಟಿತು ಆಗ ಆಂಜನೇಯನು ತಾನು ಸೇತುವೆಯನ್ನು ಪರೀಕ್ಷಿಸಿ ನೋಡಿ ಶ್ರೀರಾಮನ ಬಳಿಗೆ ಬಂದು ನಮಸ್ಕಾರಮಾಡಿ ಸ್ವಾಮಿ ಸೇತುವೆಯು ಸಂಪೂರ್ಣವಾಗಿ ಕಟ್ಟಿ ಪೂರೈಸಿತು ನೋಡುವುದಕ್ಕೆ ಬರಬೇಕೆಂದು ವಿಜ್ಞಾಪಿಸಿದನು.

## ಶ್ರೀರಾಮನು ಸೇತುವೆಯನ್ನು ಪರೀಕ್ಷಿಸಿದುದು.

ಆಗ ಶ್ರೀರಾಮನು ಸಂತೋಷಪಟ್ಟು ಸುಗ್ರೀವನ ಕೈಯನ್ನು ಹಿಡಿದು ಸಿಂಹಪೀಠವನ್ನು ಇಳಿದು ಬರುವಾಗ ದೇವತೆಗಳು ಜಯಜಯವೆಂದು ನುಡಿದರು. ಸುರಮುನಿಗಳು ಹಲವುಬಗೆ ಯಾಗಿ ಸ್ತುತಿಸಿದರು, ವಿದ್ಯಾಧರರು ಶ್ರೀರಾಮನನ್ನು ಹೊಗಳಿದರು, ಸೂತಮಾಗಧವಂದಿಗಳು ಬಿರುದುಗಳನ್ನು ಹೇಳುತ್ತಿದ್ದರು. ಹನುಮಂತನು ಧೀರಾಗ್ರಣಿಯೆ ಪಾಹಿ ಅವಧಾರು ಎಂದು ಹೊಗಳುತ್ತಿದ್ದನು. ಈ ರೀತಿಯಾಗಿ ಪರಿಜನಗಳೊಡನೆ ಸೇತುವೆಯಬಳಿಗೆ ಬಂದು ನಿಂತು



ನೋಡಲು ಇದಿರಿನಲ್ಲಿ ನಕ್ಷತ್ರಗಳ ಹೊಳಪೊ ಸಮುದ್ರರಾಜನು ಒರೆಯಿಂದೆಳೆದ ಪಟ್ಟದ ಕತ್ತಿಯೋ ಶ್ರೀರಾಮನ ಅಯೋಧ್ಯಾ ನಗರದ ರಾಜಬೀದಿಯೋ, ಶತ್ರುವಾದ ರಾವಣನನ್ನು ಎಳದುಕೊಂಡು ಹೋಗುವದಕ್ಕೆ ಬಂದ ಮೃತ್ಯುದೇವತೆಯು ತೋಳೋ, ವಾನರರ ಬಲ ಪರಾಕ್ರಮದ ಶಿಲಾ ಶಾಸನವೊ, ಶ್ರೀರಾಮನ ಕೀರ್ತಿಯೆಂಬ ಕಾಂತೆಯು ಬೈತಲೆಯುಮಣಿಯೋ ಯಮನು ಹೂಡಿದ ಪ್ರತಾಪವಿಲಾಸದ ವಿಜಯಸ್ತಂಭವೊ ರಾವಣನು ವಿಜಯಕ್ಕೆ ದಯಮಾಡುವ ವಿಜಯರಾಘವನಿಗೆ ಬ್ರಹ್ಮನೆಂಬ ಅಗಸನು ಹಾಸಿದ ನಿರ್ಮಲವಾದ ನಡೆಮಡಿಯೋ, ತ್ರಿಲೋಕಾಧಿಪತಿಯನ್ನು ಸೇವಿಸಿ ಸಮುದ್ರರಾಜನು ಹಣೆಯೊಳಿಟ್ಟ ತಿಲಕವೋ ಎಂಬಂತೆ ಪ್ರಕಾಶಿಸುತ್ತಿರುವ ದಿವ್ಯವಾದ ಸೇತುವೆಯನ್ನು ನೋಡಿ ಬಹಳ ಸಂತೋಷಪಟ್ಟು ನಳನನ್ನು ಕೊಂಡಾಡುತ್ತಿದ್ದನು ಆ ಬಳಿಕ ಶ್ರೀರಾಮನು ಸಂತೋಷದಿಂದ ನಳನಿಗೆ ಮುಂದಣ ಇಂದ್ರಪದವಿಯನ್ನು ಕೊಟ್ಟು ಲಂಕಾಪ್ರಯಣಕ್ಕೆ ಸಿದ್ಧವಾಗಲು ಆಗ ದೇವದುಂದುಭಿಗಳು ಮೊಳಗುತ್ತಿದ್ದವು ಕಪಿಬಲದ ಮುಂದುಗಡೆಯ ಕಾವಲು ನೀಲನಿಗೂ ಹಿಂದುಗಡೆಯ ಕಾವಲು ಸುಷೇಣನಿಗೂ, ಮೇಲಾರೈಕೆಯು ನಳ ಶತಬಲಿ ಗವಾಕ್ಷರಿಗೂ ಹಗೆಗಳು ಬಾರದಂತೆ ನೋಡಿಕೊಂಡಿರುವ ಕೆಲಸವು ವಿಭೀಷಣನಿಗೂ ಆಗಲು, ಜಾಗರೂಕರಾಗಿ ನೋಡಿಕೊಂಡಿರುವಂತೆ ನಿಯಮಿಸಿ ಶ್ರೀರಾಮನು ಕಪಿಬಲದೊಡನೆ ಗೋಧೂಳಿ ಲಗ್ನದಲ್ಲಿ ಹೊರಟು ಸೇತುವೆಯನ್ನು ದಾಟಿ ಸುವೇಲಾದ್ರಿಯನ್ನು ಸೇರಿ ಪಾಳಯವನ್ನು ಬಿಡಿಸಿಕೊಂಡು ಸುಖವಾಗಿದ್ದನು.

## ಕೈಕಸಿಯು ರಾವಣನಿಗೆ ನೀತಿ ಹೇಳಿದುದು.

ಅತ್ತ ರಾವಣಾಸುರನು, ಶ್ರೀರಾಮನು ಕಪಿಬಲದೊಡನೆ ಸುವೇಲಾದ್ರಿಯ ತಪ್ಪಲಿನಲ್ಲಿ ಪಾಳಯವನ್ನು ಬಿಟ್ಟಿರುವುದನ್ನು ಚಾರರ ಮುಖದಿಂದ ತಿಳಿದು ಆಸ್ಥಾನಕ್ಕೆ ಬಂದು





ಆಪ್ತರಾದ ಸಚಿವರನ್ನು ಕರೆಯಿಸಿಕೊಂಡು ಮಂತ್ರಾಲೋಚನೆ ಮಾಡುವಷ್ಟರಲ್ಲಿ ರಾವಣಾಸುರನ ತಾಯಿಯಾದ ಕೈಕಸಿಯು ಬರುವದನ್ನು ಕಂಡು ರಾವಣನು ಎದುರಿಗೆ ಹೋಗಿ ನಮಸ್ಕಾರಗಳನ್ನು ಮಾಡಿ ಕರೆತಂದು ಒಂದು ಸಿಂಹಾಸನದ ಮೇಲೆ ಕುಳ್ಳಿರಿಸಿ ಎಲೈ ತಾಯಿಯೇ ಎಂದಿಗೂ ಬಾರದಿದ್ದವಳು ಈದಿನ ಸಭಾಮಂಟಪಕ್ಕೆ ಬರಲು ಕಾರಣವೇನು ಎಂದು ಬೆಸಗೊಳ್ಳಲು ಕೈಕ

ಸಿಯು ಮಗನನ್ನು ಕುರಿತು ಎಲೈ ಕುಮಾರನೇ ಒಂದು ಆಶ್ಚರ್ಯವನ್ನು ಹೇಳುವೆನು ಕೇಳು ಸೀತಾದೇವಿಯು ಆದಿಲಕ್ಷ್ಮಿ, ಶ್ರೀರಾಮನು ಆದಿನಾರಾಯಣನು ನೀನು ಆತನಿಗೆ ತಿಳಿಯದಂತೆ ಈ ಸೀತೆಯನ್ನು ತಂದು ಇಷ್ಟನರ್ಥಕ್ಕೆ ಒಳಗಾಗಿರುವೆ ಇನ್ನು ಶ್ರೀರಾಮನ ವೃತ್ತಾಂತವಂ ಕೇಳು, ದಶರಥ ಮಹಾರಾಜನು ಪುತ್ರಕಾಮೇಷ್ಟಿ ಎಂಬ ಯಾಗಮಾಡಲು ಆತನ ತಪಃಫಲವನ್ನೂ ಭಾಗ್ಯವನ್ನೂ ತಿಳಿದು ಸಮ್ಮತಿಸಿ ಶ್ರೀಮಹಾವಿಷ್ಣುವು ಕೌಸಲ್ಯಾಗರ್ಭದಲ್ಲಿ ರಾಮನಾಗಿ ಅವತರಿಸಿ ವಿಶ್ವಾಮಿತ್ರನ ಯಾಗವನ್ನು ಕಾಯ್ದು ಶಿವನ ಬಿಲ್ಲನ್ನು ಮುರಿದು ಸೀತೆಯನ್ನು ಮದುವೆಯಾಗಿ ಭಾರ್ಗವರಾಮನನ್ನು ಭಂಗಪಡಿಸಿ ತಂದೆ ಕಳುಹಿಸಿದ ಕಾರಣ ಅರಣ್ಯಕ್ಕೆ ಬಂದು ದುಷ್ಟರಾದ ರಕ್ಕಸರನ್ನು ವಧಿಸಿ ಪಂಚವಟಿಯಲ್ಲಿ ಶೂರ್ಪಣಖಿಯ ಕಿವಿ ಮೂಗುಗಳನ್ನು ಕೊಯಿಸಿ ಖರದೂಷಣ ತ್ರಿಶಿರರನ್ನು ಕೊಂದು ದೇವತೆಗಳನ್ನೂ ಋಷಿಗಳನ್ನೂ ರಕ್ಷಣೆ ಮಾಡುತ್ತಿದ್ದ ರಾಮನನ್ನು ವಂಚಿಸಿ ಅಣ್ಣತಮ್ಮಂದಿರು ಪರ್ಣಶಾಲೆಯೊಳಿಲ್ಲದ ಸಮಯದಲ್ಲಿ ಒಂಟಿಯಾಗಿದ್ದ ಜಾನಕಿಯನ್ನು ತಂದಿರುವೆ ಆತನು ಮಾರೀಚನನ್ನು ಮರ್ದಿಸಿ, ನಿನ್ನನ್ನು ಬಾಲದಿಂದ ಕಟ್ಟಿ ನಾಲ್ಕು ಸಮುದ್ರಗಳಲ್ಲಿಯೂ ಅದ್ದಿದ ಭೀಮಪರಾಕ್ರಮಿಯಾದ ವಾಲಿಯನ್ನು ಒಂದೇ ಬಾಣದಿಂದ ಕೊಂದು ಕಪಿಗಳಿಂದ ಕಡಲಿಗೆ ಸೇತುವೆಯನ್ನು ಕಟ್ಟಿಸಿ ಸಕಲ ಸೇನೆಗಳೊಡನೆ ಸುವೇ ಲಾದ್ರಿಯ ಬಳಿಗೆ ಬಂದು ಇಳಿದಿರುವನು. ವಿಭೀಷಣನ ಮಾತುಗಳನ್ನು ಕೇಳದೆ ಆತನನ್ನು ಕಾಲಿನಿಂದೊದೆದು ಅಟ್ಟಿಬಿಟ್ಟೆ ಈಗ ನಗರದಲ್ಲುಂಟಾದ ದುಶ್ಶಕುನಂಗಳನ್ನು ಅರಿಯದಿರುವೆ ಜಯಾಪಜಯಗಳ ರೀತಿಯನ್ನು ನೀನು ಕಾಣೆ ರಾವಣನೇ ನೀನು ಸುಖವಾಗಿ ರಾಜ್ಯಭಾರಮಾಡುತ್ತಿದ್ದರೆ ನಿನ್ನ ಭಾಗ್ಯ ನನ್ನದಲ್ಲವೇ ಆದುದರಿಂದ ನಿನಗೊಂದು ಹಿತವನ್ನು ಹೇಳುವೆನು ಕೇಳು ರಾಮನಿಗೆ ಸೀತೆಯನ್ನು ಕೊಟ್ಟು ಶರಣು ಹೊಂದು ಆತನು ದಯಾಸಾಗರನು ನಿನ್ನನ್ನು ಕಾಪಾಡುವನು ಎಲ್ಲ ರಕ್ಕಸರನ್ನೂ ಕಾಪಾಡಿಕೊಂಡು ಸುಖವಾಗಿರು. ಹಾಗೆ ಮಾಡದಿದ್ದರೆ ಆತನು ದಂಡೆತ್ತಿ ಬರವನು ಎಂದಳು ಆ ಮಾತುಗಳಿಗೆ ರಾವಣನು ತಾಯಿಯನ್ನು ಕುರಿತು ಎಲೈ ತಾಯಿಯೇ ನೀನೇಕೆ ಭಯದಿಂದಿರುವವನಿಗೆ ಮತ್ತಿಷ್ಟು ಭಯವನ್ನು ಹೆಚ್ಚಿಸುವೆ ನಾನೇತಕ್ಕೆ ಸುರಾಂತಕನಾಗಿ ನರನನ್ನು ಬೇಡಲಿ ರಾಮನು ಬಲಪರಾಕ್ರಮಗಳಲ್ಲಿ ನನಗೆ ಸಮಾನವಾದಾನೋ ಸೀತೆಯನ್ನು ನಾನು ಕೊಡುವೆನೋ ನೀನು ವ್ಯಸನವನ್ನು ಬಿಟ್ಟು ಮನೆಗೆಹೋಗು ಈಗಲೆ ನಾನು ಹೋಗಿ ನರವಾನರರನ್ನು ಜಯಿಸುವೆನು ಎನಲು ಕೈಕಸಿಯು ನಿನ್ನ ವಿಧಿಯು ಹೀಗಿದ್ದರೇ ತಪ್ಪಿಸುವವರಾರು ಎಂದು ದುಃಖಪಟ್ಟುಕೊಂಡು ಅರಮನೆಗೆ ಹೋದಳು.

ತರುವಾಯ ರಾವಣಾಸುರನು ರಕ್ಕಸರನ್ನು ಸಮರಸನ್ನದ್ಧರನ್ನಾಗಿ ಮಾಡಲು ಮಂತ್ರಿಗಳಿಗೆ ಅಪ್ಪಣೆಕೊಟ್ಟು ತಾನೂ ಪ್ರಯಾಣವಾಗಿ ಶುಕಸಾರಣರನ್ನು ಕರೆದು ನೀವು ಹೋಗಿ ವಾನರ ಬಲವನ್ನು ತಿಳಿದುಕೊಂಡು ಬನ್ನಿರೆಂದು ಕಳುಹಲು ಅವರು ವಾನರವೇಷಧಾರಿಗಳಾಗಿ ಕಪಿಬಲವನ್ನು ಹೊಕ್ಕು ರಾಮಲಕ್ಷ್ಮಣರನ್ನು ನೋಡಿ ಎಲ್ಲರ ಬಲವನ್ನು ನೋಡುತ್ತಿರುವಾಗ ವಿಭೀಷಣನು ಅವರನ್ನು ಹಿಡಿದುತಂದು ಶ್ರೀರಾಮನೆದಿರಿಗೆ ನಿಲ್ಲಿಸಿ ಸ್ವಾಮೀ ಇವರು ರಾವಣನ ಮಂತ್ರಿಗಳು ಆತನ ಆಜ್ಞಾನುಸಾರ ಇಲ್ಲಿಗೆ ಬಂದು ಇಲ್ಲಿನ ಮರ್ಮಗಳನ್ನೂ ಬಲಾಬಲಗಳನ್ನು ತಿಳಿದುಕೊಂಡು ಹೋಗಲು ಬಂದಿದ್ದಾರೆ ಎನಲು ಶ್ರೀರಾಮನು ಅವರನ್ನು ಕುರಿತು ನೀವು ಏನೇನು ನೋಡಬೇಕೆಂದು ಬಂದಿದ್ದೀರೋ ಅದನ್ನೆಲ್ಲ ನೋಡಿಕೊಂಡು ಹೋಗಿರೆಂದು ಕಳುಹಲು ಅವರು ಎಲ್ಲಕಡೆಯೂ ನೋಡಿಕೊಂಡು ರಾವಣನ ಸಮೀಪಕ್ಕೆ ಹೋಗಿ ಅಯ್ಯೋ! ಸೀತೆಯನ್ನೇಕೆ ತಂದೆ ಅವರು ಮಹಾಶೂರರು ಅವರೊಡನೆ ವೃಥಾ ವೈರವನ್ನೇಕೆ ಮಾಡಿಕೊಂಡೆ ನಾವು ನಿಮ್ಮ ಅಪ್ಪಣೆಯಪ್ರಕಾರ ಅಲ್ಲಿಗೆ ಹೋಗಿ ನೋಡುತ್ತಿರಲು ನಮ್ಮನ್ನು ವಿಭೀಷಣನು ಹಿಡಿದು

ರಾಮನೆದುರಿಗೆ ಬಿಟ್ಟನು ಮಹಾ ದಯಾಳುವಾದ ಆ ಶ್ರೀರಾಮನು ನಮ್ಮನ್ನು ಕರುಣಿಸಿ ನೋಡಿಕೊಂಡು ಹೋಗಿ ಎಂದು ಅಪ್ಪಣೆಕೊಟ್ಟನು ನಾವು ಎಲ್ಲವನ್ನು ನೋಡಿಕೊಂಡು ಬಂದೆವು. ಆ ಕಪಿಬಲವನ್ನು ಲೆಕ್ಕಿಸಲು ಆದಿಶೇಷನಿಗೂ ಅಸಾಧ್ಯವಾಗಿದೆ ಸುಗ್ರೀವಾಂಗದ ಹನುಮತ್ಸು ಷೇಣ ನಳನೀಲ ಜಾಂಬವ ಪ್ರಮುಖರು ವಾಲಿಗಿಂತಲೂ ಬಲಾಧಿಕರು ಯುದ್ಧವೆಂದರೆ ಮಹಾ ಸಂತೋಷಪಡುವರು ಎನಲು ರಾವಣನು ನಕ್ಕು ತಾನು ಆ ಕಪಿಬಲವನ್ನು ನೋಡೋಣವೆಂದು ಹೊರಟನು.

## ರಾವಣನು ರಾಮನ ಸೈನ್ಯವನ್ನು ನೋಡಿದುದು.

ರಾವಣಾಸುರನು ಶುಕಸಾರಣರನ್ನು ಕರೆದುಕೊಂಡು ಉತ್ತರದಿಕ್ಕಿನ ಗೋಪುರದಮೇಲೆ ಹತ್ತಿ ಕುಳಿತುಕೊಂಡು ಶುಕಸಾರಣರನ್ನು ಕುರಿತು ಎಲೈ ಮಂತ್ರಿಗಳಿರಾ ನೀವು ಎಲ್ಲರನ್ನೂ ತಿಳಿ





ದವರಲ್ಲವೇ ಒಬ್ಬೊಬ್ಬರನ್ನಾಗಿ ತೋರಿಸಿ ಎನಲು ಅವರು ಎಲೈ ರಕ್ಕಸರೊಡೆಯನೇ ಆಗೋ ಮುಂದುಗಡೆಯಲ್ಲಿ ಲಕ್ಷಕಪಿಗ ಳೊಡನೆ ಕೂಡಿ ನಾನೋರ್ವನೇ ಲಂಕೆ ಯನ್ನು ಕಿತ್ತು ತರಲೇ ಎಂದು ಹೇಳುತ್ತಿ ರುವವನೇ ವಾಲಿಯ ತಮ್ಮನಾದ ಸುಗ್ರೀ ವನು ಕಪಿಸೇನಾನಾಯಕನಾದ ನೀಲನು ಶತೋತ್ತರ ಸಹಸ್ರ ಪದ್ಮಗಳ ಸಂಖ್ಯೆ ಯುಳ್ಳ ಸೇನೆಯೊಡನೆ ಪ್ರಕಾಶಿಸು ವವನು ವಾಲಿಪುತ್ರನಾದ ಅಂಗ ದನು ಸಾವಿರಕೋಟಿ ಕಪಿಗಳ ಒಡೆಯನು ನಳನು ಸೇತುವೆಯನ್ನು ಕಟ್ಟಿದ ಮಹಾ ಶೂರನು ಅಂಗದನ ಹಿಂದುಗಡೆಯಲ್ಲಿ ಹತ್ತು ಕೋಟಿ ಕಪಿಗಳ ಸೈನ್ಯದೊಡನೆ ನಿಂತಿರುವನು ಸುಲಭನು ಅವ ನಿಗೆದುರಾಗಿ ಸಾವಿರಕೋಟಿ ಕಪಿಸೈನ್ಯದೊಡನೆ ಕೂಡಿರುವವನು ಸುವೇಗನು, ನೂರಮೂವತ್ತು ಕೋಟಿ ವಾನರ ಸೈನ್ಯದೊಡನೆ ಹೊಳೆಯುವವನು ಕುಮುದನು ನಾಲ್ಕು ಪದ್ಮ ಸಂಖ್ಯೆಯುಳ್ಳ ಕಪಿಬಲಯುತನು ಪನಸನು ಅವನಿಗೆ ಸಮಾನವಾದವರು ಗವಯ ಗವಾಕ್ಷರು ಕೋಟಿಸೈನ್ಯದೊ ಡನೆ ಕೂಡಿದವರು ಆಂಜನೇಯನು ಇವನೇ ಈ ಲಂಕೆಯನ್ನು ಸುಟ್ಟವನು ಅಸಂಖ್ಯಾತವಾದ ವಾನರವೀರರಿಂದ ಸೇವಿಸಲ್ಪಡುತ್ತ ದೇದೀಪ್ಯಮಾನವಾಗಿರುವವನು ವಾಲಿಯ ತಮ್ಮನಾದ ಸುಗ್ರೀವನು ಕಿಷ್ಕಿಂಧಾಪತಿಯು ಮರಕತಶ್ಯಾಮಲವರ್ಣದಿಂದ ಪ್ರಕಾಶಿಸುತ್ತಿರುವವನು ಶ್ರೀರಾ ಮಚಂದ್ರನು ಅವನ ಪಕ್ಕದಲ್ಲಿ ನೀಲಮೇಘ ವರ್ಣದಿಂದ ಹೊಳೆಯುವವನು ಆತನ ತಮ್ಮನಾದ ಲಕ್ಷ್ಮಣನು ಸುವರ್ಣಕಾಂತಿಯಿಂದ ಕೂಡಿ ಶ್ರೀರಾಮನ ಸಮೀಪದಲ್ಲಿ ಗದಾಧಾರಿಯಾಗಿ ನಿಂತಿರುವನು ನಿನ್ನ ತಮ್ಮನಾದ ವಿಭೀಷಣನು ಎಂದು ಆ ಬಲದಲ್ಲಿರುವವರೆಲ್ಲರನ್ನೂ ವಿವರಿಸಿ ದುದನ್ನು ಕೇಳಿ ರಾವಣನು ಭೀತಿಯನ್ನು ತಾಳಿ ವಿದ್ಯುಜ್ಜಿಹ್ವನನ್ನು ಕರೆದು ರಾಮನ ಬಿಲ್ಲಿನಂಥಾ ಬಿಲ್ಲನ್ನೂ ಅವನ ತಲೆಯಂಥಾ ತಲೆಯನ್ನೂ ಮಾಡಿ ತೆಗೆದುಕೊಂಡು ಸೀತೆಯ ಬಳಿಗೆ ಹೋಗಿ ಆಕೆಯ ಮುಂದೆ ಹಾಕಿ ರಾಮನಗತಿ ಹೀಗಾಯಿತೆಂದು ಹೇಳು ಎಂದು ಆಜ್ಞಾಪಿಸಲು ಅವನು ಆದೇಮೇರೆಗೆ ಮಾಡಿಕೊಂಡು ಹೋಗಿ ಸೀತೆಯ ಎದುರಿಗೆ ಹಾಕಿ ರಾಮನಗತಿ ಹೀಗಾಯಿತೆನಲು ಸೀತೆ ನೋಡಿ ನೈಪುರೆತು ಸ್ವಲ್ಪಹೊತ್ತಿನಮೇಲೆ ಚೇತರಿಸಿಕೊಂಡೆದ್ದು ದುಃಖಿಸುತ್ತಿರಲು

ಚಾರರು ಓಡಿಬಂದು ರಾವಣನನ್ನು ಕುರಿತು ರಾಕ್ಷಸೇಂದ್ರನೇ ವಾನರರು ಲಂಕೆಯ ಕೋಟೆಗೆ ಲಗ್ಗೆಹತ್ತಿದರು ಅದನ್ನು ನೋಡಿ ಮಂತ್ರಿಗಳು ನಿಮ್ಮಬರುವಿಕೆಯನ್ನು ಎದುರುನೋಡುತ್ತಿದ್ದಾರೆನಲು, ರಾವಣನು ರಾಕ್ಷಸಬಲವನ್ನು ಬರಮಾಡಿ, ಭೇರೀವಾದ್ಯಗಳು ಮೊರೆಯುತ್ತಿರಲು, ರಾಕ್ಷಸರ ಆರ್ಭಟಗಳು ಅತಿಶಯಿಸಿ ಅಲ್ಲೋಲಕಲ್ಲೋಲವಾಗಿರಲು ವಿಭೀಷನ ಹೆಂಡತಿ ಸರಮೆ ಯೆಂಬುವಳು ಸೀತೆಯಬಳಿಗೆ ಬಂದು ಆಕೆಯನ್ನು ನೋಡಿ, ಅಮ್ಮಾ ಇದು ರಾಕ್ಷಸರ ಮಾಯವೇಹೊರತು ನಿಜವಲ್ಲ ಇದಕ್ಕಾಗಿ ನೀನು ಚಿಂತಿಸಬೇಡ ಶ್ರೀರಾಮ ಲಕ್ಷ್ಮಣರು ಕಪಿಬಲದೊಡನೆ ಲಂಕೆಗೆ ಮುತ್ತಿಗೆ ಹಾಕಿ ಲಗ್ಗೆ ಹತ್ತುತ್ತಾ ಇದ್ದಾರೆ ರಾಕ್ಷಸರು ಯುದ್ಧಸನ್ನದ್ಧರಾಗುತಿದಾರೆ ಎನಲು, ಸೀತಾದೇವಿಯು ಸಮಾಧಾನಗೊಂಡು ಸಂತೋಷದಿಂದ ಇದ್ದಳು ಆಗ ರಾವಣನು ಆಸ್ಥಾನದೊಳು ಕುಳಿತು ಮಂತ್ರಿಪ್ರಧಾನರನ್ನು ಬರಮಾಡಿಕೊಂಡು ಈಗ ಮಾಡತಕ್ಕ ಕಾರ್ಯವೇನೆಂದು ಕೇಳಲು, ಮಾಲ್ಯವಂತನು ಎಲೈ ರಾವಣನೇ ನೀನು ಮೊದಲು ತಪಸ್ಸುಮಾಡಿ ಬ್ರಹ್ಮನಿಂದ ವರಗಳನ್ನು ಬೇಡಿದಾಗ ದೇವದಾನವ, ಗಂಧರ್ವ, ಸಿದ್ಧಸಾಧ್ಯ, ವಿದ್ಯಾಧರ, ಯಕ್ಷರಕ್ಷೋಗಣಗಳಿಂದ ಸಾವಿಲ್ಲದಂತೆ ವರವನ್ನು ಬೇಡಿಕೊಂಡೆಯಲ್ಲದೆ ನರವಾನರ ಭಲ್ಲೂಕಾದಿಗಳಿಂದ ಸಾವಿಲ್ಲದಂತೆ ವರವನ್ನು ಬೇಡಿಕೊಳ್ಳಲಿಲ್ಲ ಆದುದರಿಂದ ಆಗ ಶ್ರೀಮನ್ನಾರಾಯಣನು ಈಶ್ವರಾದಿ ಸಕಲ ದೇವಾಂಶಗಳೊಡನೆ ದಶರಥಮಹಾರಾಜನ ಗರ್ಭದಲ್ಲಿ ರಾಮನಾಗಿ ಅವತರಿಸಿದನು. ದೇವತೆಗಳು ವಾನರಭಲ್ಲೂಕಗಳಾಗಿ ಹುಟ್ಟಿದರು ಅವರನ್ನು ನೀನು ಜಯಿಸಲು ನಿನ್ನಿಂದಾಗಲಾರದು ಈಗ ನೀನು ಸೀತೆಯನ್ನು ರಾಮನಿಗೆ ಸಮರ್ಪಿಸಿ ಅವನನ್ನು ಶರಣುಹೊಂದಿ ಕ್ಷೇಮವಾಗಿರು ಎಂದನು. ಅದಕ್ಕೆ ಒಪ್ಪದೆ ರಾವಣನು ಪ್ರಹಸ್ತನನ್ನು ಕರೆದು, ಎಲೈ ಊರುಬಾಗಿಲುಗಳಿಗೆಲ್ಲಾ ಲಾಳಮುಂಡಿಗೆಗಳನ್ನು ಹಾಕಿಸಿ ಅಲ್ಲಿ ರಕ್ಕಸರನ್ನು ಕಾವಲಿಟ್ಟು ಭದ್ರಪಡಿಸೆಂದು ಹೇಳಲು ಆತನು ಹಾಗೆಯೇ ಮಾಡಿದನು, ಇತ್ತ ಶ್ರೀರಾಮನು ಸುಗ್ರೀವ ವಿಭೀಷಣಾದಿಗಳೊಡನೆ ಲಂಕಾಪಟ್ಟಣವನ್ನು ನೋಡಬೇಕೆಂದು ಸುವೇಲಾದ್ರಿಯನ್ನೇರಿ ಪರೀಕ್ಷಿಸುತ್ತ ಆಶ್ಚರ್ಯಪಟ್ಟು ರಾವಣನು ವೃಥಾ ವೈರವನ್ನು ಬೆಳೆಸಿದನು ಎಂದೆನುತ್ತಿರಲು ರಾಕ್ಷಸರ ಅಲ್ಲೋಲಕಲ್ಲೋಲವಾದ ಮಹಾಧ್ವನಿಯನ್ನು ಕೇಳಿ ಅದೇನೋ ನೋಡೋಣವೆಂದು ಒಂದು ದೊಡ್ಡ ಗೋಪುರದಮೇಲೇರಿ, ಅಲ್ಲಿ ಅನೇಕ ರಾಕ್ಷಸರು ತನ್ನನ್ನು ಸೇವಿಸುತ್ತಿರಲು ಹತ್ತು ಕಿರೀಟಗಳು ಕೋಟಿಸೂರ್ಯ ಪ್ರಕಾಶಮಾನವಾಗಿ ಹೊಳೆಯುತ್ತಿರಲು, ಛತ್ರಛಾಮರಂಗಳು ಮೆರೆಯುತ್ತಿರಲು ರಾವಣನು ಓಲಗದಲ್ಲಿ ಇರುತ್ತಿರುವಾಗ ಶ್ರೀರಾಮಚಂದ್ರನು ಅವನನ್ನು ನೋಡಿ ವಿಭೀಷಣನನ್ನು ಕುರಿತು ಇಷ್ಟು ವೈಭವದೊಡನೆ ಗೋಪುರದಮೇಲಿರುವವನು ಯಾರು ಎಂದು ಕೇಳಲು ವಿಭೀಷಣನು ಸ್ವಾಮಿ? ಈತನೇ ನಮ್ಮಣ್ಣನಾದ ರಾವಣನು ಎಂದನು.

## ರಾವಣ ಸುಗ್ರೀವರ ಯುದ್ಧ.

ಆ ಮಾತನ್ನು ಕೇಳಿ ಸುಗ್ರೀವನು ಸ್ವಾಮಿಯಾದ ರಾಮಚಂದ್ರನೆದುರಿಗೆ ಭಯವಿಲ್ಲದೆ ತನ್ನ ಡಂಭವನ್ನು ತೋರಿಸುವದಕ್ಕೆ ಬಂದ ಈ ರಾವಣನು ಎಷ್ಟರವನೆಂದು ರೋಷಾವೇಶದಿಂದ ಆಕಾಶಕ್ಕೆ ಹಾರಿಹೋಗಿ ಆ ರಾವಣನ ಮೇಲೆ ಬಿದ್ದು ಎಲವೋ ಖಳನೇ ನಾನು ಸುಗ್ರೀವನು, ಶ್ರೀರಾಮನ ಭಂಟನು ವಾಲಿಯ ತಮ್ಮನು ಎಂದು ರಾವಣನ ಹತ್ತು ಕಿರೀಟಗಳೂ ಕೆಳಕ್ಕುರುಳುವಂತೆ ಹೊಡೆದುರುಳಿಸಲು ರಾವಣನು ಹಿಂತಿರುಗಿ ಸುಗ್ರೀವನನ್ನು ಹೊಡೆಯಲು ಸುಗ್ರೀವನು ಮೇಲಕ್ಕೆ ಹಾರಿ ಮಹಾಕೋಪದಿಂದ ಪುನಃ ರಾವಣನನ್ನು ಹೊಡೆದನು. ಹೀಗೆ ಸ್ವಲ್ಪಹೊತ್ತು ಈರ್ವರೂ ಮಲ್ಲಯುದ್ಧವನ್ನು ಮಾಡುತ್ತಿರಲು, ಸುಗ್ರೀವನು ಹಾರಿ ರಾವಣನನ್ನು ತೀಕ್ಷ್ಣವಾದ ಉಗುರುಗಳಿಂದ ಪರಚಿ ಮೈಯಲ್ಲಿ ರಕ್ತಪ್ರವಾಹ ಹರಿಯುವಂತೆ ಮಾಡಿ ಅವನನ್ನು ಹೊಡೆದ

ಕೆಳಕ್ಕೆ ಉರುಳಿಸಿ ಹಾರಿಬಂದು ಶ್ರೀರಾಮರಿಗೆ ನಮಸ್ಕಾರ ಮಾಡಿ ನಿಂತಿರಲು, ಶ್ರೀರಾಮನು ಸುಗ್ರೀವನನ್ನು ಕುರಿತು ಎಲೈ ಸಖನೇ ನೀನು ಮಹಾಬಲಪರಾಕ್ರಮವುಳ್ಳವನು, ಈಗ ನೀನು ಮಾಡಿದ ಯುದ್ಧವು ಆನಂದಕರವಾಗಿದ್ದಿತು. ಆದರೂ ನೀನು ಹೀಗೆ ಒಂಟಿಯಾಗಿ ಹೋಗಿ ಸಾಹಸವನ್ನು ಮಾಡಬಹುದೇ ಇನ್ನುಮೇಲೆ ಹೀಗೆ ಒಬ್ಬನೇ ಹೋಗಬೇಡವೆಂದು ಹೇಳಿದನು. ಹೀಗೆ ಮಾತನಾಡಿಕೊಳ್ಳುತ್ತಾ ಆ ರಾತ್ರಿ ಸುವೇಲಾದ್ರಿಯಲ್ಲಿಯೇ ಇದ್ದರು. ಮಾರನೆಯ ದಿನ ಬೆಳಿಗ್ಗೆ ಅರುಣೋದಯ ಕಾಲದಲ್ಲೆದ್ದು ಸ್ನಾನ ಸಂಧ್ಯಾದಿ ಕಾಲಕರ್ಮಗಳನ್ನು ನೆರವೇರಿಸಿಕೊಂಡು ಲಂಕಾಪಟ್ಟಣದ ಉತ್ತರದ್ವಾರವನ್ನು ಸೇರಿ ಮೈಂದ ದ್ವಿವಿದ





ನೀಲ ಮೊದಲಾದ ಅನೇಕ ಕಪಿನಾಯಕರು ತಮ್ಮತಮ್ಮ ಕಪಿಸೈನ್ಯದೊಡನೆ ಪೂರ್ವದ್ವಾರದಲ್ಲಿಯೂ ಗಜ ಗವಯ ಗವಾಕ್ಷ ಗಂಧಮಾದನಾದಿ ಅಪಾರ ಬಲಗಳೊಡನೆ ಅಂಗದನು ದಕ್ಷಿಣದ್ವಾರದಲ್ಲಿಯೂ ಪ್ರಸಭಸುಷೇಣ ಮೊದಲಾದವರೊಡನೆ ಆಂಜನೇಯನು ಪಶ್ಚಿಮದಿಕ್ಕಿನ ಬಾಗಲಲ್ಲಿಯೂ, ಸುಗ್ರೀವನು ಅನೇಕ ಸೈನ್ಯದೊಡನೆ ರಾಮನಿಗೆ ಪಶ್ಚಿಮಕಡೆಯಲ್ಲಿಯೂ, ಮಹಾಬಲಶಾಲಿಗಳಾದ ಭಲ್ಲೂಕಗಳೊಡನೆ ಜಾಂಬವಂತನು ರಾಮನಿಗೆ ಪೂರ್ವದಿಕ್ಕಿನಲ್ಲಿಯೂ ನಿಂತಿರಲು ಸುಗ್ರೀವ ಜಾಂಬವಂತರ ನಡುವೆ ಶ್ರೀರಾಮನು ತನ್ನೊಡನೆ ಬರುವ ಲಕ್ಷ್ಮಣನನ್ನು ಕುರಿತು ಎಲೈ ಲಕ್ಷ್ಮಣನೇ! ನೀನೂ ವಿಭೀಷಣನೂ ನಳನೂ ಪದಾತಿಗಳೊಡನೆಕೂಡಿ ಧನುರ್ಬಾಣಂಗಳನ್ನು ಧರಿಸಿ ವಾನರ ಸೈನ್ಯವೆಲ್ಲವನ್ನೂ ಭದ್ರವಾಗಿ ಕಾದಿರಿಯೆಂದು ಅಪ್ಪಣೆಕೊಡಲು, ಅವರು ಹಾಗೆಯೇ ಮಾಡಿದರು. ವಾನರರು ಹಿಂದೇ ಸ್ಥಳದಲ್ಲಿ ಎಲ್ಲರೂ ಕೂಡಿ ಅಟ್ಟಹಾಸ ಮಾಡಲು ಲಂಕೆಯೊಳಗಿದ್ದ ರಾಕ್ಷಸರು ಅದನ್ನು ಕೇಳಿ ಬಹಳ ಭಯಪಟ್ಟು ದಿಕ್ಕುತೋರದೆ ಸುಮ್ಮನಿದ್ದರು.

## ಅಂಗದನ ರಾಯಬಾರ.



ಇತ್ತ ಶ್ರೀರಾಮನು ಸುಗ್ರೀವ ವಿಭೀಷಣರನ್ನು ಕರೆದು ಆಲೋಚಿಸಿ ಅಂಗದನನ್ನು ಕರೆಯಿಸಿ ಅವನನ್ನು ಕುರಿತು ನೀನು ಲಂಕೆಗೆಹೋಗಿ ರಾವಣನನ್ನು ನೋಡಿ ಸೀತೆಯನ್ನು ಶ್ರೀರಾಮನಿಗಿತ್ತು ಲಂಕೆಯನ್ನು ವಿಭೀಷಣನಿಗೆ ಕೊಟ್ಟು ಪ್ರಾಣಗಳನ್ನು ರಕ್ಷಿಸಿಕೊಳ್ಳೆಂದು ಹೇಳಿಬಾಯೆನಲು, ಅವನು ಮಹಾ ಪ್ರಸಾದವೆಂದು ಶ್ರೀರಾಮನಿಗೆ ನಮಸ್ಕಾರ ಮಾಡಿ ಅಪ್ಪಣೆ ಪಡೆದು

ಕೊಂಡು ಲಂಕೆಗೆ ಹಾರಿಹೋಗಿ ಓಲಗದಲ್ಲಿ ಕುಳಿತಿರುವ ರಾವಣನೆದುರಿಗೆ ನಿಂತಿರಲು ಆ ಕಪಿಯನ್ನು ನೋಡಿ ರಾವಣನು ಆಗ ರಕ್ಕಸರನ್ನು ಬೆದರಿಸಿ ಲಂಕೆಯನ್ನೂ ಸುಟ್ಟು ಅಕ್ಷಯ ಕುಮಾರಾದಿಗಳನ್ನು ಕೊಂದುಹೋದ ಹನುಮಂತನು ಮತ್ತೆ ಏಕೆ ಬಂದನೋ ಎಂದು ಚಿಂತಿಸುತ್ತಾ ಇರಲು ರಾಕ್ಷಸರು ಆ ಕಪಿಯನ್ನು ನೋಡಿ ಭಯಪಟ್ಟು ದಿಕ್ಕುದಿಕ್ಕುಗಳಿಗೆ ಓಡಿ ಹೋಗುತ್ತಿರುವದನ್ನು ಕಂಡು ರಾವಣನು ಅಂಗದನನ್ನು ಕುರಿತು, ಎಲೈ ವಾನರನೇ ನೀನು ಯಾರು ನಿನ್ನ ಹೆಸರೇನು ಎಂದು ಕೇಳಿದನು ಅಂಗದನು ರಾವಣನನ್ನು ಕುರಿತು ಎಲೈ ರಾವಣನೆ! ನಿನ್ನ ಊರು ಕೇರಿಗಳನ್ನು ತಿಳಿಸುವುದಕ್ಕೆ ಮುಂಚೆ ನಾನೇಕೆ ನನ್ನ ಪ್ರವರವನ್ನು ಹೇಳಲಿ ರಾವಣರು ಬಹುಮಂದಿ ಇರುವರು ಹೇಗೆಂದರೆ ನನ್ನ ತಂದೆಯಾದ ವಾಲಿಯು ತನ್ನ ಬಾಲದಿಂದ ಸುತ್ತಿ ನಾಲ್ಕು ಸಮುದ್ರಗಳಲ್ಲಿಯೂ ಅದ್ದಲು ಮುಣುಗಿದ ರಾವಣನು ಒಬ್ಬನು, ಕಾರ್ತವೀರ್ಯಾರ್ಜುನನಿಂದ ಹಿಡಿಯಲ್ಪಟ್ಟು ಹನ್ನೆರಡುವರುಷ ಕಾರಾಗೃಹದಲ್ಲಿಡಲ್ಪಟ್ಟಿದ್ದ ರಾವಣನು ಒಬ್ಬನು, ಶ್ವೇತದ್ವೀಪದ ಸ್ತ್ರೀಯರು ಹತ್ತುತಲೆ ಹುಳವೆಂದು ಕೈಯಲ್ಲಿ ಹಿಡಿದಿರುವಾಗ ಅವರ ಕೈಗಳನ್ನು ಕಚ್ಚಿದ್ದರಿಂದ ಅವರು ಆ ಹುಳುವನ್ನು ಬಿಸಾಡಲು ಓಡಿಬಂದ ರಾವಣನು ಒಬ್ಬನು, ನಮ್ಮೊಡೆಯರಾದ ರಾಮಲಕ್ಷ್ಮಣರಿಲ್ಲದ ಕಾಲದಲ್ಲಿ ಸೀತೆಯನ್ನು ಕದ್ದುತಂದ ಕಳ್ಳರಾವಣನೊಬ್ಬನು ಈ ನಾಲ್ವರಲ್ಲಿ ನೀನು ಯಾರು ನೀನೇ ರಾಮದ್ರೋಹಿಯಾಗಿರಬಹುದು ಎಲವೋ ದುರಾತ್ಮನೆ ನಾನು ಶ್ರೀರಾಮನ ದೂತನು, ವಾಲಿಯ ಕುಮಾರನು ನನ್ನ ಹೆಸರು ಅಂಗದನು, ನೀನು ಸೀತೆಯನ್ನು ತಂದ ರಾವಣನಾದರೆ ನಾನು ಹೇಳುವ ನೀತಿಯನ್ನು ಕೇಳಿ ಜೀವಿಸು ಸೀತಾದೇವಿಯನ್ನು ಶ್ರೀರಾಮಚಂದ್ರನಿಗೆ ಒಪ್ಪಿಸಿ ಲಂಕೆಯನ್ನು ವಿಭೀಷಣನಿಗೆ ಕೊಟ್ಟು ಶ್ರೀರಾಮನನ್ನು ಶರಣುಹೊಂದಿದರೆ ಬದುಕಿ ಸುಖವಾಗಿರುವೆ, ಹಾಗಲ್ಲದೆ ದುರ್ಮದದಿಂದ ಯುದ್ಧಮಾಡುವದಾದರೆ ನಿನಗೆ ಸಾವು ತಪ್ಪದು ಅಪಜಯ ಹೊರತು ಜಯವು ಸ್ವಪ್ನದಲ್ಲಿಯೂ ಉಂಟಾಗಲಾರದು ಎನಲು, ರಾವಣನು ಭೀತಿಗೊಂಡು ಭಯವನ್ನು ತಾಳಿ ಹಿಂತಿರುಗಿ ಲಂಕೆಗೆ ಓಡಿಹೋದನು. ಹೀಗಿರುವಾಗ ಇಂದ್ರಜಿತುವು ಕ್ರುದ್ಧನಾಗಿ ಯಾಗಮಾಡಲೆಳಸಿ ಸ್ನಾನಸಂಧ್ಯಾದ್ಯನುಷ್ಠಾನಂಗಳಂ ತೀರಿಸಿಕೊಂಡು ಹೋಮಗುಂಡದ ಬಳಿಗೆಬಂದು ರಕ್ತವಸ್ತ್ರಮಾಲ್ಯಾದಿಗಳನ್ನು ಧರಿಸಿಕೊಂಡು ತಾರೆಯ ಸಮಿತ್ತುಗಳನ್ನು ಕರಿಯಗಂಡಾಡಿನ ರಕ್ತದೊಳು ಅದ್ದಿ, ಹೋಮಮಾಡುತ್ತಿರಲು ಯಜ್ಞಪುರುಷನು ಮೆಚ್ಚಿ ನಾಲ್ಕು ಕುದುರೆಗಳನ್ನು ಒಂದು ದಿವ್ಯವಾದ ರಥವನ್ನು ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ಕೊಟ್ಟನು. ಆಗ ಇಂದ್ರಜಿತುವು ಅಂಗದನನ್ನು ಹಿಡಿದು ಹೊಡೆಯಿರಿ ಎಂದು ಹೇಳಲು ರಾಕ್ಷಸಭಟರು ಮುತ್ತಿಕೊಂಡು ಹಿಡಿಯಲು, ಅಂಗದನು ಮೇಲಕ್ಕೆ ಹಾರಿ ಮೈಯನ್ನು ಕೊಡಹಲು ರಕ್ಕಸರೆಲ್ಲರೂ ಸತ್ತು ಕೆಳಕ್ಕೆ ಬಿದ್ದು ತುಮುರು ತುಮರಾಗಿ ಹೋದರು. ರಾವಣನ ಕುಮಾರನು ಧನುರ್ಬಾಣಗಳನ್ನು ತೆಗದುಕೊಂಡು ಐದು ಬಾಣಗಳಿಂದ ಅಂಗದನನ್ನು ಹೊಡೆಯಲು ಅವನು ರಾವಣಿಯನ್ನು ಮುಷ್ಟಿಪ್ರಹಾರಗಳಿಂದ ಬಹಳವಾಗಿ ನೋಯಿಸಿ ಅವನ ಸೈನ್ಯವೆಲ್ಲವನ್ನು ಸಾಯಬಡಿದನು. ಸೈನ್ಯವು ಚೆದರಿ ಓಡಿಹೋಯಿತು, ಆಗ ಅಂಗದನು ದಶಕಂಠನ ಹತ್ತು ಕಿರೀಟಗಳನ್ನೂ ಕಾಲಿನಿಂದೊದೆದು ಕೆಳಕ್ಕೆ ಕೆಡಹಿ ಉಪ್ಪರಿಗೆಯನ್ನೂ ಕಾಲಿನಿಂದೊದೆದು ಅವನ ಮೇಲೆ ಕೆಡಹಿ ಆಕಾಶಕ್ಕೆ ಹಾರಿ ಶ್ರೀರಾಮನ ಸನ್ನಿಧಾನವನ್ನು ಸೇರಿ ಸಾಷ್ಟಾಂಗ ಪ್ರಣಾಮಮಾಡಿ ತಾನು ಲಂಕೆಗೆ ಹೋಗಿ ಬಂದ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಲು ಶ್ರೀರಾಮನು ಕೇಳಿ ಸಂತೋಷಪಟ್ಟನು. ಅತ್ತಲಾ ರಾಕ್ಷಸರೆಲ್ಲರೂ ಬಂದು ರಾವಣನನ್ನು ನೋಡಿ ಒಡೆಯನೇ ವಾನರರು ಲಂಕೆಯ ಸುತ್ತಲೂ ಮುತ್ತಿಗೆಹಾಕಿದರು ನಾವಿನ್ನು ಸುಮ್ಮನಿರಬಾರದು. ನಮಗೆ ಅಪ್ಪಣೆಯನ್ನು ಕೊಟ್ಟರೆ ಹೋಗಿ

ರಾಮಲಕ್ಷ್ಮಣ ಸುಗ್ರೀವಾದಿಗಳನ್ನು ಸಂಹರಿಸಿ ಬರುವೆವೆನಲು, ರಾವಣನು ಸುಮ್ಮನಿದ್ದನು. ಇತ್ತ ಶ್ರೀರಾಮನು ನಾವಿಲ್ಲಿಗೆ ಬಂದು ಏಕೆ ಸುಮ್ಮನಿರಬೇಕು ಲಗ್ಗೆಹತ್ತಿ ಎನಲು, ಎಪ್ಪತ್ತೆರಡು ಸಾವಿರ ವಾನರರು ಬೆಟ್ಟಗಳನ್ನೂ ವೃಕ್ಷಗಳನ್ನೂ ತಂದು ಕಂದಕವನ್ನು ಮುಚ್ಚಿ ವೀರಬಾಹು, ಸುಬಾಹುವೆಂಬುವರು ಐದುಕೋಟಿ ರಾಕ್ಷಸಬಲದೊಡನೆ ಯುದ್ಧಸನ್ನದ್ಧರಾಗಿರುವುದನ್ನು ತಿಳಿದು ಕೋಟೆಯಸುತ್ತಲೂ ಮುತ್ತಿಗೆಹಾಕಿರುವ ವೀರವಾನರರೂ ಸುಗ್ರೀವಾಂಗದ ನಳನೀಲಾದಿಗಳೂ ರಾಮಲಕ್ಷ್ಮಣರೂ ವಿಭೀಷಣನೂ ಬರಲೆಂದು ವಾನರರು ಒಬ್ಬರಮೇಲೊಬ್ಬರು ಹತ್ತಿಕೊಂಡು ಅಟ್ಟಹಾಸಮಾಡುತ್ತಾ ಕೋಟೆಯಲ್ಲಿ ಬೀಳುವಂತೆ ಕೋಟೆಯತೆನೆಗಳನ್ನು ಮುರಿಯುತ್ತಾ ಉಪ್ಪರಿಗೆಗಳನ್ನೆಲ್ಲಾ ನೆಲಕ್ಕೆ ಕೆಡಹಿ ಪಾಷಾಣಾದಿಗಳಿಂದ ರಾಕ್ಷಸರನ್ನು ಸದೆಬಡಿಯುತ್ತಾ ಆರ್ಭಟಿಸುತ್ತಿರಲು, ರಾಕ್ಷಸರು ಆ ವಾನರರ ಆರ್ಭಟವನ್ನು ಕೇಳಿ ಕೋಪಗೊಂಡು ಖಡ್ಗ ತ್ರಿಶೂಲ ತೋಮರ ಮುದ್ಗರ ಮುಸಲ ಭಿಂಡಿವಾಲಗಳ ಜಾಡೆಯನ್ನು ಕೇಳಿ ಇಂದ್ರಜಿತ್ತುವೆಂದರಿತು ಆಕಾಶಕ್ಕೆ ಹಾರಿ ಅವನನ್ನು ಒದೆಯಲು ಅವನು ಮಾಯೆಯಿಂದ ರಥವನ್ನು ಬಿಟ್ಟು ಆಚೆಗೆಹೋದನು ಆ ಪೆಟ್ಟಿಗೆ ಅವನ ರಥವು ಕೆಳಕ್ಕೆಬಿದ್ದು ನುಚ್ಚುನುಚ್ಚಾಗಿ ಹೋಯಿತು ಆಗ ಖಳನು ಮತ್ತೊಂದು ರಥವನ್ನೇರಿ ಶ್ರೀರಾಮಲಕ್ಷ್ಮಣರಮೇಲೆ ಬಾಣಗಳನ್ನು ಕರೆಯುತ್ತಿರಲು ಶ್ರೀರಾಮನು ಕಂಡು ನಾಲ್ಕು ದಿವ್ಯಾಸ್ತ್ರಗಳನ್ನು ಹೂಡಿ ಅವನ ಬಾಣಗಳನ್ನು ಅರ್ಧ ದಾರಿಯಲ್ಲಿಯೇ ಇಕ್ಕಡಿಗೈದು ಅವನ ರಥಾಶ್ವ ಸಾರಥಿ ಪದಾತಿಗಳನ್ನು ಮುರಿದು ಗದೆ ಕುಂತ ಪರಶು ಪಟ್ಟಿಸ ಪ್ರಾಸ ಮುಂತಾದ ಆಯುಧಗಳನ್ನು ತೆಗೆದುಕೊಂಡು ಬಂದು ಕಪಿಗಳನ್ನು ನೋಯಿಸಲು ಅವರು ನಿಲ್ಲಲಾರದೆ ಚೆದರಿದುದನ್ನು ಕಂಡು ರಾಕ್ಷಸರು ಕೊಬ್ಬಿ ಭೇರೀಭಾಂಕಾದಿ ವಾದ್ಯಗಳ ಶಬ್ದವು ದಿಕ್ಕುಗಳಲ್ಲಿ ವ್ಯಾಪಿಸಲು, ಗಜತುರಗ ರಥ ಪದಾತಿಗಳು ಅಸಂಖ್ಯಾತಗಳಾಗಿ ನಡೆಯಲು ಹೊರಟು ಎದುರಿಸಿನಿಂತ ಉಭಯ ಸೈನಿಕರಿಗೂ ಬಾಹಾಬಾಹಿ ಕೇಶಾಕೇಶಿ ಯುದ್ಧವಾಯಿತು ಆಗ ಪ್ರಹಸ್ತನು ವಿಭೀಷಣನಮೇಲೆ ಬಿದ್ದು ಶರವರ್ಷವನ್ನು ಸುರಿಸಿ ವಿಭೀಷಣನ ಮೈಯೊಳು ರೋಮಕೂಪಗಳಲ್ಲೆಲ್ಲ ರಕ್ತವು ಹರಿಯುವಂತೆ ಗದೆಯಿಂದ ಪ್ರಹರಿಸಲು ವಿಭೀಷಣನು ಕನಲಿ ತನ್ನ ಕೈಯೊಳಗಿದ್ದ ಗದೆಯಿಂದ ತನ್ನ ಯಾವಚ್ಛಕ್ತಿಯನ್ನೂ ವಿನಿಯೋಗಿಸಿ ಪ್ರಹಸ್ತನನ್ನು ಹೊಡೆದನು ಅವನು ಮೂರ್ಛಾಕ್ರಾಂತನಾಗಿ ಬಿದ್ದನು ಆಗ ಶ್ರೀರಾಮಚಂದ್ರನು ವಿಜೃಂಭಿಸಿ ಸಹಸ್ರ ಬಾಣಗಳನ್ನು ಪ್ರಯೋಗಿಸಿ ಅನೇಕ ರಾಕ್ಷಸರನ್ನು ಸಂಹರಿಸಲು, ಹತಶೇಷರಾದ ರಕ್ಕಸರು ಭಯಪಟ್ಟು ಲಂಕೆಗೆ ಓಡಿಹೋಗಿ ಕೋಟೆಯ ಬಾಗಿಲುಗಳನ್ನು ಹಾಕಿಕೊಂಡು ಅಲ್ಲಿ ಅನೇಕ ರಾಕ್ಷಸರನ್ನು ಕಾವಲಿಟ್ಟು ಬಾಯಲ್ಲಿ ಅಕ್ಕಿಯನ್ನು ಹಾಕಿಕೊಂಡಿದ್ದರು ಒಡನೆ ಸೂರ್ಯಾಸ್ತಮಯವಾಗಲು ಯುದ್ಧವನ್ನು ನಿಲ್ಲಿಸಿ ರಾತ್ರಿಯನ್ನು ಕಳೆದರು ಉದಯವಾಗುವುದಕ್ಕೆ ಮುಂಚಿತವಾಗಿಯೇ ಮೇಘನಾದನು ಈ ಸಮಾಚಾರವನ್ನು ಕೇಳಿ ಅನೇಕಮಂದಿ ಶೂರರಾದ ರಕ್ಕಸರು ಉಭಯಪಾರ್ಶ್ವಗಳಲ್ಲಿಯೂ ಸೇವಿಸುತ್ತಾ ಬರಲು ರಣಭೇರಿ ಮುಂತಾದ ವಾದ್ಯಧ್ವನಿಗಳು ಆಕಾಶವನ್ನು ಮುಟ್ಟಲು ಆನೆಗಳ ಘೀಂಕಾರಂಗಳು, ಕುದುರೆಗಳ ಹೇಷಾರವಗಳು ಬಂಡಿಗಳ ಚಕ್ರಧ್ವನಿಗಳು, ಪದಾತಿಗಳ ಸಿಂಹನಾದಂಗಳು ಬ್ರಹ್ಮಾಂಡ ಕಟಾಹವನ್ನು ಬಿರಿಯುವಂತೆ ಇರಲು ಆಗ ವಾನರರನೇಕರು ಅವರೊಡನೆ ಯುದ್ಧಮಾಡುತ್ತಿರಲು ಇಂದ್ರಜಿತುವು ತನ್ನ ಮಾಯೆಯಿಂದ ಕತ್ತಲೆ ಕವಿಯುವಂತೆ ಮಾಡಿ ಕಪಿಗಳಿಗೆ ಅಗೋಚರನಾಗಿ ಗಗನದಲ್ಲಿದ್ದುಕೊಂಡು ಶರಪರಂಪರೆಗಳಿಂದ ಕಪಿಬಲವನ್ನು ಹೊಡೆಯುತ್ತಿರಲು ಶ್ರೀ ರಾಮನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಲಾಗಿ, ಅಂಧಕಾರವು ಹೋಗಿ ಬೆಳಕುಂಟಾಯಿತು ಕಪಿಗಳು ಅನೇಕ ರಕ್ಕಸರಂ ಕೊಂದು, ಇಂದ್ರಜಿತುವನ್ನು ಹಿಡಿದು ಕೊಲ್ಲುವುದಕ್ಕೆ ಯತ್ನಿಸಲು ಸರಮೆಯು

ಸೀತಾದೇವಿಯನ್ನು ಆಕಾಶವಿಮಾನದಲ್ಲಿ ಕುಳ್ಳಿರಿಸಿಕೊಂಡು ಈ ಯುದ್ಧವನ್ನು ತೋರಿಸಿ, ಸೀತೆಯನ್ನು ಸಮಾಧಾನಮಾಡಿ ಮರಳಿ ಅಶೋಕವನಕ್ಕೆ ಕರೆದುತಂದಳು. ಹೀಗಿರುವಲ್ಲಿ ದೇವ ಋಷಿಯಾದ ನಾರದನು ಶ್ರೀರಾಮನಿಗೆ ಪ್ರತ್ಯಕ್ಷನಾಗಿ ಎಲೈ ರಾಮಚಂದ್ರನೆ! ನೀನು ಪ್ರಾಕೃತ ಪುರುಷನಂತೆ ಏಕೆ ಸುಮ್ಮನೆ ಕಳವಳಿಸುತ್ತಿರುವೆ? ನೀನು ಸಾಕ್ಷಾನ್ನಾರಾಯಣಾಂಶ ಸಂಭೂತನಾಗಿ ಹುಟ್ಟಿ ಹೀಗಿರುವುದು ಸರಿಯಲ್ಲ. ಈ ಕಾಲದಲ್ಲಿ ನೀನು ನಿನಗೆ ವಾಹನವಾದ ಗರುಡನನ್ನು ಧ್ಯಾನಮಾಡು ಅವನಿಂದ ನಿನಗೆ ತುಂಬ ಸಹಾಯವಾಗುವುದೆಂದು ಹೇಳಿ, ಇದು ನನ್ನ ಯೋಗವೃಷ್ಟಿಯಿಂದ ತಿಳಿದುಬಂದಿತು ಆದಕಾರಣ ನಿನ್ನನ್ನು ಎಚ್ಚರಿಸಿ ಹೋಗಬೇಕೆಂದು ನಾನು ಬಂದೆ ಇನ್ನು ಹೋಗಿ ಬರುತ್ತೇನೆಂದು ಹೇಳಿ ಹೊರಟುಹೋದನು.

ಇತ್ತಲಾಗಿ ಇಂದ್ರಜಿತುವು ತಾಮಸೀ ವಿದ್ಯೆಯಿಂದ ಮಾಯಾರೂಪಿಯಾಗಿ ಯಾರಿಗೂ ಕಾಣಿಸಿಕೊಳ್ಳದೆ ಕಪಿಸೇನೆಯನ್ನು ಹೊಕ್ಕು ಸಿಂಹನಾದ ಮಾಡಿದನು, ಆಗ ಕಪಿಸೇನಾನಾಯಕರಾದ ಸುಗ್ರೀವ ಅಂಗದಾದಿಗಳು ಹೆದರಿ ನಡುಗುತ್ತಿರಲು ಕಪಿಗಳು ಎಲೆಲಾ! ರಾಕ್ಷಸರು ಬಂದರು ಯುದ್ಧಕ್ಕೆ ಮೊದಲಾಯಿತು ಏಳಿ ಏಳಿ ಇನ್ನು ಸುಮ್ಮನಿರಬಾರದು ಎಂದು ಆರ್ಭಟಿಸುತ್ತ ಬೆಟ್ಟ ಗುಡ್ಡಗಳನ್ನು ಕಲ್ಲು ಮರಗಳನ್ನು ಹಿಡಿದು ಕಾದಾಡುತ್ತಿದ್ದರು. ಈ ರಹಸ್ಯವನ್ನು ತಿಳಿದು ವಿಭೀಷಣನು ಇದು ಇಂದ್ರಜಿತುವಿನ ಮಾಯಾಯುದ್ಧವೆ ಸರಿ, ಇದರಿಂದ ನಮಗೆ ಕೇಡು ಕಾಗದೆ ಇರದು ಆದಕಾರಣ ಈಗಲೆ ನಮ್ಮವರನ್ನು ಎಚ್ಚರಿಸಬೇಕೆಂದು ಸುಗ್ರೀವನ ಬಳಿಗೆ ಹೋಗಿ ಅಯ್ಯಾ! ಕಪಿರಾಜನೆ! ಈಗ ಯುದ್ಧಮಾಡುತ್ತಿರುವವನೆ ಇಂದ್ರಜಿತುವು ಇವನು ರಾವಣನ ಮಗನು ಮಾಯಾಯುದ್ಧದಲ್ಲಿ ಬಹಳ ನಿಪುಣನು ಆದಕಾರಣ ಮೈಮರೆಯದೆ ಎಚ್ಚರಿಕೆಯಾಗಿರು ಈಗ ರಾಮಲಕ್ಷ್ಮಣರ ಮೈಗಾವಲಿಗೆ ನೀಲನನ್ನೂ ಅಂಗದನನ್ನೂ ನಿಲ್ಲಿಸು. ಸುಷೇಣ ಜಾಂಬವಂತರು ಮೇಲು ವಿಚಾರಣೆಗೆ ನಿಲ್ಲಲಿ! ನಳ, ಗವಯ, ಗವಾಕ್ಷ, ಶತಬಲಿ, ದುರ್ಮುಖ ದ್ವಿವಿಧ, ಶರಭ, ಹನುಮಂತರನ್ನು ಯುದ್ಧಕ್ಕೆ ಕಳುಹಿಸು. ನಾನೂ ನನ್ನ ಮಂತ್ರಿಗಳೊಡನೆ ಹೋರಡುತ್ತೇನೆಂದು ಹೇಳಿ, ಇಂದ್ರಜಿತುವಿಗೆದುರಾಗಿ ನಿಂತು ಬಾಣಗಳನ್ನು ಹೊಡೆಯಲು ಮೇಘನಾದನು ಆ ಬಾಣಗಳನ್ನು ತುಂಡುಮಾಡಿ ಮಂತ್ರಿಸಹಿತನಾದ ವಿಭೀಷಣನನ್ನು ನೋಯಿಸಿ ರೋಷಾವೇಶದಿಂದ ಯುದ್ಧಮಾಡುತ್ತಿರಲು ಅವನ ಆಟೋಪಕ್ಕೆ ಕಪಿಗಳು ಸತ್ತುಬೀಳುತ್ತಿದ್ದವು. ಕಪಿನಾಯಕರು ಬಹಳ ಚಮತ್ಕಾರವಾಗಿ ಧೈರ್ಯದಿಂದ ಯುದ್ಧಮಾಡುತ್ತಿದ್ದರು. ಇಂದ್ರಜಿತುವಿನ ರಥ ಅಶ್ವ ಧನುಸ್ಸುಗಳ ಧ್ವನಿಮಾತ್ರ ಕೇಳಿಬರುತ್ತ ಅವನಿರುವ ಸ್ಥಳವೆ ತಿಳಿಯದಂತಾಗಲು ಇಂದ್ರಜಿತುವು ಉಬ್ಬಿ ರೋಷಾವೇಷದಿಂದ ಶ್ರೀರಾಮನ ಮೈಗಾವಲಿನ ಭಟರನ್ನು ಕೊಲ್ಲುತ್ತ ಬಂದನು. ಆಗ ರಾಮನು ಆಯುಧವನ್ನೆತ್ತಿ ಹಗೆಯನ್ನು ಹೊಡೆಯಲು ತನ್ನ ಕೈಬಿಲ್ಲು ಮುರಿದು ತಾನು ರಕ್ತವನ್ನು ಕಾರುತ್ತ ಆಯಾಸಪಟ್ಟು ಚೇತರಿಸಿಕೊಂಡೆದ್ದು ಆಹಾ! ನಾನು ಮೊದಲು ಮಹಾ ಶೂರರಾದ ದೇವತೆಗಳೊಡನೆ ಬಹಳವಾಗಿ ಯುದ್ಧಮಾಡಿರುವೆನು ಆದರೂ ಈ ರಾಮನಂಥ ಶೂರನನ್ನು ನಾನು ನೋಡಲಿ ಇಲ್ಲ ಇಷ್ಟು ಶೂರನಾದುದರಿಂದಲೆ ಖರದೂಷಣ ತ್ರಿಶಿರರನ್ನು ಕೊಂದನು. ಇವನು ಸಾಮಾನ್ಯನಲ್ಲ ಆಗಲಿ ನೋಡೋಣ! ಎಂದು ರಾಮನನ್ನು ಹೊಗಳುತ್ತ ತನ್ನ ಸಾಮರ್ಥ್ಯವನ್ನು ತೋರಿಸಿ ಬಾಣವನ್ನು ಹೊಡೆದನು ಆ ಕಾಲದಲ್ಲಿ ಬಿಟ್ಟ ರಾಮನ ಬಾಣಗಳು ಇಂದ್ರಜಿತುವಿನ ಬಿಲ್ಲನ್ನು ಮುರಿದು ಕುದುರೆಗಳನ್ನು ಕೊಂದು ರಥವನ್ನು ಪುಡಿಪುಡಿಮಾಡಿ ಸಾರಥಿಯನ್ನು ಸಾಯಬಡಿದು ವಿಜೃಂಭಿಸಲು, ಇಂದ್ರಜಿತುವು ಕೋಪಗೊಂಡು ಆಹಾ! ಇವನ ಶೌರ್ಯವು ಈಶ್ವರನಿಗೂ ಇಲ್ಲ ಇವನೇನು ಕಾಲರುದ್ರನೊ! ಪ್ರಳಯಾಂತಕನೊ! ಕಾಣೆನಲ್ಲಾ ಎಂದು ಕೊರಗುತ್ತ ಈಶ್ವರನು ತನ್ನ ತಪಸ್ಸಿಗೆ ಮೆಚ್ಚಿ ಕೊಟ್ಟಿದ್ದ ಸರ್ಪಾಸ್ತ್ರವನ್ನು ಹೂಡಿ

ಹೊಡೆದನು. ಆಗ ತಂಡತಂಡವಾದ ಸರ್ಪಗಳು ಕಪಿಬಲವನ್ನು ಮುತ್ತಿ ಕಚ್ಚುತ್ತಿರಲು ವಿಷವೇರಿ ಕಪಿಸೇನೆಯೊಂದಿಗೆ ರಾಮಲಕ್ಷ್ಮಣರು ಮೂರ್ಛೆಹೋದರು. ಅದನ್ನು ಕಂಡು ಇಂದ್ರಜಿತುವು ಸಂತೋಷಯುಕ್ತನಾಗಿ ಜಯಭೇರಿಯನ್ನು ಹೊಡೆಯಿಸಿ ತನ್ನ ಸೇನೆಯೊಡನೆ ಲಂಕೆಗೆ ಹೋಗಿ ರಾವಣನಿಗೆ ನಮಸ್ಕರಿಸಿ ತನ್ನ ಜಯವಾರ್ತೆಯನ್ನು ಹೇಳಲು ದಶಮುಖನು ಸಂತೋಷಪಟ್ಟು ಮಗನನ್ನು ತಬ್ಬಿ ಮುದ್ದಾಡಿ ಶ್ಲಾಘಿಸುತ ಸರಮೆಯನ್ನು ಕರೆದು ನಾನು ಬಂದ ಕಾಲದಲ್ಲಿ ಸೀತೆಯು ನನ್ನನ್ನು ತಿರಸ್ಕರಿಸಿ ಮಾತಾಡಿದಳು. ರಾಮಲಕ್ಷ್ಮಣರು ಯಾರಿಗೂ ಸೋಲತಕ್ಕವರಲ್ಲವೆಂದು ಗದರಿಸಿದಳು. ಆಗ ಅಂಥದವರಿಬ್ಬರೂ ನಮ್ಮ ಇಂದ್ರಜಿತುವಿನ ಸರ್ಪಾಸ್ತ್ರದಿಂದ ಮೂರ್ಛೆಹೋಗಿ ಮಲಗಿರುವರು, ಇದನ್ನು ಆ ಸೀತೆಗೆ ತೋರಿಸಿ ಬುದ್ಧಿವಾದವನ್ನು ಹೇಳು ಎನಲು ಸರಮೆಯು ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿಕೊಂಡು ಆಕಾಶಮಾರ್ಗದಲ್ಲಿ ಸೀತೆಯನ್ನು ಕರೆದುಕೊಂಡು ಹೋಗಿ ರಾಮಲಕ್ಷ್ಮಣರ ಸ್ಥಿತಿಯನ್ನು ತೋರಿಸಲು, ಸೀತೆ ಬಹಳವಾಗಿ ದುಃಖಿಸಿ ಮೂರ್ಛೆ ಹೋಗಿ ಸರಮೆಯ ಶೈತ್ಯೋಪಚಾರದಿಂದ ಚೈತನ್ಯವನ್ನು ಹೊಂದಿ ಅಶೋಕವನಕ್ಕೆ ಬಂದಳು. ಬಳಿಕ ಸ್ವಲ್ಪ ಹೊತ್ತಿನಮೇಲೆ ರಾಮಚಂದ್ರನಿಗೆ ಪ್ರಜ್ಞೆಯುಂಟಾಗಿ ಗರುಡನನ್ನು ಸ್ಮರಿಸಲು ಸರ್ವೋಪನಿಷನ್ಮಯವಾದ ದೇಹವೂ ಸಾಮವೇದ ಸ್ವರೂಪವಾದ ಮುಖವೂ ಋಗ್ವೇದ ರೂಪವಾದ ಬಲರೆಕ್ಕೆಯೂ, ಯಜುರ್ವೇದರೂಪವಾದ ಎಡದ ಗರಿಯೂ ಉಳ್ಳನಾದ ಗರುಡನು ಚಂದ್ರಮಂಡಲನ್ನು ಭೇದಿಸಿಕೊಂಡು ಆಕಾಶಮಾರ್ಗದಿಂದ ವೇಗವಾಗಿ ರಣಭೂಮಿಗೆ ಬರುತ್ತಿದ್ದನು. ಅವನು ಬರುತ್ತಿದ್ದ ವೇಗಕ್ಕೆ ಸಮುದ್ರಗಳು ಶೋಷಿಸಿದುವು ಕುಲಾದ್ರಿಗಳು ಕುಗ್ಗಿದವು. ವಾಸುಕಿತಕ್ಷಕ ನಾಗರಾಜ ಮೊದಲಾದವರು ನರಳಿ ನವೆದು ಹೋದರು. ಉಳಿದ ಸರ್ಪಗಳ ಸುಳಿವೆ ಇಲ್ಲದಂತಾಯಿತು. ಕಳೆದುಳಿದ ಸರ್ಪಗಳು ನೆಲವನ್ನು ಕೊರೆದುಕೊಂಡು ಪಾತಾಳಕ್ಕೆ ಹೋದವು. ಕೈಲಾಗದ ಹಾವುಗಳು ಸುಟ್ಟು ಬೂದಿಯಾದವು ಹೀಗೆ ಸರ್ಪಗಳ ಹಾವಳಿಯು ಹರಿದುಹೋಗಿ ರಾಮಲಕ್ಷ್ಮಣರು ಎಚ್ಚತ್ತು ಹಸನ್ಮುಖರಾಗಿ ಗರುಡನನ್ನು ಹೊಗಳಿದರು. ಆಗ ಗರುಡನು ಸಂತುಷ್ಟನಾಗಿ ಕಪಿಗಳನ್ನೆಬ್ಬಿಸಿ, ಸರ್ವರಿಗೂ ಸಾಮರ್ಥ್ಯಗಳನ್ನು ಕೊಟ್ಟು ತನ್ನ ಸ್ಥಳಕ್ಕೆ ಹೊರಟುಹೋದನು. ಇತ್ತ ರಾಮಲಕ್ಷ್ಮಣರು ನಿದ್ರೆಯಿಂದೆದ್ದವರಂತೆ ಉಲ್ಲಾಸ ಯುಕ್ತರಾಗಿ ನಿಂತಿರುವ ಕಪಿಸೇನೆಯನ್ನು ಕಂಡು ಆದರದಿಂದ ಅವರನ್ನು ಹೊಗಳಿ ಹೂಂಕರಿಸಲು, ಸಕಲ ಸೇನೆಯನ್ನು ಕೊಂದು ಲಂಕೆಗೆ ಲಗ್ಗೆ ಹತ್ತಿ ಬಂದ ಯವನ ಸೈನ್ಯದಂತೆ ತಮ್ಮ ಬಾಹುಬಲದಿಂದ ರಾಕ್ಷಸರನ್ನು ಕೊಲ್ಲುತ್ತ ಬಂದರು.

## ಧೂಮ್ರಾಕ್ಷನ ಯುದ್ಧ.

ಕಪಿಸೇನೆಯು ಲಂಕೆಯನ್ನು ಮುತ್ತಿತೆಂಬ ವಾರ್ತೆಯನ್ನು ಕೇಳಿ ರಾವಣನು ಇಂದ್ರಜಿತುವಿನ ನಾಗಪಾಶಗಳು ವ್ಯರ್ಥಗಳಾದವೆಂದು ಚಿಂತಾಕ್ರಾಂತನಾಗಿ ಧೂಮ್ರಾಕ್ಷನನ್ನು ನೋಡಿ ನೀನು ಹೋಗಿ ರಾಮಲಕ್ಷ್ಮಣರನ್ನು ವಾನರ ಬಲದೊಡನೆ ಕೊಂದು ಬಾ ಎಂದು ಹೇಳಲು ಅವನು ಒಡೆಯನ ಅಪ್ಪಣೆಯನ್ನು ಪಡೆದು ರಣಭೇರಿ ಮೃದಂಗಾದಿ ತೂರ್ಯನಾದಗಳೊಡನೆ ಅಟ್ಟಹಾಸಮಾಡುತ್ತಾ ರಕ್ಕಸರ ಭಟರೊಡನೆ ಬಂದು ವಾನರ ಸೈನ್ಯದಮೇಲೆ ಬಾಣವನ್ನು ಸುರಿಸುತ್ತಾ ಬರಲು ವಾನರರು ಬೆಟ್ಟಗುಡ್ಡಗಳನ್ನು ಮರಗಳನ್ನು ತೆಗೆದುಕೊಂಡು ಅವನಿಗೆ ದಿಕ್ಕುತೋರದಂತೆ ಹೊಡೆಯುತ್ತಿರಲು ಧೂಮ್ರಾಕ್ಷನು ಅವುಗಳನ್ನೆಲ್ಲಾ ದಿವ್ಯಾಸ್ತ್ರಗಳಿಂದ ಕಡಿದು ಹಾಕುತ್ತಾ, ಕಪಿಗಳನ್ನು ಬಾಣಗಳಿಂದ ಹೊಡೆದು ನೋಯಿಸಿದನು. ಕಪಿಗಳು ಅವನ ಪೆಟ್ಟುಗಳನ್ನು ತಾಳಲಾರದೆ ದಿಕ್ಕುದಿಕ್ಕಿಗೆ ಓಡಿಹೋಗುತ್ತಿರುವುದನ್ನು ಕಂಡು ಭೀಮಪರಾಕ್ರಮಿಯಾದ ವಾಲಿಯಕುಮಾರನು ದೊಡ್ಡ ಪರ್ವತವನ್ನು ತೆಗೆದುಕೊಂಡು ಆ ಧೂಮ್ರಾಕ್ಷನನ್ನು ಅಪ್ಪ

ಳಿಸಲು ಅವನ ರಥವು ಮುರಿಯಿತು ಕುದುರೆಗಳು ಸತ್ತವು ಸಾರಥಿಯೂ ಸತ್ತನು ಛತ್ರವು ಪುಡಿ ಪುಡಿಯಾಯಿತು ಆಗ ಧೂಮ್ರಾಕ್ಷನು ಪಾದಚಾರಿಯಾಗಿ ಗದೆಯನ್ನು ತೆಗೆದುಕೊಂಡು ಅಂಗದನ ಮೇಲೆ ಬೀಳಲು ವೀರನಾದ ಅಂಗದನು ಧೂಮ್ರಾಕ್ಷನ ತಲೆಯಮೇಲೆ ತನ್ನ ವಜ್ರಮುಷ್ಟಿಯಿಂದ ಹೊಡೆದನು. ಸಿಡಿಲುಹೊಡೆದ ಪರ್ವತಶಿಖರದಂತೆ ಧೂಮ್ರಾಕ್ಷನು ಆ ಪೆಟ್ಟನ್ನು ಸಹಿಸಲಾರದೆ ಕೆಳಗೆ ಬಿದ್ದು ಮಡಿದನು ಹತಶೇಷರಾದ ರಕ್ಕಸರು ಓಡಿಹೋಗಿ ಪ್ರಾಣಾವಶಿಷ್ಟರಾಗಿ ಲಂಕೆಯನ್ನು ಸೇರಿ ರಾವಣನಿಗೆ ನಮಸ್ಕರಿಸಿ ಮೊರೆಯಿಟ್ಟು ನಡುಗುತ್ತಿದ್ದರು.

## ಸುಷೇಣನಿಂದ ರುಧಿರಾಸುರನು ಹತನಾದುದು.

ರಾವಣನು ಅದನ್ನು ಕೇಳಿ ಉರಿದುಬಿದ್ದು ರುಧಿರನೆಂಬ ರಕ್ಕಸನನ್ನು ಕರೆದು ಎಲವೋ, ರುಧಿರನೇ ನೀನು ಯುದ್ಧಕ್ಕೆ ಹೋಗಿ ರಾಮಲಕ್ಷ್ಮಣ ಮೊದಲಾದವರ್ನು ಕೊಂದು ಬಾ ಎಂದು ಆಜ್ಞಾಪಿಸಲು, ಅವನು ಚತುರಂಗಬಲ ಸಮೇತನಾಗಿ ಭೇರಿಮುಂತಾದ ರಣವಾದ್ಯಗಳು ಘೋರ್ಗರೆಯುತ್ತಿರಲು ದಕ್ಷಿಣದ್ವಾರದಿಂದ ಬರುವ ಸಮಯದಲ್ಲಿ ರಕ್ತವು ಖಂಡಗಳು ಮೂಳೆಗಳು ಮಳೆಯಂತೆ ಸುರಿಯುತ್ತಿರಲು ತನ್ನನ್ನು ತಡೆಯುವ ಕಪಿಗಳನ್ನು ಸಡ್ಡೆಮಾಡದೆ ಕೊಲ್ಲುತ್ತಾ ಬರುತ್ತಿದ್ದನು, ರುಧಿರ ರಕ್ಕಸನನ್ನು ಕಂಡು ಸುಷೇಣನು ವಾನರ ಸಮೂಹದೊಡನೆ ಹೊರಟು ಯುದ್ಧಮಾಡುತ್ತಿರಲಾಗಿ ರುಧಿರನು ವಾನರರನ್ನು ಬಹಳವಾಗಿ ನೋಯಿಸಿ ಹತ್ತು ಬಾಣಗಳಿಂದ ಹೊಡೆದು ನೋಯಿಸಲು ಸ್ವಲ್ಪಹೊತ್ತಿನ ಮೇಲೆ ಅವನು ಅತ್ಯಂತ ಕೋಪವನ್ನು ತಾಳಿ ರುಧಿರಾಸುರನ ಕುದುರೆಗಳನ್ನೂ ಸಾರಥಿಯನ್ನು ಕೊಂದು ಅವನ ಎರಡು ಕಾಲುಗಳನ್ನು ಜೋಡಿಸಿ ಹಿಡಿದುಕೊಂಡು ಗಿರಗಿರನೆ ತಿರುಗಿಸಿ ಮೇಲಕ್ಕೆ ಎತ್ತಿ ನೆಲಕ್ಕೆ ಅಪ್ಪಳಿಸಿ ಹೊಡೆಯಲು ಕೂಡಲೆ ರಕ್ತವನ್ನು ಕಾರುತ್ತಾ ರುಧಿರಾಸುರನು ಯಮಪುರಿಯನ್ನು ಸೇರಿದನು.

## ನೀಲನು ಪ್ರಹಸ್ತನನ್ನು ಕೊಂದುದು.

ಹತಶೇಷರಾದ ರಕ್ಕಸರು ಓಡಿಹೋಗಿ ರಾವಣನೊಡನೆ ಅಸುರಾಧಿಪನೇ ವಾನರರು ರುಧಿರನನ್ನು ಸಂಹರಿಸಿ ಅನೇಕಮಂದಿ ರಾಕ್ಷಸರನ್ನೂ ಕೊಂದರು, ಅವರ ಹೊಡೆತವನ್ನು ತಡೆಯಲಾರದೆ ನಿನಗೆ ಅರಿಕೆ ಮಾಡುವದಕ್ಕೆ ಓಡಿ ಬಂದೆವು, ನಮ್ಮನ್ನು ಕಾಪಾಡಬೇಕೆಂದು ಬೇಡಿಕೊಂಡರು ಅದನ್ನು ಕೇಳಿ ರಾವಣಾಸುರನು ಮಹಾ ಕೋಪವನ್ನು ತಾಳಿ ಕಣ್ಣುಗಳಲ್ಲಿ ಕಿಡಿಗಳನ್ನುದಿರಿಸುತ್ತಾ ತುಟಿಗಳನ್ನು ಕಚ್ಚುತ್ತಾ ಪ್ರಹಸ್ತನನ್ನು ಕುರಿತು, ಎಲೈ ಪ್ರಹಸ್ತನೇ! ನೀನು ಮಹಾಬುದ್ಧಿವಂತನು ಯುದ್ಧಕ್ಕೆ ಹೋಗಿ ಶತ್ರುಗಳನ್ನು ಸದೆದು ಬಾ ಎಂದು ಆಜ್ಞಾಪಿಸಲು ಅವನು ಚತುರಂಗಬಲ ಸಮೇತನಾಗಿ ಭೇರಿಭಾಂಕಾದಿ ವಾದ್ಯಗಳೊಡನೆ ಪ್ರೊರಪಟ್ಟು ಕಡಲುಕ್ಕಿ ಬಂದಂತೆ ಕೋಟೆಯಹೊರಕ್ಕೆ ಬಂದನು. ಆಗ ವಾನರರು ಮುತ್ತಿಕೊಂಡು ಬೆಟ್ಟಗಳನ್ನೂ ಮರಗಳನ್ನೂ ಪ್ರಹಸ್ತನಮೇಲೆ ಹಾಕಲು ಅವುಗಳನ್ನು ಕಡಿದುಹಾಕುತ್ತಾ, ಗದೆಯನ್ನು ತೆಗೆದುಕೊಂಡು ನೀಲನನ್ನು ಹೊಡೆಯಲು ಆ ಪೆಟ್ಟಿಗೆ ನೀಲನು ಮೂರ್ಛೆಯನ್ನು ಹೊಂದಿ ಬಹುಬೇಗನೆ ಎದ್ದು ಪುಟನೆಗೆದು ಹಾರಿ ಪ್ರಹಸ್ತನ ಸಾರಥಿಯ [illegible]

ಸಾಧಿಸಿ ರಥವನ್ನು ಪುಡಿಮಾಡಿ ತನ್ನ ಎರಡು ಹಸ್ತಗಳಿಂದಲೂ ಪ್ರಹಸ್ತನ ನೆತ್ತಿಯನ್ನು [illegible] ಪ್ಪಳಿಸಲು ಅವನು ಕೆಳಕ್ಕೆ ಬಿದ್ದು ಒದ್ದಾಡಿ ಸತ್ತನು ಅವನ ಚತುರಂಗ ಬಲವೆಲ್ಲ ನಾಶವಾಯಿತು. ಹತಶೇಷರಾದ ರಕ್ಕಸರು ಓಡಿಹೋಗಿ ಒಡೆಯನಿಗೆ ಹೇಳಿಕೊಳ್ಳಲು ರಾವಣನು ಮಹಾಭೀತನಾಗಿ ದುಃಖಿಸುತ್ತಾ ಯಾರನ್ನು ಕಳುಹಿಸಿದರೂ ಯುದ್ಧಕ್ಕೆ ಹೋಗುವವರೇ ಹೊರತಾಗಿ ಹಿಂತಿರುಗಿ ಬರುವವರೊಬ್ಬರೂ ಇಲ್ಲ ರಾಮಲಕ್ಷ್ಮಣರು ಸಾಧಾರಣ ಮನುಷ್ಯರೆಂದು ತಿಳಿದಿದ್ದೆ [illegible]

ಪರಾಕ್ರಮಶಾಲಿಗಳೇ ಸರಿ ! ನನ್ನಲ್ಲಿದ್ದ ಮಹಾವೀರರೆಲ್ಲರೂ ಕಪಿಗಳಿಂದಲೇ ಮೃತರಾದರು ಎಂದು ಚಿಂತಾಕ್ರಾಂತನಾಗಿರಲು ಆಗ ಇಂದ್ರಜಿತು ಅತಿಕಾಯ ಮೊದಲಾದ ಕುಮಾರರು ಮಂತ್ರಿಗಳೂ ಖಡ್ಗಗಳನ್ನು ಹಿಡಿದು ಝಳಿಪಿಸುತ್ತಾ ಮಂಡೋದರಿಯಿದ್ದ ಅರಮನೆಗೆ ಹೋಗಲು ಆಕೆ ಅವರನ್ನು ನೋಡಿ ಕುಳ್ಳಿರಿಸಿ ಇಂತೆಂದಳು ಎಲೈ ಪುತ್ರರೇ ! ನೀವು ಯಾವಾಗಲೂ ಇಲ್ಲಿಗೆ ಬಂದವರಲ್ಲ ಈಗ ಬರುದವುಕ್ಕೆ ಕಾರಣವೇನು; ಎಂದು ಕೇಳಲು ಎಲೈ ಮಾತೆಯೇ ಕೇಳು ನಿನ್ನನ್ನು ಇದುವರೆಗೂ ನಾವು ನೋಡಿದವರಲ್ಲ ಈಗ ರಾಮಲಕ್ಷ್ಮಣರು ಕಪಿಬಲದೊಡನೆ ಬಂದು ಸಮುದ್ರವನ್ನು ಹಾಯ್ದು ಲಂಕೆಗೆ ಮುತ್ತಿಗೆ ಹಾಕಿ ಇದುವರೆಗೆ ಅನೇಕಮಂದಿ ರಾಕ್ಷಸರನ್ನು ಕೊಂದು ನಾಗಪಾಶ ಬಂಧಂಗಳನ್ನೂ ಬಿಡಿಸಿಕೊಂಡು ನಮ್ಮ ಬಲವೆಲ್ಲವನ್ನೂ ನಾಶಮಾಡಿದರು. ಇದುವರೆಗೆ ನಮ್ಮ ರಾಕ್ಷಸರು ಯುದ್ಧಕ್ಕೆ ಹೋಗಿ ಸತ್ತರೆ ಹೊರತು ಹಿಂತಿರುಗಿ ಒಬ್ಬರೂ ಬರಲಿಲ್ಲ, ಆ ರಾಮನೋ ಮಹಾಬಲ ಪರಾಕ್ರಮಶಾಲಿಯಾದ ವಾಲಿಯನ್ನು ಕೊಂದವನು, ಖರದೂಷಣ ತ್ರಿಶಿರರನ್ನು ಅವರ ಹದಿನಾಲ್ಕು ಸಾವಿರ ವೀರಬಲರೊಡನೆ ಸಂಹರಿಸಿದವನು, ಆ ರಾಮಚಂದ್ರನು ಮನುಷ್ಯನೆಂದು ಎಣಿಸುವಹಾಗಿಲ್ಲ ಶ್ರೀಮನ್ನಾರಾಯನೇ ಈ ರೂಪದಿಂದ ಅವತರಿಸಿ ಬಂದಿರಬಹುದು ನಾವು ಇವನಿಂದ ಬದುಕುವಹಾಗೆ ತೋರಲಿಲ್ಲ ವೈರವನ್ನು ಬಿಟ್ಟು ನಮ್ಮ ಅತಿಕಾಯನನ್ನು ಸಂಧಿಗೆ ಕಳುಹಿಸಿದರೆ ನಮ್ಮ ವಿಭೀಷಣನು ಅದನ್ನು ಒಪ್ಪಿ ಸರಿಮಾಡುವನು ಎಂದು ಹೇಳಲು ಕೇಳಿ ಮಂಡೋದರಿಯು ರಾವಣನೊಡನೆ ಎಲೈ ಪ್ರಾಣವಲ್ಲಭನೇ, ಛಲನನ್ನು ಬಿಟ್ಟು ನಮ್ಮವರು ಹೇಳುವರೀತಿ ನಡೆಯೆನಲು ಅವನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ನನ್ನ ಮಗ ಮೇಘನಾದನಿರುವಲ್ಲಿ ನಿನಗೆ ಬಂದ ಭಯವೇನು ಮನೆಗೆ ಹೋಗು ಎಂದು ಹೇಳಿ ಕಳುಹಿಸಿ ಈಸಲ ನಾನೇ ಯುದ್ಧಕ್ಕೆ ಹೋಗುವೆನು ಎಂದು ಸಕಲ ವಾದ್ಯಗಳೂ ಸಮಸ್ತ ಬಿರುದುಗಳೂ ಮುಂತಾಗಿ ಚತುರಂಗಬಲ ಸಮೇತನಾಗಿ ಲಕ್ಷಮಂದಿ ಮಕ್ಕಳೊಡನೆ ಕೂಡಿ ಭೂನಭೋಂಗಣಗಳು ಬೆದರುವಂತೆ ಮೊಳಗಿಸುತ್ತಾ ಸಿಂಹನಾದಗಳನ್ನೂ ಭುಜಾಸ್ಫಾಲನಗಳನ್ನೂ ಮಾಡುತ್ತಾ ಅಟ್ಟಹಾಸದಿಂದ ರಾಕ್ಷಸರ ಸಂಗಡ ಬರಲು ರಾವಣನು ಲಂಕೆಯನ್ನು ಬಿಟ್ಟು ಬರುತ್ತಿರುವಾಗ ಆದ ಮಹೋತ್ಸಾಹಗಳನ್ನು ನೋಡಿ ಕಪಿಗಳು ಓಡಿಹೋಗಿ ಎಲೈ ರಾಮಚಂದ್ರನೇ ರಾವಣಾಸುರನು ತಾನೇ ಯುದ್ಧಕ್ಕೆ ಬರುತ್ತಿದ್ದಾನೆ ಏನು ಅಪ್ಪಣೆ ಎಂದು ಕೇಳಲು ರಾಮಲಕ್ಷ್ಮಣರು ಆ ಮಾತುಗಳನ್ನು ಕೇಳಿ ಧನುರ್ಧರರಾಗಿ ವಿಭೀಷಣನನ್ನೂ ಕುರಿತು ಈಗ ಕಾಲ ಮೇಘಾಕಾರವಾಗಿ ಪ್ರಕಾಶಿಸುತ್ತಾ ಬರುತ್ತಿರುವನು ಯಾರು ಎಂದು ಕೇಳಲು ವಿಭೀಷಣನು ರಾಮಚಂದ್ರನಿಗೆ ನಮಸ್ಕಾರಮಾಡಿ ಸ್ವಾಮಿಯೇ, ಶತಾನಂದ ಪುರಂದರಾದಿ ಬೃಂದಾರಕವಂದಿತನೇ ದೇವರ್ಷಿಬ್ರಾಹ್ಮಣ ಸಂಪೂಜ್ಯಮಾನ ವಿಭವನೇ ದಶರಥಮಹಾರಾಜ ಕುಮಾರನೇ, ಓ ರಾಮಚಂದ್ರನೇ ಲಾಲಿಸು ಇಗೋ ಇಲ್ಲಿ ಹತ್ತು ತಲೆಗಳಲ್ಲಿರುವ ಹತ್ತು ಕಿರೀಟಗಳು ಕೋಟಿಸೂರ್ಯಪ್ರಕಾಶಮಾನಂಗಳಾಗಿ ಹೊಳೆಯುತ್ತಿರಲು ಲಕ್ಷಮಂದಿ ಕುಮಾರರೊಡನೆ ಕೂಡಿಕೊಂಡು ಛತ್ರಚಾಮರ ಸಿಂಧು ಸೀಗುರಿ ಮೊದಲಾದವುಗಳಿಂದ ಪರಿವೃತನಾಗಿ ಪರ್ವತಾಕಾರವಾಗಿರುವ ರಥದಮೇಲೆ ಕುಳಿತು ಬರುತ್ತಿರುವವನೆ ನಮ್ಮಣ್ಣನಾದ ರಾವಣಾಸುರನು ಅವನ ಹಿಂದೆ ಸಿಂಧುಸೀಗುರಿ ಪತಾಕೆಗಳೊಡನೆ ಬರುತ್ತಿರುವವನು ಇಂದ್ರಜಿತುವು ಅವನ ಹಿಂದೆ ಬರುವವನು ದೇವಾಸುರರನ್ನು ಜಯಿಸಿದ ಅತಿಕಾಯನು ಅವನ ಹಿಂದೆ ಇರುವವರು ಮಹಾಕಾಯ ವಿದ್ಯುಜ್ಜಿಹ್ವರು ಎಂದು ಹೇಳುತ್ತಿರುವಷ್ಟರಲ್ಲಿಯೇ ರಾವಣನು ತನ್ನ ಮಕ್ಕಳನ್ನು ಲಂಕೆಗೆ ಕಳುಹಿಸಿ ತನ್ನ ಹತ್ತು ಕೈಗಳಲ್ಲಿಯೂ ಬಿಲ್ಲುಬಾಣಗಳನ್ನೂ ಧರಿಸಿ, ವಾನರರನ್ನೂ ವಧಿಸುತ್ತಿರಲು ಸುಗ್ರೀವನು ಒಂದು ದೊಡ್ಡ ಪರ್ವತವನ್ನೆತ್ತಿ ಅವನ ಮೇಲೆ ಹಾಕಿದನು. ಅವನು ಆ ಬೆಟ್ಟ

ಚೂರ್ಣಮಾಡಿ ಸುಗ್ರೀವನ ಮೇಲೆ ಏಳು ಬಾಣಗಳನ್ನು ಹೊಡೆದು ಮೂರ್ಛೆಬೀಳುವಂತೆ ಮಾಡಲು ವೀರನಾದ ಆಂಜನೇಯನು ರಾವಣನ ರಥದ ಮೇಲಕ್ಕೆ ಹಾರಿ ಎಲವೋ ರಾವಣನೇ ಪೂರ್ವದಲ್ಲಿ ನನ್ನನ್ನು ಕಂಡು ನನ್ನ ಬಲಪರಾಕ್ರಮಂಗಳನ್ನು ತಿಳಿದುಯಿದ್ದೀಯಲ್ಲವೇ ಎನಲು ರಾವಣನು ಹನುಮಂತನ ಬೆನ್ನಿನಮೇಲೆ ಮುಷ್ಟಿಯಿಂದ ಬಲವಾಗಿ ಗುದ್ದಲು ತರುವಾಯ ಹನುಮಂತನು ಎಲೋ ರಕ್ಕಸನೇ ನನ್ನ ಕೈಬಲವನ್ನು ನೋಡು ಎಂದು ಮುಷ್ಟಿಯಿಂದ ತಿವಿಯಲು ರಾವಣನು ರಥದಲ್ಲಿ ಬಿದ್ದು ಮೂರ್ಛೆಯನ್ನೈದಿದನು. ಅದನ್ನು ನೋಡಿ ರಕ್ಕಸರು ಶೈತ್ಯೋಪಚಾರಮಾಡಿ ಎಬ್ಬಿಸಲು ಕೂಡಲೆ ರಾವಣನು ಮೂರ್ಛೆಯನ್ನು ತಿಳಿದು ಎದ್ದು ಆಂಜನೇಯನ ಹೊಟ್ಟೆಯನ್ನು ಘಟ್ಟಿಯಾಗಿ ತಿವಿಯಲು, ಅವನು ಮೂರ್ಛೆಹೊಂದಿದನು.





## ನೀಲ ರಾವಣರ ಯುದ್ಧ.

ಅಷ್ಟರಲ್ಲಿ ನೀಲನು ಆ ರಾವಣಾಸುರನ ಮೇಲೆ ಒಂದು ದೊಡ್ಡ ಪರ್ವತವನ್ನು ಹಾಕಲು ಅವನು ಅದನ್ನು ಪುಡಿಮಾಡಿ, ಬಾಣಗಳಿಂದ ಹೊಡೆದನು. ಆಗ ಕಪಿವೀರನು ಉಗ್ರಾಕಾರನಾಗಿ ರಾವಣನ ರಥ ಮೇಲಕ್ಕೆ ಹಾರಿ ಅವನ ಹತ್ತು ತಲೆಗಳೂ ನಲಿಯುವಂತೆ ಕಿರೀಟಗಳ ಮೇಲೆ ಕುಣಿಯಲು ರಾವಣನು ಮತ್ತೆ ಕನಲ್ದು ಆಗ್ನೇಯಾಸ್ತ್ರವನ್ನು ಬಿಲ್ಲಿನಲ್ಲಿ ಹೂಡಿ ಪ್ರಯೋಗಿಸಲು ಅದು ಅಗ್ನಿಯ ಮಗನಾದ ನೀಲನನ್ನು ಏನೂ ಮಾಡಲಾರದೆ ಹೋಯಿತು, ಕೂಡಲೆ ಆಂಜನೇಯನು ಚೇತರಿಸಿಕೊಂಡು ಎದ್ದನು.

## ರಾವಣ ಲಕ್ಷ್ಮಣರ ಯುದ್ಧ.

ಅಷ್ಟರಲ್ಲಿ ಸೌಮಿತ್ರಿಯು ಧನುರ್ಭಾಣಗಳನ್ನು ಧರಿಸಿ ರಾವಣನಮೇಲೆ ಬಾಣವನ್ನು ಪ್ರಯೋಗಿಸಲು ಅವನು ರಾಮಾನುಜನನ್ನು ನೋಡಿ ನೀನು ಇನ್ನೂ ಬಾಲಕನು ನನ್ನನ್ನು ಎದುರಿಸಿ ಓಡಿಸುವುದಕ್ಕೆ ನಿನ್ನಿಂದಾಗದು ಎನಲು ಲಕ್ಷ್ಮಣನು ಎಲೈ ರಾಕ್ಷಸಾಧಮನೇ ! ನಿನ್ನ ಈ ಗರ್ವದ ಮಾತುಗಳಿಂದೇನೂ ಪ್ರಯೋಜನವಿಲ್ಲ ಯುದ್ಧಮಾಡಿ ನೋಡು ಎಂದನು ಆಗ ದಶಕಂಧರನು ಲಕ್ಷ್ಮಣನಮೇಲೆ ಐದು ಬಾಣಗಳನ್ನು ಪ್ರಯೋಗಿಸಲು ಲಕ್ಷ್ಮಣನು ಅವುಗಳನ್ನು ಅತಿಲಾಘವದಿಂದ ಮಧ್ಯದಲ್ಲಿಯೇ ತುಂಡಾಗಿ ಖಂಡಿಸಿದನು ಅದನ್ನು ನೋಡಿ ರಾವಣನು ಆಶ್ಚರ್ಯಪಟ್ಟು ' ಒಂದು ಭೀಕರವಾದ ಶಕ್ತಿಯನ್ನು ಪ್ರಯೋಗಿಸಲು ಲಕ್ಷ್ಮಣನು ಮೂರ್ಛೆ

ಹೋದನು. ಅಷ್ಟರಲ್ಲಿ ರಾವಣನು ಕೈಲಾಸಪರ್ವತವನ್ನು ಎತ್ತಿದ ತನ್ನ ಬಾಹುದಂಡಗಳಿಂದ ಪೌರುಷವು ಹೆಚ್ಚಿ ಲಕ್ಷ್ಮಣನಿದ್ದೆಡೆಗೆ ಬಂದು ಆತನನ್ನು ಇಪ್ಪತ್ತು ತೋಳುಗಳಿಂದಲೂ ಎತ್ತ ಲಾರದೆ ಚಿಂತಿಸುತ್ತಿರುವುದನ್ನು ನೋಡಿ ವೀರಾಂಜನೇಯನು ರಾವಣನ ಬೆನ್ನಿನಮೇಲೆ ವಜ್ರ ಮುಷ್ಟಿಯಿಂದ ಬರಸಿಡಿಲಿನಂತೆ ಬಲವಾಗಿ ತಿವಿಯಲು ರಾವಣನು ಆ ಮುಷ್ಟಿತಾಡನವನ್ನು ಸಹಿಸಲಾರದೆ ಎದೆಯೊಡೆದು ಕೆಳಕ್ಕೆಬಿದ್ದು ಮೂರ್ಛೆಹೋದನು. ಆಗ ಹನುಮಂತನು ಲಕ್ಷ್ಮಣ ಸ್ವಾಮಿಯನ್ನು ಎತ್ತಿಕೊಂಡು ಬಂದು ಶ್ರೀರಾಮನಬಳಿಯಲ್ಲಿರಿಸಿದನು ಶ್ರೀರಾಮನು ಕರುಣಾ ಕಟಾಕ್ಷದಿಂದ ತಮ್ಮನನ್ನು ಮೈದಡವಿ ಸಂತೈಸಿ ತಾನು ಧನುರ್ಭಾಣಧರನಾದನು. ಅತ್ತ ರಥದ ಮೇಲೆ ಮೈಮರೆದು ಬಿದ್ದಿದ್ದ ರಾವಣನು ಮೂರ್ಛೆತಿಳಿದು ಎದ್ದುದನ್ನು ನೋಡಿ ಲಕ್ಷ್ಮಣನು ಕೋಪದಿಂದ ಆತನಮೇಲೆ ಹೊರಡಲು ರಾಮನು ತಮ್ಮನನ್ನು ಸಮಾಧಾನಗೊಳಿಸಿ ತಾನೆ ಯುದ್ಧಕ್ಕೆ ಹೊರಟನು.

## ರಾಮ ರಾವಣರ ಯುದ್ಧ.

ಶ್ರೀರಾಮಚಂದ್ರನು ಕೋಪಾತಿರೇಕದಿಂದ ಧನುರ್ಭಾಣಗಳನ್ನು ಧರಿಸಿ ರಾವಣನಿಗೆದು ರಾಗಲು ಆಂಜನೇಯನು ಶ್ರೀರಾಮಚಂದ್ರನನ್ನು ನೋಡಿ, ಎಲೈ ಸ್ವಾಮಿಯೇ ? ಆ ಪಾತಕನು ರಥಾರೂಢನಾಗಿ ಯುದ್ಧಮಾಡುವಾಗ ಸ್ವಾಮಿಯವರು ನೆಲದಮೇಲೆ ನಿಂತು ಯುದ್ಧಮಾ ಡುವದು ಯುಕ್ತವಲ್ಲ ಆದುದರಿಂದ ನನ್ನ ಹೆಗಲಮೇಲೆ ಕುಳಿತುಕೊಂಡು ಆ ಖಳನೊಡನೆ ಕಾದಬಹುದು ಎಂದು ಹೇಳಿ ರಾಮಚಂದ್ರನನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ರಾವಣ ನಿಗೆ ಅಭಿಮುಖವಾಗಿ ಹೋಗಲು ಆ ಖಳನು ಹನುಮಂತನನ್ನು ಐದು ಬಾಣಗಳಿಂದ ಹೊಡೆ ಯಲು ಆತನೊಡನೆ ಬಂದಿದ್ದ ಸಮಸ್ತ ರಕ್ಕಸವೀರರನ್ನು ಸಂಹರಿಸಿ ರಾವಣನ ರಥವನ್ನು ಪುಡಿಮಾಡಿ ಕುದುರೆಗಳನ್ನು ಕೊಂದು ಸಾರಥಿಯನ್ನು ಮುರಿದು, ಧ್ವಜವನ್ನು ಕೆಡಹಿ, ಕವಚ ವನ್ನು ಸೀಳಿ ಕಿರೀಟಗಳನ್ನು ಕೆಡಹಿ ಬಿಲ್ಲುಗಳನ್ನು ಮುರಿದು ಹೆದೆಯನ್ನು ಸೀಳಿ ಬಲವನ್ನು ಕುಂದಿಸಿ ರಾವಣನನ್ನು ನೋಡಿ ಎಲೋ ನಾರೀಚೋರನೇ ? ನೀನು ಈಗ ಬಹಳ ಆಯಾಸ ಪಟ್ಟಿದ್ದೀಯೆ ಲಂಕೆಗೆ ಹೋಗಿ ಸ್ವಲ್ಪ ಸುದಾರಿಸಿಕೊಂಡುಬಾ? ನಿನ್ನನ್ನು ಈಗ ಕೊಲ್ಲುವದಿಲ್ಲ ಹೋಗು ? ಎನಲು ರಾವಣನು ನಾಚಿಕೆಪಟ್ಟು ಹಿಂತಿರುಗಿ ಲಂಕೆಗೆ ಹೋಗಿ ಬಹಳ ಚಿಂತಾ ಕ್ರಾಂತನಾಗಿ ತನ್ನಲ್ಲಿತಾನು ನನ್ನ ತಮ್ಮನಾದ ಕುಂಭಕರ್ಣನನ್ನು ಎಬ್ಬಿಸಿ ಈ ರಾಮಲಕ್ಷ್ಮಣ ರನ್ನೂ ವಾನರರನ್ನೂ ಕೊಲ್ಲಿಸುವೆನು ಎಂದು ಯೋಚಿಸಿ ಶೂರರಾದ ರಾಕ್ಷಸವೀರರನ್ನು, ಕಳುಹಿ ಕುಂಭಕರ್ಣನನ್ನು ಎಬ್ಬಿಸುವಂತೆ ಆಜ್ಞಾಪಿಸಲು ಓಲಗದಲ್ಲಿ ಕುಳಿತುಕೊಂಡು ಮಂತ್ರಿಗಳನ್ನೂ ಮಕ್ಕಳನ್ನೂ ಕುರಿತು ನಾನು ಇದುವರೆಗೂ ಯಾರಿಂದಲೂ ಅಪಜಯವನ್ನು ಹೊಂದಿದವನಲ್ಲ ಇನ್ನು ಶತ್ರುಗಳನ್ನು ಜಯಿಸುವುದಕ್ಕೆ ನಮ್ಮ ಕುಂಭಕರ್ಣನಹೊರತಾ ಯಾವ ಶಕ್ತರನ್ನೂ ಕಾಣೆ ಆದುದರಿಂದ ಅವನನ್ನು ಎಚ್ಚರಗೊಳಿಸಬೇಕೆಂದು ಹೇಳಿ ಭಟರನ್ನೂ ಕಳುಹಿಸಿದನು.

## ಕುಂಭಕರ್ಣನನ್ನು ಎಚ್ಚರಗೊಳಿಸಿದುದು.

ಹತ್ತುಕೋಟಿ ರಾಕ್ಷಸರುಗಳನ್ನು ಕೂಡಿಕೊಂಡು ರತ್ನಖಚಿತವಾದ ಚಿನ್ನದ ಜಗುಲಿಯ ಮೇಲೆ ಹಂಸತೂಲಿಕಾತಲ್ಪದೊಳು ನೀಲಗಿರಿಯಂತೆ ತನ್ನ ಎಡಗೈಯನ್ನು ತಲೆದಿಂಬಾಗಿ ಇಟ್ಟು ಕೊಂಡು ಘೋರವಾಗಿ ಗೊರುಗುಟ್ಟಿ ದೇವತೆಗಳನ್ನು ಹೊಡಿಹೊಡಿ ಎಂದು ಕನವರಿಸುತ್ತ ಮೈಮರೆದು ನಿದ್ರಿಸುತ್ತಿರುವ ಕುಂಭಕರ್ಣನನ್ನು ನೋಡಿ ತಾವು ತಂದ ಅನ್ನದರಾಶಿಗಳನ್ನು ಮಾಂಸದ ರಾಶಿಗಳನ್ನೂ ಮದ್ಯದಘಟಗಳನ್ನೂ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯಾದಿ ಸಕಲ ಪದಾರ್ಥಗಳನ್ನೂ ಸಮೀಪದಲ್ಲಿ ರಾಶಿಹಾಕಿ ಸಿದ್ಧಮಾಡಿಟ್ಟುಕೊಂಡು ಹತ್ತಿರಕ್ಕೆಹೋಗಿ

ಕಿವಿಯಬಳಿ ನಗಾರಿ, ಬರಡೋಲು, ರಣಭೇರಿ, ತಮ್ಮಟೆ ಮುಂತಾದ ದೊಡ್ಡ ವಾದ್ಯಗಳನ್ನು ಬಾರಿಸಿದರು ಆಶಬ್ದಕ್ಕೆ ಬ್ರಹ್ಮಾಂಡಕಟಾಹವು ಬಿರಿಯಿತು ದಿಕ್ಕುಗಳು ಒಡೆದವು ದಿಗ್ಗಜಗಳು ಕಿವುಡಾದವು ಆದರೂ ಆ ಶಬ್ದವೇ ಅವನ ಕಿವಿಯಲ್ಲಿ ಬೀಳಲಿಲ್ಲ ಕೆಲವರು ಒನಿಕೆಗಳಿಂದ ಕುಟ್ಟಿದರು ಕೆಲವರು ಉಕ್ಕಿನ ದಡಿಗಳಿಂದ ಬಡಿದರು ಕೆಲವರು ಚಮ್ಮಟಿಗೆಗಳಿಂದ ಹೊಡೆದರು ಕೆಲವರು ಭಲ್ಲೆಯಗಳಿಂದ ತಿವಿದರು ಕೆಲವರು ಈಟಿಗಳಿಂದ ಚುಚ್ಚಿದರು ಕೆಲವರು ಬೆಸೆಗಳಿಂದ ಪೆಟ್ಟಿದರು ಆನೆಗಳಿಂದ ತುಳಿಸಿದರು ಬ್ರಹ್ಮನ ಬರಹವೆಂಥದೊ ಇವೆಲ್ಲ ನಿದ್ದೆಹೋಗುವವರ ಮೈತಟ್ಟಿದಂತೆ ಸುಖವುಂಟಾಗಿ ಗಾಢನಿದ್ರೆಗೆ ಆರಂಭವಾಯಿತು ಆದರೂ ರಕ್ಕಸರು ಬಿಡದೆ ಉದ್ದವಾದ ಸಲಾಕಿಗಳನ್ನು ಉಗುರುಸಂದುಗಳಲ್ಲಿ ಹಾಕಿ ಕೊಡತಿಗಳಿಂದ ಹೊಡೆದರು ಕೆಲವರು ಕೊಕ್ಕೆಗಳನ್ನೂ ಕೀಲುಗಳಿಗೆ ಹಾಕಿ ಜಡಿಯುವವರು ಕೆಲವರು ಕೋಡುಕಲ್ಲುಗಳಿಂದ ಕೋರೆದಾಡೆಗಳನ್ನು ಮುರಿಯುವವರು ಕೆಲವರು ಈಮೇರೆ ಮಾಡುವ ರಾಕ್ಷಸರಲ್ಲಿ ಅನೇಕರು ತರಗೆಲೆಗಳಂತೆ ಮೂಗಿನ ಗಾಳಿಯಿಂದ ಆಕಾಶಕ್ಕೆ ಹಾರಿಹೋದರು ಮಂತ್ರಿಗಳೆಲ್ಲರೂ ಸೇರಿ ಅರೆಗಳಿಗೆ ಯೋಚಿಸಿ ಏನುಮಾಡಿದರೂ ಇವನ ನಿದ್ದೆ ಎಚ್ಚರವಾಗಲಿಲ್ಲ ಒಡೆಯನು ಇದನ್ನು ಕೇಳಿದರೆ ಸುಮ್ಮನಿರುವನೆ ಏನುಮಾಡೋಣ ಎಂದು ನಾನಾಬಗೆಯಾಗಿ ಹಿಂಸೆಮಾಡಿದರು ಅವನಿಗೆ ಲಕ್ಷ್ಯವಿಲ್ಲದೆ ಸುಖವಾಗಿ ನಿದ್ರೆಮಾಡುತ್ತಿದ್ದನು ಅವನ ಮೂಗಿನ ಹೊಳ್ಳೆಗಳಲ್ಲಿ ಎಮ್ಮೆಗಳನ್ನು ಆನೆಗಳನ್ನು ಬಿಡಲು ಅವುಗಳಲ್ಲಿ ಕೆಲವು ಮೈಕೂದಲೆಂಬ ಅಡವಿಯಲ್ಲಿ ದಾರಿಕಾಣದೆ ರೋಮಕೂಪಗಳೆಂಬ ಗುಳಿಗಳಲ್ಲಿ ಬಿದ್ದು ಮೊರೆಯಿಡುತ್ತಿದ್ದವು ಕೆಲವು ಆತನ ಸೀನಿನಲ್ಲಿ ಸಿಕ್ಕಿದ ನೊಣದಂತೆ ಒದ್ದಾಡುತ್ತಿದ್ದವು ಸಲಾಕಿಗಳನ್ನು ಕಾಯಿಸಿ ಕಿವಿಗಳಲ್ಲಿ ಹಾಕಿ ತಿರಿಗಿಸಿದರೂ ಕಿವಿಯಲ್ಲಿ ಗುಗ್ಗೆಯನ್ನು ತೆಗೆದಂತೆ ಸುಖಕರವಾಯಿತು ಬೆಟ್ಟಗಳನ್ನು ಮೈಮೇಲೆ ಹಾಕಿದರೂ ಎಚ್ಚರವಾಗದೆ ನಿದ್ದೆಯು ಹೆಚ್ಚುತ್ತಲೇ ಬಂದಿತು ಹೀಗೆ ಎಷ್ಟುವಿಧವಾಗಿ ಪ್ರಯಾಸಪಟ್ಟರೂ ನಿದ್ದೆ ಎಚ್ಚರವಾಗಲಿಲ್ಲ ಎಂದು ರಾವಣನೊಡನೆ ಮೊರೆಯಿಡಲು ರಾವಣನು ಅವನಿಗೆ ವರಕೊಟ್ಟ ಬ್ರಹ್ಮನನ್ನು ಕರೆಯಿರಿ ಎಂದು ದೂತರನ್ನು ಅಟ್ಟಲು ಅವರು ಹೋಗಿ ಬ್ರಹ್ಮನನ್ನು ಕರೆತಂದು ಎದುರಿಗೆಬಿಡಲು ಬ್ರಹ್ಮನು ಬಾಯಿಮುಚ್ಚಿಕೊಂಡು ಮೆಲ್ಲಗೆ ರಾವಣನನ್ನು ಕುರಿತು ಏನಪ್ಪಾ ನನ್ನನ್ನು ಕರೆಸಿದ ಕಾರಣವೇನು ಎನಲು ರಾವಣನು ತಮ್ಮನನ್ನು ಬೇಗಯೆಬ್ಬಿಸು ರಾಮನೊಡನೆ ಯುದ್ಧಕ್ಕೆ ಹೋಗಬೇಕೆನಲು ಬ್ರಹ್ಮನು ಕುಂಭಕರ್ಣನ ಅರಮನೆಗೆ ಹೋಗಿ ರಾಕ್ಷಸರು ಅವನನ್ನು ಎಬ್ಬಿಸುವುದಕ್ಕೆ ಪಡುತ್ತಿರುವ ಶ್ರಮವನ್ನು ನೋಡಿ ತಲೆಯಕೆಳಗೆ ಕುಳಿತುಕೊಂಡು ಕಮಂಡಲದಲ್ಲಿ ಉದಕವನ್ನು ಅಭಿಮಂತ್ರಿಸಿ ಕುಂಭಕರ್ಣನ ಮೂಗಿನಲ್ಲಿ ಸುರಿದನು ಆಗ ಕುಂಭಕರ್ಣನಿಗೆ ಎಚ್ಚರವಾಗಿ ನನ್ನ ನಿದ್ರೆಯನ್ನು ಕೆಡಿಸಿದವರಾರು ಎಂದು ಗರ್ಜಿಸಿದನು. ಆ ಶಬ್ದವನ್ನು ಪೌರಜನರು ಕೇಳಿ ಭಯಪಟ್ಟು ದಿಕ್ಕುದಿಕ್ಕಿಗೆ ಓಡಿಹೋದರು ಕುಂಭಕರ್ಣನು ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ ತುಟಿಗಳನ್ನು ನಾಲಿಗೆಯಿಂದ ಸವರಿಕೊಂಡೆದ್ದು ಬ್ರಹ್ಮಾಂಡವನ್ನು ನುಂಗಿದರು ಹಸಿವುತೀರದು ಕಡಲುಗಳನ್ನು ಕುಡಿದರೂ ಬಾಯಾರಿಕೆ ಹೋಯದು ಎಂದು ಕಣ್ಣುಬಿಟ್ಟು ಮುಂದುಗಡೆಯಲ್ಲಿ ನೋಡಿ ಆಕಾಶವನ್ನು ಮುಟ್ಟುತ್ತಿರುವ ಮಾಂಸಖಾದ್ಯಸ್ನದ ರಾಶಿಗಳನ್ನೂ ಬೆಟ್ಟದಂತೆ ಬಿದ್ದಿರುವ ಕಜ್ಜಾಯಗಳನ್ನು ತರಿದ ಕುರಿಕೋಣಗಳ ಗಿರಿಗಳನ್ನು ಗರಿಗಳನ್ನು ಹರಿದ ಹಕ್ಕಿಗಳ ರಾಶಿಯನ್ನು, ಇರಿದು ಕೆಡಹಿದ ನಾನಾಮೃಗಗಳ ಗುಡ್ಡೆಗಳನ್ನು ಪರಿಪರಿಯಾದ ಗುಡಾಣಗಳಲ್ಲಿ ತುಂಬಿದ ಸಕ್ಕರೆ ಹಾಲು ತುಪ್ಪ ಮೊಸರು ಮದ್ಯಗಳನ್ನು ಕುಡಿದರೂ ಅವನಿಗೆ ಕಾಲುಗ್ರಾಸವಾಗಲಿಲ್ಲ ಆಗ ತನಗೆ ಹೊಟ್ಟೆಯೆ ತುಂಬಲಿಲ್ಲವೆಂದು ಕೂಗಲು ರಾವಣನ ಮಂತ್ರಿಗಳು ರಣಭೂಮಿಯಲ್ಲಿ ಸತ್ತುಬಿದ್ದಿದ್ದ ರಾಕ್ಷಸರ ಶವಗಳನ್ನು

ತಂದೊಡ್ಡಿದರು ಅವುಗಳನ್ನು ತಿನ್ನುತ್ತಲೂ ಅರ್ಧಹೊಟ್ಟೆಯಾಗಿ ಆಹಾರಸಾಲದೆ ಊರಮೇಲೆ ಬಿದ್ದು ಪ್ರಜೆಗಳನ್ನು ತಿನ್ನುದದಕ್ಕೆ ಆರಂಭಿಸಿದನು ರಾವಣನು ಅದನ್ನು ಕಂಡು ಶುಕ್ರಾಚಾರ್ಯ ನನ್ನು ಕರೆಯಿಸಿ ಇವನ ಹಸಿವು ಅಡಗಿ ತೃಪ್ತಿಯಾಗುವಂತೆ ಮಾಡಿ ಎನಲು ಆತನು ಬಂದು ಮಂತ್ರಸಿದ್ಧನಾದ ಗುಳಿಗೆಯನ್ನು ಕೊಟ್ಟನು. ಅದನ್ನು ತಿಂದಮೇಲೆ ಹಸಿವಡಗಿ ಬಾಯಾರಿಕೆ ತೀರಿ ತೃಪ್ತನಾಗಿ ಥಪ್ರನೇ ತೇಗಿದನು. ಆವೇಳೆ ಸಮೀಪದಲ್ಲಿದ್ದ ಮಂತ್ರಿಗಳು ಶ್ರೀಗಂಧದ ಕೊಪ್ಪರಿಗೆಗಳನ್ನು ತಂದು ಕುಂಭಕರ್ಣನಮೈಗೆ ಲೇಪಿಸಿ ಅಡಿಕೆಗಳ ರಾಶಿಗಳನ್ನು ಬಾಯಿಯಲ್ಲಿ ಸುರಿದು ವೀಳೆಯದೆಲೆಗಳ ಕಟ್ಟುಗಳನ್ನು ಹಾಕಿ ಸುಣ್ಣದ ಮುದ್ದೆಗಳನ್ನು ಬಾಯಿಗೆ ತುರುಕಲು ಕುಂಭಕರ್ಣನು ತಾಂಬೂಲವನ್ನು ಅಗಿಯುತ್ತಾ ತೂರಿಯಾಡಿಕೊಂಡು ಅಣ್ಣನ ಓಲಗದ ಚಾವಡಿಗೆ ಬರಲು ರಾವಣನು ತಮ್ಮನಿಗೆ ಉಚಿತಾಸನವನ್ನು ಕೊಟ್ಟು ಕುಳ್ಳಿರಿಸಿಕೊಂಡನು ರಾವಣನು ಖಿನ್ನನಾಗಿ ಕುಳಿತಿರುವದನ್ನು ನೋಡಿ ಕುಂಭಕರ್ಣನು ಎಲೈ ಅಣ್ಣನೇ ನಿನ್ನ ಮುಖ ದಲ್ಲಿ ಕಳೆಯಿಲ್ಲ ಸಭೆಯು ಶೂನ್ಯವಾಗಿದೆ ಈ ದುರ್ಮನವು ಯಾರಿಂದಾಯಿತು ವಿಭೀಷಣ, ಮಹೋದರ, ಪ್ರಹಸ್ತ, ಅತಿಕಾಯ, ದೇವಾಂತಕ, ನರಾಂತಕಾದಿ ರಾಕ್ಷಸ ವೀರರೆಲ್ಲಿ ರುದ್ರನು ನಿನ್ನಬಳಿಗೆ ಬಾರನೇ ಬ್ರಹ್ಮನು ನಿನ್ನರಮನೆಯ ಬಾಗಲನ್ನಿಲ್ಲವೋ ವಾಯುವು ನಿತ್ಯವೂ ನಿನ್ನ ಓಲಗದ ಚಾವಡಿಯನ್ನು ಗುಡಿಸುವದಿಲ್ಲವೋ, ಅಗ್ನಿಯು ಅಡಿಗೆಯನ್ನು ಮಾಡುವದಿಲ್ಲವೋ ಬೃಹಸ್ಪತಿಯು ನಿನಗೆ ಪಂಚಾಂಗ ಹೇಳುವದಿಲ್ಲವೋ, ಸುರಪತಿಯು ನಿನ್ನ ಪಾದತಳದ ಎಚ್ಚರಿ ಕೆಯನ್ನು ಕೇಳುವದಿಲ್ಲವೋ, ಯಮನು ನೀನಟ್ಟಿದ ಬಳಿಗೆ ಹೋಗನೋ ನೈರುತನು ನಿನ್ನ ಮುಖವನ್ನು ಪಾವಡೆಯಿಂದ ಒತ್ತನೋ ರಂಭೆ ಮೊದಲಾದ ಊರ್ವಶಿಯರು ನಾಟ್ಯವನ್ನಾಡರೋ ಪುಷ್ಪಕ ವಿಮಾನವು ನೀನು ಹೇಳಿದಲ್ಲಿಗೆ ಹೋಗನೋ, ನಿನ್ನ ಮುಖವು ಕುಂದಿರುವದಕ್ಕೇನು ಕಾರಣ ಹೇಳು ಎಂದನು ಆಗ ರಾವಣನು ಎಲೈ ಕುಂಭಕರ್ಣನೇ ನೀನು ನಿದ್ರೆಯನ್ನು ಆಶ್ರಯಿ ಸಿದಮೇಲೆ ಇಲ್ಲಿನ ವರ್ತಮಾನವೊಂದನ್ನೂ ಕೇಳಲಿಲ್ಲವಷ್ಟೆ ನಾನು ನಮ್ಮ ತಂಗಿಯಾದ ಶೂರ್ಪ ಣಖಿಯನ್ನು ರಾಮನು ಮೂಗು ಕಿವಿಗಳನ್ನು ಕೊಯಿದು ಭಂಗಪಡಿಸಿದ, ಅದನ್ನು ಸಹಿಸಲಾರದೆ ನಾನು ಸೀತೆಯನ್ನು ಕದ್ದುಕೊಂಡು ಬಂದೆನು, ತರುವಾಯ ರಾಮಲಕ್ಷ್ಮಣರು ಕಪಿಸೈನ್ಯವನ್ನು ಜೊತೆಮಾಡಿಕೊಂಡು, ನಮ್ಮ ಲಂಕೆಗೆ ಮುತ್ತಿಗೆಹಾಕಿ ನಮ್ಮ ಸೈನ್ಯಗಳನ್ನೆಲ್ಲಾ ನಾಶಮಾಡಿ ಮಹಾ ವೀರರನ್ನೆಲ್ಲಾ ಕೊಂದು ನಿನ್ನೆಯದಿನ ನನ್ನನ್ನು ವಿರಥನನ್ನಾಗಿಮಾಡಿ ಶರವರ್ಷದಿಂದ ನೋಯಿ ಸಲು ಆ ನರೇಂದ್ರನ ಬಾಣದ ಪೆಟ್ಟುಗಳಿಗೆ ಸಹಿಸಲಾರದೆ ಓಡಿಬಂದು ಭಯಗ್ರಸ್ತನಾಗಿ ನಿನ್ನನ್ನು ಸ್ಮರಿಸಿಕೊಂಡು ನಿನ್ನ ಸಹಾಯದಿಂದ ಆ ನಾರರನ್ನು ಕೊಂದು ರಾಮಲಕ್ಷ್ಮಣರನ್ನು ಜಯಿಸಬೇಕೆಂದು ನಿನ್ನನ್ನು ಎಬ್ಬಿಸುವಂತೆ ಹೇಳಿ ಕಳುಹಿಸಿದೆನು ಎಂದನು.

ಕುಂಭಕರ್ಣನು ಅವನ ಮಾತುಗಳನ್ನು ಕೇಳಿ, ಎಲೈ ಅಣ್ಣನೇ ನಾನು ಮೊದಲು ಎದ್ದಿರು ವಾಗ ನನ್ನ ಹತ್ತಿರಕ್ಕೆ ನಾರದಮುನಿಯು ಬಂದನು ಆ ಮಹಾತ್ಮನನ್ನು ನಿರ್ಮಲಚಿತ್ತದಿಂದ ಪೂಜಿಸಿ ಮುನೀಂದ್ರನೇ, ನೀನು ಅನೇಕ ಸ್ಥಳಗಳನ್ನು ನೋಡಿದವನು ವಿಶೇಷವೇನಾದರೂ ಇದ್ದರೆ ಹೇಳಬೇಕೆಂದೆನು. ಅದಕ್ಕೆ ಮುನೀಂದ್ರನು ಎಲೈ ರಾವಣನೇ ಕೇಳು, ನಾನು ಮಹಾ ಮೇರುವಿನಿಂದ ಬಂದೆನು ಅಲ್ಲಿನ ಸಂಗತಿಯನ್ನು ಕೇಳು ಬ್ರಹ್ಮದೇವನು ಇಂದ್ರಾದಿ ದೇವತೆಗಳಿಂ ದಲೂ ದೇವರ್ಷಿಗಳಿಂದಲೂ ಕೂಡಿ ಶ್ರೀಮನ್ನಾರಾಯಣಮೂರ್ತಿಯ ಸನ್ನಿಧಾನಕ್ಕೆ ಹೋಗಿ ಸಾಷ್ಟಾಂಗ ದಂಡಪ್ರಣಾಮ ಮಾಡಿ ರಾವಣ, ಕುಂಭಕರ್ಣರು ಲೋಕಕಂಟಕರಾಗಿರುವರೆಂದು ಅತಿಧೈರ್ಯದೊಡನೆ ಹೇಳಿಕೊಳ್ಳಲು ಅವರನ್ನು ಕಳುಹಿಸಿ ಆ ದೇವದೇವನು ಬ್ರಹ್ಮಾದಿಗಳನ್ನು ಕುರಿತು ನಾನು ಭೂಲೋಕದಲ್ಲಿ ದಶರಥನ ಮನೆಯಲ್ಲಿ ಶ್ರೀರಾಮನಾಗಿ ಅವತರಿಸುವೆನು ಮಹಾ

ಲಕ್ಷ್ಮಿಯು ಸೀತೆಯಾಗಿ ಅವತರಿಸುವಳು ನೀವೂ ನಿಮ್ಮನಿಮ್ಮ ಅಂಶಗಳಿಂದ ವನಚರಭಲ್ಲೂಕಂಗಳಾಗಿ ಜನಿಸಿರಿ. ನಾನು ರಾವಣ ಕುಂಭಕರ್ಣಾದಿಗಳನ್ನು ಕೊಂದು ನಿಮಗೆ ಅಭಯವನ್ನುಂಟುಮಾಡುವೆನು ಎಂದು ಅಭಯವನ್ನು ಕೊಟ್ಟನು ಎಂಬವಾಗಿ ಮುನಿವರನು ಹೇಳಿದನು ಆದುದರಿಂದ ಶ್ರೀರಾಮಚಂದ್ರನೇ ಶ್ರೀಮನ್ನಾರಾಯಣ ಮೂರ್ತಿಯು ಆದಿಲಕ್ಷ್ಮಿಯೇ ಈ ಸೀತೆ ವಾನರಭಲ್ಲೂಕಾದಿಗಳೇ ದೇವತೆಗಳು ಇದು ಸತ್ಯ ಅವನ ವೈರ ಎಂಬ ನಮಗೆ ಕೇಡುತಪ್ಪದು ಆ ಮಹಾತ್ಮನಿಗೆ ಸೀತೆಯನ್ನೊಪ್ಪಿಸಿ ಅವನಿಗೆ ಶರಣಾಗತನಾಗು ಎಂದನು. ಅದಕ್ಕೆ ರಾವಣನು ಮಹಾಕೋಪದಿಂದ ಕಿಡಿಗಳನ್ನುದುರಿಸುತ್ತ ನಿನ್ನ ನೀತಿ ನನಗೆ ಬೇಡ ಅನಿಷ್ಟವಾದ ಈ ಮಾತುಗಳನ್ನು ಆಡುವದಕ್ಕಾಗಿ ನಿನ್ನನ್ನು ಎಬ್ಬಿಸಲಿಲ್ಲ ನಿನ್ನ ನಿರುತ್ಸಾಹವು ಇಷ್ಟಕ್ಕೆ ಸಾಕು ಹಗಲಿರುಳು ಅವನನ್ನು ಹೊಗಳುವದಕ್ಕೆ ಒಬ್ಬ ತಮ್ಮನು ಸಾಲದೇ ಅವನ ಜೊತೆಗೆ ನೀನೂ ಸೇರಿಕೊಂಡೆಯಾ ನಿನಗೆ ಭಯವುಂಟಾಗಿದ್ದರೆ ಮಲಗಿಕೋ ಹೋಗು ಅವರನ್ನು ಜಯಿಸುವದಕ್ಕೆ ನಾನೇ ಸಾಕು ಅವರ ಬಲವನ್ನು ನಾನು ಬಲ್ಲೆನು ಎಂದನು. ಕುಂಭಕರ್ಣನು ನಾನು ಕಾದಲಂಜುವುದಿಲ್ಲ ಮುಕ್ತಿಯು ಹಾದಿ ಮಾಸೀತು ಸೀತೆಯನ್ನು ತಂದಾಗಲೇ ನಿಮ್ಮ ಆಯುಷ್ಯ ಮುಗಿಯಿತು. ಈ ಹಗೆಯೊಡನೆ ಕಾದಿ ಗೆಲುವದು ಅಸಾಧ್ಯ ನಿನ್ನಲ್ಲಿ ನೀನೇ ಯೋಚಿಸಿ ನೋಡು ಎಂದನು. ಅದಕ್ಕೆ ರಾವಣನು ಎಲವೋ, ಈ ಸಮರಭಾರವನ್ನು ಇಳಿಸುವೆ ಎಂದು ನಿನ್ನನ್ನು ಎಬ್ಬಿಸಿದರೆ ಯುದ್ಧಕ್ಕೆ ಹೋಗದೆ ನೀತಿಗಳನ್ನು ಹೇಳುತ್ತಿರುವೆಯಾ ನೀನು ಕಲಿತದ್ದನ್ನು ನನ್ನೆದುರಿಗೆ ಹೇಳಬೇಡ ನಿದ್ರೆಯುಳ್ಳ ನೀಚನನ್ನು ನಿಲ್ಲಿಸಿಕೊಂಡು ಕೇಳಿದೆನೇ ನನ್ನ ತಪ್ಪು ಮೊದಲಿನಹಾಗೆಯೇ ಸತ್ತವನಂತೆ ಬಿದ್ದಿರು ಹೋಗು ಎಂದು ಗರ್ಜಿಸಲು ಕುಂಭಕರ್ಣನು ಎಲೈ ಅಗ್ರಜನೇ ಮೋಹಕ್ಕೆ ಮಾರುಹೋದವರು ಕೆಡುವರೆಂದು ಹೇಳಿದರೆ ನಿನಗಿಷ್ಟು ಕೋಪವೆ ಹೀಳಿಯುವನ್ನು ತಾ ನನ್ನ ಕಾಳಗದ ಪರಿಯನ್ನು ನೋಡು ಶೂಲಿಯು ಅಡ್ಡವಾಗಿ ಬಂದರೂ ನಿಗ್ರಹಿಸದೆ ಬಿಡೆನು ಎನಲು, ರಾವಣನು ಎಲೈ ತಮ್ಮನೇ ! ನಾವಂತೂ ಮದನನ ಬಲಿಗೆ ಸಿಕ್ಕಿದವರು ಶೂರರಾದವರು ಮರಣಕ್ಕಂಜಿ ಯುದ್ಧಕ್ಕೆ ಹೋಗದೆ ನಿಂತರೆ ಜಗವು ಹಾಸ್ಯಮಾಡಿ ನಗರೇ ಪ್ರಾಣದಾಸೆಯನ್ನು ಬಿಟ್ಟು ಯುದ್ಧವನ್ನು ಮಾಡಿ ಮುಕ್ತಿಗೆ ಅನುಗನೇ ಸಾಧನವು ಯುದ್ಧದಲ್ಲಿ ಸಾಯುವದೆ ಕೀರ್ತಿ ನೀನು ಇವೆಲ್ಲವನ್ನೂ ತಿಳಿದು ಯುದ್ಧಮಾಡು ಎಂದು ತಾಂಬೂಲವನ್ನು ಕೊಟ್ಟು ಕಳುಹಿಸಿದನು.

## ಕುಂಭಕರ್ಣನ ಯುದ್ಧ.

ಆಗ ಕುಂಭಕರ್ಣನು ಅಣ್ಣನಿಂದ ತಾಂಬೂಲವನ್ನು ತೆಗೆದುಕೊಂಡು ಎಲೈ ಅಣ್ಣನೇ ? ನನ್ನ ಮಾತನ್ನು ಆಲೈಸು ಒಪ್ಪಿರುವ ಕಪಿಬಲವೆಂಬ ಕಡಲನ್ನು ಕುಡಿದು, ಆ ಕಪಿಗಳ ದೊರೆಯನ್ನು ಹಿಡಿದು ನಿನ್ನ ಬಳಿಗೆ ತರುವೆನು, ಶ್ರೀರಾಮನೊಡನೆ ಲೋಕತ್ರಯವೂ ಮೆಚ್ಚುವಂತೆ ಕದನವನ್ನೆಸಗುವೆನು ಜಯಪರಾಜಯಗಳು ದೈವಾಧೀನ, ಇದರಮೇಲೆ ನಿನ್ನ ಭಾಗ್ಯವಿದ್ದಂತೆ ಆಗಲಿ ಎಂದು ಹೇಳಿ ನಡೆದು ಬರುವ ಅಂಜನಾದ್ರಿಯೋ ಎನ್ನುವಂತೆ ಯುದ್ಧಕ್ಕೆ ಹೊರಡಲು ರಾವಣನ ದಿವ್ಯವಾದ ರತ್ನಾಭರಣಗಳನ್ನು ತಾನೇ ಅಲಂಕರಿಸಿ ಅಂಜನಾದ್ರಿಯ ಶಿಖರದಲ್ಲಿ ಮಂದರ ಪರ್ವತವನ್ನಿಟ್ಟಂತೆ ಕುಂಭಕರ್ಣನ ತಲೆಯಲ್ಲಿ ಕಿರೀಟವನ್ನಿಡಲು ಥಳಥಳಿಸುತ್ತಿತ್ತು ಕಾರ್ಮುಗಿಲ ಮಧ್ಯದ ಇಂದ್ರಚಾಪದಂತೆ ಅವನ ಕೊರಳಿನಲ್ಲಿ ಪಂಚರತ್ನದ ಪದಕವು ಪ್ರಕಾಶಿಸಿತು ಮೇರುಪರ್ವತದ ಹಿಂದೆಯೂ ಮುಂದೆಯೂ ಸೂರ್ಯಚಂದ್ರರು ಪ್ರಕಾಶಿಸಿದಂತೆ ಅವನ ಕಿವಿಗಳಲ್ಲಿ ಕುಂಡಲಗಳು ಮೆರೆದವು ಸಮುದ್ರಮಥನಕಾಲದಲ್ಲಿ ಮಂದರ ಪರ್ವತವು ವಾಸುಕಿಯಿಂದ ಸುತ್ತಲ್ಪಟ್ಟು ಮೆರೆದಂತೆ ಅವನ ಕಾಲುಗಳು ಕಡಗಗಳಿಂದ ಪ್ರಕಾಶಿಸಿತು ಆಕಾಶದಲ್ಲಿ ಶೋಭಿಸುವ ಸಂಧ್ಯಾರಾಗದಂತೆ ಅವನು ಉಟ್ಟ ಚಂದ್ರಗಾವಿಬಟ್ಟೆಯು ಅಂದವಾಗಿತ್ತು ಈ

ರೀತಿಯಾಗಿ ಅಲಂಕರಿಸಿಕೊಂಡು ಕುಂಭಕರ್ಣನು ಸಕಲ ವಾದ್ಯಗಳೊಡನೆ ಕೂಡಿ ಅರಮನೆಯನ್ನು ಬಿಟ್ಟು ಕಬ್ಬಿಣದ ಹೊರಬೆಗಳೂ, ಉಕ್ಕಿನ ಅಚ್ಚೂ, ಲೋಹದ ಗಾಲಿಗಳುಳ್ಳದ್ದಾಗಿ ಹದಿನಾರು ಸಾವಿರ ಆನೆಗಳಿಂದ ಕಟ್ಟಲ್ಪಟ್ಟ ರಥದಲ್ಲಿ ಕುಳಿತನು, ಅವನ ಹಿಂದೆ ಗಜತುರಗ ಬಲವು ಸಿದ್ಧವಾಗಿ ಹೊರಟಿತು, ಇಷ್ಟು ಸಮುಕಟ್ಟಿನಿಂದ ಬಂದು ತೇರನ್ನೇರಿ ತೊಂಭತ್ತು ಚಕ್ರಂಗಳು ಚೀತ್ಕರಿಸಲು, ಕೋಟೆಯು ಬಾಗಿಲು ಮುರಿದು ಬಿದ್ದೀತೆಂದು ಏಳುಸುತ್ತಿನ ಕೋಟೆಯನ್ನು ಒಂದು ಹೆಜ್ಜೆಗೆ ದಾಟಿ ಬರುವ ಕುಂಭ ಕರ್ಣನನ್ನು ನೋಡಿ ಕಪಿಬಲವೆಲ್ಲವೂ ಪಲಾಯನ ಸೂಕ್ತಕ್ಕೆ ಆರಂಭಮಾಡಿತು, ಅವನೊಡನೆ ಎರಡು ಕೋಟಿ ಬ್ರಹ್ಮರಾಕ್ಷಸರೂ, ಹತ್ತು ಕೋಟಿ ಶಾಕಿನೀ ಢಾಕಿನೀಗಣಗಳೂ ಅವನನ್ನು ಹೊಗಳುತ್ತಾ ಬರುತ್ತಿದ್ದವು ಅವನ ಕತ್ತಿಯ ಬೆಳಕು ಸೂರ್ಯನನ್ನು ತಿರಸ್ಕರಿಸುವ ಹಾಗಿತ್ತು ಕಲ್ಪಾಂತಭೈರವನ ಹೊಳಪಿನಂತೆ ಅವನ ಕೋರೆದಾಡೆಯು ರಂಜಿಸಿತು, ಅವನ ದೈಯ್ಯ ಕೃಷ್ಣವರ್ಣವು ಹಗಲಲ್ಲಿ ಕತ್ತಲೆಯನ್ನುಂಟುಮಾಡಿತು. ಅವನನ್ನು ನೋಡಿ ಸುಗ್ರೀವನು ಅಂಗದನು ಹನುಮನು ಅಣಗಿದರು, ನೀಲನು ಕುಂದಿದನು, ಇನ್ನು ಜಾಂಬವ ಸುಷೇಣ ಗವಯ ಗವಾಕ್ಷ ಮೊದಲಾದ ಕಪಿವೀರರ ಮುಖಕಮಲಗಳಿಗೆ ಮಂಜು ಮುಸುಕಿದಂತಾದುದು ಮಿಕ್ಕವರ ಅವಸ್ಥೆಯನ್ನು ಹೇಳಲೇಕೆ ಧೀರೋಧಾತ್ತನಾಯಕನಾದ ರಘುವೀರನು ಅವನನ್ನು ಕಂಡು ಓಡುವ ತನ್ನ ಬಲವನ್ನು ನೋಡುತ್ತಾ ಇವನು ಯಾರು ಎಂದು ವಿಭೀಷಣನನ್ನು ಕೇಳಲು, ಅವನು ಜೀಯಾ? ಆಲೈಸು ಈತನು ನನಗೆ ಅಣ್ಣನು, ರಾವಣನ ತಮ್ಮನು, ಪುಲಸ್ತ್ಯಬ್ರಹ್ಮನ ಮೊಮ್ಮಗನು ವಿಶ್ರವಸ್ಸಿನ ಮಗನು ಇವನ ಚರಿತ್ರೆಯನ್ನು ಹೇಳಿದರೆ ಸ್ವಾಮಿಗೆ ಆಶ್ಚರ್ಯವಾದೀತು ಇವನು ಹುಟ್ಟಿದ ಏಳು ದಿನಗಳಲ್ಲಿ ಜಗತ್ತನ್ನು ನುಂಗಿದನು. ಆದಕಾರಣ ಬ್ರಹ್ಮನು ಇವನಿಗೆ ಆರು ತಿಂಗಳು ನಿದ್ರೆಯಲ್ಲಿದ್ದು ಒಂದುದಿನ ಎದ್ದು ಆಹಾರವನ್ನು ತಿಂದು ಮತ್ತು ಆರುತಿಂಗಳು ಮಲಗಿ ನಿದ್ರೆಮಾಡುವಂತೆಯೂ ನಿದ್ರೆಗೆ ಭಂಗ ಬಂದಾಗ ಮರಣವೆಂತಲೂ ವರವನ್ನು ಕೊಟ್ಟಿರುವನು ಇವನು ಕಾಳಗಕ್ಕೆ ನಿಂತರೆ ಇವನೊಡನೆ ಸೆಣಸುವದಕ್ಕೆ ಹರಿಹರ ಬ್ರಹ್ಮಾದಿಗಳಿಗೂ ಅಸಾಧ್ಯ ಪರಸ್ತ್ರೀಹರಣದ ಪಾಪದಸೆಯಿಂದ ಇವನು ಸತ್ತರೆ ಸಾಯಬೇಕೇ ಹೊರತು ಇನ್ನಾವ ವಿಧದಿಂದಲಾದರೂ ಇವನಿಗೆ ಸಾವು ಉಂಟಾಗಲಾರದು. ಇವನ ತ್ರಿಶೂಲದ ಮೊನೆಯಲ್ಲಿ ಯಮುನ ಎದೆಯ ರಕ್ತವು, ಬಲದ ಪಲಾಯನವನ್ನು ಚಿತ್ತಯಿಸು ಮೇಲೆ ಒಂದು ವಿಮಾನವಾದರೂ ಇದೆಯೆ ಇವನು ರಣರಂಗಕ್ಕೆ ಬರುವದಕ್ಕೆ ಮುಂಚೆಯೆ ಈ ಕಪಿಗಳು ಇವನನ್ನು ಗೆಲ್ಲಲಾರರು ನೀವೇ ಇವನೊಡನೆ ಕಾದಿ ಸಂಹರಿಸಬೇಕು ಎಂದನು. ಹೀಗೆ ರಾಮ ವಿಭೀಷಣರು ಮಾತಾಡುತ್ತಿರಲ್ಲಿ ಆ ಕುಂಭಕರ್ಣನ ಎದುರಿನಲ್ಲಿ ಸುಗ್ರೀವನು ಅವರ ಬೆಂಬಲವಾಗಿ ಹನುಮ, ನೀಲ, ಅಂಗದ, ಜಾಂಬವಂತ ಮೊದಲಾದವರು ಗಿರಿತರುಗಳನ್ನು ಸಂಗಡಿಸಿಕೊಂಡು ನಿಂತರು, ಮೃತ್ಯುವನ್ನು ಕೆಣಕಿದಂತೆ ಅವನ ತಲೆಯಮೇಲೆ ಪರ್ವತಗಳನ್ನು ತರುಗಳನ್ನು ರಾಶಿಹಾಕಿದರು ಅವನ ಉಸುರಿನ ಗಾಳಿಯಲ್ಲಿ ಆ ಕಪಿಗಳು, ಅವರು ತಂದು ಹಾಕಿದ ಬೆಟ್ಟಗುಡ್ಡಗಳೂ, ತರುಗಳೂ ಹಾರಿಹೋದವು, ಹೊಕ್ಕ ಮೊರೆಯಲ್ಲಿ ಕೋಟಿ ಕಪಿಗಳನ್ನು ಇಕ್ಕಿ ಚಾಪದನಾರಿಗೆ ಇಪ್ಪತ್ತುಕೋಟಿ ವಾನರನ್ನು ನೆಕ್ಕಿ ಕೈಗಳಿಂದ ಬಾಚಿಕೊಂಡು ಅರ್ಬುದ ಕೋಡಗಗಳನ್ನು ಮುಕ್ಕಿದನು, ಮಹಾರ್ಬುದ ಸಂಖ್ಯೆಯ ವಾನರರನ್ನು ನುಂಗಿದನು, ಗಜನ ಬಲವು ಕಂದಿತು ನೀಲನ ಬಲವು ನೆಗ್ಗಿತು, ಜಾಂಬವನ ಒಡು ಒಡೆಯಿತು, ಅಂಗದನ ಸೈನ್ಯವು ಸಡಲಿತು, ಅಂಜನಾಸುತನ ಮೋಹರವು ಅಂಜಿತು ಗಜಬಜೆಯಾದ ಮಿಕ್ಕ ವಾನರ ಬಲದ ಓಟದ ರಣನಾಟಕವನ್ನು ಬಣ್ಣಿಸಲಳವಲ್ಲ ಕಾಲಭೈರವನ ಕಾಲಾಟವೋ, ಕಲಿಕುಂಭಕರ್ಣನ ಕದನದ ಕೇಳಿಯೋ ನಾನು ಕಾಣೆ ಇಂದ್ರನ ಪುರವು ಬೆದರಿತು,

ಬ್ರಹ್ಮಲೋಕದಲ್ಲಿ ಹೊದುಕುಳಿಯಾಯಿತು. ಯಮಪುರದ ಮಾರ್ಗವು ನಿಬಿಡಿತವಾಯಿತು ಹೀಗೆ ಕಪಿಕುಲವು ನಾಶವಾಗುತ್ತಿರಲು ವಾನರಬಲವು ತನ್ನ ತಾಯಿಗೆ ನನ್ನನ್ನು ಕೊಂದು ಕೊಟ್ಟ ರಾಜ್ಯ ಶ್ರೀಪಟ್ಟಕ್ಕೆ ಆಶೆಪಟ್ಟು ನಮ್ಮನ್ನು ಒಡ್ಡಿದನು ಸುಗ್ರೀವನು, ಸಾಯಲಿ, ರಾಮನು ಮಡದಿಯ ಮೋಹದಲ್ಲಿ ಅಸುವನ್ನು ಬಿಡಲಿ ನಮಗೇನು, ಸಂಬಳವೋ ಸಾರಿಗೆಯೋ ಕಾಡಿನ ಮರಗಳಲ್ಲಿ ಹಣ್ಣುಹಂಪಲುಗಳನ್ನು ತಿಂದುಕೊಂಡು ಕೆರೆ ಕುಂಟೆಗಳಲ್ಲಿ ನೀರುಕುಡಿದು ಬಾಳುವುದು ಬಿಟ್ಟು ಶ್ರೀರಾಮಸುಗ್ರೀವರಿಗೋಸ್ಕರ ಇವನ ಕೈಗೆ ಸಿಕ್ಕಿ ಸಾಯುವದು ನಮ್ಮ ಹಣೆಯ ಬರಹವಾಗಿದೆ ಇವನ ಕೈಯಲ್ಲಿ ಸಾಯುವುದೇಕೆ ಎಂದು ಕಪಿಗಳು ಸಿಕ್ಕಿದ ಕಡೆಗೆ ಪ್ರಾಣಭಯದಿಂದ ಓಡಿ ಹೋಗುತ್ತಿದ್ದರು ಸುಗ್ರೀವನ ಮೇಲಣ ಅಭಿಮಾನದಿಂದ ಹನುಮಂತ ಅಂಗದ ಪ್ರಮುಖರು ಪಂಚಪ್ರಾಣಗಳನ್ನು ಕೈಯಲ್ಲಿ ಹಿಡಿದುಕೊಂಡು ಗಿರಿತರುಗಳನ್ನು ತಂದು ಕುಂಭಕರ್ಣನ ಮೇಲೆ ಎಸೆಯುತ್ತಿರಲು ಅವೆಲ್ಲವೂ ಅವನ ಮೈಕೂದಲುಗಳಿಗೆ ತಗಲಿ ಪುಡಿಯಾಗಿ ಉದುರುತಿದ್ದವು ಸಿಡಿಲು ಹೊಡತಕ್ಕೆ ಸೀಕರಿಗಳಾದ ಗಿರಿಯು ಹಂಚಿಕಡ್ಡಿಯ ಪೆಟ್ಟಿಗೆ ಬಗ್ಗೀತೆ ನಿಮಗೆ ವಿವೇಕವಿಲ್ಲ ಎನ್ನುತ್ತಾ ಕಾದುತ್ತಿರುವ ಕಪಿವೀರರನ್ನು ಗದೆಯಿಂ ಹೊಡೆದು ರಕ್ತವನ್ನು ಕಾರಿಕೊಳ್ಳುವಂತೆ ಮಾಡುತ್ತಿದ್ದನು ಅದಿತಿಸುತ ನಟ್ಟದ ಕಗ್ಗತ್ತಲೆಯಂತೆ ಮತ್ತೆ ಕಪಿಬಲ ಸರಿಯೆ ಕುಂಭಕರ್ಣನು ರಾಮನನ್ನು ಹುಡುಕುತ್ತಾ ಬರುತ್ತಿರಲು ಸುಗ್ರೀವನು ಎತ್ತಹೋಗುವೆ ಎಲಾ ಖೂಳ ನನ್ನ ಕಡೆಗೆ ತಿರುಗು ಎಂದು ಹೇಳುತ್ತಾ ಅವನನ್ನು ಎದುರಿಸಲು ಜಾಂಬವಂತನು ಎಲೈ ಕಪಿಗಳಿರಾ ಹೆದರಬೇಡಿ ಯುದ್ಧದಲ್ಲಿ ಸತ್ತವರಿಗೆ ವೀರಸ್ವರ್ಗವು ಲಭಿಸುವುದು, ಪ್ರಾಣಭಯದಿಂದ ಓಡಿ ಹೋದರೆ ನರಕಪ್ರಾಪ್ತಿಯಾಗುವುದು ನಿಮ್ಮ ಪ್ರಾಣಗಳು ಬ್ರಹ್ಮಕಲ್ಪಪರಿಯಂತರ ಇರಲಾರವು ಹುಚ್ಚುತನವನ್ನು ಬಿಟ್ಟು ಸ್ವಾಮಿಕಾರ್ಯದಲ್ಲಿ ಮನಸ್ಸಿಟ್ಟು ಪುಣ್ಯಕೀರ್ತಿಗಳನ್ನು ಸಂಪಾದಿಸಿಕೊಳ್ಳಿ ಎಂದು ಹೇಳುತ್ತಿರಲು ಧೈರ್ಯವನ್ನು ತಂದುಕೊಂಡು ಮೊದಲಿನಂತೆ ಕಪಿಬಲವು ಪ್ರಳಯಕಾಲದಲ್ಲಿ ಸಮುದ್ರವು ಉಕ್ಕಿ ಅದರುವಂತೆ ಕುಂಭಕರ್ಣನನ್ನು ತರುಗಿರಿಗಳಿಂದ ಮುತ್ತಿ ಹೊಡೆದರು ಆನೆಯು ಸೊಳ್ಳೆಗೆ ಹೆದರುವುದೆ ಮಂಜುಮುಸುಕಿದರೆ ಸೂರ್ಯನು ಬೆಚ್ಚುವನೆ ಎಂದಿಗೂ ಇಲ್ಲ ಅಪರಂತೆ ಖಳನು ಕಪಿಬಲವನ್ನು ನಾಶಮಾಡುತ್ತಾ ಒಳನುಗ್ಗಿ, ಯಮನ ಮನೆಗೆ ಸಾಗಿಸಿದನು ಜಗಳಕ್ಕೆ ಭಯಪಡದೆ ಬಂದ ಕಪಿಗಳನ್ನು ಕಳವಳಗೊಳ್ಳುವಂತೆ ಮಾಡಿದನು ಹೊಂಚಿಹೋರುವವರನ್ನು ಸಂಚುಮಾಡಿ ನುಂಗಿದನು ಅವನ ಬಾಯೊಳಕ್ಕೆ ಹೋದ ಭಟರು ಅವನ ನವದ್ವಾರಗಳಲ್ಲಿ ಹೊಕ್ಕು ಹೊರಗೆ ಬಂದರು ಅವನ ಹಲ್ಲುಗಳ ಸಂದುಗಳಲ್ಲಿ ಸಿಕ್ಕಿ ಸತ್ತ ಕಪಿಗಳಂತೂ ಲೆಕ್ಕವೇಯಿಲ್ಲ ಕುರಿಯ ಹಿಂಡಿಗೆ ಬಿದ್ದ ತೋಳನೋ ಮದದಾನೆಗಳ ಹೋರಾಟದ ಸಿಂಹವೋ ಹುಲ್ಲೆಗಳ ಗುಂಪಿಗೆ ನುಗ್ಗಿದ ಹೆಬ್ಬುಲಿಯೋ ಸರ್ಪಸಂಕುಲಕ್ಕೆರಗಿದ ಗರುಡನೋ ಎಂಬಂತೆ ಕುಂಭಕರ್ಣನು ಕಪಿಬಲವನ್ನು ಬಹಳವಾಗಿ ಕೊಂದು ರಾಮನನ್ನು ಹುಡುಕುತ್ತಾ ನೀನೇನೋ ಮಡದಿಯನ್ನು ಕಾಣದೇ ಮರುಗುವ ದಶರಥ ತನಯನು ಕಪಿಗಳನ್ನು ಕೊಲ್ಲಿಸುವವನು ಎಂದು ಸಮೀಪಕ್ಕೆ ತರುತ್ತಿರಲದನ್ನು ಕಂಡು ವೀರನಾದ ಮಾರುತಿಯು ಕೋಪದಿಂದ ಕಿಡಿಕಿಡಿಯಾಗಿ ಪ್ರಳಯಕಾಲದ ವಜ್ರಪ್ರಹಾರದಂತೆ ಮುಷ್ಟಿಯಿಂದ ಬಲವಾಗಿ ತಿವಿಯಲು ಕಣ್ಣು ಕತ್ತಲೆ ಮುಚ್ಚಿಕೊಂಡು ಬಂದು ಸ್ವಲ್ಪಹೊತ್ತು ಕಳವಳಿಸಿ ಚಟುಲಪಟುಭಟನಾದ ಹನುಮಂತನನ್ನು ಶೂಲದ ತುದಿಯಿಂದ ತಿವಿದನು ಹನುಮಂತನು ಭೀತಿಗೊಂಡು ಎಡಗೈಯಿಂದ ಶೂಲವನ್ನು ಆಚೆಗೆ ತಳ್ಳಿ ಬಲಗೈ ಮುಷ್ಟಿಯಿಂದ ಎದೆಯೊಡೆಯುವಂತೆ ಗುದ್ದಿದನು, ಆ ಪೆಟ್ಟಿನಿಂದ ಬಾಯಿಯಲ್ಲಿ ರಕ್ತಸುರಿದರೂ ಲಕ್ಷ್ಯವಿಡದೆ, ತನ್ನ ಕೈಲಿದ್ದ ಪರಿಘಾಯುಧದಿಂದ ಮಾರುತಾತ್ಮಜನನ್ನು ಅಪ್ಪಳಿಸಲು ಹನುಮನು ಕಡುಕೋಪದಿಂದ ಹುಬ್ಬುಗಳನ್ನು ಗಂಟಿಕ್ಕಿ

ಕೊಂಡು ಕಣ್ಣುಗಳಲ್ಲಿ ಕಿಡಿಗಳನ್ನು ಸುರಿಸುತ್ತ ಮುಷ್ಟಿಯಿಂದ ಅಳ್ಳೆಯನ್ನು ಬಲವಾಗಿ ಗುದ್ದಲು ತುಪ್ಪದಲ್ಲಿ ಅದ್ದಿ ತಿಂದ ಆಹಾರವು ಹೊರಹೊರಟು ನೆಲಕ್ಕೆ ಬಿದ್ದಿತು, ಆಗ ಕುಂಭಕರ್ಣನು ಹಾ! ಹಾ!! ಈ ಕಪಿಬಲದಲ್ಲಿ ನೀನೊಬ್ಬನೇ ಶೂರನು ಇಂದ್ರಜಿತುವಿಗೆ ಸಮಾನನು ಮತ್ತೊಂದಾವರ್ತಿ ನನ್ನೊಡನೆ ಯುದ್ಧಕ್ಕೆ ನಿಂತರೆ ಶೂರನೆಸರಿ ಎಂದು ಹನುಮನನ್ನೂ ಆಯುಧದಿಂದ ತಿವಿದು ಹೊರಿಸಿದನು ಆಗ ಆಂಜನೇಯನು ರಣರಂಗಕ್ಕೆ ಐನೂರುಮಾರು ದೂರದಲ್ಲಿ ಬಿದ್ದನು ಅರಘಳಿಗೆಯಮೇಲೆ ಮೆಲ್ಲಗೆ ಕೈಯೂರಿಕೊಂಡು ಎದ್ದು ಕುಂಭಕರ್ಣನನ್ನು ಅರಸಿಕೊಂಡು ಹೋಗುತ್ತಿರಲು ಸುಗ್ರೀವನು ಮಾರಾಂತು ಅವನ ಹಾಗೆಯೇ ತಾನು ಘೋರಾಕಾರವಾಗಿ ಬೆಳೆದು ದೇವತೆಗಳು ಹೊಗಳುವಂತೆ ಗಿರಿತರುಗಳಿಂದ ಹೊಯ್ದನು. ಆಗ ಕುಂಭಕರ್ಣನು ಆಹಾ! ಬಲದೊಳಗೆ ವಾಲಿಯೇ ಶೂರನು ಅವನನಂತರ ನೀನೇ ಶೂರನು ಎಂದು ತಲೆಯನ್ನು ತೂಗುತ್ತಿರಲು ಸುಗ್ರೀವನು ಎಲಾ ಖಳಶಿಖಾಮಣಿಯೇ ಕಪಿರಾಜನೆಂಬುವದನ್ನು ಕೇಳಿ ಅರಿಯೆಯಾ ರಣಕೇಳಿಯಲ್ಲಿ ಕೈಗುಂದಿ ಸೋಲುವ ಸುಭಟನೇ ನಾನು ಎಂದು ಸಿಡಿಲಿನಂತೆ ಘರ್ಜಿಸಿ ಮುಷ್ಟಿಯಿಂದ ತಿವಿಯಲು ಕುಂಭಕರ್ಣನು ತಲೆಕೆಳಗಾಗಿ ನೆಲಕ್ಕೆ ಬಿದ್ದನು ಅವನು ಬಿದ್ದ ಪೆಟ್ಟಿಗೆ ನೆಲವು ಗುಂಡಿಯಾಯಿತು ಮತ್ತೆ ಚೇತರಿಸಿಕೊಂಡು ಎದ್ದು ಎಲಾ! ನೀಚ ಈ ನನ್ನ ಬಾಣಕ್ಕೆ ನೀನು ತುತ್ತಾಗದಿದ್ದರೆ ನಾನು ಮೂಗು ಕೊಯ್ಸಿಕೊಳ್ಳುವೆನು ನೋಡು ಎಂದು ಕ್ರೂರವಾದ ಶಕ್ತಿಯಿಂದ ಹೊಡೆಯಲು ವ ಹಾಜಾಗರೂಕನಾಗಿ ಮೈಗಾವಲಿಗಿದ್ದ ವೀರಾಂಜನೇಯನು ಪುಟನೆಗೆದು ಸುಗ್ರೀವನಿಗೆ ಹಾನಿಯುಂಟಾಗದಂತೆ ಆ ಶಕ್ತಿಯನ್ನು ಕೈಯಿಂದ ಹಿಡಿದುಕೊಂಡು ರೋಷಾವೇಷದಿಂದ ಪುನಃ ಅದರಿಂದಲೆ ಕುಂಭಕರ್ಣನನ್ನು ಹಿಡಿದುಕೊಂಡು, ಎಲೈ ಮಾರುತಿಯೇ ಈ ಆಯುಧವನ್ನು ಪುನಃ ಯಾವನು ಅವನ ಮೇಲೆ ಎಸೆಯುವನೋ ಅವನ ತಲೆ ಒಡೆದುಹೋಗಲಿ ಎಂದು ಕುಂಭಕರ್ಣನಿಗೆ ವರವುಂಟು ಆದುದರಿಂದ ಇವನ್ನು ಅವನ ಮೇಲೆ ಹಾಕಬೇಡ ಎಂದು ಅದನ್ನು ಮೊಣಕಾಲಿನಿಂದ ಮುರಿದು ಸಮುದಕ್ಕೆ ಹಾಕಿಬಿಟ್ಟನು ಸೂರ್ಯನು ತನ್ನ ಮಗನನ್ನು ರಕ್ಷಿಸಿದನೆಂಬ ಸಂತೋಷದಿಂದ ರತ್ನಖಚಿತಗಳಾದ ಎರಡು ಕುಂಡಲಗಳನ್ನು ಕೊಟ್ಟನು ತ್ರಿಶೂಲಾಯುಧವು ತೀರಿಹೋದ್ದರಿಂದ ಕುಂಭಕರ್ಣನು ವ್ಯಸನಪಟ್ಟು ನೆಗೆದುಬಂದು ಸುಗ್ರೀವನನ್ನು ಹಿಡಿದುಕೊಂಡು ಇವನಲ್ಲವೆ ಕಪಿನಾಯಕನು ಇವನನ್ನು ನಮ್ಮಣ್ಣನ ಬಳಿಗೆ ಕೊಂಡೊಯ್ಯುವೆನು ಆಮೇಲೆ ರಾಮಲಕ್ಷ್ಮಣರನ್ನು ಜಯಿಸುವದು ಅಗಾಧವಲ್ಲ ಕಪಿಬಲವೆಲ್ಲವೂ ಓಡಿಹೋಗುವದು ಎಂದು ಅವನನ್ನು ಕಂಕುಳಲ್ಲಿ ಇರಿಕಿಕೊಂಡು ಲಂಕೆಯಕಡೆಗೆ ತಿರುಗಲು ಅಯ್ಯೋ ಖಳನಕೈಗೆ ಸುಗ್ರೀವನು ಸಿಕ್ಕಿದನೆಂದು ಕಳವಳಪಡುತ್ತ ಶ್ರೀರಾಮನು ಆಂಜನೇಯನ ಮುಖವನ್ನು ಲಕ್ಷ್ಮಣನ ಮುಖವನ್ನೂ ನೋಡಲು ಅವರಿಬ್ಬರೂ ಖಳನ ಮೇಲೆ ಯುದ್ಧಕ್ಕೆ ಬಂದುದನ್ನು ನೋಡಿ ಸುಗ್ರೀವನು ಅವರನ್ನು ಕುರಿತು ಇವನಿಗೆ ಮಾಡುವ ಶಿಕ್ಷೆಯನ್ನು ತೋಡುತ್ತಿರಿ ನಗುವವನು ಮತ್ತಿಷ್ಟು ನಕ್ಕು ಹೇಳನಮಾಡುವಂತೆ ಮಾಡುವೆನೆಂದು ಸಮಾಧಾನ ಹೇಳಿದನು ಅವರು ಸುಗ್ರೀವನಿಗೆ ಮೈಗಾವಲಾಗಿ ಬೆನ್ನಟ್ಟಿದರು ಕುಂಭಕರ್ಣನು ಈ ದಿನದ ರಣದಲ್ಲಿ ಗೆದ್ದೆನು ಕಪಿರಾಜನನ್ನು ಹಿಡಿದೆನು ನಾಳೆಯ ಕೆಲಸ ನಾಳೆಯೇ ನೋಡಿಕೊಳ್ಳುವೆನೆಂದು ಪಟ್ಟಣವನ್ನು ಪ್ರವೇಶಿಸಿದನು ಆಗ ಪುರನಾರಿಯರೆಲ್ಲರೂ ಕಲಶಕನ್ನಡಿಗಳನ್ನು ಹಿಡಿದುಕೊಂಡು ಬಂದು ಬಹಳ ಸಂಭ್ರಮದಿಂದ ಇದಿರುಗೊಂಡರು ನಿಸ್ಸಾಳಗಳು ಮೊಳಗಿದವು ಧ್ವಜಗಳು ಕುಣಿದಾಡಿದವು ಹೆಂಗಸರು ಪನ್ನೀರುಗಳನ್ನೂ ಗಂಧೋದಕಗಳನ್ನೂ ಕುಂಭಕರ್ಣನಮೇಲೆ ಚೆಲ್ಲಿದರು ವಾರುಣಿ ಕಾದಂಬರಿ ಎಂಬ ಮದ್ಯಘಟಗಳನ್ನು ತಂದು ಕುಡಿಯಲಿಕ್ಕೆ ಕೊಡಲು ಕುಡಿದುದರಿಂದ ಮದವೇರಿ ಮೈಮರೆತು ಹಿಡಿದಿದ್ದ ಕಪಿರಾಜನನ್ನು ಬಿಟ್ಟುಬಿಟ್ಟನು ಆಗ ಕಪಿಸಾರ್ವಭೌಮನು

ಮೆಲ್ಲಗೆ ಕಂಕುಳಿಂದ ನುಣಚಿಕೊಂಡು ಹೆಗಲಮೇಲೆ ಕುಳಿತು ಎರಡು ಕಿವಿಗಳನ್ನು ಹಿಡಿದು ಹಲ್ಲಿನಿಂದ ಮೂಗನ್ನೂ ಕಚ್ಚಿ ತೆಗೆದುಕೊಂಡು ಮಹಾವೇಗದಿಂದ ಆಕಾಶಕ್ಕೆ ಹಾರಿ ಲಕ್ಷ್ಮಣಾಂಜನೇಯರು ನೋಡುತ್ತಿರಲು ಶ್ರೀರಾಮನ ಬಳಿಗೆ ಬಂದು ಕುಂಭಕರ್ಣನ ಕಿವಿಮೂಗುಗಳನ್ನು ಮುಂದಿರಿಸಿ ನಮಸ್ಕಾರಮಾಡಿ ನಿಂತುಕೊಂಡನು ಬಳಿಕ ಕಪಿಬಲವು ಸಂತೋಷದಿಂದ ಕುಣಿದಾಡಿತು.

ಇತ್ತ ಕುಂಭಕರ್ಣನು ಮಧ್ಯಪಾನದಿಂದ ವೈಮರಿತು ತನ್ನ ಕಿವಿಮೂಗುಗಳು ಹೋದುದನ್ನು ಅರಿಯದೆ ಸಂತೋಷದಿಂದ ಅಣ್ಣನಾದ ರಾವಣನ ಸಭೆಗೆ ಸರಸರನೆ ಬಂದು ನಮಸ್ಕರಿಸಿ ಎಲೈ ಅಗ್ರಜನೇ, ಜಗಳಕ್ಕೆ ಕಾರಣನಾದ ಕಪಿರಾಜನನ್ನು ಹಿಡಿದು ತಂದಿದ್ದೇನೆ ನೋಡು ಎಂದು ಕಂಕುಳನ್ನೆತ್ತಿ ಸುಗ್ರೀವನನ್ನು ಕಾಣದೆ ಶರೀರವೆಲ್ಲ ರಕ್ತಮಯವಾಗಿ ತನ್ನ ಕಿವಿಮೂಗುಗಳಿಲ್ಲದಿರುವದನ್ನು ಕಂಡು ನಾಚಿಕೆಯಿಂದ ತಲೆಬಾಗಿ ಸರ್ರನೆ ಹಿಂತಿರುಗಿ ಅಯ್ಯೋ! ನನ್ನ ಬಾಳನ್ನು ಸುಡಬೇಕು ಹಿಂದೆ ಶೂರ್ಪಣಖಿಗೆ ಆದಂತೆ ನನಗೂ ಆಯಿತು ಇನ್ನು ಬದುಕಿರುವುದಕ್ಕಿಂತಲೂ ಸಾಯುವುದೆ ಮೇಲು ಎಂದುಕೊಂಡು ಕಪಿಯು ಮಾಡಿದ ಕೇಡಿಗೆ ಸಂಕಟಪಡುತ್ತ ಹಿಂದಿರುಗಿ ಯುದ್ಧರಂಗಕ್ಕೆ ಬಂದು ಜಗಳಕ್ಕೆ ನಿಂತನು.

## ಕುಂಭಕರ್ಣನ ಯುದ್ಧಸಾಹಸ.

ಶ್ರೀರಾಮನು ಕುಂಭಕರ್ಣನು ಮತ್ತೆ ಕದನಕ್ಕೆ ಬಂದುದನ್ನರಿತು ಲಕ್ಷ್ಮಣನನ್ನು ಕುರಿತು ನಾನೇ ಇವನೊಡನೆ ಯುದ್ಧಕ್ಕೆ ನಿಲ್ಲುವೆನು ಕುಂಭಕರ್ಣನ ಪರಿವಾರಕ್ಕೆ ಎದುರಾಗಿ ನೀನು ಆಂಜನೇಯನ ಸಹಾಯದಿಂದ ಯುದ್ಧಮಾಡು ಹೆದರಬೇಡ, ನನ್ನ ರಕ್ಷಣೆಗಾಗಿ ಸುಗ್ರೀವಾಂಗದರೊಡನೆ ವಿಭೀಷಣನೆ ಇರುವನು ಎಂದು ಹೇಳಿ ತಮ್ಮನನ್ನು ಕಳುಹಿಸಿ ರಾಮನು ಧನುರ್ಬಾಣಗಳನ್ನು ಧರಿಸಿ ಕುಂಭಕರ್ಣನಿಗೆದುರಾಗಿ ನಿಂತು ಬಿಲ್ಲಿಗೆ ಹೆದೆಯನ್ನೇರಿಸಿ ಧ್ವನಿಮಾಡಲು ಖಳನಿಗೆ ಸಿಡಿಲು ಬಡಿದಂತಾಯಿತು. ಆಗ ಅವನು ರಾಮನೇ! ರಣಭೀಮನೆ, ಬಾ ಎನುತ್ತ ತನ್ನ ಉಕ್ಕಿನ ರಥವನ್ನು ಮುಂದಕ್ಕೆ ನೂಕಿ ಬಿಲ್ಲಿಗೆ ಬಾಣವನ್ನು ಜೋಡಿಸಿ ರಾಮನನ್ನು ಕುರಿತು ಎಲೈ ಹೇಡಿಯೆ ವನದಲ್ಲಿ ಸೀತೆಯನ್ನು ಕಳೆದುಕೊಂಡವನು ನೀನೋ, ಬಹು ಪರಾಕ್ರಮಶಾಲಿಯೆ ಸರಿ ನನ್ನ ರಣೋತ್ಸವವನ್ನು ನೋಡು ಎಂದು ಆರ್ಭಟಿಸಿದನು ಅದಕ್ಕೆ ಶ್ರೀರಾಮನು ಎಲೈ ಕುಂಭಕರ್ಣನೇ, ನೀವು ರಕ್ಕಸಕುಲದವರು ನಿಮಗೆ ದೇವತೆಗಳೂ ಅಂಜುವರು ನಾವು ಮನುಷ್ಯರು, ನಾವು ದೇವತೆಗಳಿಗೆ ಅಂಜುವೆವು ನಿಮಗೂ ನಮಗೂ ಸಮನೆ ಆದರೂ ನಮ್ಮ



ಎಸುಗೆಯ ಬಗೆಯನ್ನು ನೋಡು ಎಂದು ಬಾಣವನ್ನು ಹೂಡಿ ಹೊಡೆಯಲು ಅವನ್ನೂ ಆ ರಾಮಬಾಣಕ್ಕೆ ಪ್ರತಿಯಾಗಿ ಎಷ್ಟು ಬಾಣಗಳನ್ನು ಹೊಡೆದರೂ ಅದನ್ನು ಕತ್ತರಿಸಿಕೊಂಡು ಹೋಗಿ

ಕುಂಭಕರ್ಣನನ್ನು ಸೀಳಿ ರಕ್ತಪ್ರವಾಹವನ್ನು ಹರಿಸಿತು ಆಗ ಕುಂಭಕರ್ಣನು ಭೀತಿಗೊಂಡು ಬಾಣಗಳನ್ನು ಹೊಡೆದು ರಾಮನ ಮೈಯಲ್ಲಿಯೂ ರಕ್ತ ಸೋರುವಂತೆ ಮಾಡಿದನು, ಆಗ ಅವರ



ಕದನವು ಬಹಳ ಭಯಂಕರವಾಗಿದ್ದಿತು ಶ್ರೀರಾಮನ ಎಸುಗೆಯನ್ನು ನೋಡಿ ಬೃಹಸ್ಪತಿಯು ಆಶ್ಚರ್ಯಪಟ್ಟನು. ಕುಂಭಕರ್ಣನ ಎಸುಗೆಯನ್ನು ನೋಡಿ ಶುಕ್ರಾಚಾರ್ಯನು ವಿಸ್ಮಿತನಾದನು ಅವರಿಬ್ಬರ ಜಗಳದಲ್ಲಿ ಜಗತ್ತೆಲ್ಲಾ ಬಾಣಮಯವಾಗಿತ್ತು. ಆಗ ಶ್ರೀರಾಮನು ಕುಂಭಕರ್ಣನನ್ನು ಕುರಿತು ಎಲೈ ಅರಸನೇ ಕೇಳು ಕ್ರೂರವಾದ ರಾಕ್ಷಸರಲ್ಲಿ ಹೆಸರುವಾಸಿಯನ್ನು ಪಡೆದ ಶೂರನು ನೀನೆ ನಿನ್ನಂಥ ಜಗದೇಕವೀರನನ್ನು ಲೋಕತ್ರಯದಲ್ಲಿಯೂ ಕಾಣೆ, ನೀನು ನನಗೆ ಹಗೆಯಲ್ಲ ಆದ್ದರಿಂದ ನಿನ್ನನ್ನು ನಾನು ಕೊಲ್ಲುವದಿಲ್ಲ ನಮ್ಮ ಅಮೋಘವಾದ ಅಸ್ತ್ರಕ್ಕೆ ನಿಮ್ಮಣ್ಣನು ಗುರಿಯಾಗಿರುವನು ಅವನನ್ನು ಯುದ್ಧಕ್ಕೆ ಕಳುಹಿಸಿದರೆ ವಿಭೀಷಣನಂತೆ ನೀನು ಸುಖವಾಗಿರಬಹುದು ಎನಲು ಅವನು ಎಲೈ ರಾಮಚಂದ್ರನೇ, ನಾವು ತಾಮಸರು ನಮಗೆ ಅಸುರಕರ್ಮದ ಬಳಿಕೆ ಮೂರ್ಖರಿಗೆಲ್ಲ ನಾವು ಗುರುಗಳು ತಲೆಹೋದರೂ ಮುಂಡದಿಂದ ಕಾದಾಡುವೆವು ನೀವು ರಾಜೇಂದ್ರರು ಕರುಣಾಶಾಲಿಗಳು ನಿಮ್ಮ ಹೃದಯದ ಕರುಣಾರಸವನ್ನು ವಿಭೀಷಣನೊಬ್ಬನಲ್ಲಿಟ್ಟರೆ ಸಾಕು, ನಮಗೆ ನಿಮ್ಮ ಕೋಪವೆ ಇರಲಿ ಯುದ್ಧದಲ್ಲಿ ಕರುಣಾಕಟಾಕ್ಷವೇಕೆ ನನ್ನ ಬಾಣವನ್ನು ನೋಡು ಎಂದು ರಾಮನನ್ನು ಹೊಡೆದನು. ಆಗ ಆಕಾಶದಲ್ಲಿ ನೆರೆದಿದ್ದ ದೇವತೆಗಳು ಆಹಾ, ರಾಮನು ತಾನು ಲಕ್ಷ್ಮೀಪತಿಯಾಗಿ ವಿಶ್ವಾಮಿತ್ರನು ಕೊಟ್ಟ ವಜ್ರಕವಚವನ್ನು ಧರಿಸಿದುದರಿಂದ ಈ ರಾಕ್ಷಸನ ಬಾಣಘಾತವನ್ನು ಸಹಿಸಿದನು. ಹಾಗಲ್ಲದೆ ಮತ್ತಾರಿಂದತಾನೆ ಸಹಿಸಲಾದೀತು, ಎಂದು ಹೊಗಳುತ್ತಿರಲು ರಾಮನು ತೃಣಪ್ರಾಯನಾಗಿ ಕುಂಭಕರ್ಣನ ಬಾಣಗಳನ್ನು ಖಂಡಿಸಿ ಅವನ ಬಿಲ್ಲನ್ನು ಮುರಿದು ತುಂಡುಮಾಡಿದನು. ಬಳಿಕ ಕುಂಭಕರ್ಣನು ಕೋಪದಿಂದ ಕುದಿಯುತ್ತ ಬ್ರಹ್ಮನು ತನಗೆ ಕೊಟ್ಟಿದ್ದ ಶಕ್ತ್ಯಾಯುಧವನ್ನು ಸೆಳೆದು ಹೊಡೆಯುತ್ತ ಎಲೈ ರಾಮನೆ! ಇಗೋ ಹರಿಹರಬ್ರಹ್ಮಾದಿಗಳಿಗೆ ಅಸಾಧ್ಯವಾದ ಈ ಆಯುಧವನ್ನು ನೀನು ಸಹಿಸಿಕೊಂಡರೆ ಧೀರನೆಸರಿ! ಎಂದು ಹೇಳಿ ದಳ್ಳುರಿಯನ್ನು ಕಾರುತ್ತಿರುವ ಕ್ರೂರವಾದ ಶಕ್ತ್ಯಾಯುಧವನ್ನು ಪ್ರಯೋಗಿಸಲು ದೇವತೆಗಳು ಭಯಪಟ್ಟರು ಲೋಕಗಳು ತಲ್ಲಣಿಸುತ್ತಿದ್ದುವು.

ಆಗ ವಿಭೀಷಣನು ಆಹಾ? ರಾಮನ ಶಕ್ತಿಯು ಸ್ವಲ್ಪವೂ ಕುಂದಲಿಲ್ಲ ಈ ಪ್ರಳಯ ಶಕ್ತಿಯನ್ನು ತಡೆಯುವ ಧೀರಸಾರು ಎಂದು ಯೋಚಿಸಿ ಗಡಗಡನೆ ನಡುಗುತ್ತಾ ಶ್ರೀರಾಮನ

ಬಳಿಗೆ ಬಂದು ಕೈಮುಗಿದು ನಿಂತನು. ಶ್ರೀರಾಮನು ಅವನ ಇಂಗಿತವನ್ನರಿತು ಬ್ರಹ್ಮನನ್ನು ಮನಸ್ಸಿನಲ್ಲಿ ಸ್ಮರಿಸಿ ಧನುಸ್ಸಿನಲ್ಲಿ ವಾಯವ್ಯಾಸ್ತ್ರವನ್ನು ಹೂಡಿ ಆ ಶಕ್ತಿಯಮೇಲೆ ಪ್ರಯೋಗಿಸಲು ಅದು ಆ ಶಕ್ತಿಯನ್ನು ಆಕಾಶಕ್ಕೆ ಹಾರಿಸಿತು ಆ ಶಕ್ತಿಯು ಆಕಾಶಗಂಗೆಯ ನೀರನ್ನು ಹೀರಿ ಇಂದ್ರ ಮೊದಲಾದ ದೇವತೆಗಳನ್ನು ನೋಯಿಸಿ ಸತ್ಯಲೋಕಕ್ಕೆ ಹೋಗಿ ಬ್ರಹ್ಮನ ಬತ್ತಳಿಕೆಯಲ್ಲಿ ಸೇರಿಕೊಂಡಿತು. ಹೀಗೆ ಆ ಶಕ್ತಿ ಹೋದುದನ್ನು ಕಂಡು ಖಳನು ಕಂಗೆಡದೆ ರಾಮನನ್ನು ಪರಿಘಾಯುಧದಿಂದ ಹೊಡೆಯಲು ಆತನು ಬಾಣಗಳಿಂದ ಅದನ್ನು ಕತ್ತರಿಸಿದನು. ಮತ್ತೆ ಖಳನು ಮೇರುಪರ್ವತದಂತಿರುವ ಗದೆಯನ್ನೆಸೆಯಲು ಧನುರ್ವಿದ್ಯಾಪ್ರೌಢನಾದ ಶ್ರೀರಾಮನು ಆ ಗದೆಯು ರಣಭೂಮಿಯಲ್ಲಿ ಬಿದ್ದರೆ ಕಪಿಬಲವೆಲ್ಲಿ ನಾಶವಾಗುವುದೊ ಎಂದು ಯೋಚಿಸಿ ಐವತ್ತು ಬಾಣಗಳಿಂದ ಆ ಗದೆಯನ್ನು ತುಂಡುತುಂಡಾಗಿ ಕತ್ತರಿಸಿ ಕೆಡಹಲು ಅದು ಲಂಕೆಯಲ್ಲಿ ಬಿದ್ದಮಾತ್ರಕ್ಕೆ ಕುಂಭಕರ್ಣನ ಚತುರಂಗಬಲವು ಮಡಿದು ಮಾಯವಾಯಿತು.

## ರಾಮನಿಂದ ಕುಂಭಕರ್ಣನ ಸಂಹಾರ.

ಬಳಿಕ ನಿರಾಯುಧನಾದ ರಾಕ್ಷಸನು ಕೋಪದಿಂದ ಕುದಿಯುತ್ತ ಶ್ರೀರಾಮನಮೇಲೆ ತನ್ನ ರಥವನ್ನು ನೂಕಲು ದಾಶರಥಿಯು ಕೂಡಲೆ ರಥಕ್ಕೆ ಕಟ್ಟಿದ್ದ ಆನೆಗಳನ್ನು ಕೊಂದು ರಥವನ್ನು ಪುಡಿಪುಡಿ ಮಾಡಿ ಸಾರಥಿಯನ್ನು ಹೊಡೆದು ಕೆಡವಿದನು. ಹೀಗೆ ವಿರಥನಾಗಿ ಸಹಾಯಕರಿಲ್ಲದಿದ್ದರೂ ಕುಂಭಕರ್ಣನು ಕಠಾರಿಯನ್ನು ಹಿಡಿದು ಆರ್ಭಟಿಸಲು ರಾಮನು ಅವನ ಹಸ್ತವನ್ನೆ ಕತ್ತರಿಸಿದನು. ಆದರೂ ರಾಕ್ಷಸನು ಹೆದರದೆ ರಥದ ಚಕ್ರವನ್ನೆತ್ತಿಕೊಂಡು ತಿರುಗಿಸಿ ಹೊಡೆಯುತ್ತಿರಲು ರಾಮನು ಅವನ ತೋಳುಗಳನ್ನು ಕಡಿದುಹಾಕಿದನು. ಬಾಹುಗಳು



ಬಿದ್ದುಹೋಗಲು ರಾಕ್ಷಸನು ರೋಷಾವೇಶದಿಂದ ಮುಂದಲ್ಲಿ ಕಾದಾಡುವೆನೆಂದು ರಾಮನಮೇಲೆ ಬರುತ್ತಿರಲು ಶ್ರೀರಾಮನು ತನ್ನ ಬಾಣದಿಂದ ಅವನತಲೆಯನ್ನು ಹಾರಿಸಿದನು. ಹೀಗೆ ಶ್ರೀರಾಮನು ವೈಷ್ಣವಾಸ್ತ್ರದಿಂದ ಹಗೆಯಾದ ಕುಂಭಕರ್ಣನನ್ನು ಕೊಂದು ಲೋಕಕ್ಕೆಲ್ಲ ಸಂತೋಷವನ್ನುಂಟುಮಾಡಿದನು. ಕುಂಭಕರ್ಣನ ಸಂಹಾರದಿಂದ ದೇವತೆಗಳಿಗೆ ಸಂತೋಷವುಂಟಾಗಲು ಅವರು ಪುಷ್ಪವೃಷ್ಟಿಯನ್ನು ಕರೆದು ದೇವದುಂದುಭಿಗಳನ್ನು ಬಾರಿಸಿದರು. ಬಳಿಕ ಶ್ರೀರಾಮನು ಸುಗ್ರೀವ ವಿಭೀಷಣಾದಿಗಳಿಂದ ಸತ್ಕೃತನಾಗಿ ತನ್ನ ಬಿಡಾರವನ್ನು ಹೊಕ್ಕನು. ಇತ್ತ ಆಂಜನೇಯನು ತನ್ನ ಪರಾಕ್ರಮದಿಂದ ರಾಕ್ಷಸಬಲವನ್ನು ಗೆದ್ದು ಅಜೇಯನಾಗಿ ಆನಂದದಿಂದ ರಾಮನಬಳಿಗೆ ಬಂದು ನಮಸ್ಕರಿಸಲು ಶ್ರೀರಾಮನು ಆತನನ್ನು ಆಲಿಂಗಿಸಿಕೊಂಡು ಆಶೀರ್ವದಿಸಿ ಸಂತೋಷಯುಕ್ತನಾಗಿದ್ದನು. ಹತಶೇಷರಾದ ರಾಕ್ಷಸವೀರರು ಲಂಕೆಗೆ ಓಡಿಹೋಗಿ ಎಲೈ ರಾವಣನೇ, ನಿನ್ನ ತಮ್ಮನಾದ ಕುಂಭಕರ್ಣನು ಕಪಿಸೈನ್ಯವನ್ನು ಪೊಕ್ಕು ಕಪಿಗಳನ್ನು ಕೊಂದನು. ಬಳಿಕ ಶ್ರೀರಾಮನ ಬಾಣಘಾತದಿಂದ ಹತನಾದನು ಎನಲು ರಾವಣನು ಮೂರ್ಛಿತನಾಗಿ ಸ್ವಲ್ಪಹೊತ್ತಿನಮೇಲೆ ಚೇತರಿಸಿಕೊಂಡು ತನ್ನ ತಮ್ಮನ ಬಲಪರಾಕ್ರಮಗಳನ್ನು ನೆನೆದು ಹಂಬಲಿಸುತ್ತ

ಇನ್ನು ದೇವತೆಗಳು ತನ್ನನ್ನು ಕಡ್ಡಿಗಿಂತಲೂ ಕಡೆಯಾಗಿ ಕಾಣುವರು. ಈ ಲಂಕೆ ನನಗೇಕೆ ಎಂದು ಅಳುತ್ತಿರಲು ಅವನ ಮಂತ್ರಿಗಳು ಸಾಮಂತರು ಕುಮಾರರು ಬಂದು ಆದರಿಸಿ ಧೈರ್ಯ ವನ್ನು ಹೇಳಲು ಸಮಾಧಾನಹೊಂದಿ ಮತ್ತೆ ಮಹಾರೋಷದಿಂದ ಮಹೋದರ ಮಹಾಪಾರ್ಶ್ವ ಅತಿಕಾಯ ದೇವಾಂತಕ ನರಾಂತಕರನ್ನು ನೋಡಿ ನೀವೆಲ್ಲರೂ ಗುಂಪಾಗಿ ಹೋಗಿ ಆ ರಾಮ ಲಕ್ಷ್ಮಣರನ್ನು ನಿಗ್ರಹಿಸಿ ಬನ್ನಿ ಎಂದು ಹೇಳಲು ಅವರು ಹಾಗೆಯೇ ಆಗಲಿ ಎಂದು ಛತ್ರ ಚಾಮರ ಧ್ವಜಪತಾಕೆಗಳಿಂದ ಕೂಡಿ ಚತುರಂಗಬಲ ಸಮೇತರಾಗಿ ಬರುತ್ತಿರಲು ಅತಿಕಾಯ ನಿಗೆ ಅನೇಕ ಅಪಶಕುನಗಳಾದವು. ಅವನು ಅವುಗಳನ್ನು ಲಕ್ಷಿಸದೆ ಕೋಟೆಯ ಬಾಗಿಲನ್ನು ಹಾಯ್ದು ಬರುತ್ತಿರಲು ಆ ರಾಕ್ಷಸರಮೇಲೆ ವಾನರರು ಬೆಟ್ಟಗಳಿಂದಲೂ ವೃಕ್ಷಗಳಿಂದಲೂ ಆನೆಗಳನ್ನೂ ಕುದುರೆಗಳನ್ನೂ ರಥಗಳನ್ನೂ ಸಾರಥಿಗಳನ್ನೂ ಹೊಡೆದು ತಲೆಗಳನ್ನು ಒಡೆದು ಹೊಟ್ಟೆಯನ್ನು ಬಗೆದು ರಾಕ್ಷಸರನ್ನು ಕೊಲ್ಲುತ್ತಿರಲು ಎಲ್ಲರೂ ಭಯಪಟ್ಟು ಓಡಿಹೋದರು. ಅಷ್ಟರಲ್ಲಿ ನರಾಂತಕನು ಕುದುರೆಯನ್ನೇರಿ ಧನುರ್ವಿದ್ಯಾಕೌಶಲದಿಂದ ಕಪಿಗಳಮೇಲೆ ಬಾಣ ಗಳನ್ನು ಪ್ರಯೋಗಿಸಲು ವಾನರರು ಸೊಂಟಮುರಿದು ಕರುಳು ಹೊರಹೊರಟುಕೊಂಡು ಬಿದ್ದರು ಕೆಲವರು ಮಹಾಭಯವನ್ನು ತಾಳಿದರು ಕೆಲವರು ಓಡಿಹೋದರು ಆಗ ಅಂಗದನು ಎದುರಾಗಿ ನಿಂತು, ಎಲಾ ನರಾಂತಕ, ಆ ವಾನರರೊಡನೆ ಏನು, ನನ್ನಕಡೆಗೆ ತಿರುಗು ಎಂದು ಗರ್ಜಿಸಲು ಅವನು ಅಂಗದನಕಡೆಗೆ ತಿರುಗಿ, ಎಲೈ ಅಂಗದನೇ ನಾನು ದೇವತೆಗಳನ್ನು ಸಾವಿರಸಲ ಗೆದ್ದೆನು, ಅಷ್ಟದಿಕ್ಪಾಲಕರನ್ನು ಓಡಿಸಿದೆನು ಇಂಥವನಿಗೆ ನೀನೊಂದು ಲೆಕ್ಕವೆ ಎಂದು ಶಕ್ತಿಯನ್ನು ಪ್ರಯೋಗಿಸಲು ಗಣಿಸದೆ ಅವನ ಕುದುರೆಯನ್ನು ಹೊಡೆದು ಕೊಂದನು. ಆಗ ನರಾಂತಕನು ಕೆಳಕ್ಕೆ ಧುಮುಕಿ ರೋಷದಿಂದ ಅಂಗದನನ್ನು ಮುಷ್ಟಿಯಿಂದ ತಿವಿಯಲು ಅಂಗದನು ಸುದಾರಿಸಿ ಕೊಂಡು ಅವನ ನೆತ್ತಿಯಮೇಲೆ ಮುಷ್ಟಿಯಿಂದ ಹೊಡೆಯಲು ಆ ಪೆಟ್ಟಿಗೆ ಅವನ ಮೂಗು ಬಾಯಿಗಳಲ್ಲಿ ರಕ್ತಸುರಿದು ಅವನು ಯಮಪುರಿಯನ್ನು ಸೇರಿದನು ಅಷ್ಟರಲ್ಲಿ ಮಹೋದರನು ಅಂಗದನಮೇಲೆ ರಥವನ್ನು ನೂಕಿದನು ದೇವಾಂತಕನು ಆನೆಯನ್ನು ಹೊಡೆದನು ತ್ರಿಶಿರನು ರಥದೊಡನೆ ಒಳಹೊಕ್ಕನು ಮೂವರು ಸೇರಿ ಅಂಗದನನ್ನು ಮುತ್ತಿಕೊಂಡು ಒಬ್ಬೊಬ್ಬರು ಒಂದೊಂದು ಕಡೆ ಆಯುಧಗಳನ್ನು ಪ್ರಯೋಗಿಸುತ್ತಿದ್ದರೂ ಶೂರನಾದ ಅಂಗದನು ಅವುಗಳನ್ನು ಲೆಕ್ಕಿಸದೆ ಒಬ್ಬೊಬ್ಬರನ್ನು ಒಂದೊಂದು ಪರ್ವತದಿಂದ ಅಪ್ಪಳಿಸಿ ಹೊಡೆಯುತ್ತಿದ್ದನು.

ಇತ್ತ ತ್ರಿಶಿರನು ಸುರಾಂತಕನನ್ನು ಹೊಡೆಯುತ್ತಿದ್ದ ಅಂಗದನ ಪೆಟ್ಟಿಗೆ ಎದುರಾಗಿ ನಿಂತು ಪ್ರತಿಭಟಿಸಲು ಸುರಾಂತಕನು ವೀರಾವೇಶದಿಂದ ಪರಿಘಾಯುಧವನ್ನೆತ್ತಿ ಅಂಗದನನ್ನು ಹೊಡೆ ದನು. ಸ್ವಲ್ಪಹೊತ್ತು ಮೂರ್ಛೆಹೋಗಿ ಮರಳಿ ಚೇತರಿಸಿಕೊಂಡೆದ್ದು ಅಂಗದನು ಮಹೋದ ರನು ಕುಳಿತಿದ್ದ ಆನೆಯನ್ನು ಹೊಡೆದು ಕೊಂದು ಅದರ ಕೊಂಬಿನಿಂದ ಮಹೋದರನನ್ನು ಹೊಡೆ ಯಲು ಅವನು ರಕ್ತವನ್ನುಕಾರುತ್ತಾ ಸುದಾರಿಸಿಕೊಂಡು ಪುನಃ ಅಂಗದನನ್ನುಗದೆಯಿಂದ ಹೊಡೆ ದನು. ಆ ಪೆಟ್ಟಿಗೆ ಮೂರ್ಛೆಹೋಗಿ ಅಗಂದನು ಕೆಳಕ್ಕೆ ಬಿದ್ದುದನ್ನು ಕಂಡು ಹನುಮ ನೀಲರಿ ಬ್ಬರೂ ಅಂಗದನ ಸಹಾಯಕ್ಕೆ ಬಂದರು. ಅಂಗದನು ಆಶ್ಚರ್ಯಯುಕ್ತನಾಗಿ ಮಹಾರೋಷ ದಿಂದೆದ್ದು ಮಹೋದರನನ್ನು ಹೊಡೆದು ಕೊಂದನು. ಕೂಡಲೆ ತ್ರಿಶಿರನು ಎದುರಾಗಿ ಕಪಿರಾಜನ ಮಗನನ್ನು ಹೊಡೆಯಲು ನೀಲನೂ, ಆಂಜನೇಯನೂ ಅವನನ್ನು ಎದುರಿಸಿ ನಿಂತರು ಹೀಗೆ ಬಲಶಾಲಿಯಾಗಿ ಹೋರುತ್ತಿರುವ ತ್ರಿಶಿರನನ್ನು ಮೂವರೂ ಒಟ್ಟಾಗಿ ಹೊಡೆದು ಕೆಡಹಿದರು. ಬಳಿಕ ತ್ರಿಶಿರನು ಸತ್ತುದನ್ನು ಕಂಡು ಮಹಾಪಾರ್ಶ್ವನು ಗದೆಯನ್ನು ಹಿಡಿದು ಹೋರುವುದಕ್ಕೆ ನಿಂತನು. ಶೂರನಾದ ಆಂಜನೇಯನು ತನ್ನ ಶಕ್ತಿ ಸಾಹಸಗಳಿಂದ ತೋರುತ್ತ ಅಂಗದಕುಮಾ

ರನಿಗೆ ಆಶ್ಚರ್ಯವಾಗುವಂತೆ ಮಹಾಪಾರ್ಶ್ವನನ್ನು ಅರೆಗಳಿಗೆಯಲ್ಲಿ ಕೊಂದು ಆರ್ಭಟಿಸುತ್ತಿರಲು ರಾಕ್ಷಸಸೈನ್ಯದವರು ಹೆದರಿ ಹಿಮ್ಮೆಟ್ಟಿ ದಿಕ್ಕುದಿಕ್ಕಿಗೆ ಓಡಿಹೋದರು ಹತಶೇಷರಾದವರು ಅತಿಕಾಯನ ಬಳಿಗೆ ಓಡಿಹೋಗಿ ಅವನನ್ನು ಮರೆಹೊಕ್ಕರು.

## ಅತಿಕಾಯನ ಘೋರಯುದ್ಧ.

ಆ ರಾಕ್ಷಸರಿಗೆ ಅಭಯವನ್ನು ಕೊಟ್ಟು ಅತಿಕಾಯನು ಸಿಂಹನಾದಮಾಡಿ ಧನುರ್ಬಾಣಗಳನ್ನು ಧರಿಸಿ ಬರುತ್ತಿರಲು ಅದನ್ನು ಕಂಡು ಕಪಿಗಳು ಹೆದರಿ ರಾಮನನ್ನು ಮರೆಹೊಗಲು





ಶ್ರೀರಾಮನು ವಿಭೀಷಣನನ್ನು ನೋಡಿ ಲಕ್ಷಕುದುರೆಗಳನ್ನು ಕಟ್ಟಿದ ರಥದಮೇಲೆ ಕುಳಿತು ಯುದ್ಧಕ್ಕೆ ಬರುತ್ತಿರುವನನು ಯಾರೆಂದು ಕೇಳಲು, ವಿಭೀಷಣನು ಎಲೈ ಭಗವಂತನೆ ಇವನು ರಾವಣನಿಂದ ಧ್ಯಾನಮಾಲಿನಿಯಲ್ಲಿ ಹುಟ್ಟಿದ ಮಗನು ವೇದವೇದಾಂತಜ್ಞನು ಬ್ರಹ್ಮನಿಂದ ಅಸಮಾನವಾದ ವರಗಳನ್ನು ಪಡೆದುಕೊಂಡಿರುವನು ಸಕಲಾಯುಧಗಳಲ್ಲಿಯೂ ಯುದ್ಧ ಮಾಡಬಲ್ಲನು, ಈ ವಂಚಕನು ಬಂದು ವಾನರರನ್ನು ಬಾಧಿಸುವದಕ್ಕೆ ಮುಂಚಿತವಾಗಿಯೇ ಇವನನ್ನು ಕೊಲ್ಲಬೇಕು ಎಂದನು. ಕೂಡಲೆ ರಾಮಲಕ್ಷ್ಮಣರು ಯುದ್ಧಸನ್ನದ್ಧರಾಗಲು ಸುಗ್ರೀವಾದಿ ವಾನರರು ಗಿರಿತರುಗಳನ್ನು ಎತ್ತಿ ಹೊಡೆದರು ಅವುಗಳನ್ನು ಚೂರ್ಣಮಾಡಿ ಮಹಾಘೋರರಾದ ರಾಕ್ಷಸರು ಸಹಾಯಕ್ಕೆ ಬರಲು ಶ್ರೀರಾಮಚಂದ್ರನ ಬಳಿಗೆ ರಥವನ್ನು ಹೊಡೆಯಿಸಿಕೊಂಡು ಬಿಲ್ಲಿನಲ್ಲಿ ಬಾಣಗಳನ್ನು ಹೂಡಿ ಇಂದ್ರಜಿತುವಿನ ನಾಗಪಾಶಗಳಿಗೆ ಸಿಕ್ಕಿದವನಾರು ಎಂದು ಮೂದಲಿಸುತ್ತ ಎಲೈ ರಾಮನೇ! ನೀನು ಮತ್ಸ್ಯರೂಪಿಯಾಗಿ ಸಮುದ್ರವನ್ನು ಸೇರಿದರೂ, ಆಮೆಯಾಗಿ ನೆಲವನ್ನು ಕೊರೆದುಕೊಂಡು ನುಗ್ಗಿದರೂ, ಹಂದಿಯಾಗಿ ಅರಣ್ಯದಲ್ಲಿ ಅಲೆದರೂ, ಸಿಂಹರೂಪವನ್ನು ತಾಳಿ ಗುಹೆಯಲ್ಲಿ ಅಡಗಿಕೊಂಡರೂ, ವಾಮನನಾಗಿ ವೇಷವನ್ನು ಮರೆಮಾಚಿಕೊಂಡರೂ ಮತ್ತಾವ ವಿಧದಿಂದ ಬದುಕುವ ಉಪಾಯವನ್ನು ಮಾಡಿದರೂ ನಿನ್ನ ಪ್ರಾಣಗಳು ಯಮಲೋಕವನ್ನು ನೋಡದೆ ಇರಲಾರವು ಎಂದು ಹೇಳಿ, ಮೇಲೆ ಬೀಳುತ್ತಿರುವ ರಾಕ್ಷಸನನ್ನು ನೋಡಿ ಲಕ್ಷ್ಮಣನು ಕೋಪಾವಿಷ್ಟನಾಗಿ ತನ್ನ ಧನುರ್ಬಾಣಗಳನ್ನು ಜೇಗೈದು ಸಿಂಹನಾದ ಮಾಡಿ ಎಲೈ ಖೂಳನೆ! ನಿಲ್ಲು ನಿಲ್ಲು! ನಿನ್ನ ಪರಾಕ್ರಮವನ್ನು ನೋಡೋಣ! ಎಂದು ಗರ್ಜಿಸಿದನು. ಆಗ ಅತಿಕಾಯನು ಅಯ್ಯಾ! ನೀನು ಇನ್ನೂ ಬಾಲಕನು ನನ್ನೆದುರಿಗೆ ನಿಲ್ಲಲಾರೆ ನಿಮ್ಮಣ್ಣನನ್ನು ಕಳುಹಿಸು ಯುದ್ಧಕ್ಕೆ ಬರಲಿ ಎಂದನು. ಅದಕ್ಕೆ ಲಕ್ಷ್ಮಣನು ಹೌದು ನೀನು ಹೇಳಿದುದು ಸರಿ! ನಾನು ರಾಮನಿಗಿಂತಲೂ ಚಿಕ್ಕವನಾದರೂ ಪರಾಕ್ರಮದಲ್ಲಿ ನಿನ್ನನ್ನು ಮೀರಿಸಿದವನೆಂದು ತಿಳಿದುಕೋ ಈ ನನ್ನ ಬಾಣಜಾಲವನ್ನು ನೋಡು ಎಂದು ತನ್ನ ಸಂಪೂರ್ಣಸಾಹಸದಿಂದ ಅತಿಕಾಯನನ್ನು ಹೊಡೆದು ನೋಯಿಸುತ್ತಿದ್ದನು. ಆದರೂ ದೇವತೆಗಳ ವರದಿಂದ ಮತ್ತನಾದ ರಾಕ್ಷಸನು

ಲಕ್ಷ್ಮಣನ ಬಾಣಗಳನ್ನೆಲ್ಲ ಕಡಿದು ತುಂಡು ಮಾಡಿ ಘೋರ್ಗರೆಯುತ್ತಿರಲು ಲಕ್ಷ್ಮಣನು ಚಿಂತಾ ಕ್ರಾಂತನಾಗಿ ನಿಂತನು ಕೂಡಲೆ ವಾಯುದೇವನು ಲಕ್ಷ್ಮಣನ ಕಿವಿಯ ಬಳಿಗೆ ಬಂದು ಅಯ್ಯಾ! ಇವನಿಗೆ ಬಾಣಘಾತದಿಂದ ನೋವಾಗದಂತೆ ದೇವತೆಗಳು ವರಕೊಟ್ಟಿದ್ದಾರೆ ನೀನು ವ್ಯರ್ಥವಾಗಿ ಶ್ರಮಪಟ್ಟು ನಿನ್ನ ಬಾಣಗಳನ್ನು ಹಾಳುಮಾಡಿಕೊಳ್ಳಬೇಡ ಕೂಡಲೆ ಬ್ರಹ್ಮಾಸ್ತ್ರವನ್ನು ತೊಡು ನಿನಗೆ ಜಯವಾಗುವದೆಂದು ಹೇಳಿ ಹೊರಟುಹೋಗಲು ಲಕ್ಷ್ಮಣನು ಸಂತುಷ್ಟನಾಗಿ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟನು. ಅದು ಬ್ರಹ್ಮಾಂಡವನ್ನೆ ಸುಡುವಂತೆ ಜಾಜ್ವಲ್ಯಮಾನವಾಗಿ ಉರಿಯುತ್ತಾ ಅತಿಕಾಯನ ಕಡೆಗೆ ಹೊರಟಿತು. ರಾಕ್ಷಸನು ತನ್ನ ವರಬಲದಿಂದ ತನಗೆ ಬಂದಿದ್ದ ಬಾಣ ಅಸ್ತ್ರಶಸ್ತ್ರಗಳನ್ನೆಲ್ಲ ಉಪಯೋಗಿಸಿದರೂ ಆ ಬ್ರಹ್ಮಾಸ್ತ್ರವು ಯಾವುದಕ್ಕೂ ಜಗ್ಗದೆ ಮುಂದರಿದು ಹೋಗಿ ರಾಕ್ಷಸನ ಶಿರಸನ್ನು ಖಂಡಿಸಿ ಭೂಮಿಗೆ ಕೆಡವಿತು. ಬಳಿಕ ಉಳಿದ ರಾಕ್ಷಸರು ಹೆದರಿ ಹಿಮ್ಮೆಟ್ಟಿ ರಾವಣನ ಬಳಿಗೆ ಹೋಗಿ ಜೀಯಾ! ಈ ದಿನದ ಯುದ್ಧದಲ್ಲಿ ರಾಮನ ತಮ್ಮನಾದ ಲಕ್ಷ್ಮಣನ ಬಾಣದಿಂದ ಅತಿಕಾಯನು ಮೃತನಾದನು ಎಂದು ಹೇಳಲು ರಾವಣನು ಆಶ್ಚರ್ಯಯುಕ್ತನಾಗಿ ಗೋಳಾಡುತ್ತ ಬಡೆಗೆ ತನ್ನ ಮಂತ್ರಿಗಳನ್ನು ಕರೆಸಿ ಯೋಚಿಸುತ್ತಿದ್ದನು.

## ರಾವಣನ ಪ್ರಲಾಪ ಮತ್ತು ಮಂಡೋದರಿಯ ಹಿತಬೋಧೆ.

ಹೀಗೆ ತಾನು ಕಳುಹಿಸಿದ ರಾಕ್ಷಸರ ವೀರರೂ ಅವರ ಸೈನಿಕರೂ ಯುದ್ಧದಲ್ಲಿ ಗೆಲ್ಲಲಾರದೆ ರಾಮಸೇನೆಯವರಿಂದ ಹತರಾಗುತ್ತ ಪ್ರತಿದಿನವೂ ಸತ್ತಸುದ್ದಿಯೆ ಬರುತ್ತಿರುವುದನ್ನು ಕೇಳಿ ಅತಿಕಾಯನೂ ಸತ್ತನು. ಅವನಿಗಿಂತ ಮೊದಲು ಹೋದವರ ಹೆಸರೆ ಇಲ್ಲ. ಮಿತ್ರರು ಪುತ್ರರು ನೆಂಟರು ಬಂಧುಗಳು ಬಲವಂತರು ಸಕಲರೂ ಸತ್ತು ಸುಣ್ಣವಾದರು. ನನ್ನ ಭಾಗಕ್ಕೆ ಯಾರೂ ಇಲ್ಲ. ಈಗ ನಾನೇನು ಮಾಡಲಿ! ಜಗಜ್ಜಾಲವೇ ಭಯಪಡುತ್ತಿದ್ದ ರಾವಣನೂ ಅವನ ಕಡೆಯವರೂ ಬದುಕಿದ್ದರೂ ಸತ್ತಂತೆಯೇ ಸರಿ ಹಾ! ವಿಧಿಯೆ ಇನ್ನು ಗತಿಯೇನು ನನ್ನ ಹಟವನ್ನು ಸಾಧಿಸುವ ವೀರರಾರು ನನಗೆ ಬೆಂಬಲವಾಗಿ ನಿಲ್ಲುವವರಾರು? ಹೇಗೆ ಮಾಡಲಿ! ಎಂದು ಪ್ರಲಾಪಿಸುತ್ತ ಈ ಜನ್ಮವನ್ನು ಸಾರ್ಥಕಗೊಳಿಸುವ ಮಾರ್ಗವನ್ನೆ ಕಾಣೆನಲ್ಲ ಎಂದು ಗಟ್ಟಿಯಾಗಿ ಅಳುತ್ತಿದ್ದನು. ಈ ವಾರ್ತೆಯನ್ನು ಕೇಳಿ ಮಂಡೋದರಿಯು ಅಂತಃಪುರದಿಂದ ಓಲಗಶಾಲೆಗೆ ಬಂದು ಚಿಂತಾಕ್ರಾಂತನಾಗಿರುವ ಪತಿಯನ್ನು ಸಮಾಧಾನಮಾಡುತ್ತ ಹೀಗೆ ಹೇಳಿದಳು

ಎಲೈ ರಾಕ್ಷಸರಾಜನೇ ನೀನು ವೀರಾಧಿವೀರನೆ ಹೌದು ನಿನ್ನ ಬಾಹುಬಲಕ್ಕೆ ಮೀರಿದವರು ಯಾರೂ ಇಲ್ಲ. ಆದರೆ ಅಧರ್ಮಕ್ಕೆ ಕಟ್ಟುಬಿದ್ದವನು ಎಂಥ ಶೂರನಾದರು ಬದುಕುವುದು ಕಷ್ಟ ನೀನು ಬ್ರಹ್ಮದೇವರಿಂದ ಬಲವತ್ತರವಾದ ವರವನ್ನು ಪಡೆದಿದ್ದರೂ ಲೋಕನಾಯಕನಾದ ನಾರಾಯಣನೇ ನಿನಗೆ ಹಗೆಯಾದಮೇಲೆ ನಿನ್ನ ವರಗಳು ಏನುಮಾಡಬಲ್ಲವು ಈಗಲಾದರೂ ನೀನು ನನ್ನ ಕೋರಿಕೆಯಂತೆ ಸೀತಾದೇವಿಯನ್ನು ಶ್ರೀರಾಮಚಂದ್ರನಿಗೆ ಒಪ್ಪಿಸಿ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡರೆ ನಿನಗೆ ಕ್ಷೇಮವಾಗುವುದು ದಯಾಳುವಾದ ಶ್ರೀರಾಮನು ನಿನ್ನನು ಸಂರಕ್ಷಿಸುವನು ರಾಕ್ಷಸಕುಲವು ಸುಖವಾಗಿ ಬಾಳುವುದು ನನಗೂ ಸಂತೋಷವಾಗುವುದು ನೀನೂ ನಿರ್ಯೋಚನೆಯಾಗಿರಬಹುದು ಈ ಕೆಲಸವನ್ನು ಮೊದಲೆ ಮಾಡಿದ್ದರೆ ಇಷ್ಟು ಅನರ್ಥಕ್ಕೆ ಕಾರಣವಾಗುತ್ತಿರಲಿಲ್ಲ. ಸಾಧಾರಣವಾದ ಒಂದು ಕಪಿ ಬಂದು ನಮ್ಮ ಲಂಕೆಯನ್ನು ಸುಟ್ಟು ರಾಕ್ಷಸರನ್ನು ಕೊಂದು ಮಗನನ್ನು ಮಾರಿಗೆ ಬಲಿಕೊಟ್ಟು ಪ್ರಪಂಚವನ್ನೆ ಹೆದರಿಸಿ ಹೋದಾಗಲೆ ನೀನು ಬುದ್ಧಿವಂತನಾಗಿ ನನ್ನ ಮಾತನ್ನು ಕೇಳಿದ್ದರೆ ಚೆನ್ನಾಗಿತ್ತು ಈಗ ಚಿಂತಿಸಿ ಪರಿ ಫಲವೇನು ಆದದ್ದು ಆಗಿಹೋಯಿತು. "ಗತೇ ಶೋಕೇ ನಕರ್ತವ್ಯಂ" ಎಂಬ ನ್ಯಾಯ

ದಂತೆ ಕಳೆದುಹೋದುದನ್ನು ಕಟ್ಟಿಕೊಂಡು ಅಳಬೇಡ ವಿಭೀಷಣನು ಹೇಳಿದಂತೆ ರಾಮನಿಗೆ ಶರಣಾಗತನಾಗು ನಾನು ಹೇಳಿದಮೇರೆ ಸೀತೆಯನ್ನು ರಾಮನ ಸನ್ನಿಧಿಗೆ ಕಳುಹಿಸು ನಿನಗೆ ಸುಖ ವಾಗುವುದು. ಹೆಂಗಸು ಹೇಳಿದ ಮಾತು ಎಂದು ನನ್ನನ್ನು ತಿರಸ್ಕರಿಸಿ ನನ್ನ ಹಿತಬೋಧನೆಯನ್ನು ಅಲಿಗಳೆಯಬೇಡ ಅರ್ಧಾಂಗಿಯಾದವಳು ಆಪತ್ಕಾಲದಲ್ಲಿ ಆಡುವ ಮಾತನ್ನು ವಿವೇಕಿಗಳು ನಡೆಸದೆ ಇರಲಾರರು. ಇನ್ನಾದರೂ ವಿವೇಕದಿಂದ ನನ್ನ ಕೋರಿಕೆಯನ್ನು ನಡೆಸಿಕೊಟ್ಟು ಸಂತೋಷಯುಕ್ತನಾಗು ಎಂದು ಬಹಳವಾಗಿ ವಿವೇಕವನ್ನು ಹೇಳಿದಳು. ಆದರೇನು ಮೂರ್ಖರಿಗೆ ಹೇಳಿದ ಬುದ್ಧಿಯಂತೆ ನೀಚನಾದ ರಾವಣನಿಗೆ ಅವಳ ಮಾತುಗಳು ಕಿವಿಗೆ ಬಿದ್ದರೂ ಕರ್ಣಕಠೋರವಾಗಿ ಪರಿಣಮಿಸಲು ರಾವಣನು ಗರ್ಜಿಸಿ ಆರ್ಭಟಿಸುತ್ತ ಹೆಂಡತಿಯನ್ನು ದಂಡಿಸಿ ಅಂತಃಪುರಕ್ಕೆ ಕಳುಹಿಸಿ, ಪರಿವಾರದವರನ್ನು ಈ ದಿನ ಯುದ್ಧಕ್ಕೆ ಹೊರಡುವುದಕ್ಕಾಗಿ ಸಕಲ ಸೇನೆಯೂ ಸಿದ್ಧವಾಗಿರಲಿ ರಾಕ್ಷಸರೆಲ್ಲರೂ ಒಟ್ಟುಗೂಡಿ ರಣರಂಗಕ್ಕೆ ಹೊರಡಲಿ ನಾನೆ ಯುದ್ಧಕ್ಕೆ ಬರುವೆನು ಎಂದು ಅಪ್ಪಣೆಮಾಡಿದನು.

## ಇಂದ್ರಜಿತುವಿನ ಯುದ್ಧಸನ್ನಾಹ.

ಬಳಿಕ ರಾವಣನು ದಿವ್ಯವಾದ ಅಲಂಕಾರಮಂಡಿತನಾಗಿ ಛತ್ರಛಾಮರಗಳಿಂದ ಶೋಭಿಸುತ್ತ ಕಿರೀಟಕುಂಡಗಳಿಂದ ಶೋಭಾಯಮಾನನಾಗಿ ದಿವ್ಯವಾದ ರಥದಲ್ಲಿ ಕುಳಿತು ಒಂಭತ್ತು ಕೋಟಿ ರಾಕ್ಷಸವೀರರಿಂದ ಕೂಡಿ ಸೇನಾಸಮೇತನಾಗಿ ಉತ್ತರದಿಕ್ಕಿನ ಕೋಟೆಯಮೇಲೆ ಗೋಪುರದಲ್ಲಿ ಕುಳಿತು ರಾಮನ ಸೈನ್ಯವನ್ನು ಪರೀಕ್ಷಿಸುತ್ತಿರಲು ಛತ್ರಛಾಮರ ಪತಾಕೆಗಳ ಜಾಲವಳಿಯಿಂದ ಬೆಳಕು ಕಾಣಿಸದೆ ಸೂರ್ಯರಶ್ಮಿಯು ಮರೆಯಾಗಲು ರಾಮನು ಆಶ್ಚರ್ಯಪಟ್ಟು ವಿಭೀಷಣನ ಮೂಲಕ ರಾವಣ ಸಭೆಯ ವಿಚಾರವನ್ನು ತಿಳಿದು ರೋಷಾವೇಷದಿಂದ ಒಂದು ಬಾಣವನ್ನು ಹೊಡೆಯಲು ಅದು ಲಕ್ಷ್ಯೋಪಲಕ್ಷವಾಗಿ ಹರಡಿಕೊಂಡು ರಾವಣನ ಸೈನ್ಯದಲ್ಲಿದ್ದ ಛತ್ರಛಾಮರ ಪತಾಕೆಗಳ ಪಟಗಳನ್ನೆಲ್ಲ ಹರಿದು ಬರಿಯ ಕಡ್ಡಿಗಳೆ ನಿಲ್ಲುವಂತೆ ಮಾಡಿದನು. ಅದನ್ನು ನೋಡಿ ರಾವಣನು ವಿಸ್ಮಿತನಾಗಿ ಆಹಾ! ಈತನು ಮಹಾಶೂರನೇ! ಸರಿ ಬಿಲ್ಲುವಿದ್ಯೆಯಲ್ಲಿ ಜಾಣನು ಇದುವರೆಗೂ ನನಗೆ ಇವನ ಸಾಮರ್ಥ್ಯವೆ ಗೊತ್ತಾಗಲಿಲ್ಲ ನಾನು ನೋಡಿದ ವೀರರಲ್ಲಿ ಒಬ್ಬರೂ ಇವನ ಹಾಗಿಲ್ಲ ಶಹಬಾಸ್ ರಾಮನು ಧೀರನೆ ಹೌದು ಎಂದು ಸ್ತುತಿಸುತ್ತಿರಲು ಮಹಾಪಾರ್ಶ್ವನು ಮುಂದೆ ಬಂದು ಎಲೈ ರಾಕ್ಷಸೇಂದ್ರನೆ! ನಿನ್ನ ವಿವೇಕವನ್ನು ಏನು ಹೇಳಲಿ ನಿನಗೆ ಹಗೆಯಾಗಿ ಮನುಷ್ಯಮಾತ್ರದವನಾದ ರಾಮನ ಪರಾಕ್ರಮಕ್ಕೆ ಮೆಚ್ಚಿ ಹೊಗಳುವುದು ನ್ಯಾಯವೆ? ಇದು ರಾಕ್ಷಸಕುಲಕ್ಕೆ ಅವಮಾನವೆಂಬುದನ್ನೂ ಕಾಣೆಯಾ? ಆ ರಾಮನು ಎಷ್ಟರವನು ಅಯ್ಯಾ ಗುಣಕ್ಕೆ ಮತ್ಸರವಿಲ್ಲ ಅಭಿಮಾನಿಸಿದರೆ ಕಲ್ಲು ಅಡಿಕೆಯಾದೀತೆ ರಾಮನು ಶೂರನೇ ಅಹುದು ಈ ಅರ್ಥದಲ್ಲಿ ಸಂಶಯವಿಲ್ಲ ಎಂದು ಹೇಳಿ ತನ್ನರಮನೆಗೆ ಹೋಗಿ ಚಿಂತಾಕ್ರಾಂತನಾಗಿ ರೋದಿಸುತ್ತ ಮಲಗಿಕೊಂಡನು. ಆ ಕಾಲದಲ್ಲಿ ಇಂದ್ರಜಿತುವು ತಂದೆಯ ದುರವಸ್ಥೆಯನ್ನು ಕೇಳಿ ಆತನ ಬಳಿಗೆ ಬಂದು ನಮಸ್ಕರಿಸಿ ಎಲೈ ತಂದೆಯೆ! ನಿನ್ನ ಮಗನಾದ ನಾನು ದೇವಾದಿದೇವತೆಗಳನ್ನೆಲ್ಲ ಗೆದ್ದು ಹೆಸರು ಪಡೆದಿರುವಲ್ಲಿ ಹುಲುಮಾನುಜನಾದ ರಾಮನಿಗೆ ನೀನು ಹೆದರಬೇಕೆ ಆಗಲಿ! ಈ ದಿನದ ಯುದ್ಧದಲ್ಲಿ ರಾಮಸೇನೆಯನ್ನು ಕೊಂದು ರಾಮಲಕ್ಷ್ಮಣರನ್ನು ಅವರ ಅಂಗರಕ್ಷಕರನ್ನೂ ಸೆರೆಯಾಗಿ ಹಿಡಿದುತರುವೆನು ಎಂದು ಶಪಥಮಾಡಿ ತಂದೆಯ ಅಪ್ಪಣೆಯನ್ನು ಪಡೆದು ಯುದ್ಧೋನ್ಮುಖನಾಗಿ ಸಕಲ ಸೈನ್ಯವನ್ನು ಜೊತೆಮಾಡಿಕೊಂಡು ತಾನು ಸ್ನಾನಮಾಡಿ ಶುಚಿರ್ಭೂತನಾಗಿ ರಕ್ತವಸ್ತ್ರವನ್ನುಟ್ಟು ರಕ್ತಗಂಧ ರಕ್ತಾಕ್ಷತೆ ರಕ್ತಪುಷ್ಪಗಳಿಂದ ಅಲಂಕೃತನಾಗಿ ಹೋಮಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ ಕಕ್ಕೆಯ ಸಮಿತ್ತು ಬತ್ತದ ಅರಳು

ತುಪ್ಪ ಕರಿಹೋತನ ಕೊಂಬುಗಳಿಂದ ಹೋಮಮಾಡಿ ಆಹುತಿಯನ್ನು ಕೊಟ್ಟು ಯಜ್ಞಪುರುಷನನ್ನು ಮೆಚ್ಚಿಸಿ ಸ್ತೋತ್ರಮಾಡುತ್ತಿರಲು ಇವನ ಪೂಜಾದಿಗಳಿಗೆ ಸಂತುಷ್ಟನಾಗಿ ಯಜ್ಞೇಶ್ವರನು ಪ್ರತ್ಯಕ್ಷನಾಗಿ ಬಂದು ಇಂದ್ರಜಿತುವಿಗೆ ಒಂದು ಕವಚವನ್ನೂ ಒಂದು ಬಿಲ್ಲನ್ನೂ ಅಮೋಘವಾದ ಬಾಣವನ್ನು ದಿವ್ಯವಾದ ರಥವನ್ನು ಕೊಟ್ಟು ಆಶೀರ್ವದಿಸಿ ಅಂತರ್ಧಾನನಾದನು. ಇಂದ್ರಜಿತುವು ಅವುಗಳನ್ನು ತೆಗೆದುಕೊಂಡು ಆನಂದಭರಿತನಾಗಿ ಆರ್ಭಟಿಸುತ್ತ ಕವಚವನ್ನು ತೊಟ್ಟು ರಥವನ್ನೇರಿ ಧನುರ್ಬಾಣಗಳನ್ನು ಹಿಡಿದು ರಾಮಸೇನೆಯಮೇಲೆ ಬಿದ್ದು ಹೊಡೆಯಲಾರಂಭಿಸಿದನು. ಆತನ ಆರ್ಭಟಿಯನ್ನು ಸಹಿಸಲಾರದೆ ಅನೇಕ ಕಪಿಗಳು ಹೆದರಿ ಓಡುತ್ತಿದ್ದರು. ಕೆಲವರು ಕಾಲು ಮುರಿದು ಬಿದ್ದರು. ಹಲವರಿಗೆ ಕೈಮುರಿಯಿತು. ಅನೇಕರಿಗೆ ತಲೆಯೊಡೆದು ಹೋಯಿತು ಇನ್ನು ಕೆಲವರು ಎದೆಯೊಡೆದು ಸತ್ತುಹೋದರು. ಹೀಗೆ ರಾಮಸೇನೆಯಲ್ಲಿ ಕೋಲಾಹಲವಾಗಿ ಕಪಿಗಳು ಸಾಯುತ್ತಿರುವುದನ್ನು ಕಂಡು ಲಕ್ಷ್ಮಣನು ರಾಮನಿಗೆ ನಮಸ್ಕರಿಸಿ ಸ್ವಾಮಿ! ಈಗ ನನಗೆ ಅಪ್ಪಣೆಕೊಟ್ಟರೆ ನಾನು ಕ್ಷಣಮಾತ್ರದಲ್ಲಿ ಬ್ರಹ್ಮಾಸ್ತ್ರವನ್ನು ಹೊಡೆದು ಇಂದ್ರಜಿತುವನ್ನು ಕೊಲ್ಲುವೆನು ಎನಲು ಶ್ರೀರಾಮನು ಅಯ್ಯಾ ಇದು ಬ್ರಹ್ಮಾಸ್ತ್ರಪ್ರಯೋಗಕ್ಕೆ ತಕ್ಕ ಸಮಯವಲ್ಲ ಈಗ ಹಾಗೆ ಮಾಡಬಾರದು ಒಂದುವೇಳೆ ಹಾಗೆ ಮಾಡಿದರೆ ಹನಿಯು ಸಾಯದೆ ಲೋಕಗಳೆಲ್ಲ ನಾಶವಾಗುವುವು ಆದಕಾರಣ ಸುಮ್ಮನಿರುವುದೆ ಮೇಲು ಎಂದು ಹೇಳಿ ತಮ್ಮನನ್ನು ಸಮಾಧಾನ ಮಾಡಲು ಇಂದ್ರಜಿತುವು ಆನಂದಭರಿತನಾಗಿ ರಾಮಸೇನೆಯನ್ನು ಗೆದ್ದೆನೆಂದು ಗರ್ವಪಡುತ್ತ ಹಿಂತಿರುಗಿ ಲಂಕೆಗೆ ಹೋಗಿ ಇಂದಿನ ಕದನದಲ್ಲಿ ನಮಗೆ ಸಂಪೂರ್ಣ ಜಯವಾಗಿದೆ ರಾಮನ ಕಡೆಯವರು ಸೋತು ಹೋದರು ಎಂದು ತಂದೆಗೆ ನಮಸ್ಕರಿಸಲು ರಾವಣನು ಮಗನನ್ನು ಹೊಗಳಿ ಸಂತುಷ್ಟನಾಗಿ ತಟಸ್ಥನಾಗಿದ್ದನು.

## ಆಂಜನೇಯನು ಸಂಜೀವನ ಪರ್ವತವನ್ನು ತಂದುದು.

ಇತ್ತ ವಿಭೀಷಣನು ಕಪಿಸೈನ್ಯದಲ್ಲಿ ಯಾರುಯಾರಿಗೆ ಏನೇನು ತೊಂದರೆಯಾಗಿದೆ ನೋಡಬೇಕೆಂದು ಆಂಜನೇಯನನ್ನು ಸಂಗಡ ಕರೆದುಕೊಂಡು ದೀವಟಿಗೆಯ ಬೆಳಕಿನಲ್ಲಿ ಹುಡುಕುತ್ತ ಬಂದು ಕಣ್ಣಿಗೆ ಬಾಣತಗಲಿ ನೋಯುತ್ತ ಬಿದ್ದಿರುವ ಜಾಂಬವಂತನನ್ನು ಕಂಡು ಮನಮರುಗಿ ಆದರಿಸಿ ಮಾತನಾಡಿಸಲು ಆತನು ಅಯ್ಯೊ! ನೀನು ಯಾರೊ ನನಗೆ ತಿಳಿಯದು ಕಣ್ಣಿನಲ್ಲಿ ಬಾಣತಗಲಿರುವುದರಿಂದ ನಾನು ನೋಡಲಾರೆ ಮಹಾತ್ಮನಾದ ಆಂಜನೇಯನು ಬದುಕಿದ್ದರೆ ಆತನು ನನ್ನ ಗುರುತು ಹಿಡಿಯಬಲ್ಲನು ಎಂದನು ಕೂಡಲೆ ಹನುಮನೆ! ಸಂದೇಹಪಡಬೇಡಿ ನಾನೆ ನಿಮ್ಮ ಪ್ರೀತಿಪಾತ್ರನಾದ ಅಂಜನಾಪುತ್ರನು ತಮ್ಮ ಮನಸ್ಸಿನ ಅಭಿಲಾಷೆಯನ್ನು ನನ್ನೊಡನೆ ಹೇಳಬೇಕೆಂದು ಬೇಡಿಕೊಂಡನು.

ಬಳಿಕ ಜಾಂಬವಂತನು ಸಂತುಷ್ಟನಾಗಿ ಹನುಮಂತನನ್ನು ಆಶೀರ್ವದಿಸಿದನು. ಎಲೈ ತ್ರಿಲೋಕವೀರನೆ! ರಾಮಭಕ್ತನಾದ ನಿನ್ನಿಂದ ಈಗ ಸರ್ವರೂ ಉಜ್ಜೀವಿಸಬೇಕಾಗಿದೆ ನೀನು ಸಹಾಯಮಾಡದಿದ್ದರೆ ಸತ್ತವರು ಯಾರು ಬದುಕುವಹಾಗಿಲ್ಲ ಆದಕಾರಣ ಕರುಣಾಶಾಲಿಯಾದ ನೀನು ನಮ್ಮಲ್ಲಿ ದಯವಿಟ್ಟು ಇಲ್ಲಿಂದ ಹೊರಟು ಹಿಮವಂತ ಮಾಲ್ಯವಂತ ಪರ್ವತಗಳನ್ನು ದಾಟಿ ಚಂದ್ರದ್ರೋಣವನ್ನು ಕಳೆದು ಕ್ಷೀರಸಮುದ್ರವನ್ನು ಹಾದುಹೋಗಿ ಗಂಧರ್ವರಿಂದ ಕಾವಲಾಗಿ ರಕ್ಷಿಸಲ್ಪಡುತ್ತಿರುವ ಸಂಜೀವನಪರ್ವತವನ್ನು ಹೊಕ್ಕು ಅಲ್ಲಿರುವ ಸಂಧಾನಕರಣಿ, ವಿಶಲ್ಯಕರಣಿ, ಸಂಜೀವಕರಣಿ, ಸೌವರ್ಣಕರಣಿಗಳೆಂಬ ಮೂಲಿಕೆಗಳನ್ನು ತೆಗೆದುಕೊಂಡು ಬಂದರೆ ಈಗ ಗಾಯಹೊಂದಿ ಮೂರ್ಛೆಹೋಗಿ ಸತ್ತುಬಿದ್ದಿರುವ ಕಪಿಸೇನೆಯು ದ್ವಿಗುಣಪರಾಕ್ರಮದಿಂದ ಮೇಲಕ್ಕೆ ಏಳುವುದು ಆ ಬಳಿಕ ನಮಗೆ ಜಯವಾಗುವುದು ಇದಕ್ಕೆ! ಸಂಶಯವಿಲ್ಲ

ವೆಂದು ಹೇಳಲು ಆಂಜನೇಯನು ಸಂತುಷ್ಟನಾಗಿ ಜಾಂಬವಂತನಿಗೆ ನಮಸ್ಕರಿಸಿ ಆತನ ಆಶೀರ್ವಾದವನ್ನು ಪಡೆದು ಅಲ್ಲಿಂದ ಹೊರಟು ಲವಣಸಮುದ್ರವನ್ನು ಹಾರಿ, ಪರ್ವತಸಮೂಹಗಳನ್ನು ದಾಟಿ ಸಂಜೀವನಪರ್ವತದ ಬಳಿಗೆ ಬಂದು ನೋಡಲು, ಆ ಪರ್ವತವು ಅವನ ಕಣ್ಣಿಗೆ ಕಾಣಲೆ ಇಲ್ಲ ಬಳಿಕ ಪರ್ವತರಾಜನನ್ನು ಸ್ತೋತ್ರಮಾಡಿ ಹೊಗಳಿದರೂ ಸಾಧ್ಯವಾಗದಿರಲು, ರೋಷಾವೇಶದಿಂದ ಆರ್ಭಟಿಸುತ್ತಿರಲು ಸಂಜೀವನಪರ್ವತದ ಕಾವಲುಗಾರರಾದ ಗಂಧರ್ವರು ಹನುಮಂತನನ್ನು ಎದುರಿಸಿ ಯುದ್ಧಕ್ಕೆ ನಿಲ್ಲಲು ಧೀರನಾದ ಆಂಜನೇಯನು ಅವರನ್ನು ಸಂಹರಿಸಿ ಸಂತುಷ್ಟನಾಗಿ ಸಮೂಲವಾಗಿ ಆ ಪರ್ವತವನ್ನೆ ಕಿತ್ತುಕೊಂಡು ಹೋಗುವೆನೆಂದು ಯೋಚಿಸಿ, ತನ್ನ ಬಾಲವನ್ನು ಅದಕ್ಕೆ ಸುತ್ತಿ ಹಸ್ತದಲ್ಲಿರುವ ಗದೆಯಿಂದ ಅಪ್ಪಳಿಸಿ ಮೀಟಿದನು, ಪರ್ವತವು ಅಲ್ಲಾಡಿ ಬೇರುಸಹಿತ ಕಿತ್ತುಬೀಳುತ್ತಿರಲು ಅದರಲ್ಲಿದ್ದ ದೇವತೆಗಳು ಗಂಧರ್ವರೂ ಭಯಪಟ್ಟು ಭಕ್ತಿಯುಕ್ತರಾಗಿ ಆಂಜನೇಯನ ಬಳಿಗೆ ಬಂದು ಅಯ್ಯಾ! ನೀನು ಮಹಾಪರಾಕ್ರಮಿಯೆ! ಸರಿ, ನಿನ್ನ ಸಾಹಸವನ್ನು ತಿಳಿಯದೆ ನಾವು ಯುದ್ಧಮಾಡಿದೆವು ನಮ್ಮ ಅಪರಾಧವನ್ನು ಕ್ಷಮಿಸು ನೀನು ರಾಮಭಕ್ತನಾದಕಾರಣ ನಿನಗೆ ನಮಸ್ಕಾರ ಶ್ರೀರಾಮಕಾರ್ಯಾರ್ಥವಾಗಿ ನೀನು ಈ ಪರ್ವತವನ್ನು ತೆಗೆದುಕೊಂಡು ಹೋದರೂ ಚಿಂತೆಯಿಲ್ಲ ಮರಳಿ ಇದನ್ನು ಇಲ್ಲಿಯೆ ತಂದಿಡಬೇಕೆಂದು ಬಹಳವಾಗಿ ಬೇಡಿಕೊಂಡರು ಆಗ ಆಂಜನೇಯನು ಅವರಿಗೆ ಹಾಗೆಯೆ ಆಗಲಿ ನಮ್ಮ ಕೆಲಸವಾದಮೇಲೆ ಈ ಪರ್ವತವನ್ನು ತಂದು ಇಲ್ಲೆ ಇಡುತ್ತೇನೆ, ಹೆದರಬೇಡಿ ಸಂತೋಷನಾಗಿರಿ, ಎಂದು ಸಮಾಧಾನಪಡಿಸಿ ಆ ಸಂಜೀವನ ಪರ್ವತನನ್ನು ಹೊತ್ತುಕೊಂಡು ಕ್ಷಣಮಾತ್ರದಲ್ಲಿ ಯುದ್ಧರಂಗಕ್ಕೆ ಬಂದು ಅದನ್ನು ಇಳಿಸಿ ರಾಮನಿಗೆ ನಮಸ್ಕರಿಸಿ, ಜಾಂಬವಂತ ಸುಗ್ರೀವಾದಿಗಳನ್ನು ಆಲಿಂಗಿಸಿ ವಿಭೀಷಣನನ್ನು ಹೊಗಳಿ ವಿಶ್ರಮಿಸಿಕೊಳ್ಳುವುದಕ್ಕಾಗಿ ಕುಳಿತುಕೊಂಡನು.

## ಸುಷೇಣನು ಕಪಿಸೇನೆಯನ್ನು ಬದುಕಿಸಿದುದು.

ಹೀಗೆ ರಾಮಭಕ್ತನಾದ ಆಂಜನೇಯನು ಸಂಜೀವನ ಪರ್ವತವನ್ನು ತಂದು ರಣಭೂಮಿಯಲ್ಲಿಡಲು, ಜಾಂಬವಂತ ಸುಗ್ರೀವಾದಿಗಳು ಆನಂದಭರಿತರಾಗಿ ಆಂಜನೇಯನ ಪರಾಕ್ರಮವನ್ನು ಹೊಗಳಿ ಶ್ರೀರಾಮನ ಮಹಿಮೆಯನ್ನು ಬಹಳವಾಗಿ ಕೊಂಡಾಡುತ್ತ ಸುಷೇಣನ ಮುಖವನ್ನು ನೋಡುತ್ತ ಇರಲು ಆತನು ಸಂತೋಷಚಿತ್ತನಾಗಿ ರಾಮಚಂದ್ರನಿಗೆ ನಮಸ್ಕರಿಸಿ, ಸುಗ್ರೀವ ಜಾಂಬವಂತರ ಅಪ್ಪಣೆಯನ್ನು ಪಡೆದು, ಹನುಮಂತನನ್ನು ಹೊಗಳಿ, ಆತನ ಸಹಾಯದಿಂದ ಕಪಿಸೇನೆಯನ್ನು ಬದುಕಿಸುವುದಕ್ಕೆ ಮೊದಲುಮಾಡಿ ವಿಶಲ್ಯಕರಣೆಯಿಂದ ಶಲ್ಯಗಳನ್ನು ಜೋಡಿಸಿಕಟ್ಟಿ, ಸಂಧಾನಕರಣಿಯಿಂದ ಕತ್ತರಿಸಿದ ಗಾಯಗಳನ್ನು ಗುಣಪಡಿಸಿ, ಸೌವರ್ಣಕರಣಿಯಿಂದ ತೇಜಸ್ಸನ್ನು ಕೊಟ್ಟು ಸಂಜೀವಕರಣಿಯಿಂದ ಸಕಲರನ್ನು ಬದುಕಿಸಲು ಸರ್ವರೂ ಇಮ್ಮಡಿಯಾದ ತೇಜೋ ಬಲಪರಾಕ್ರಮಗಳಿಂದ ಹೊಳೆಯುವಂತೆ ಮಾಡಿದಮೇಲೆ ಸತ್ತಸೈನಿಕರೆಲ್ಲರೂ ಮೈಮುರಿದುಕೊಂಡೆದ್ದು ಸುತ್ತಲೂ ನೋಡಿ ಆಂಜನೇಯನಿಗೆ ನಮಸ್ಕರಿಸಿ, ಶತ್ರುವಿನ ಮೇಲೆ ಯುದ್ಧಮಾಡುವ ಉತ್ಸಾಹದಿಂದ ಶ್ರೀರಾಮನೆದುರಿಗೆ ನಿಂತು, ಹಗೆಯನ್ನು ತೋರಿಸಿ ನಮ್ಮಗಳ ಸಂತೋಷವನ್ನು ಕಾಪಾಡು. ಈಗ ನಾವು ಮಾಡಬೇಕಾಗಿರುವ ಕೆಲಸವೇನು! ಅದನ್ನಾದರೂ ಹೇಳಿ ಸಂರಕ್ಷಿಸು ಎಂದು ಬೆಸಗೊಳುತ್ತಿದ್ದರು.

## ಸುಗ್ರೀವನ ಯುದ್ಧಸಾಹಸ ಲಂಕೆಯ ಮುತ್ತಿಗೆ.

ಆ ಬಳಿಕ ರಾಮಚಂದ್ರನು ಸಂತುಷ್ಟನಾಗಿ ಧೀರನಾದ ಆಂಜನೇಯನನ್ನು ಕರೆದು ಅಯ್ಯಾ! ನೀನು ವೀರಾಧಿವೀರನೇಸರಿ! ನಿನ್ನ ಸಾಹಸದಿಂದ ಈ ಸಂಜೀವನ ಪರ್ವತ ಇಲ್ಲಿಗೆ ಬಂದಿತು ಅದರಿಂದ ನಮ್ಮ ಕಪಿಸೇನೆಯು ಬದುಕಿಕೊಂಡಿತು, ನನಗೆ ಸಂತೋಷವಾಯಿತು, ದೇವತೆಗಳು

ತೃಪ್ತರಾದರು, ರಾಕ್ಷಸರಿಗೆ ಭಯ ಹೆಚ್ಚಿತು. ಇನ್ನು ಜಯುವಾಗುವುದರಲ್ಲಿ ಯಾವ ಸಂಶಯವೂ ಇಲ್ಲ, ಆದರೆ ಲೋಕಸಂರಕ್ಷಣೆಗೆ ಆಕರವಾದ ಮಹೌಷಧಗಳಿರುವ ಪರ್ವತವನ್ನು ಇಲ್ಲೆ ಬಿಟ್ಟು ಬಿಟ್ಟರೆ ಲೋಕಕ್ಕೆ ಹಾನಿಯುಂಟಾಗಿ ದೇವತೆಗಳಿಗೆ ಕೋಪಬಂದು ನಮಗೆ ಶಾಪವನ್ನು ಕೊಡುವರು ಅದೂ ಅಲ್ಲದೆ ಬ್ರಹ್ಮಸೃಷ್ಟಿಗೆ ವ್ಯತಿರಿಕ್ತವಾಗಿ ನಮಗೂ ತೊಂದರೆಯಾಗುವುದು ಆದ ಕಾರಣ ನೀವೆಲ್ಲರೂ ಸಂತೋಷಪಟ್ಟಂತೆ ತ್ರಿಲೋಕಗಳೂ ಸಂತೋಷಪಡುವಂತೆ ಈ ಸಂಜೀವನ ಪರ್ವತವನ್ನು ಇದ್ದ ಕಡೆಯಲ್ಲಿಯೆ ಇಟ್ಟು ಬಾ! ಎನಲು, ಆಂಜನೇಯನು ಅಪ್ಪಣೆ ಎಂದು ಕೈಮುಗಿದು ಶ್ರೀರಾಮರಿಗೆ ನಮಸ್ಕಾರಮಾಡಿ, ತಾನು ನಿಂತಿದ್ದ ಕಡೆಯಿಂದಲೆ ಆ ಪರ್ವತವನ್ನು ಕೈಗೆ ತೆಗೆದುಕೊಂಡು ಬೀಸಿ ಎಸೆದು ಅದರ ಸ್ಥಾನದಲ್ಲಿ ನಿಲ್ಲುವಂತೆ ಗುರಿಯಿಟ್ಟು ಸಂಜೀವನ ಪರ್ವತವನ್ನು ಮೊದಲಿದ್ದ ಹಾಗೆ ನಿಲ್ಲಿಸಿದನು, ಅಷ್ಟುಹೊತ್ತಿಗೆ ಸೂರ್ಯೋದಯವಾಯಿತು, ಕಪಿವೀರರೆಲ್ಲರೂ ಉತ್ಸಾಹ ಭರಿತರಾಗಿ ಯುದ್ಧಮಾಡಲು ಕುತೂಹಲಪಡುತ್ತಿದ್ದರು. ಆಗ ಸುಗ್ರೀವನು ಸ್ನಾನ ಸಂಧ್ಯಾವಂದನಾದಿ ಕಾಲ್ಯಕರ್ಮಗಳನ್ನು ತೀರಿಸಿಕೊಂಡು ಶುದ್ಧಮನಸ್ಕನಾಗಿ ಶ್ರೀರಾಮನ ಬಳಿಗೆ ಬಂದು ಸ್ವಾಮಿ! ರಾವಣನು ಹೆದರಿ ಹಿಮ್ಮೆಟ್ಟಿ ಲಂಕೆಗೆಹೋದನು ಮರಳಿ ಯುದ್ಧಕ್ಕೆ ಬಾರಲಿಲ್ಲ ಅವನು ಯುದ್ಧಕ್ಕೆ ಬರಬೇಕಾದರೆ ನಾವೇ ಅವನನ್ನು ಬರಮಾಡಬೇಕಾಗಿದೆ, ಇದಕ್ಕಾಗಿ ಉತ್ಸಾಹದಿಂದ ಎದುರು ನೋಡುತ್ತಿರುವ ಕಪಿವೀರರಿಗೆ ಹೇಳಿ ಲಂಕೆಗೆ ಬೆಂಕಿಯನ್ನು ಹೊತ್ತಿಸಿದರೆ ಆಗ ರಾವಣನು ವಿಧಿಯಿಲ್ಲದೆ ತಾನಾಗಿಯೆ ಯುದ್ಧಕ್ಕೆ ಬರುವನು ಎನಲು, ಶ್ರೀರಾಮನು ಹಾಗೆಯೆಮಾಡಿ, ತಥಾಸ್ತು ಎಂದು ಹೇಳಿದನು. ಕೂಡಲೆ ಕಪಿಗಳು ಉರಿಯುವ ಕೊಳ್ಳಿಗಳನ್ನು ಹಿಡಿದು ಲಂಕೆಯನ್ನು ಆವರಿಸಿಕೊಂಡು ಮನೆಗಳಿಗೂ ಮಹಡಿಗಳಿಗೂ ಮಠಗಳಿಗೂ ಮಂಟಪಗಳಿಗೂ ಎಲ್ಲಾ ಕಡೆಗೂ ತಮ್ಮ ಮನಸ್ಸು ಬಂದಹಾಗೆ ಬೆಂಕಿಯನ್ನು ಹೊತ್ತಿಸಲು ಉರಿ ಎದ್ದು ಹೊಗೆ ಸುತ್ತಿಕೊಂಡು ಕೈಮೈಸುಟ್ಟು, ಸುತ್ತಲೂ ಆವರಿಸಿಕೊಂಡಿರುವ ಉರಿಗೆ ಸಿಕ್ಕಿ ಗೋಳಿಡುತ್ತ ಚೀರುತ್ತಿರುವ ರಾಕ್ಷಸರ ರೋಧನಧ್ವನಿಯು ಪಟ್ಟಣದಲ್ಲೆಲ್ಲ ತುಂಬಿಕೊಂಡಿತು. ಈ ಕೋಲಾಹಲಧ್ವನಿಯನ್ನು ಕೇಳಿ ರಾವಣನು ಚಿಂತಾಕ್ರಾಂತನಾಗಿ ದುಃಖಿಸುತ್ತ ಓಲಗಶಾಲೆಯಲ್ಲಿ ಕುಳಿತು ಮಂತ್ರಿಯಾದ ಪ್ರಹಸ್ತನೊಡನೆ ಆಲೋಚಿಸಿ ತನ್ನ ದುರವಸ್ಥೆಗಾಗಿ ವ್ಯಸನಪಟ್ಟು, ಮಹಾಶೂರರಾಗಿಯೂ ತನಗೆ ಆಪ್ತರಾಗಿಯೂ ಇರುವ ಅಕಂಪ ವಜ್ರಜಂಘ ಶೋಣಿತಾಕ್ಷ ಕುಂಭ ನಿಕುಂಭಾದಿಗಳನ್ನು ಕರೆದು ನೀವೆಲ್ಲರೂ ಒಟ್ಟಾಗಿ ಹೋಗಿ ಲಂಕೆಯನ್ನು ಮುತ್ತಿರುವ ಕಪಿಗಳನ್ನು ಹೊಡೆದೋಡಿಸಿ ನಮಗೆ ಸಹಾಯಮಾಡಿ ಎಂದು ಹೇಳಿ ಕಳುಹಿಸಿದನು.

## ರಾಕ್ಷಸರ ಕೂಟಯುದ್ಧ ಅಂಗದನ ಅಟ್ಟಹಾಸ.

ಆ ರಾಕ್ಷಸರೆಲ್ಲರೂ ಒಟ್ಟಾಗಿ ಹೊರಟು ಆರ್ಭಟಿಸುತ್ತ ಕಪಿಸೇನೆಯಮೇಲೆ ಬಿದ್ದು ಹೊಡೆಯುತ್ತ ಯುದ್ಧಮಾಡುತ್ತಿದ್ದರು ಅದನ್ನು ನೋಡಿ ಕಪಿವೀರರು ಅವರನ್ನು ಕೋಟೆಯಿಂದ ಹೊರಕ್ಕೆ ಬಿಡದಂತೆ ಅಡ್ಡಗಟ್ಟಿ ಬಾಗಿಲುಗಳನ್ನು ಬಲವಾಗಿ ಮುಚ್ಚಿ ತಾವು ಸರ್ವ ಸನ್ನಾಹದಿಂದ ಯುದ್ಧ ಮಾಡತೊಡಗಿದರು. ಆಗ ಅಕಂಪನು ಗದೆಯನ್ನು ಹಿಡಿದು ಅಂಗದನ ಮೇಲೆ ಬಿದ್ದು ಯುದ್ಧಮಾಡುತ್ತಿರಲು ಧೀರನಾದ ಅಂಗದನು ಅವನ ಕೈಯಲ್ಲಿದ್ದ ಗದೆಯನ್ನು ಕಿತ್ತುಕೊಂಡು ಅದರಿಂದಲೆ ಅವನನ್ನು ಹೊಡೆದು ಕೊಂದನು. ಬಳಿಕ ಶೋಣಿತಾಕ್ಷನು ಶಕ್ತ್ಯಾಯುಧವನ್ನು ಹಿಡಿದು ಅಂಗದನ ಮೇಲೆ ಬಂದನು. ಹಾಗೆ ಬಂದ ಶೋಣಿತಾಕ್ಷನ ಶಕ್ತಿಯನ್ನು ಆಕರ್ಷಿಸಿ ಅಂಗದನು ಬಾಹುಬಲಯುಕ್ತನಾಗಿ ಅವನ ಆಯುಧದಿಂದಲೆ ಹೊಡೆದು ಶೋಣಿತಾಕ್ಷನನ್ನು ನೆಲಕ್ಕುರುಳಿಸಲು ಆತನು ಅಂಗದನ ಪ್ರಹಾರವನ್ನು ಸಹಿಸಲಾರದೆ ಕೆಳಕ್ಕೆ ಬಿದು

ಪ್ರಾಣವನ್ನು ಬಿಟ್ಟನು. ಬಳಿಕ ವಜ್ರಜಂಘನು ಆರ್ಭಟಿಸುತ್ತ ಆನೆಯಮೇಲೆ ಕುಳಿತು ಅಂಗದನನ್ನು ಎದುರಿಸಿ ನಿಂತು ಬಾಣಗಳಿಂದ ಹೊಡೆಯಲು ಅಂಗದನು ರೋಷಾವೇಶಯುಕ್ತನಾಗಿ ತನ್ನ ಬಾಲವನ್ನು ವಿಸ್ತರಿಸಿ ಆನೆಗೆ ಸುತ್ತಿಸಿ ಅದನ್ನು ಮೇಲಕ್ಕೆತ್ತಿ ಅಂತರಿಕ್ಷದಲ್ಲಿ ತಿರುಗಿಸಿ ನೆಲಕ್ಕೆ ಅಪ್ಪಳಿಸಲು ವಜ್ರಜಂಘನು ಹಸ್ತಿಸಹಿತನಾಗಿ ಮಸ್ತಕ ಒಡೆದು ಪ್ರಾಣವನ್ನು ಬಿಟ್ಟು ಸತ್ತು ಬಿದ್ದನು. ಅದನ್ನು ನೋಡುತ್ತಿದ್ದ ನಿಕುಂಭನು ರಥಾರೂಢನಾಗಿ ಧನುರ್ಬಾಣಗಳನ್ನು ಹಿಡಿದು ಅಂಗದನಮೇಲೆ ಬಾಣವನ್ನು ಪ್ರಯೋಗಿಸಿದನು. ಅದರ ಪೆಟ್ಟನ್ನು ಸಹಿಸಲಾರದೆ ಅಂಗದನು ಮೂರ್ಛಾಕ್ರಾಂತನಾದನು. ಅದನ್ನು ನೋಡಿ ಆಂಜನೇಯನು ಕ್ರುದ್ಧನಾಗಿ ಯುದ್ಧಮಾಡುತ್ತ ಬಂದು ನಿಕುಂಭನ ಸಾರಥಿಯನ್ನು ಕುದುರೆಗಳನ್ನು ಕೊಂದು ರಥವನ್ನು ಪುಡಿಪುಡಿಮಾಡಿ ಆರ್ಭಟಿಸುತ್ತಿದ್ದನು. ಬಳಿಕ ನಿಕುಂಭನು ಗದೆಯನ್ನು ಎತ್ತಿ ಹನುಮಂತನನ್ನು ಹೊಡೆಯಲು ಆಂಜನೇಯನು ಅದನ್ನು ತಪ್ಪಿಸಿಕೊಂಡು ಅವನ ಕೈಗದೆಯನ್ನು ಕಿತ್ತುಕೊಂಡು ಅದರಿಂದಲೆ ಅವನನ್ನು ಹೊಡೆದು ಕೊಂದನು. ಆಬಳಿಕ ಆರ್ಭಟಿಯುಕ್ತನಾಗಿ ತನ್ನಮೇಲೆ ಯುದ್ಧಕ್ಕೆ ಬಂದ ಕುಂಭನನ್ನು ಆಂಜನೇಯನು ತನ್ನ ಸಾಹಸದಿಂದ ಕ್ಷಣಮಾತ್ರದಲ್ಲಿ ಸಂಹರಿಸಿ ಯುದ್ಧರಂಗದಲ್ಲಿ ತಾನೇ ತಾನಾಗಿ ರೋಷಾವೇಶದಿಂದ ಆರ್ಭಟಿಸುತ್ತಿರಲು ಹತಶೇಷರಾದ ರಾಕ್ಷಸರು ಹೆದರಿ ಹಿಮ್ಮೆಟ್ಟಿ ಭಯದಿಂದ ನಡುಗುತ್ತ ಲಂಕೆಗೆ ಓಡಿಹೋಗಿ ರಾವಣನನ್ನು ಮರೆಹೊಕ್ಕು ಯುದ್ಧರಂಗದ ಸಂಗತಿಯನ್ನೆಲ್ಲ ಹೇಳಿ ಸುಮ್ಮನಾದರು.

## ಮಕರಾಕ್ಷನ ಯುದ್ಧ.

ಬಳಿಕ ರಾವಣನು ಮಹಾವ್ಯಸನದಿಂದ ಒಡ್ಡೋಲಗದಲ್ಲಿ ಕುಳಿತು ಚಿಂತಿಸುತ್ತ ಬಹಳವಾಗಿ ಹಂಬಲಿಸಿ ಆಹಾ! ನಾನು ಮಾಡಿದ ಪ್ರಯತ್ನ ನಿಷ್ಫಲವಾಯಿತು ಇನ್ನು ಹಗೆಗಳನ್ನು ಗೆಲ್ಲುವ ಬಗೆಯನ್ನು ಕಾಣೆ? ಏನು ಮಾಡಲಿ! ಎಂದು ಚಿಂತಿಸುತ್ತ ಕಡೆಗೆ ಧೈರ್ಯವನ್ನು ತಂದುಕೊಂಡು ಮಕರಾಕ್ಷನನ್ನು ಕರೆಸಿ, ಎಲೈ ರಾಕ್ಷಸವೀರನೆ ನೀನು ಕಾಯಪುಷ್ಟಿಯಲ್ಲಿಯೂ ಬುದ್ಧಿಕುಶಲತೆಯಲ್ಲಿಯೂ ಬಹು ನಿಪುಣನು ನಮ್ಮ ರಾಕ್ಷಸಕುಲಕ್ಕೆ ಅಲಂಕಾರಭೂತನು ನೀನು ಈ ದಿನ ಯುದ್ಧಭೂಮಿಗೆ ಹೋಗಿ ವಾನರಸೇನೆಯನ್ನು ಕೊಂದು ರಾಮಲಕ್ಷ್ಮಣರನ್ನು ಸೆರೆಹಿಡಿದುಕೊಂಡು ಬಾ! ಎಂದು ಹೇಳಿ ಚತುರಂಗಬಲದೊಡನೆ ಅವನನ್ನು ಕಳುಹಿಸಲು ಉತ್ಸಾಹಯುಕ್ತನಾದ ಮಕರಾಕ್ಷನು ಆನಂದಭರಿತನಾಗಿ ರಾಮಸೇನೆಯನ್ನು ಗೆಲ್ಲಬೇಕೆಂಬ ಕುತೂಹಲದಿಂದ ರಥಾರೂಢನಾಗಿ ಬರುತ್ತಿರುವಾಗ ಅನೇಕ ಅಪಶಕುನಗಳಾದರೂ ರಾಕ್ಷಸನು ಲಕ್ಷ್ಯಮಾಡದೆ ಮುಂದಕ್ಕೆ ಬರಲು ಕಪಿವೀರರು ಕಲ್ಲುಮರಗಳನ್ನು ಹಿಡಿದು ಹೊಡೆಯುತ್ತ ಬಂದರು. ಆಗ ಹೆದರಿ ಹಿಮ್ಮೆಟ್ಟಿ ಓಡುತ್ತಿದ್ದ ರಾಕ್ಷಸರಿಗೆ ಮಕರಾಕ್ಷನು ಅಭಯದಾನಮಾಡಿ ಕಪಿಗಳನ್ನು ಹೊಡೆಯಲು ವಾನರರು ಅದನ್ನು ಸಹಿಸಲಾರದೆ ದಿಕ್ಕುದಿಕ್ಕಿಗೆ ಓಡುತ್ತಿದ್ದರು. ರಾಮಚಂದ್ರನು ಅವರಿಗೆ ಧೈರ್ಯಹೇಳಿ ಅವರನ್ನೆಲ್ಲ ತಡೆದು ನಿಲ್ಲಿಸಿ ಧನುರ್ಧಾರಿಯಾಗಿ ತಾನೆ ಯುದ್ಧಕ್ಕೆ ನಿಂತನು. ಅದನ್ನು ಕಂಡು ರಾಕ್ಷಸನು ಹಾಸ್ಯಮಾಡಿ ನಗುತ್ತ ಎಲಾ! ನರಾಧಮಾ! ನೀನೆಯೋ? ಶ್ರೀರಾಮನು ನಮ್ಮ ತಂದೆಯನ್ನು ಕೊಂದ ಹಗೆಯನ್ನು ತೀರಿಸಿಕೊಳ್ಳಬೇಕೆಂದು ನಿನ್ನೊಡನೆ ಯುದ್ಧಕ್ಕೆ ಬಂದಿರುವೆನು ನನ್ನ ಬಾಹುಬಲವನ್ನು ನೋಡು ಎಂದು ಶ್ರೀರಾಮನನ್ನು ಹೊಡೆದು ನೋಯಿಸಲು ಆಕಾಲದಲ್ಲಿ ರಾಮಚಂದ್ರನು ಎಲೈ ಹಂದಿಯೆ! ಹೇಡಿಯಂತೆ ಹರಟಬೇಡ ಬರಿಯ ಮಾತಿನಿಂದ ಫಲವೇನು? ಈಕ್ಷಣವೆ ನಿನ್ನನ್ನೂ ನಿಮ್ಮ ತಂದೆಯಬಳಿಗೆ ಕಳುಹಿಸುವೆನು ನೋಡು ಎಂದು ಬಾಣದಿಂದ ಹೊಡೆಯಲು ರಾಕ್ಷಸನು ಅದನ್ನು ಖಂಡಿಸಿ ರಾಮನನ್ನು ಐದು ಬಾಣಗಳಿಂದ ನೋಯಿಸಿದನು. ಬಳಿಕ ರೋಷಾವೇಶದಿಂದ ರಾಮನು ವೀರನಾದಮಾಡಿ

ಮಹಾಸ್ತ್ರವನ್ನು ಹೂಡಿ ಹೊಡೆದು ಮಕರಾಕ್ಷಸನ ಕೈಬಿಲ್ಲನ್ನು ಮುರಿದು ಇನ್ನೊಂದು ಬಾಣದಿಂದ ಸಾರಥಿಯನ್ನು ಕೊಂದು ಕುದುರೆಗಳನ್ನು ಕೆಡವಿ ರಥವನ್ನು ಮುರಿದು ವಿರಥನಾಗುವಂತೆ ಮಾಡಿದನು. ಮಕರಾಕ್ಷಸನು ಮಹಾಭಯಂಕರನಾಗಿ ರಾಮನನ್ನು ಶೂಲದಿಂದ ತಿವಿಯಲು ಬಂದುದನ್ನು ಕಂಡು ರಾಮನು ಯುದ್ಧಕೌಶಲದಿಂದ ಅದನ್ನು ತಪ್ಪಿಸಿಕೊಂಡು ಆಗ್ನೇಯಾಸ್ತ್ರವನ್ನು ಹೂಡಿ ಹೊಡೆದು ಕ್ಷಣಮಾತ್ರದಲ್ಲಿ ಮಕರಾಕ್ಷನನ್ನು ಕೊಂದನು. ರಾಕ್ಷಸಸೈನ್ಯವು ಉರಿದು ಬೂದಿಯಾಗುತ್ತಿರುವುದನ್ನು ಕಂಡು ಹತಶೇಷರಾದವರು ಹೆದರಿ ಓಡಿಹೋಗಿ ರಾವಣನಿಗೆ ನಮಸ್ಕರಿಸಿ ಸ್ವಾಮಿ! ಈ ದಿನ ಯುದ್ಧದಲ್ಲಿ ಮಕರಾಕ್ಷಸನೂ ಸತ್ತನು. ಮುಂದೆ ಗತಿಯೇನು? ರಾಕ್ಷಸ ಸೈನ್ಯವು ರಾಮನೆದುರಿಗೆ ನಿಲ್ಲುವಹಾಗಿಲ್ಲ ಎಂದು ಗೋಳಿಡುತ್ತಿದ್ದರು.

## ಇಂದ್ರಜಿತು ಯುದ್ಧಕ್ಕೆ ಹೊರಟುದು.

ಮೊದಲಿಗಿಂತಲೂ ಮಹಾ ಖಿನ್ನನಾಗಿ ರಾವಣಾಸುರನು ಅನ್ನಾಹಾರಗಳನ್ನು ತೊರೆದು ಬಹಳ ಹೊತ್ತು ಚಿಂತಿಸಿ ಪ್ರಹಸ್ತನೊಡನೆ ಯೋಚನೆಮಾಡಿ ಕಡೆಗೆ ಮಗನಾದ ಇಂದ್ರಜಿತುವನ್ನು ಕರೆಸಿ ಅಯ್ಯಾ! ನಮ್ಮ ಬಲದಲ್ಲಿದ್ದ ರಾಕ್ಷಸವೀರರೆಲ್ಲರೂ ರಾಮಸೇನೆಯಿಂದ ಹತರಾದರು. ಇನ್ನು ನಿನ್ನ ಹೊರತು ಯುದ್ಧಕ್ಕೆ ಹೋಗುವ ಭಟರೇ ಇಲ್ಲ ದೇವೇಂದ್ರನನ್ನು ಜಯಿಸಿದ ಮಹಾಪರಾಕ್ರಮಿಯಾದ ನೀನೊಬ್ಬನೇ ಉಳಿದಿರುವೆ? ನೀನಾದರೂ ಹೋಗಿ ರಾಕ್ಷಸಕುಲಕ್ಕೆ ಅವಮಾನವಾಗದಂತೆ ರಾಮಸೇನೆಯನ್ನು ಗೆದ್ದು ರಾಮಲಕ್ಷ್ಮಣರನ್ನು ಸೆರೆಯಾಗಿ ಹಿಡಿದು ತಂದು ನನ್ನ ಮಾನವನ್ನು ಉಳಿಸುವೆಯಾ? ಎಂದು ಕೇಳಲು ಇಂದ್ರಜಿತುವು ತಂದೆಗೆ ನಮಸ್ಕಾರಮಾಡಿ ಕೈಮುಗಿದು ನಿಂತು ಎಲೈ ಜನಕನೆ! ನಿನ್ನ ಮಗನಾಗಿ ದೇವತೆಗಳಿಗೆ ಹಗೆಯಾಗಿ ತ್ರಿಲೋಕವೀರನಾಗಿ ವೀರಪುತ್ರನೆನಿಸಿಕೊಂಡು ನಾನಿರುವಲ್ಲಿ ಮನುಷ್ಯರಿಗಾಗಿ ನೀನು ಇಷ್ಟು ಹೆದರಬೇಕೇ ಆಗಲಿ! ನನ್ನನ್ನು ಕಳುಹಿಸಿ ನೋಡು ಕ್ಷಣಮಾತ್ರದಲ್ಲಿ ಹಗೆಯನ್ನು ಗೆದ್ದುಬರುವೆನು ಎಂದು ಆರ್ಭಟಿಸುತ್ತ ರಾವಣನಿಂದ ಆಜ್ಞಪ್ತನಾಗಿ ಚತುರಂಗ ಸೈನ್ಯದೊಡನೆ ಹೊರಡಲು ಸಿದ್ಧನಾಗಿ ತಾಯಿಯ ಬಳಿಗೆ ಬಂದು ಅವಳಿಗೆ ವಂದನಗೈದು ತಾನು ಯುದ್ಧಕ್ಕೆ ಹೊರಡುವ ಸಮಾಚಾರವನ್ನು ತಿಳಿಸಿ ಅವಳ ಆಶೀರ್ವಾದವನ್ನು ಪಡೆದು ಸಂತೋಷಭರಿತನಾಗಿ ತನ್ನ ಮನೆಗೆ ಹೋಗಿ ಪತ್ನೀಪುತ್ರಾದಿಗಳಿಗೆ ತಾನು ಹೊರಡುವ ರಣಯಾತ್ರೆಯ ವಿಚಾರವನ್ನು ತಿಳಿಯಹೇಳಿ ರಥಾರೂಢನಾಗಿ ಜಯಭೇರಿಯನ್ನು ಹೊಡೆಯಿಸುತ್ತ ಲಂಕಾಪಟ್ಟಣದ ಉತ್ತರದಿಕ್ಕಿನ ಕೋಟೆಯಬಾಗಿಲಬಳಿಗೆಬಂದು ಅಲ್ಲಿ ಪರಿಶುದ್ಧವಾದ ಸ್ಥಳದಲ್ಲಿ ತ್ರಿಕೋಣಾಕಾರವಾದ ವೇದಿಕೆಯನ್ನು ಮಾಡಿಸಿ ತಾನು ರಕ್ತವಸ್ತ್ರ ರಕ್ತಗಂಧ ರಕ್ತಮಾಲ್ಯಾದಿಗಳಿಂದಲಂಕೃತನಾಗಿ ಮೌಂಜಿಯನ್ನು ಕಟ್ಟಿಕೊಂಡು ದಂಡಾಜಿನಧಾರಿಯಾಗಿ ಅಗ್ನಿಕುಂಡದಲ್ಲಿ ಯಜ್ಞೇಶ್ವರನನ್ನು ಪ್ರತಿಷ್ಠಿಸಿ ಗಂಟೆಯನ್ನು ಬಾರಿಸುತ್ತ ಕಪಾಲಸ್ಥಾಯಿಯಾಗಿ ಅಥರ್ವಋಕ್ಕುಗಳಿಗನುಸಾರವಾಗಿ ತಂತ್ರಕ್ರಮವನ್ನು ನಡೆಸುತ್ತ ಕರಿಯ ಹೋತನ ಮಾಂಸವನ್ನು ಅಜ್ಯಧಾರೆಯೊಡನೆ ಅಗ್ನಿಗೆ ಆಹುತಿಯಾಗಿ ಕೊಟ್ಟು ತನ್ನ ಹೋಮದಿಂದ ತೃಪ್ತನಾದ ಯಜ್ಞಪುರುಷನನ್ನು ಪ್ರಾರ್ಥಿಸಿ ಒಂದು ರಥವನ್ನೂ ಅದರ ಜೊತೆಯಲ್ಲಿ ಕರಿಯ ದೇಹವೂ ಕ್ರೂರವಾದ ಕೋರೆಹಲ್ಲುಗಳೂ, ಕೆಂಪುಕೂದಲು ಇರುವ ಮಹಾಭಯಂಕರವಾದ ಸಿಂಧುಕೃತ್ತಿ ಎಂಬ ಶಕ್ತಿಯೊಂದನ್ನು ಪಡೆದುಕೊಂಡು ಆರ್ಭಟಿಸುತ್ತ ತನ್ನ ಶಕ್ತಿಯ ಬಲದಿಂದ ರಥಸಹಿತನಾಗಿ ಆಕಾಶಕ್ಕೆ ಹಾರಿ ಸಿಂಹನಾದ ಮಾಡುತ್ತ ಕಪಿಗಳನ್ನು ಕೊಲ್ಲುತ್ತ ಬಂದನು ಅದನ್ನು ಕಂಡು ಕಪಿಗಳು ಭಯಪಟ್ಟು ಬೆಂಡಾಗಿ ದಿಕ್ಕುದಿಕ್ಕಿಗೆ ಚೆದರಿಹೋಗುತ್ತಿರಲು ಲಕ್ಷ್ಮಣನು ರಾಮನನ್ನು ಕುರಿತು ಸ್ವಾಮಿ! ಈಗ ಯುದ್ಧಕ್ಕೆ ಬಂದಿರುವವನು ಯಾವನೋ ಒಬ್ಬ ಮಾಯಾವಿಯಂತೆ ಕಾಣುತ್ತಾನೆ ಅವನನ್ನು ಹೇಗಾದರೂ ಮಾಡಿ ಸಂಹರಿಸಬೇಕು. ಹಾಗಿಲ್ಲ

ವಾದರೆ ನಮ್ಮ ಕಪಿ ಸೈನ್ಯಕ್ಕೆ ಉಳಿವೆ ಇಲ್ಲ ಎಂದು ಹೇಳಲು, ಶ್ರೀರಾಮನು ಅಯ್ಯಾ ! ಇವನು ಸಾಮಾನ್ಯ ರಾಕ್ಷಸನಲ್ಲ ಬ್ರಹ್ಮನ ವರಬಲದಿಂದ ಗರ್ವಿತನಾಗಿರುವನು ಇವನ ಮೇಲೆ ಬಿಟ್ಟ ಬಾಣ ಗಳೆಲ್ಲ ವ್ಯರ್ಥವಾಗುವುವು. ಏನು ಮಾಡಬೇಕೊ ತಿಳಿಯದು ಎನಲು, ಅಷ್ಟುಹೊತ್ತಿಗೆ ಲೋಕಜೀವನರೂಪನಾದ ವಾಯುದೇವನು ಶ್ರೀರಾಮನ ಬಳಿಗೆ ಬಂದು ಎಲೈ ರಾಮಚಂದ್ರನೆ ! ನೀನು ಹೆದರಬೇಡ ಈ ಇಂದ್ರಜಿತು ಯಾಗಮಾಡಿ ಅಗ್ನಿಯ ವರದಿಂದ ಒಂದು ಶಕ್ತಿಯನ್ನು ಸಂಪಾದಿಸಿಕೊಂಡು ನಿಮ್ಮೊಡನೆ ಕಾದಾಡುತ್ತಿವನು. ಈಗ ನೀನು ಆಗ್ನೇಯಾಸ್ತ್ರವನ್ನು ಪ್ರಯೋ ಗಿಸಿದರೆ ಆ ಶಕ್ತಿಯು ಅವನನ್ನು ಹೊರಕೆಡವಿ ಓಡಿಹೋಗುವುದು ಆಮೇಲೆ ಅವನಿಗೆ ಅಪಜಯ ವಾಗುವುದು ಎಂದು ಹೇಳಿದನು. ಕೂಡಲೆ ಶ್ರೀರಾಮನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು ಇಂದ್ರಜಿತುವು ಶಕ್ತಿಭ್ರಷ್ಟನಾಗಿ ರಥಸಹಿತವಾಗಿ ಭೂಮಿಗೆ ಬಿದ್ದುಕೊಂಡನು. ಕೂಡಲೆ ಕಪಿ ಗಳು ತಮ್ಮ ಸಾಹಸವನ್ನು ಮೀರಿ ಕಲ್ಲುಗುಂಡುಗಳಿಂದ ಹೊಡೆದು ಅವನನ್ನು ನೋಯಿಸಲು ಅದನ್ನು ಸೈರಿಸಿಕೊಂಡು ರಾವಣಿಯು ಸಂತೋಷಯುಕ್ತನಾಗಿ ಪ್ರಾಣ ಉಳಿಯಿತಲ್ಲ ಎಂಬ ಸಂತೋಷದಿಂದ ತಂದೆಯ ಬಳಿಗೆ ಹೋಗಿ ಸ್ವಾಮಿ ! ಈ ಹೊತ್ತಿನ ಯುದ್ಧದಲ್ಲಿ ನಾನು ಕೆಲವು ಕಪಿಗಳನ್ನು ಕೊಂದೆನೆಂದು ಹೇಳಿ ಕೈಮುಗಿದನು. ಮಗನ ಮಾತುಗಳನ್ನು ಕೇಳಿದಕೂಡಲೆ ರಾವಣನಿಗೆ ಕೋಪೋದ್ರೇಕವುಂಟಾಗಿ ಎಲಾ ಹಂದೆ ನಿನ್ನಂಥ ಹೇಡಿಯನ್ನು ಲೋಕದಲ್ಲಿ ಕಾಣೆ ನೀನು ನನಗೆ ಮಗನಾದುದು ವ್ಯರ್ಥ ರಾಮಸೇನೆಯನ್ನು ಕೊಂದು ಜಯಶೀಲನಾಗಿ ಹೊರಟು ಬಾಯೆಂದು ನಾನು ಹೇಳಿಕಳುಹಿಸಿದರೆ ನೀನು ಕಪಿಗಳಿಗೆ ಹೆದರಿ ಹಿಮ್ಮೆಟ್ಟಿ ಓಡಿಬಂದು ಕೆಲವ ರನ್ನು ಮಾತ್ರ ಕೊಂವೆನೆಂದು ಹೇಳುತ್ತಿರುವೆಯಲ್ಲ ನಿನಗೆ ನಾಚಿಕೆಯಿಲ್ಲವೇ ? ಛೀ ಮೂರ್ಖ ನನ್ನೆದುರಿಗೆ ನಿಲ್ಲಬೇಡ ಹೊರಡು ಈಗಲಾದರೂ ರಣರಂಗಕ್ಕೆ ಹೋಗಿ ಸಾಹಸದಿಂದ ಯುದ್ಧ ಮಾಡಿ ಒಬ್ಬರೂ ಉಳಿಯದಂತೆ ಎಲ್ಲರನ್ನು ಕೊಂದುಬಾ ! ಇಲ್ಲವಾದರೆ ನೀನು ನನಗೆ ಮಗನೇ ಅಲ್ಲ ಈಕ್ಷಣವೆ ಹೊರಡು ಎಂದು ಗರ್ಜಿಸಲು ಇಂದ್ರಜಿತುವು ಆಶ್ಚರ್ಯಚಕಿತನಾಗಿ ಅಲ್ಲಿಂದ ಹೊರಟು ಯುದ್ಧರಂಗಕ್ಕೆ ಬಂದು ತನ್ನ ಮಾಯಾಶಕ್ತಿಯಿಂದ ಸೀತೆಯನ್ನು ನಿರ್ಮಾಣಮಾಡಿ ಆ ಮಾಯಾಸೀತೆಯನ್ನು ಕೈಲಿ ಹಿಡಿದುಕೊಂಡು ಎದೆಗೊರಗಿಸಿಕೊಂಡು ಆಂಜನೇಯನಿಗೆದುರಾಗಿ ನಿಂತು ಎಲಾ ಹನುಮ ! ಈಗ ನೋಡು ನೀನೂ ನಿಮ್ಮ ರಾಮನೂ ಯಾವ ಸೀತೆಗಾಗಿ ಕಷ್ಟ ಪಡುತ್ತಿರುವಿರೊ ! ಅಂಥ ಸೀತೆಯು ಈಗ ಏನಾಗಿರುವಳು ? ಇವಳನ್ನು ಈಕ್ಷಣವೇ ! ಕಡಿದು ತುಂಡುಮಾಡುವೆನು ! ಎಂದು ಹೇಳುತ್ತ ಮಾಯಸೀತೆಯ ಜುಟ್ಟನ್ನು ಹಿಡಿದುಕೊಂಡು ಖಡ್ಗ ವನ್ನು ಹಿರಿದು ಆರ್ಭಟಿಸುತ್ತಿರಲು ಧೀರನಾದ ಆಂಜನೇಯನು ಕುಪಿತನಾಗಿ ಎಲಾ ! ಹೇಡಿ ಶೂರನಾಗಿ ಯುದ್ಧಮಾಡಿ ಜಯಶೀಲನಾಗಲಾರದೆ ಅಥವಾ ವೀರಸ್ವರ್ಗವನ್ನು ಸಂಪಾದಿಸದೆ ವ್ಯರ್ಥವಾಗಿ ಮಹಾಪಾತಕರವಾದ ಸ್ತ್ರೀಹತ್ಯವನ್ನು ಮಾಡಿ ನರಕಕ್ಕೆ ಹೋಗುತ್ತಿರುವೆಯಲ್ಲ ಈ ಅಧರ್ಮವು ನಿನ್ನನ್ನು ನಾಶಮಾಡದೆ ಬಿಡದು ಸೈರಿಸು ಸೀತೆಯನ್ನು ಕೊಲ್ಲಬೇಡ ಎಂದು ಅವ ನನ್ನು ವಿಚಾರಿಸಿ ಬಾಣದಿಂದ ಹೊಡೆದನು. ಅದನ್ನು ಸಹಿಸಿಕೊಂಡು ಇಂದ್ರಜಿತುವು ಹನುಮಂ ತನಿಗೆದುರಾಗಿ ಮಾಯಸೀತೆಯನ್ನು ಸೀಳುವುದಕ್ಕೆ ಯತ್ನಮಾಡಲು ಆಂಜನೇಯನು ಕೆಲಸಕೆಟ್ಟಿ ಅನರ್ಥವುಂಟಾಗುವುದು ಈ ವಿಚಾರವನ್ನು ಮೊದಲೆ ಶ್ರೀರಾಮನಿಗೆ ತಿಳಿಸಬೇಕು ಎಂದು ಕಪಿ ವೀರರಿಗೆ ಹೇಳಿ ತಾನೆ ತ್ವರಿತನಾಗಿ ಶ್ರೀರಾಮನ ಬಳಿಗೆ ಬರುವುದಕ್ಕಾಗಿ ಹಿಂತಿರುಗಲು ಕ್ರೂರಿ ಯಾದ ಇಂದ್ರಜಿತುವು ಇದೇ ತಕ್ಕ ಸಮಯವೆಂದು ತಿಳಿದು ಮಾಯಾಸೀತೆಯನ್ನು ಕಡಿದು ತುಂಡುಮಾಡಿ ರಣರಂಗದಲ್ಲಿ ಕೆಡವಿದನು. ಅದನ್ನು ನೋಡಿ ಆಂಜನೇಯನು ವ್ಯಾಕುಲಚಿತ್ತ ನಾಗಿ ರೋಧಿಸುತ್ತ ಶ್ರೀರಾಮಚಂದ್ರನ ಬಳಿಗೆ ಹೊರಟನು. ಇತ್ತ ಇಂದ್ರಜಿತುವು ಓಹೋ

ಧೀರನಾದ ಆಂಜನೇಯುನನ್ನು ನನ್ನ ಮಾಯಾಜಾಲದಿಂದ ಹಿಂದಿರುಗುವಂತೆ ಮಾಡಿದೆನು. ಇನ್ನು ಅವನು ಯುದ್ಧಕ್ಕೆ ಬರುವವರೆಗೂ ನನಗೆ ಅವಕಾಶವಿದೆ. ಈ ಕಾಲದಲ್ಲಿ ನಾನು ಯಾಗಮಾಡಿ ಹಗೆಗಳನ್ನು ಗೆಲ್ಲುವವರನ್ನು ಪಡೆದು ಈ ಶತ್ರುಗಳನ್ನು ಸಂಹಾರಮಾಡಿ ನಮ್ಮ ತಂದೆಗೆ ಸಂತೋಷವನ್ನುಂಟುಮಾಡುವೆನೆಂದು ಯೋಚಿಸಿ ಅಲ್ಲಿಂದ ನಿಕುಂಭಿಳಾ ಯಾಗಮಾಡುವುದಕ್ಕಾಗಿ ಹೊರಟುಹೋದನು.

## ರಾಮನ ಪ್ರಲಾಪ ವಿಭೀಷಣನ ಸಾಹಸ.

ಇತ್ತ ಶ್ರೀರಾಮನು ಜಾಂಬವಂತನನ್ನು ಕರೆದು ಆಂಜನೇಯನು ಪಶ್ಚಿಮ ದಿಕ್ಕಿನ ದಿಡ್ಡಿಯಲ್ಲಿ ಮಾತಾಡುತ್ತಿದ್ದನು. ಅವನು ಅಲ್ಲಿಗೆ ಹೋಗಿ ಬಹಳ ಹೊತ್ತಾದರೂ ಯುದ್ಧಸಮಾಚಾರವೇ ತಿಳಿಯಲಿಲ್ಲ ನೀನು ಅಲ್ಲಿಗೆ ಹೋಗಿ ಹನುಮಂತನಿಗೆ ಸಹಾಯವಾಗಿರು ಎಂದು ಹೇಳಿದನು. ಕೂಡಲೆ ಜಾಂಬವಂತನು ಮೂರು ಲಕ್ಷ ಕಪಿಗಳೊಂದಿಗೆ ಹೊರಟು ಆಂಜನೇಯನ ಸಹಾಯಕ್ಕಾಗಿ ಬರುತ್ತ ಮಧ್ಯಮಾರ್ಗದಲ್ಲಿ ಹನುಮಂತನನ್ನು ಕಂಡು ಏನು ಸಮಾಚಾರ ಎಂದು ಕೇಳಲು ಅಯ್ಯೋ ! ಏನು ಹೇಳಲಿ ದುಷ್ಟನಾದ ರಾವಣಿಯು ಸೀತೆಯನ್ನು ಖಡ್ಗದಿಂದ ಕಡಿದುಹಾಕಿದನು ಇದನ್ನು ನಾನು ಕಣ್ಣಾರೆ ನೋಡಿದೆನು. ಈ ಸಂಗತಿಯನ್ನು ಶ್ರೀರಾಮನಿಗೆ ಹೇಳಿ ಬರುತ್ತೇನೆ ಅದುವರೆಗೂ ನೀನು ಇಲ್ಲಿಯೆ ಜೋಕೆಯಾಗಿ ನೋಡಿಕೊಂಡಿರು ಎಂದು ಖಿನ್ನನಾಗಿ ರೋದಿಸುತ್ತ ಬರುತ್ತಿರಲು ಶ್ರೀರಾಮನು ಅಂಜನಾಪುತ್ರನ ಮುಖವನ್ನು ದೂರದಿಂದಲೆ ನೋಡಿ ಏನಯ್ಯಾ ! ಏಕೆ ದುಃಖಪಡುತ್ತಿರುವೆ ಕಾರಣವೇನು ? ಮರೆಮಾಚದೆ ಹೇಳು ಎಂದು ಕೇಳಿದನು.

ಕೂಡಲೆ ಆಂಜನೇಯನು ಸೀತೆಯ ವೃತ್ತಾಂತವನ್ನು ಶ್ರೀರಾಮನಿಗೆ ಹೇಳಲು ಹೆದರಿ ಕಡೆಗೆ ನಿರ್ವಾಹವಿಲ್ಲದೆ ಸ್ವಾಮಿಾ ! ಏನು ಹೇಳಲಿ ! ಸರ್ವಾನರ್ಥವಾಯಿತು ನನ್ನ ಶ್ರಮವೆಲ್ಲವೂ ವ್ಯರ್ಥವಾಯಿತು. ದುಷ್ಟನಾದ ಇಂದ್ರಜಿತುವು ಸೀತೆಯನ್ನು ಖಡ್ಗದಿಂದ ಹೊಡೆದು ಕೊಂದನು. ಇದನ್ನು ನಾನು ಕಂಡು ತಮಗೆ ಈ ವಿಚಾರವನ್ನು ತಿಳಿಸಬೇಕೆಂದು ಬಂದೆನು ಎಂದು ಹೇಳಲು ಶ್ರೀರಾಮನು ಮೂರ್ಛಾಕ್ರಾಂತನಾಗಿ ನೆಲಕ್ಕೆ ಬಿದ್ದನು. ಅದನ್ನು ಕಂಡು ಲಕ್ಷ್ಮಣನು ತಾನೂ ಮೂರ್ಛಾಕ್ರಾಂತನಾಗಿ, ಚೇತರಿಸಿಕೊಂಡೆದ್ದು ಧೈರ್ಯವನ್ನು ತಾಳಿ ಚಿಂತಿಸುತ್ತಿರುವ ಕಪಿಗಳನ್ನು ಸಮಾಧಾನಮಾಡಿ ಆಹಾ ! ಕೈಮಿಾರಿಹೋಯಿತು ಈಗ ಸುಮ್ಮನಿರುವುದು ಸರಿಯಲ್ಲ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿ ಈ ಪ್ರಪಂಚವನ್ನೆ ಸುಟ್ಟುಬಿಡುವೆನೆಂದು ಆರ್ಭಟಿಸುತ್ತಿರಲು ಅಷ್ಟುಹೊತ್ತಿಗೆ ಶ್ರೀರಾಮಚಂದ್ರನು ಮೂರ್ಛೆ ತಿಳಿದೆದ್ದು ಸುತ್ತಲೂ ನೋಡುತ್ತಿರಲು ವಿಷ್ಣುಭಕ್ತನಾದ ವಿಭೀಷಣನು ನಮಸ್ಕಾರಮಾಡಿ ಮುಂದೆ ಬಂದು ಎಲೈ ರಾಘವೇಂದ್ರನೆ ! ಪುರುಷೋತ್ತಮನಾದ ನೀನು ಸರ್ವ ಲೋಕಗಳಿಗೂ ಜನಕನಾದ ಶ್ರೀಮನ್ನಾರಾಯಣಾಂಶದಲ್ಲಿ ಮನುಷ್ಯನಾಗಿ ಹುಟ್ಟಿದರೂ ಶೋಕಾನುಭವಕ್ಕಾಗಿ ಏಕೆ ಹೀಗೆ ಪಾಮರತ್ವವನ್ನು ವಹಿಸಿ ಪಾಡುಪಡುತ್ತಿರುವೆ? ಇಂದ್ರಜಿತುವು ಮಹಾಮಾಯಾವಿ ಅವನ ಮಾಯಾಜಾಲವು ನಿನಗೆ ತಿಳಿಯದು ಅವನನ್ನು ನಂಬಿದರೆ ಕೆಲಸ ಕೆಡುವುದು, ನಿಮ್ಮೆದುರಿಗೆ ಮಾಯಾಸೀತೆಯನ್ನು ನಿರ್ಮಿಸಿ ತಂದು ಕಡಿದುಹಾಕಿ ನೀವು ಭ್ರಾಂತರಾಗಿರುವಂತೆ ಮಾಡಿ ಈಗ ತನ್ನ ಮುಂದಿನ ಕಾರ್ಯಸಾಧನೆಗಾಗಿ ನಿಕುಂಭಿಳೆಯನ್ನು ಹೊಕ್ಕು ಅಲ್ಲಿ ಯಾಗಮಾಡುತ್ತಿರುವನು. ಅದು ಪೂರ್ತಿಯಾದರೆ ಯಾರಿಂದಲೂ ಅವನನ್ನು ಜಯಿಸುವುದಕ್ಕಾಗುವುದಿಲ್ಲ. ಆದಕಾರಣ ಆ ನಿಕುಂಭಿಳಾಯಾಗವು ಪೂರ್ತಿಯಾಗುವುದಕ್ಕೆ ಮೊದಲೆ ಅವನನ್ನು ಸಂಹರಿಸಬೇಕು ಆದಕಾರಣ ಧೀರನಾದ ಲಕ್ಷ್ಮಣನನ್ನು ನನ್ನ ಸಹಾಯಕ್ಕೆ ಕಳುಹಿಸಿದರೆ ತಾನೇ ಆತನ ಸಂಗಡ ಹೋಗಿ ಕ್ಷಣಮಾತ್ರದಲ್ಲಿ ಇಂದ್ರಜಿತುವನ್ನು ಸ್ವರ್ಗಲೋಕಕ್ಕೆ ಕಳುಹಿಸುವೆನು ಎಂದು ಹೇಳಿದನು. ಸತ್ಯವಾದಿಯಾದ ವಿಭೀ

ಷಣನ ಮಾತನ್ನು ನಂಬಿ ಶ್ರೀರಾಮನು ಅಯ್ಯಾ! ನೀನು ಹೇಳಿದುದು ಯುಕ್ತವೇಸರಿ ಆದರೆ ಲಕ್ಷ್ಮಣನು ಇನ್ನೂ ಚಿಕ್ಕವನು ಇವನನ್ನು ಮಾಯಾವಿಯಾದ ಆ ಕ್ರೂರರಾಕ್ಷಸನಬಳಿಗೆ ಹೇಗೆ ಕಳುಹಿಸಲಿ! ಒಂದುವೇಳೆ ಹಾಗೆ ಕಳುಹಿಸಿದರೆ ಜಯಶೀಲನಾಗುವನೆ! ಎಂದು ಕಳವಳಿಸುತ್ತಿರಲು ವಿಭೀಷಣನು ಮರಳಿ ರಾಮನಿಗೆ ನಮಸ್ಕಾರಮಾಡಿ ಸ್ವಾಮಿ ಈ ವಿಚಾರದಲ್ಲಿ ತಾವು ಸಂಶಯಪಡಬೇಡಿ ನನ್ನೊಡನೆ ಲಕ್ಷ್ಮಣನನ್ನು ಕಳುಹಿಸಿದರೆ ನಿಜವಾಗಿ ಇಂದ್ರಜಿತುವನ್ನು ಕೊಂದು ಬರುವೆನು ಇದು ಸತ್ಯ ಎಂದು ಹೇಳಲು ಶ್ರೀರಾಮನು ಸಮ್ಮತಿಸಿ ಹನುಮಂತ ಜಾಂಬವಂತರ ಸಹಾಯದಿಂದ ಲಕ್ಷ್ಮಣನನ್ನು ಕಳುಹಿಸಿಕೊಡಲು ಅವರೆಲ್ಲರೂ ಭಕ್ತಿಯುಕ್ತರಾಗಿ ಶ್ರೀರಾಮನಿಗೆ ನಮಸ್ಕರಿಸಿ ಸಂತೋಷದಿಂದ ನಿಕುಂಭಿಳೆಯಕಡೆಗೆ ಹೊರಡುವುದಕ್ಕೆ ಸನ್ನಾಹ ಮಾಡುತ್ತಿರಲು ಆಂಜನೇಯನು ಲಕ್ಷ್ಮಣನನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡನು. ವಿಭೀಷಣನು ಮಂತ್ರಿ ಸಮೇತನಾಗಿ ಜಾಂಬವಂತನೊಡನೆ ಲಕ್ಷ್ಮಣಸಹಿತನಾಗಿ ಹೊರಟು ವೇಗವಾಗಿ ಬಂದು ನಿಕುಂಭಿಳಾ ದೇವಸ್ಥಾನದ ಬಳಿಯನ್ನು ಸೇರಿದನು.

## ಇಂದ್ರಜಿತುವು ನಿಕುಂಭಿಳಾಯಾಗದಲ್ಲಿರುವುದು.

ಇತ್ತ ರಣರಂಗದಿಂದ ಸೋತುಬಂದ ಇಂದ್ರಜಿತುವು ತನಗೆ ಜಯವಾಗಬೇಕೆಂಬ ಬಯಕೆಯಿಂದ ನಿಕುಂಭಿಳಾಯಾಗ ಮಾಡುವುದಕ್ಕಾಗಿ ನಿಕುಂಭಿಳೆಯ ದೇವಾಲಯಕ್ಕೆ ಬಂದು ಶುಚಿರ್ಭೂತನಾಗಿ ಮಿಂದು ರಕ್ತವಸ್ತ್ರವನ್ನುಟ್ಟು ರಕ್ತಗಂಧ ರಕ್ತಮಾಲ್ಯಾದಿಗಳಿಂದಲಂಕೃತನಾಗಿ





ಲಕ್ಷೋಪಲಕ್ಷ ಜಪಗಳನ್ನು ಪೂರೈಸಿ ಅನಂತರದಲ್ಲಿ ಅಗ್ನಿಯನ್ನು ನಿರ್ಮಿಸಿ ವೇದಿಕೆಯಲ್ಲಿ ಪ್ರತಿಷ್ಠೆಮಾಡಿ ಚರುಹೋಮ ಮಾಂಸಹೋಮ ತಿಲಹೋಮ ಆಜ್ಯಹೋಮ ಪಾಯಸಾದಿ ಹೋಮಗಳನ್ನು ಮಾಡಿ ಪೂರ್ಣಾಹುತಿಗೆ ಸಿದ್ಧಮಾಡುತ್ತಿರುವ ಕಾಲಕ್ಕೆ ಸರಿಯಾಗಿ ವಿಭೀಷಣ ಸಹಿತನಾಗಿ ಯುದ್ಧಕ್ಕೆ ಬಂದ ಲಕ್ಷ್ಮಣನು ಸಿಂಹನಾದ ಮಾಡಿ ಆರ್ಭಟಿಸುತ್ತ ಧನುಸ್ಸಿನಲ್ಲಿ ಬಾಣವನ್ನು ಹೂಡಿ ಕಾವಲುಗಾರರನ್ನು ಕೊಂದು ಹಾವಳಿಮಾಡಿದನು. ಈ ಅಲ್ಲೋಲಕಲ್ಲೋಲವನ್ನು ಕೇಳಿ ಭ್ರಾಂತನಾದ ಇಂದ್ರಜಿತುವು ಯಾಗ ಪೂರ್ತಿಯಾಗುವುದಕ್ಕೆ ಮೊದಲೆ ಆಸನದಿಂದೆದ್ದು ಧನುರ್ಬಾಣಗಳನ್ನು ತರಿಸಿ ಹೊರಗೆ ಬಂದು ತನಗೆ ಎದುರಾಗಿ ನಿಂತಿರುವ ಯುದ್ಧಸನ್ನದ್ಧರಾದ ಲಕ್ಷ್ಮಣ ಆಂಜನೇಯ ಜಾಂಬವ ವಿಭೀಷಣಾದಿಗಳನ್ನು ಕಂಡು ಕೋಪಾಕ್ರಾಂತನಾಗಿ ಆರ್ಭಟಿಸುತ್ತ ಯುದ್ಧಕ್ಕೆ ನಿಂತನು. ಈ ಕಾರಣದಿಂದ ಯಜ್ಞಕ್ಕಾಗಿ ಪೂರ್ಣಾಹುತಿ ಕೊಡಲು ಮಂತ್ರ, ಋತ್ವಿಕ್ಕುಗಳಿಂದ ಆಹ್ವಾನಿತರಾದ ದೇವತೆಗಳು ಆಶಾಭಂಗರಾಗಿ ತಮಗೆ [illegible]

ಮಾಡಿದ ಇಂದ್ರಜಿತುವು ಮೋಸಗಾರನಾದುದರಿಂದ ಅವನು ತನ್ನ ಮೋಸದಿಂದಲೆ ಮಡಿದು ಹೋಗಲಿ! ಎಂದು ಶಪಿಸಿ ಹೊರಟುಹೋದರು. ಹೀಗೆ ದೇವತೆಗಳು ಕೊಟ್ಟ ಶಾಪವು ಮುಂದೆ ಇಂದ್ರಜಿತುವನ್ನು ಯುದ್ಧದಲ್ಲಿ ಕೊಲ್ಲುವ ಲಕ್ಷ್ಮಣನಿಗೆ ಸಹಾಯವಾಗಿ ಇಂದ್ರಜಿತುವಿನ ತೇಜಸ್ಸನ್ನು ಕುಗ್ಗಿಸಿ ಲಕ್ಷ್ಮಣನ ಪರಾಕ್ರಮವನ್ನು ಹೆಚ್ಚಿಸುತ್ತಿದ್ದಿತು. ಆಕಾಶದಲ್ಲಿ ನೆರೆದಿದ್ದ ದೇವತೆಗಳು ಆಶ್ಚರ್ಯಭರಿತರಾಗಿ ಧರ್ಮವನ್ನು ಬಿಟ್ಟು ಅಧರ್ಮವನ್ನು ಅವಲಂಬಿಸಿದವರಿಗೆ ಅಭಿವೃದ್ಧಿಯಾಗುವುದುಂಟೆ ? ಮಾಯಾವಿಯಾದ ಇಂದ್ರಜಿತುವು ಧೀರನಾದ ಲಕ್ಷ್ಮಣನ ಎದುರಿಗೆ ಬಾಳುವನೆ! ಎಂದು ಹೇಳುತ್ತಿದ್ದರು.

## ಇಂದ್ರಜಿತು ಲಕ್ಷ್ಮಣರ ಯುದ್ಧ.

ಬಳಿಕ ಯುದ್ಧಸನ್ನದ್ಧನಾಗಿ ತನ್ನೆದುರಿಗೆ ನಿಂತು ಧನುಷ್ಟಂಕಾರ ಮಾಡುತ್ತಿರುವ ಲಕ್ಷ್ಮಣನನ್ನು ಕಂಡು ಮಾಯಾವಿಯಾದ ಇಂದ್ರಜಿತುವು ಎಲೈ ಲಕ್ಷ್ಮಣನೇ! ನೀನು ವೀರಾಗ್ರಗಣ್ಯನೇ ಹೌದು ಆದರೂ ಈಗ ನಿನ್ನನ್ನು ಈ ರಣಭೂಮಿಯಲ್ಲಿ ನೆರೆದಿರುವ ರಣದೇವತೆಗಳಿಗೆ ಬಲಿಯಾಗಿ ಅರ್ಪಿಸುವೆನು. ಆಗ ನಿಮ್ಮ ಅಣ್ಣನಾದ ರಾಮನು ಭೀಮಪರಾಕ್ರಮಿಯಾದ ತಮ್ಮನು ಸತ್ತ ವಾರ್ತೆಯನ್ನು ಕೇಳಿ ತಾನೂ ಪ್ರಾಣವನ್ನು ಬಿಡುವನು ರಾಮನೇ ಸತ್ತಮೇಲೆ ಕಪಿಗಳು ಓಡಿ ಹೋಗುವರು. ನಮಗೆ ನಿರಾಯಾಸವಾಗಿ ಜಯವುಂಟಾಗುವುದು. ಸೀತೆಯು ನಮ್ಮ ಸ್ವಾಧೀನದಲ್ಲೆ ನಿಲ್ಲುವಕಾರಣ ನಮ್ಮ ತಂದೆಗೆ ಸಂತೋಷವಾಗುವುದು. ಬಳಿಕ ರಾಕ್ಷಸ ಚಕ್ರವರ್ತಿಗೆ ಸಂಪೂರ್ಣ ಜಯವಾಗಿ ರಾಮನಿಗೆ ಸ್ವರ್ಗಲೋಕದಲ್ಲಿ ವಿಜಯವಾಗುವುದು. ಇಗೋ ಈ ನನ್ನ ಬಾಣವನ್ನು ನೋಡು ಎಂದು ಹೇಳುತ್ತ ಅಸ್ತ್ರವನ್ನು ಹೂಡಿ ಹೊಡೆದು ವಿಭೀಷಣನ ಕಡೆಗೆ ತಿರುಗಿ ಎಲೈ ಕುಲದ್ರೋಹಿಯೆ ನಿನ್ನನ್ನು ನಂಬಬಹುದೆ ? ಹುಟ್ಟಿದಮನೆಗೆ ಮಾರಿಯಾಗಿ ನೆರೆಮನೆಗೆ ಸಿರಿಯಾಗಿರುವ ನಿನ್ನಂಥದನಿಗೆ ಎಂದಿಗೂ ಅಭಿವೃದ್ಧಿಯಾಗದು. ಒಡಹುಟ್ಟಿ ಸಂಗಡ ಬೆಳೆದು ಬದುಕಿಬಾಳಿ ಭಾಗ್ಯವನ್ನು ಅನುಭವಿಸಿದರೂ ನಮ್ಮನ್ನು ದೂರಮಾಡಿ ನಮಗೆ ಹಗೆಯಾದವನನ್ನು ಮರೆಹೊಕ್ಕು ಪ್ರಾಣರಕ್ಷಣೆಗಾಗಿ ಹೇಡಿಯಂತೆ ಹುದುಗಿಕೊಂಡಿರುವೆಯಲ್ಲ ಛೀ! ಈ ನಿನ್ನ ಬಾಳಿಗಿಂತಲೂ ಸಾಯುವುದೆ ಮೇಲಲ್ಲವೆ? ಎಂದು ಬಗೆಬಗೆಯಾಗಿ ನಿಂದಿಸಿ ಅವನನ್ನೂ ಎರಡು ಬಾಣಗಳಿಂದ ಹೊಡೆದನು. ಆಗ ವಿಭೀಷಣನು ಎಲೈ ಮಾಯಾವಿಯೆ ಕೇಳು, ನೀನು ಹೇಳಿದುದೆಲ್ಲ ನಿಜ ತಂದೆಯಂತೆ ಮಗ ಗುರುವಿನಂತೆ ಶಿಷ್ಯ ಎನ್ನುವ ಗಾದೆಯು ನಿನ್ನಲ್ಲಿ ಪ್ರತ್ಯಕ್ಷವಾಗಿ ಕಾಣುತ್ತಿದೆ, ಪರಧನ ಪರಪತ್ನಿಯರಲ್ಲಿ ಆಸಕ್ತನಾಗಿ ಅತ್ಯಂತ ಕಾಮುಕನಾಗಿ ದುರ್ಮಾರ್ಗಿಯಾದ ನಿಮ್ಮ ತಂದೆಯಲ್ಲಿ ನೀನು ಹುಟ್ಟಿದುದು ಸಾರ್ಥಕವಾಯಿತು. ಸಾವಿರಾರು ಜನ ಸುಂದರಿಯರು ತನಗಿದ್ದರೂ ಅವರನ್ನೊಲ್ಲದೆ ಪರಸ್ತ್ರೀಯನ್ನು ಅನ್ಯಾಯದಿಂದ ಕದ್ದುತಂದು ಸೆರೆಹಾಕಿಕೊಂಡಿರುವ ನಿಮ್ಮಪ್ಪನ ದುರ್ಮಾರ್ಗಕ್ಕೆ ತಕ್ಕಂತೆ ನಿನಗೂ ಕೆಟ್ಟಬುದ್ಧಿ ಹುಟ್ಟಿದೆ ಇದರ ಫಲವನ್ನು ನೀನು ಶೀಘ್ರದಲ್ಲಿಯೆ ಅನುಭವಿಸುವೆ ಎಂದು ಹೇಳಿದನು. ಅದನ್ನು ಕೇಳಿ ರೋಷಭೀಷಣನಾದ ಇಂದ್ರಜಿತುವು ತನ್ನ ಬಲವನ್ನು ಮೀರಿ ಬಾಣಗಳನ್ನು ಹೂಡಿ ಐದು ಬಾಣಗಳಿಂದ ಲಕ್ಷ್ಮಣನನ್ನೂ ಮೂರು ಬಾಣಗಳಿಂದ ವಿಭೀಷಣನನ್ನೂ ಬಾಣತ್ರಯದಿಂದ ಹನುಮಂತನನ್ನೂ ಹೊಡೆದು ನೋಯಿಸಿ ಆರ್ಭಟಿಸುತ್ತ ಜಾಂಬವಂತನ ಮೇಲೆ ಮೂರು ಬಾಣಗಳನ್ನು ಎಸೆದನು. ಇದನ್ನು ಕಂಡು ಕಪಿಸೈನ್ಯವು ಕೋಪದಿಂದ ಆರ್ಭಟಿಸುತ್ತ ಓಡಿಬಂದು ಇಂದ್ರಜಿತುವನ್ನು ಮುತ್ತಿ ಅವನ ಮೇಲೆ ಬೆಟ್ಟಗುಡ್ಡಗಳನ್ನು ಎತ್ತಿಹಾಕಿ ಪರಾಕ್ರಮದಿಂದ ಕಾದಾಡುತ್ತಿರಲು ರಾಕ್ಷಸನು ರಣಭಯಂಕರನಾಗಿ ಹುಲ್ಲೆಗಳ ಹಿಂಡಿಗೆ ನುಗ್ಗಿದ ಹುಲಿಯಂತೆ ಕಪಿಸೈನ್ಯವನ್ನು ಹೊಡೆದುರುಳಿಸುತ್ತಿದ್ದನು.

## ಇಂದ್ರಜಿತುವಿನ ಸಂಹಾರ.

ಹೀಗೆ ರಾಕ್ಷಸನು ರೋಷಭೀಷಣನಾಗಿ ತನ್ನ ಕಡೆಯವರನ್ನು ಹೊಡೆದು ನೋಯಿಸುತ್ತಿರುವುದನ್ನು ನೋಡಿಲಕ್ಷ್ಮಣನು ಸಹಿಸಲಾರದೆ ಪರಾಕ್ರಮಯುಕ್ತನಾಗಿ ವಿಭೀಷಣನ ಸಹಾಯದಿಂದ





ರಾಕ್ಷಸಸೈನ್ಯವನ್ನು ಹೊಡೆದುರುಳಿಸುತ್ತಿದ್ದನು. ಬಳಿಕ ಕೋಪಾವಿಷ್ಟರಾದ ಲಕ್ಷ್ಮಣ ಇಂದ್ರಜಿಗಳಿಗೆ ಯುದ್ಧವು ಆರಂಭವಾಯಿತು. ಇಂದ್ರಜಿತುವು ಮಹಾ ಭಯಂಕರವಾದ ಬಾಣಗಳನ್ನು ಹೂಡಿ ಲಕ್ಷ್ಮಣನನ್ನು ಹೊಡೆಯುತ್ತ ಬಂದನು. ಅವನು ಹಗೆಯ ಬಾಣಗಳನ್ನು ಹೊಗೆಯಂತೆ ಹೊರಹೊರಡಿಸಿ ತನ್ನ ಕ್ರೂರವಾದ ಬಾಣಗಳಿಂದ ಇಂದ್ರಜಿತುವನ್ನು ಹೊಡೆಯಲು ರಾಕ್ಷಸನ ಶರೀರವೆಲ್ಲವೂ ಗಾಯವಾಗಿ ಅದರಿಂದ ಸೋರುವ ರಕ್ತದಿಂದ ಹೂಬಿಟ್ಟು ಪಲ್ಲೈಸುತ್ತಿರುವ ಮುತ್ತುಗದ ಮರದಂತೆ ಇಂದ್ರಜಿತುವು ಗಾಯಗೊಂಡು. ಆದರೂ ಹೆದರದೆ ಇಮ್ಮಡಿಯಾದ ಪರಾಕ್ರಮದಿಂದ ಶರವರ್ಷವನ್ನು ಕರೆಯುತ್ತ ಲಕ್ಷ್ಮಣನನ್ನು ಹೊಡೆಯಲು ಕೋಪಾವಿಷ್ಟನಾಗಿ ಲಕ್ಷ್ಮಣನು ಕಣ್ಣುಗಳಲ್ಲಿ ಕಿಡಿಗಳನ್ನು ಸುರಿಸುತ್ತ ಮಹಾಭಯಂಕರವಾಗಿ ಬಾಣವನ್ನು ಹೊಡೆದು ಆರ್ಭಟಿಸಲು ಇಂದ್ರಜಿತುವು ಮೂರ್ಛಾಕ್ರಾಂತನಾಗಿ ನೆಲಕ್ಕೆ ಬಿದ್ದು ಸ್ವಲ್ಪ ಹೊತ್ತಿನಲ್ಲಿ ಚೇತರಿಸಿಕೊಂಡೆದ್ದು ಲಕ್ಷ್ಮಣನಿಗೆದುರಾದನು. ಆಗ ವಿಭೀಷಣನು ಅಯ್ಯಾ! ಹಗೆಯ ಮೈಗುಂದಿ ಶಕ್ತಿ ಕುಗ್ಗಿದೆ ಈಗ ಕೈಮರೆಯಬೇಡ ಬೇಗಬೇಗನೆ ಸಾಹಸದಿಂದ ಯುದ್ಧಮಾಡಿದರೆ ನಿನಗೆ ಜಯವಾಗುವುದು ಎಂದು ಹೇಳಲು ಧೀರನಾದ ಲಕ್ಷ್ಮಣನು ಉತ್ಸಾಹಭರಿತನಾಗಿ ರಾಮಧ್ಯಾನ ಮಾಡುತ್ತ ನೂರು ಬಾಣಗಳನ್ನು ಹೊಡೆದು ಇಂದ್ರಜಿತುವಿನ ಕವಚವನ್ನು ಐದು ಬಾಣಗಳಿಂದ ಅವನ ಕುದುರೆ ಸಾರಥಿಗಳನ್ನು ಮೂರು ಬಾಣಗಳಿಂದ ರಥವನ್ನು ಹೊಡೆದು ನೆಲಕ್ಕುರುಳಿಸಿ ಪುನಃ ರೋಷಾವೇಶದಿಂದ ಐದು ಬಾಣಗಳನ್ನು ಹೊಡೆದು ಬಿಲ್ಲನ್ನು ಮುರಿದು ಆರ್ಭಟಿಸಿ ಒಳಹೊಕ್ಕು ಯುದ್ಧಮಾಡುತ್ತಿದ್ದನು. ಆದರೂ ಎದೆಗೆಡದೆ ಇಂದ್ರಜಿತುವು ತನ್ನ ಮಾಯಾಬಲದಿಂದ ಅದೃಶ್ಯನಾಗಿ ಕೆಲವುವೇಳೆ ಕಣ್ಣಿಗೆ ಕಾಣಿಸುತ್ತ ಯುದ್ಧಮಾಡುತ್ತಿರಲು ಲಕ್ಷ್ಮಣನು ಆಗ್ನೇಯಾಸ್ತ್ರವನ್ನು ಹೂಡಿ ಋಕ್ಕುಗಳಿಂದ ಅಭಿಮಂತ್ರಿಸಿ ಎಲೈ ಬ್ರಹ್ಮಾದಿ ದೇವತೆಗಳಿರಾ! ಶ್ರೀರಾಮನು ಧರ್ಮಸ್ವರೂಪನಾಗಿ, ವೇದಗಳು ಸತ್ಯವಾಗಿ ನಾನು ಜಿತೇಂದ್ರಿಯನಾಗಿ, ಸೀತೆಯು ಮಹಾಪತಿವ್ರತೆಯಾಗಿ, ಧರ್ಮಸಂಸ್ಥಾಪನೆಗಾಗಿ ಮಾಡುವ ಈ ರಾಕ್ಷಸಸಂಹಾರವು ನಿಮಗೆ ಸಮ್ಮತವಾಗಿದ್ದರೆ, ಮಾಯಾವಿಯಾದ ಈ ಇಂದ್ರಜಿತುವಿನ ಪ್ರಾಣಗಳು ನಾಶವಾಗಲಿ! ಎಂದು ದೇವತೆಗಳನ್ನು ಪ್ರಾರ್ಥಿಸಿ ಶ್ರೀರಾಮನಿಗೆ ಮಣಿದು ಮಹಾಭಕ್ತಿಯಿಂದ

ತಾನು ತೊಟ್ಟಿದ ಆಗ್ನೇಯಾಸ್ತ್ರವನ್ನು ಹೊಡೆಯಲು ಅದು ಶೀಘ್ರದಲ್ಲಿ ಹಾರಿಹೋಗಿ ಕುಂಡಲ ಸಹಿತವಾಗಿ ಕಾಂತಿಯಿಂದೊಪ್ಪುವ ಇಂದ್ರಜಿತುವಿನ ತಲೆಯನ್ನು ಹಾರಿಸಿ ಅವನನ್ನು ಕೊಂದು ನೆಲಕ್ಕೆ ಕೆಡವಿ ಮರಳಿ ತನ್ನ ಸ್ವಸ್ಥಾನವನ್ನು ಸೇರಿತು. ಬಳಿಕ ಸತ್ತ ಇಂದ್ರಜಿತುವನ್ನು ಕಂಡು ವಿಭೀಷಣನು ಆನಂದಭರಿತನಾದನು ಕಪಿಸೇನೆಯಲ್ಲಿ ಸಂತೋಷವು ಉಕ್ಕಿತು. ಸರ್ವರೂ ಸ್ವಸ್ತಿವಾಚನದಿಂದ ತೃಪ್ತರಾಗಿ ಹಿಂದಿರುಗಿ ರಾಮನ ಬಳಿಗೆ ಬರುತ್ತಿದ್ದರು. ಆಗ ದೇವತೆಗಳು ಲಕ್ಷ್ಮಣನಮೇಲೆ ಹೂಮಳೆಯನ್ನು ಕರೆದು ಸಂತೋಷಭರಿತರಾಗಿ ದೇವದುಂದುಭಿಯನ್ನು ಬಾರಿಸಲು ವಿಭೀಷಣಾದಿಗಳು ಆನಂದಭರಿತರಾಗಿ ಶ್ರೀರಾಮನ ಬಳಿಗೆ ಬಂದು ವಿಜಯ ವಾರ್ತೆಯನ್ನು ತಿಳಿಸಿ ನಮಸ್ಕಾರಮಾಡಲು, ಸಂತೋಷಭರಿತನಾದ ಶ್ರೀರಾಮನು ತಮ್ಮನನ್ನು ಆಲಿಂಗಿಸಿ ಕೊಂಡು ವೈದಡವಿ ಸುಷೇಣನ ಮೂಲಕ ಬಾಣದಿಂದಾದ ಗಾಯಗಳಿಗೆ ಔಷಧಿಯನ್ನು ಹಾಕಿಸಿ ಎಲ್ಲರನ್ನು ಸಂತೈಸುತ್ತ ಮುಂದೆ ರಾವಣನ ಮೂಲಬಲವನ್ನು ಸಂಹಾರಮಾಡುವ ಯೋಚನೆಯಲ್ಲಿರುತ್ತಿದ್ದನು.

## ರಾವಣನ ಮೂಲಬಲಸನ್ನಾಹ.

ಬಳಿಕ ಹತಶೇಷರಾದ ರಾಕ್ಷಸರು ಭಯದಿಂದ ಓಡಿಬಂದು ರಾವಣನಿಗೆ ಇಂದ್ರಜಿತುವು ಯುದ್ಧದಲ್ಲಿ ಸತ್ತನು ರಾಕ್ಷಸ ಸೈನ್ಯವು ನಾಶವಾಯಿತು ನಾವು ಈ ಸಂಗತಿಯನ್ನು ನಿನಗೆ ಹೇಳುವುದಕ್ಕಾಗಿ ಇಲ್ಲಿಗೆ ಬಂದೆವೆಂದು ಹೇಳಲು ರಾವಣನು ದಿಗ್ಭ್ರಾಂತನಾಗಿ ಮೂರ್ಛೆಯನಾಶ್ರಯಿಸಿ ಹಂಬಲಿಸಿಕೊಂಡು ಹಲುಬುತ್ತ ಹಾ! ಮಗನೆ ಇಂದ್ರಜಿತು ನಿನ್ನ ಪರಾಕ್ರಮವೇನಾಯಿತು ? ನೀನೂ ನನ್ನಭಾಗಕ್ಕೆ ಇಲ್ಲವಾದೆಯಾ ? ನಾನೇ ಮೃತ್ಯುವಾಗಿ ನಿನ್ನನ್ನು ಕೊಲ್ಲಿಸಿದ ಹಾಗಾಯಿತು ಹಾ! ವಿಧಿಯೆ ಈಗ ನಾನೇನು ಮಾಡಲಿ ! ಮಗನ ಮರಣವನ್ನು ಹೆಂಡತಿಯಾದ ಮಂಡೋದರಿಗೆ ಹೇಗೆ ತಿಳಿಸಲಿ ! ನರಾಧಮನಾದ ಶ್ರೀರಾಮನಿಂದ ರಾಕ್ಷಸಕುಲಕ್ಕೆ ಎಷ್ಟು ಅನರ್ಥ ಉಂಟಾಗುತ್ತಿದೆ ಅಯ್ಯೋ! ನನ್ನ ಬುದ್ಧಿಬಲವೂ, ಶಕ್ತಿಸಾಹಸವೂ, ಬಲಪರಾಕ್ರಮಗಳೂ, ಬಂಧುಮಿತ್ರರೂ; ಪುತ್ರಪರಿವಾರವೂ ನನಗೇ ಇಲ್ಲವಾಯಿತೆ? ಇನ್ನು ನಾನೇ ಯುದ್ಧ ಮಾಡಿ ನೋಡಬೇಕು ಹಾಗಿಲ್ಲವಾದರೆ ವಿಧಿಯೆ ಇಲ್ಲ ಆದದ್ದಾಗಲಿ ! ಏನುಮಾಡಿದರೂ ಈ ಹಗೆ ಹರಿಯುವಹಾಗಿಲ್ಲ ಎಂದು ಬಗೆಬಗೆಯಾಗಿ ಚಿಂತಿಸುತ್ತ ಗೋಳಾಡಿ ಹೊರಳಿ ಹೊದುಕುಳಿಯಾಗುತ್ತಿದ್ದನು. ಹೀಗೆ ಬಹುಕಾಲ ಪ್ರಲಾಪಿಸುತ್ತಿದ್ದು ಕಡೆಗೆ ಧೈರ್ಯವನ್ನು ತಂದುಕೊಂಡು ಜಿಗ್ಗನೆ ಎದ್ದು ಕತ್ತಿಯನ್ನು ತೆಗೆದುಕೊಂಡು ಸರಸರನೆ ಹೊರಟು ಸೀತೆಯಬಳಿಗೆ ಬಂದು ಈ ಹಾಳು ಸೀತೆಯಿಂದ ನನ್ನ ವಂಶವೇ ನಾಶವಾಯಿತು, ಪರಿವಾರವೂ ಹಾಳಾಯಿತು ಅಣ್ಣತಮ್ಮಂದಿರು ಅಗಲಿಹೋದರು, ಇವಳಿಗಾಗಿ ನಾನೊಬ್ಬನೇ ಉಳಿದಂತಾಯಿತು. ಇನ್ನು ಸುಮ್ಮನಿರುವುದು ಸರಿಯಲ್ಲ ಎಂದು ಕತ್ತಿಯನ್ನೆತ್ತಿ ಸೀತೆಯನ್ನು ಒಂದೇಪೆಟ್ಟಿಗೆ ಕಡಿದುಹಾಕುವೆನೆಂದು ಹೊರಡಲು ಹತ್ತಿರದಲ್ಲಿ ಕಾವಲಾಗಿದ್ದ ರಾಕ್ಷಸರು ಹೆದರಿ ಹಿಮ್ಮೆಟ್ಟಲು ಮಂತ್ರಿಯಾದ ಸುಪಾರ್ಶ್ವನು ಮುಂದೆ ಬಂದು ಕೈಮುಗಿದು ಅಡ್ಡವಾಗಿ ನಿಂತು ಕತ್ತಿಯನ್ನು ಹಿಡಿದುಕೊಂಡು ಪ್ರಭುವೆ ಸ್ವಲ್ಪ ತಾಳು ದುಡುಕಬೇಡ! ನಿರಪರಾಧಿನಿಯಾದ ಸೀತೆಯು ಏನುಮಾಡಿದಳು, ಸ್ತ್ರೀಹತ್ಯವು ಲೋಕದಲ್ಲಿ ಮಹಾ ಪಾಪಕರವಾದುದು, ಶೂರನೆನಿಸಿಕೊಂಡವನು ಹೆಣ್ಣು ಹಂದೆಯಾದ ಹೆಂಗಸನ್ನು ಕೊಲ್ಲುವುದು ಯಾವ ನ್ಯಾಯ ! ವ್ಯರ್ಥವಾಗಿ ಅಪಕೀರ್ತಿಗೆ ಗುರಿಯಾಗಬೇಡ ನಿನ್ನ ಶಕ್ತಿಸಾಮರ್ಥ್ಯಗಳನ್ನು ರಾಮಲಕ್ಷ್ಮಣರ ಮೇಲೆ ತೋರಿಸು ! ನಿನ್ನೆದುರಿಗೆ ನಿಲ್ಲುವ ಶತ್ರುಗಳೆ ! ಇಲ್ಲ ತ್ರಿಲೋಕವೀರನಾದ ನೀನು ಇಂಥ ತುಚ್ಛಕೆಲಸವನ್ನು ಮಾಡಬಾರದು ಎಂದು ಹಲವು ಬಗೆಯಾಗಿ ಸಮಾಧಾನೋಕ್ತಿಗಳನ್ನು ಹೇಳಿ ಅವನನ್ನು ಹಿಂದಕ್ಕೆ ಕರೆದುತಂದನು. ಆ ಬಳಿಕ

ರಾವಣನು ಚಿಂತಾಕ್ರಾಂತನಾಗಿ ಹಿಂದಿರುಗಿ ಒಡ್ಡೋಲಗಕ್ಕೆ ಬಂದು ಮಂತ್ರಿ ಮನ್ನೆಯರನ್ನು ಕರೆಯಿಸಿ ತನ್ನ ಯೋಚನೆಯನ್ನು ಹೇಳಿ ಅವರ ಸಮ್ಮತಿಯಂತೆ ಇನ್ನು ತನ್ನ ಮೂಲಬಲವನ್ನೆ ಯುದ್ಧಕ್ಕೆ ಹೊರಡಿಸಬೇಕೆಂದು ಗೊತ್ತುಮಾಡಿ ಮುಖ್ಯ ಮಂತ್ರಿಯಾದ ಪ್ರಹಸ್ತನನ್ನು ಕರೆದು ಅಯ್ಯಾ! ಮಂತ್ರೀಶ್ವರನೆ! ನಾಳೆಯದಿನ ರಾಮಲಕ್ಷ್ಮಣರಮೇಲೆ ಯುದ್ಧಮಾಡುವುದಕ್ಕೆ ರಾವಣೇಶ್ವರನ ಮೂಲಬಲವು ಸಿದ್ಧವಾಗಿರಲಿ! ನೀನು ತಕ್ಕ ಸನ್ನಾಹಯುಕ್ತನಾಗಿ ಸರ್ವವನ್ನು ಸಿದ್ಧಗೊಳಿಸು ಎಂದು ಹೇಳಲು ಮಂತ್ರಿಯು ತನ್ನ ಪರಿವಾರದಮೂಲಕ ಮೂಲಬಲದ ಸೇನಾಧಿಕಾರಿಗಳಿಗೆ ಈ ವಿಚಾರವನ್ನು ತಿಳಿಸಿ ನಾಳೆ ಯುದ್ಧಕ್ಕೆ ಹೊರಡಬೇಕೆಂದು ಹೇಳಿಕಳುಹಿಸಿದನು ಆ ವಾರ್ತೆಯನ್ನು ಕೇಳಿದಕೂಡಲೆ ಬ್ರಹ್ಮಕಲ್ಪದಿಂದ ಇದುವರೆಗೂ ಸುಖವಾಗಿ ಯುದ್ಧದ ಸೆಲೆಯನ್ನೆ ಕಾಣದಿದ್ದ ಆ ಮೂಲಬಲಾಧಿಪತಿಗಳು ದಿಗ್ಭ್ರಾಂತರಾಗಿ ಆಹಾ! ತ್ರಿಲೋಕವೀರನಾಗಿ ಅಜೇಯನಾಗಿ ಹರಿಹರ ಬ್ರಹ್ಮರಿಗೂ ಹೆದರದಿದ್ದ ರಾವಣೇಶ್ವರನಿಗೆ ಮೂಲಬಲವನ್ನು ಯುದ್ಧಕ್ಕೆ ಕರೆಸುವಂಥ ಕಷ್ಟ ಪ್ರಾಪ್ತವಾಯಿತೆ? ಇದೇನು ಆಶ್ಚರ್ಯ ಏನುಕಾರಣ ಹೀಗಾಯಿತು? ಈಗ ರಾವಣನಿಗೆ ಬಂದಿರುವ ಕಷ್ಟವೇನು? ಎಂದು ವಿಚಾರಿಸಲಾಗಿ ದೂತರು ಅವರನ್ನು ಕುರಿತು ಅಯ್ಯಾ! ನಿಮ್ಮ ಸುಖವೇ ನಮ್ಮ ಸುಖ ಲೋಕವೆಲ್ಲ ಹಾಳಾಗುತ್ತಿದ್ದರೂ ಶೋಕಭಯಗಳ ಮರುಕವೂ ಇಲ್ಲದೆ ಮರೆಯಾಗಿ ಹುದುಗಿಕೊಂಡು ಮದೋನ್ಮತ್ತರಾಗಿ ತಿಂದು ಮದಾಂಧರಾಗಿ ಮೈಮರೆದಿರುವ ನಿಮಗೆ ರಾವಣನ ಕಷ್ಟಸುಖಗಳು ಹೇಗೆ ತಿಳಿದೀತು? ರಾವಣನ ಪರಿವಾರ ಪರಾಕ್ರಮ ಪುತ್ರ ಮಿತ್ರ ಭ್ರಾತೃ ಬಲ ಸಮೂಹದಲ್ಲಿ ಸರ್ವವೂ ನಾಶವಾಗಿ ಕಡೆಗೆ ಹೆಸರುಮಾತ್ರಕ್ಕೆ ಲಂಕೆಯೂ ಅದಕ್ಕೆ ಒಡೆಯನಾದ ರಾವಣನು ಉಳಿದಿರುವರು. ಈ ವಿಚಾರವೇ ನಿಮಗೆ ತಿಳಿದಹಾಗಿಲ್ಲ ಹೇಳುವೆನು ಕೇಳಿ ಕಾಮುಕಿಯಾದ ಶೂರ್ಪಣಖಿಯು ಕಾಮಾತುರಳಾಗಿ ರಾಜಪುತ್ರರಾದ ರಾಮಲಕ್ಷ್ಮಣರನ್ನು ಮೋಹಿಸಿ ಕಿವಿಮೂಗನ್ನು ಕೊಯ್ಸಿಕೊಂಡು ಬಂದು ರಾವಣನನ್ನು ರೇಗಿಸಿ ಸೀತೆಯನ್ನು ಕದ್ದುತರುವಂತೆ ಹೇಳಲು ರಾವಣನು ಮಾಯಾವೇಷದಿಂದ ಸೀತೆಯನ್ನು ಅಪಹರಿಸಿ ತಂದು ಅಶೋಕವನದಲ್ಲಿ ಸೆರೆಯಿಟ್ಟನು. ಆದಕಾರಣ ಅವಳನ್ನು ಹುಡುಕುವುದಕ್ಕಾಗಿ ಒಂದು ಕಪಿಯು ಬಂದು ಲಂಕೆಯನ್ನು ಸುಟ್ಟು ಅಕ್ಷಯಕುಮಾರನನ್ನು ಕೊಂದು ವನಭಂಗಮಾಡಿ ತನ್ನ ಹಾವಳಿಯನ್ನು ಹತ್ತು ದಿಕ್ಕುಗಳಲ್ಲಿಯೂ ಹರಡಿ ಹಿಂದಿರುಗಿ ಹೊರಟುಹೋಯಿತು. ಈಚೆಗೆ ರಾಮಲಕ್ಷ್ಮಣರು ಕಪಿಸೇನೆಯೊಡನೆ ಬಂದು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಗೆ ಮುತ್ತಿಗೆ ಹಾಕಿರುವರು ಬಳಿಕ ರಾಮನಿಗೂ ರಾವಣನಕಡೆಯವರಿಗೂ ಯುದ್ಧಪ್ರಾರಂಭವಾಗಲು ಅಜೇಯರಾದ ರಾಮಸೇನೆಯವರು ತಮ್ಮ ಪರಾಕ್ರಮದಿಂದ ಆರ್ಭಟಿಸಿ ಯುದ್ಧಮಾಡುತ್ತ ಮಹಾಶೂರರಾದ ರಾಕ್ಷಸವೀರರನ್ನೆಲ್ಲ ಕೊಂದರು ಹಾಗೆ ಕೊಲ್ಲುವಾಗ ವೀರಾಧಿವೀರರಾದ ಕುಂಭಕರ್ಣ, ಕುಂಭ, ನಿಕುಂಭ, ಅತಿಕಾಯ, ಮಹಾಕಾಯ, ದೇವಾಂತಕ, ನರಾಂತಕ, ಮಕರಾಕ್ಷ, ಯೂಪಾಂತಕ, ವಿರೂಪಾಕ್ಷ, ಇಂದ್ರಜಿತು ಮೊದಲಾದವರೆಲ್ಲರೂ ಮಡಿದುಹೋದರು. ವಿಭೀಷಣನು ಮೊದಲೆ ಲಂಕೆಯನ್ನು ಬಿಟ್ಟು ರಾಮನ ಬಳಿಗೆ ಹೊರಟುಹೋದನು. ಈಗಲಾದರೋ ರಾಮಾದಿಗಳೊಡನೆ ಯುದ್ಧಮಾಡಲು ರಾವಣನೊಬ್ಬನು ವಿನಾ ಮತ್ತಾರೂ ಇಲ್ಲ ಆದಕಾರಣ ನಿಮ್ಮನ್ನು ಯುದ್ಧಕ್ಕೆ ಕರೆತರುವಂತೆ ಅಪ್ಪಣೆಮಾಡಿದನು ಎಂದು ಹೇಳಲು ಸ್ವಾಮಿಭಕ್ತಿಯುಳ್ಳವರಾಗಿ ಕ್ರೂರವಾದ ಆ ರಾಕ್ಷಸ ಸೈನ್ಯದವರು ಕೂಡಲೆ ಹಠಾತ್ತಾಗಿ ಸಂಧಿಸಿದ ಯುದ್ಧಕ್ಕೆ ಹೊರಡಲು ಅತ್ಯಂತ ವೀರಾವೇಶವನ್ನು ತಾಳಿ ತಂತಮ್ಮ ವಾಹನಗಳನ್ನು ಏರಿ ಆಯುಧಗಳನ್ನು ಹಿಡಿದು ಆರ್ಭಟಿಸುತ್ತ ಕುದುರೆಯಮೇಲೆ ಕೆಲವರು ಆನೆಗಳನ್ನು ಹತ್ತಿ ಕೆಲವರು ಹುಲಿಯಮೇಲೆ ಕುಳಿತು ಕೆಲವರು ಕತ್ತೆಗ

ಳನ್ನು ಹತ್ತಿ ಹಲವರು ಕರಡಿವಾಹನದಲ್ಲಿ ಕೆಲವರು ಕತ್ತಿಗಳನ್ನು ಹಿಡಿದು ಗುರಾಣಿಗಳನ್ನು ಝಳಪಿಸಿ, ತ್ರಿಶೂಲವನ್ನು ಧರಿಸಿ, ಅಸ್ತ್ರಶಸ್ತ್ರಗಳಿಂದ ಕೂಡಿದ ಬಿಲ್ಲುಬಾಣಗಳನ್ನು ಹಿಡಿದು ಕೆಲವರು ಹೀಗೆ ಭಯಂಕರವಾಗಿ ಮೂರು ಮುಖ, ಒಂದು ಕಣ್ಣು, ಐದು ತಲೆ, ಮೂರು ಕಾಲು, ಆರು ತಲೆ, ನಾಲ್ಕು ತೋಳು, ಹತ್ತು ಭುಜ, ಐದು ತಲೆ, ಮೂರು ಮೂಗು, ಒಂದು ಕಿವಿ, ಎಂಟು ನಾಲಗೆ, ನಾಲ್ಕು ಮುಖ ಮೊದಲಾಗಿ ಅನೇಕ ವಿಕಾರವಾದ ರೂಪಿನಿಂದ ಕೋರೆ ಹಲ್ಲುಗಳನ್ನು ಕಡಿಯುತ್ತ ಯುದ್ಧಸನ್ನದ್ಧರಾಗಿ ರಾವಣನ ಬಳಿಗೆ ಬಂದು ನಿಂತು ಕೈಮುಗಿದು ನಮ್ಮನ್ನು ಕರೆಸಿದ ಕಾರಣವೇನು? ಎಂದು ಕೇಳಿದರು. ಆಗ ರಾವಣನು ಸಂತೋಷಭರಿತ ನಾಗಿ ಎಲೈ ಮೂಲಬಲಾಧಿಪತಿಗಳಿ! ಇದುವರೆಗೆ ನಾನು ನಿಮ್ಮನ್ನು ಎಂದಿಗೂ ಕರೆಸಿದವನಲ್ಲ ಈಗ ನನಗೆ ಕೇವಲ ಆಪತ್ಕಾಲವಾಗಿದೆ. ಮನುಷ್ಯಮಾತ್ರದವರಿಂದ ನಾನು ಬಹಳವಾಗಿ ನೊಂದುಹೋಗಿರುವೆನು. ಆದಕಾರಣ ನೀವು ಉತ್ಸಾಹಭರಿತರಾಗಿ ಹೋಗಿ ರಾಮಲಕ್ಷ್ಮಣರ ಮೇಲೆ ಬಿದ್ದು ಯುದ್ಧಮಾಡಿ ಅವರನ್ನು ಯುದ್ಧದಲ್ಲಿ ಕೊಂದುಬನ್ನಿ! ಎಂದು ಹೇಳಲು ಅವರು ತಥಾಸ್ತು ಎಂದು ಹೇಳಿ ಅಲ್ಲಿಂದ ಹೊರಟು ಯುದ್ಧರಂಗಕ್ಕೆ ಬಂದು ರಾಮಸೇನೆಯಮೇಲೆ ಬಿದ್ದು ಹಾವಳಿಮಾಡುತ್ತ ಬಗೆಬಗೆಯಾದ ಅಸ್ತ್ರಶಸ್ತ್ರಗಳಿಂದ ಕಪಿಬಲವನ್ನು ಕಾಡಿ ಪೀಡಿಸು ತ್ತಿರಲು ಕಪಿಸೇನೆಯು ಹೆದರಿ ರಾಕ್ಷಸರ ಪೆಟ್ಟನ್ನು ತಾಳಲಾರದೆ, ಅಯ್ಯೋ! ಈ ಗ್ರಹಚಾರವು ನಮಗೆಲ್ಲಿ ಬಂದಿತು ರಾಮನೆಲ್ಲಾದರೂ ಹೋಗಲಿ! ಸೀತೆ ಸೆರೆಯಾಗಿಯೆ ಇರಲಿ! ಸುಗ್ರೀವನು ಹಾಳಾಗಲಿ! ಉಳಿದವರು ಉರಿದುಹೋಗಲಿ! ನಮಗೆ ಈ ಯುದ್ಧದ ಚಿಂತೆಯೆ ಬೇಡ ಎಂದು ಹೆದರಿ ಹಮ್ಮೈಸುತ್ತ ದಿಕ್ಕುದಿಕ್ಕಿಗೆ ಓಡಿಹೋಗುತ್ತಿದ್ದರು. ಆಗ ಜಾಂಬವಂತ ಹನುಮಂತ ರಿಬ್ಬರೂ ಆ ಕಪಿಗಳಿಗೆ ಧೈರ್ಯವನ್ನು ಹೇಳಿ ಅಭಯಪ್ರದಾನಮಾಡಿ ರಾಮಸೇನೆಯು ಭೀಮ ಪರಾಕ್ರಮದಿಂದ ರಾಕ್ಷಸರನ್ನು ಹೆದರಿಸುವಂತೆ ಮಾಡಿದರು.

## ರಾವಣನ ಮೂಲಬಲಸಂಹಾರ.



ಶ್ರೀರಾಮನು ದೂರದಲ್ಲಿ ನಿಂತು ಕಪಿಸೇನೆಯ ಕಳವಳವನ್ನು ರಾಕ್ಷಸರ ಆರ್ಭಟವನ್ನು ಕಣ್ಣಾರೆ ನೋಡಿ ಮರುಗಿ ಮಹಾವೀರರಾದ ಕಪಿಗಳು ಕ್ರೂರರಾದ ರಾಕ್ಷಸರ ಕೈಗೆ ಸಿಕ್ಕಿ ಬಹ ವಾಗಿ ನೊಂದಿರುವರು. ಇವರನ್ನು ಈಗ ಸಮಾಧಾನಪಡಿಸದಿದ್ದರೆ ಮುಂದೆ ಕೆಲಸ ಕೆಡುವುದು ಈಗ ನಾನೇ ಯುದ್ಧಕ್ಕೆ ಹೊರಡಬೇಕು ಇಲ್ಲವಾದರೆ ರಾಕ್ಷಸರ ಹಾವಳಿಯು ಕೈಮೀರಿಹೋಗಿ ಕಪಿಸೇನೆಯು ಕಂಗೆಡುವುದೆಂದು ತಿಳಿದು ತನಗೆ ಆಪ್ತನಾದ ವಿಭೀಷಣನನ್ನು ಸಂಗಡ ಕರೆದು ಕೊಂಡು ಧನುರ್ಬಾಣಗಳನ್ನು ಧರಿಸಿ ರೋಷಾವೇಷದಿಂದ ರಾಕ್ಷಸಸೇನೆಯಮೇಲೆ ಬಿದ್ದು ಬಾಣ ವನ್ನು ಹೊಡೆಯಲು ಅವರು ಅದನ್ನು ಲಕ್ಷಿಸದೆ ರಾಮನನ್ನು ಪ್ರತಿಭಟಿಸಿ ಕಪಿಗಳನ್ನು ಕೊಲ್ಲುತ್ತಾ

ಮಹಾಭಯಂಕರವಾಗಿರಲು, ಯುದ್ಧತಂತ್ರವಿಶಾರದನಾದ ಶ್ರೀರಾಮನು ರಾಕ್ಷಸರನ್ನು ಶ್ಲಾಘಿಸುತ್ತ ಪೂರ್ವದಲ್ಲಿ ಧನುರ್ವಿದ್ಯಾ ಗುರುವಾದ ವಿಶ್ವಾಮಿತ್ರನು ಆಶೀರ್ವದಿಸಿ ತನಗೆ ಉಪದೇಶ ಮಾಡಿದ ಸಮ್ಮೋಹನಾಸ್ತ್ರವನ್ನು ಸೆಳೆದು ಅಭಿಮಂತ್ರಿಸಿ ತನ್ನ ತೇಜಸ್ಸನ್ನು ಅದಕ್ಕೆ ಕೊಟ್ಟು ಪ್ರಯೋಗಿಸಿದನು. ಕೂಡಲೆ ರಾಕ್ಷಸ ಸೇನೆಯವರೆಲ್ಲರೂ ಮೈಮರೆದು ಮುಂದಾಗಿ ಮುಂದೇನು ಮಾಡಬೇಕೆಂಬುದೇ ತೋರದೆ ಮೋಹಪರವಶರಾಗಿ ಯುದ್ಧರಂಗದಲ್ಲಿ ಬಿದ್ದುಕೊಂಡರು. ಆಗ ಹಾಗೆ ಬಿದ್ದುಹೋದ ರಾಕ್ಷಸರ ಕಣ್ಣಿಗೆ ಕೋಟಾನುಕೋಟಿ ರಾಮರು ಧನುರ್ಬಾಣಧರರಾಗಿ ಜಗಳವಾಡುತ್ತಿರುವಂತೆ ಕಾಣುತ್ತಿತ್ತು. ಬಳಿಕ ಮೂಲಬಲದವರಲ್ಲಿ ಒಬ್ಬರೂ ಯುದ್ಧಕ್ಕೆ ಬಾರದೇ ಸ್ತಬ್ಧರಾಗಿ ಬಿದ್ದುಹೋಗಲು ಶ್ರೀರಾಮಚಂದ್ರನು ಅಯ್ಯಾ! ಈ ಸಮ್ಮೋಹನಾಸ್ತ್ರವು ವಿಶ್ವಾಮಿತ್ರ ಮಹರ್ಷಿಯಿಂದ ನನಗೆ ಪ್ರಾಪ್ತವಾಯಿತು. ನಾನು ಇದನ್ನು ಉಪಯೋಗಿಸಿ ಈ ಮೂಲಬಲವನ್ನು ಸಂಹರಿಸಿದೆನು ಇಂಥ ಮಹಿಮಾಸ್ಪದನಾದ ಅಸ್ತ್ರವನ್ನು ನಾನು ಇದುವರೆಗೂ ತೊಡಲೇ ಇಲ್ಲವೆಂದು ಹೇಳಲು ವಿಭೀಷಣನು ಸಂತೋಷಭರಿತನಾಗಿ ಕೈಮುಗಿದು ಇನ್ನು ರಾಕ್ಷಸ ಸೇನೆಯಲ್ಲಿ ಬಲಾಧಿಕರಾಗಿ ಶೂರರಾಗಿ ಧೀರತ್ವದಿಂದಕಾದುವ ಭಟರೆ ಇಲ್ಲವೆಂದು ಹೇಳಲು, ರಾಮನು ಬ್ರಹ್ಮಾದಿಗಳಿಗೆ ಅಸಾಧ್ಯವಾದ ರಾವಣನ ಮೂಲಬಲವನ್ನು ಏಕಾಸ್ತ್ರದಿಂದ ಜಯಿಸಿದ ಸಂತೋಷದಿಂದ ಹಿಂದಿರುಗಿ ತನ್ನ ಶಿಬಿರವನ್ನು ಸೇರಿದನು. ಕಪಿಸೇನೆಯವರು ಆನಂದಭರಿತರಾಗಿ ರಾಮನಿಗೆ ಕೈಮುಗಿದು ವಿಭೀಷಣನನ್ನು ಅಭಿನಂದಿಸಿ ಹೊಗಳುತ್ತಿರಲು ದೇವತೆಗಳು ದೇವದುಂದುಭಿಯನ್ನು ಬಾರಿಸಿ, ರಾಮಸೇನೆಯಮೇಲೆ ಹೂಮಳೆಯನ್ನು ಕರೆದು ಜಯಜಯವೆಂದು ಆಶೀರ್ವದಿಸುತ್ತಿದ್ದರು.

## ರಾವಣನ ಯುದ್ಧಸನ್ನಾಹ ಮತ್ತು ರಣರಂಗ ಪ್ರವೇಶ.

ಆ ಬಳಿಕ ಮೂಲಬಲದಲ್ಲಿ ಹತಶೇಷರಾಗಿ ಉಳಿದುಳಿದ ರಾಕ್ಷಸರು ಭಯದಿಂದ ಓಡಿಬಂದು ಗೋಳಿಡುತ್ತ ರಾವಣನಿಗೆ ನಮಸ್ಕರಿಸಿ, ಎಲೈ ಲಂಕೇಶ್ವರನೇ! ಅನವರತವೂ ಅಜೇಯರಾಗಿ ಅತ್ಯಂತ ಸಂತೋಷದಿಂದ ಸದಾ ಜಯಶಾಲಿಗಳಾಗುತ್ತಿದ್ದ ನಿನ್ನ ಮೂಲಬಲದವರು ಈ ದಿನ ರಾಮಸೇನೆಯಿಂದ ಸಮೂಲನಾಗಿ ಅಳಿದುಹೋಗಿ ನಾಶವಾದರು. ನಾವು ಈ ಸಂಗತಿಯನ್ನು ನಿನಗೆ ತಿಳಿಸುವುದಕ್ಕಾಗಿ ಇಲ್ಲಿಗೆ ಬಂದೆವು ಎಂದು ಹೇಳಲು, ರಾವಣನು ಚಿಂತಾಕ್ರಾಂತನಾಗಿ ಮೂರ್ಛೆಗೆ ಸಂದು ಸ್ವಲ್ಪ ಹೊತ್ತಿನಮೇಲೆ ಸುದಾರಿಸಿಕೊಂಡು ಎಚ್ಚತ್ತು ಆಹಾ! ನನ್ನ ಸ್ಥಿತಿಯನ್ನು ಏನು ಹೇಳಲಿ! ಹೊಕ್ಕಕಡೆ ಜಯಶೀಲನಾಗಿ ಹೊರಟು ಬರುತ್ತಿದ್ದ ನಾನು ನಿತ್ಯವೂ ಅಪಜಯಕ್ಕೆ ಆಕರನಾದೆ. ಶತ್ರುಗಳನ್ನು ಹೆದರಿಸಿ ಓಡಿಸುತ್ತಿದ್ದ ನನ್ನ ಸೈನಿಕರು ಪ್ರಪಂಚವ್ಯವಹಾರವನ್ನೆ ಬಿಟ್ಟು ಲೋಕಾಂತರಕ್ಕೆ ಸೇರಿದರು. ಒಡಹುಟ್ಟಿದವರು ಮಡಿದುಹೋದರು. ಮಕ್ಕಳಿಗೆ ಮರಣವಾಯಿತು ಸೈನಿಕರು ಸತ್ತರು ಮೂಲಬಲವು ಹಾಳಾಯಿತು. ಲಂಕೆಯಲ್ಲಿ ಗಂಡಸರ ಹೆಸರೇ ಇಲ್ಲದಂತಾಗಿ, ಗಂಡಂದಿರನ್ನು ಮಕ್ಕಳನ್ನು ಕಳೆದುಕೊಂಡು ರೋಧಿಸುತ್ತಿರುವ ವಿಧವೆಯರ ಆರ್ತಸ್ವರವು ಅರಣ್ಯದಲ್ಲಿರುವ ಮೃಗಗಳ ರೋದನೆಯಂತೆ ಹಾಹಾಕಾರವನ್ನುಂಟುತ್ತಿದೆ. ಈಗ ನಾನು ಏನು ಮಾಡಲಿ! ಇನ್ನು ಶತ್ರುವನ್ನು ಜಯಿಸುವ ಬಗೆ ಹೇಗೆ? ಅಯ್ಯೋ! ದೈವವೇ! ನನ್ನನ್ನು ಈ ಗತಿಗೆ ತಂದೆಯಾ! ಎಂದು ಬಹಳವಾಗಿ ಶೋಕಪ್ರಲಾಪಗಳನ್ನು ಮಾಡಿ ಕಡೆಗೆ ಧೈರ್ಯವನ್ನು ತಂದುಕೊಂಡು, ತನಗೆ ಆಪ್ತರಾದ ಯುದ್ಧೋನ್ಮತ್ತನನ್ನೂ ವಿರೂಪಾಕ್ಷನನ್ನೂ ಕರೆಸಿ, ಈ ದಿನ ರಾಮಲಕ್ಷ್ಮಣರೊಡನೆ ಯುದ್ಧಕ್ಕೆ ಹೊರಡಬೇಕಾಗಿದೆ ನನ್ನ ರಥವನ್ನು ಸಿದ್ಧಮಾಡಿ ತಂದು ನಿಲ್ಲಿಸಿ ಎಂದು ಹೇಳಲು, ಅವರು ತಂದು ನಿಲ್ಲಿಸಿದ ರಥದಮೇಲೆ ಕುಳಿತು ಸರ್ವಾಭರಣಭೂಷಿತನಾಗಿ ಇಪ್ಪತ್ತು ಬಗೆಯಾದ ಆಯುಧಗಳನ್ನು ಹಿಡಿದು ಆರ್ಭಟಿ

ಸುತ್ತ ಮದೋನ್ಮತ್ತನಾಗಿ ಮೃತ್ಯುವನ್ನು ಹುಡುಕಿಕೊಂಡು ಹೋಗುವ ಮಾನವನಂತೆ ರಾಮನಿಗೆದುರಾಗಿ ನಿಂತು ಕಪಿಸೇನೆಯ ಮೇಲೆ ಬಾಣಗಳನ್ನು ಹೊಡೆದು ಕಪಿಗಳನ್ನು ಕೊಲ್ಲುತ್ತಬಂದನು ಅದನ್ನು ಕಂಡು ಕಪಿಗಳು ರೋಷಾವೇಶದಿಂದ ಕಾದಾಡುತ್ತ ಬೆಟ್ಟಗಳನ್ನು ಕಲ್ಲುಗಳನ್ನು ಮರಗಳನ್ನು ತಿರುಗಿಸಿ ಹೊಡೆದು ರಾವಣನನ್ನು ನೋಯಿಸಿದರು. ಅದಕ್ಕೆ ಪ್ರತಿಯಾಗಿ ರಾವಣನು ಕ್ರೂರವಾದ ಬಾಣವನ್ನು ಹೊಡೆದು ಕಪಿಸೇನೆಯನ್ನು ಕೊಲ್ಲುತ್ತಿದ್ದನು. ತನ್ನ ಸೈನ್ಯದವರು ಸಾಯುತ್ತಿರುವುದನ್ನು ನೋಡಿ ಸಹಿಸಲಾರದೆ ಸುಗ್ರೀವನು ತಾನೆ ರಾವಣನಿಗೆದುರಾಗಿ ನಿಂತು ಯುದ್ಧಮಾಡುತ್ತ ಒಂದು ದೊಡ್ಡ ಬೆಟ್ಟವನ್ನು ರಾವಣನಮೇಲೆ ಉರುಳಿಸಲು ಅವನು ಅದನ್ನು ಲಕ್ಷ್ಯಮಾಡದೆ ಹೊರನೂಕಿ ತಪ್ಪಿಸಿಕೊಂಡು ಸುಗ್ರೀವನನ್ನು ಪ್ರತಿಬಾಣದಿಂದ ಹೊಡೆದು ನಳ ನೀಲ ಸುಷೇಣ ಗಂಧಮಾಧನರ ಮೇಲೆ ಐದೈದು ಬಾಣಗಳನ್ನು ಹೊಡೆದು ರಾವಣನನ್ನು ಮೂರ್ಛೆಗೊಳಿಸಿ ತನ್ನ ಕಡೆಯವರಿಗೆ ಧೈರ್ಯ ಹೇಳುತ್ತ ಶೌರ್ಯದಿಂದ ಕಾದಾಡುತ್ತಿರುವುದನ್ನು ಕಂಡು ವಿರೂಪಾಕ್ಷನು ಸುಗ್ರೀವನಿಗೆದುರಾಗಿ ನಿಂತು ಬಾಣವನ್ನು ಹೊಡೆದನು. ಅದನ್ನು ತಪ್ಪಿಸಿಕೊಂಡು ಸುಗ್ರೀವನು ವಿರೂಪಾಕ್ಷನ ರಥದಮೇಲೆ ಹಾರಿ ಅವನ ಬಿಲ್ಲನ್ನು ಮುರಿದು ಸಾರಥಿಯನ್ನು ಕೊಂದು ಕುದುರೆಗಳನ್ನು ಕೆಡವಿ ರಥವನ್ನು ಪುಡಿಪುಡಿಮಾಡಿ ಆರ್ಭಟಿಸುತ್ತಿರಲು ವಿರಥನಾದ ವಿರೂಪಾಕ್ಷನು ಆನೆಯನ್ನು ಹತ್ತಿ ಆರ್ಭಟಿಸುತ್ತ ಬರುತ್ತಿರುವುದನ್ನು ಕಂಡು ಸುಗ್ರೀವನಿಗೆ ಸಹಾಯನಾಗಿ ಅಂಗದನು ಮುಂದೆ ಬಂದು ತನ್ನ ಮುಷ್ಟಿಘಾತದಿಂದ ಅವನ ಆನೆಯನ್ನು ಕೊಂದು ನೆಲಕ್ಕುರುಳಿಸಿದನು. ಕೂಡಲೆ ವಿರೂಪಾಕ್ಷನು ಕತ್ತಿಯನ್ನು ಹಿಡಿದು ಅಂಗದನಮೇಲೆ ಬರಲು, ಅಂಗದನು ತನ್ನ ಸಾಮರ್ಥ್ಯದಿಂದ ಅವನ ಖಡ್ಗವನ್ನು ಮುರಿದು ಎದೆಗೆ ತಿವಿಯಲು ವಿರೂಪಾಕ್ಷನು ವಿರೂಪನಾಗಿ ರಕ್ತವನ್ನು ಕಾರುತ್ತ ಮಡಿದುಬಿದ್ದನು. ಆಗ ತಮ್ಮಣ್ಣನಾದ ವಿರೂಪಾಕ್ಷನಿಗಾದ ಗತಿಯನ್ನು ಕಂಡು ಕೃದ್ಧನಾದ ಯುದ್ಧೋನ್ಮತ್ತನು ರಥಾರೂಢನಾಗಿ ಯುದ್ಧಕ್ಕೆ ನಿಂತು ಸುಗ್ರೀವನನ್ನು ಬಾಣಗಳಿಂದ ಹೊಡೆದು ಕಪಿಸೇನೆಯನ್ನು ಕೊಲ್ಲುತ್ತಿದ್ದನು. ಕೂಡಲೆ ಸುಗೀವನು ತನ್ನ ಸಾಹಸದಿಂದ ಬಾಣವನ್ನು ಹೊಡೆದು ಯುದ್ಧೋನ್ಮತ್ತನ ಸಾರಥಿಯನ್ನು ಕೊಂದು ಕುದುರೆಗಳನ್ನು ಕೆಡವಿ ರಥವನ್ನು ಮುರಿದು ಆರ್ಭಟಿಸಿದನು. ಬಳಿಕ ಖಡ್ಗಧಾರಿಯಾಗಿ ಮದೋನ್ಮತ್ತನು ತನ್ನನ್ನು ಹೊಡೆಯುವುದಕ್ಕೆ ಬರಲು ಯುದ್ಧವಿಶಾರದನಾದ ಸುಗ್ರೀವನು ಅವನ ಕೈಯ ಕತ್ತಿಯನ್ನು ಸೆಳೆದುಕೊಂಡು ಅದರಿಂದಲೆ ಅವನನ್ನು ಹೊಡೆದು ಕೊಂದನು.

ಹೀಗೆ ವಿರೂಪಾಕ್ಷ ಮದೋನ್ಮತ್ತರಿಬ್ಬರೂ ಸಾಯಲು ಸುಪಾರ್ಶ್ವನು ರೋಷಭೀಷಣನಾಗಿ ರಥವನ್ನೇರಿ ಸುಗ್ರೀವನನ್ನು ಹೊಡೆದು ಕಪಿಸೇನೆಯಮೇಲೆ ಬಿದ್ದನು. ಅದನ್ನು ಕಂಡು ಸಹಿಸಲಾರದೆ ಅಂಗದನು ಸುಗ್ರೀವನನ್ನು ಹಿಂದಕ್ಕೆ ನೂಕಿ ತಾನೆ ಯುದ್ಧಕ್ಕೆ ನಿಂತು ಸುಪಾರ್ಶ್ವನನ್ನು ಹೊಡೆದನು. ಜಾಂಬವಂತನು ಅಂಗದನಿಗೆ ಸಹಾಯವಾಗಿ ಬಂದು ಆ ರಾಕ್ಷಸನಮೇಲೆ ಒಂದು ಪರ್ವತವನ್ನು ಹಾಕಿದನು. ಆದರೂ ರಾಕ್ಷಸನು ಹೆದರದೆ ಮರಳಿ ಎಚ್ಚತ್ತು ಧೀರನಾದ ಆಂಜನೇಯನ ಕಡೆಗೆ ತಿರುಗಿ ಅವನನ್ನು ಬಾಣಗಳಿಂದ ಹೊಡೆದನು ಆಗ ಆಂಜನೇಯನು ಮತ್ತೊಂದು ಪರ್ವತವನ್ನು ತಂದು ರಕ್ಕಸನ ಮೇಲೆ ಹಾಕಲು ಅದನ್ನು ತಪ್ಪಿಸಿಕೊಂಡು ಗದೆಯನ್ನು ಹಿಡಿದು ತನ್ನನ್ನು ಹೊಡೆಯುವುದಕ್ಕೆ ಬಂದ ಸುಪಾರ್ಶ್ವನನ್ನು ಹಿಡಿದು ಅವನ ಕೈಗದೆಯನ್ನು ಕಿತ್ತುಕೊಂಡು ಅದರಿಂದಲೆ ಅವನನ್ನು ಹೊಡೆದು ನೆಲಕ್ಕೆ ಉರುಳಿಸಿದನು.

## ರಾವಣನ ಯುದ್ಧ ಲಕ್ಷ್ಮಣನ ಮೂರ್ಛೆ.

ಆಗ ರಾವಣನು ಇದೆ ತಕ್ಕ ಸಮಯವೆಂದು ರಾಮನಿಗೆದುರಾಗಿ ಯುದ್ಧಕ್ಕೆ ಬಂದನು. ಲಕ್ಷ್ಮಣನು ಅದನ್ನು ಕಂಡು ಕುಪಿತನಾಗಿ ರಾಮನನ್ನು ಹಿಂದಕ್ಕೆ ನೂಕಿ ತಾನೆ ರಾವಣನೆದು

ರಾಗಿ ನಿಂತು ಧೈರ್ಯದಿಂದ ಕಾದಾಡುತ್ತಿದ್ದನು. ಲಕ್ಷ್ಮಣನ ಪರಾಕ್ರಮವನ್ನು ಕಂಡು ರಾವಣನು ಆಶ್ಚರ್ಯಭರಿತನಾಗಿ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು. ಲಕ್ಷ್ಮಣನು ರುದ್ರಾಸ್ತ್ರದಿಂದ ಅದನ್ನು ನಿವಾರಿಸಿಕೊಂಡು ತಾನು ಸರ್ಪಾಸ್ತ್ರವನ್ನು ಹೂಡಿಬಿಟ್ಟನು. ರಾವಣನು ಅದನ್ನು ಗರುಡಾಸ್ತ್ರಪ್ರಯೋಗದಿಂದ ಪರಿಹರಿಸಿಕೊಂಡು ತಾನು ಆರ್ಭಟಿಸಲು ಇಂದ್ರಾಸ್ತ್ರವನ್ನು ಪ್ರಯೋಗಿಸಿ ಲಕ್ಷ್ಮಣನು ರಾವಣನ ಕವಚವನ್ನು ಕತ್ತರಿಸಿದನು. ಕೂಡಲೆ ಪ್ರತ್ಯಸ್ತ್ರದಿಂದ ನೆಗ್ಗಳಿಸಿ ರಾವಣನ ಸಾರಥಿಯನ್ನು ಕೊಂದು ರಥವನ್ನು ಮುರಿದನು. ಆಗ ವಿಭೀಷಣನು ಲಕ್ಷ್ಮಣನ ಸಹಾಯಕ್ಕೆ ಬಂದು ಯುದ್ಧಮಾಡುತ್ತ ರಥದ ಕುದುರೆಗಳನ್ನು ಸಂಹರಿಸಿದನು. ಆಗ ರಾವಣನು ವಿಭೀಷಣನ ರೀತಿಯನ್ನು ನೋಡಿ ಮಹಾರೋಷದಿಂದ ಅವನನ್ನು ಶಕ್ತಿಯಿಂದ ಹೊಡೆಯಲು ಲಕ್ಷ್ಮಣನು ಆ ಶಕ್ತಿಯನ್ನು ಮಧ್ಯಮಾರ್ಗದಲ್ಲಿಯೆ ಖಂಡಿಸಿ ವಿಭೀಷಣನನ್ನು ಬದುಕಿಸಿದನು. ಬಳಿಕ ರಾವಣನು ಇಮ್ಮಡಿಯಾದ ಕೋಪದಿಂದ ಕುದಿಯುತ್ತ ಪೂರ್ವದಲ್ಲಿ ಮಯನು ತನಗೆ ಕೊಟ್ಟಿದ್ದ ಮಹಾಕ್ರೂರವಾದ ಶಕ್ತಿಯನ್ನು ಪ್ರಯೋಗಿಸಿದನು. ಅದು ವಿಭೀಷಣನ ಕಡೆಗೆ ಬರುತ್ತಿರವುದನ್ನು ಕಂಡು ಲಕ್ಷ್ಮಣನು ತಾನು ವಿಭೀಷಣನಿಗೆ ಮರೆಯಾಗಿ ನಿಂತು ಅವನನ್ನು ಸಂರಕ್ಷಿಸಿದನು. ಹೀಗೆ ಮಹಾ ಶೌರ್ಯದಿಂದ ತನ್ನ ಮಂತ್ರಾಸ್ತ್ರಗಳನ್ನು ವ್ಯರ್ಥಮಾಡುತ್ತಿರುವ ಲಕ್ಷ್ಮಣನ ಸಾಹಸಕ್ಕೆ ಮೆಚ್ಚಿ ರಾವಣನು ಕೃದ್ಧನಾಗಿ ಎಲೈ ಲಕ್ಷ್ಮಣನೆ! ನೀನು ಸಾಹಸವಂತನಾದರೆ ಈ ಬಾಣವನ್ನು ಸಹಿಸಿಕೊ! ಎಂದು ಆರ್ಭಟಿಸುತ್ತ ಎರಡು ಲಕ್ಷ ಗಂಟೆಗಳಿಂದಲಂಕೃತವಾದ ಮಹಾಕ್ರೂರವಾದ ಅಗ್ನಿಜ್ವಾಲೆಯಿಂದುರಿಯುತ್ತಿರುವ ಒಂದು ಶಕ್ತಿಯನ್ನು ಪ್ರಯೋಗಿಸಲು ಅದು ರೌದ್ರಾಕಾರವಾಗಿ ಉರಿಯುತ್ತ ಬಂದು ಲಕ್ಷ್ಮಣನ ಹೃದಯವನ್ನು ಭೇದಿಸಿಕೊಂಡು ಹೋಯಿತು.





ಕೂಡಲೆ ಲಕ್ಷ್ಮಣನು ಮೂರ್ಛಾಕ್ರಾಂತನಾಗಿ ರಥದಲ್ಲಿ ಮಲಗಿದನು. ಅದನ್ನು ಕಂಡು ರಾವಣನು ಆಶ್ಚರ್ಯ ಚಕಿತನಾಗಿ ಲಕ್ಷ್ಮಣನ ಬಳಿಗೆ ಬಂದು ಅವನನ್ನು ಎತ್ತುವುದಕ್ಕಾಗದೆ ಸಂಕಟಪಡುತ್ತಿರಲು ಆಂಜನೇಯನು ರಾವಣನನ್ನು ಕುರಿತು ಎಲಾ! ಹೆಣ್ಣುಕಳ್ಳನಾದ ನೀನು ಹೇಡಿಯಲ್ಲವೆ? ಧೀರನಾದ ಲಕ್ಷ್ಮಣನು ಶೇಷಾಂಶಸಂಭೂತನು. ಇವನನ್ನು ನೀನು ಎತ್ತಬಲ್ಲೆಯಾ! ಬಿಡು ದೂರಹೋಗು ಎಂದು ಮೂದಲಿಸಿ ರಾವಣನ ವಕ್ಷಸ್ಥಳವನ್ನು ಅಪ್ಪಳಿಸಿ ಹೊಡೆದನು, ಆ ಪೆಟ್ಟನ್ನು ತಡೆಯಲಾರದೆ ದಶಾನನನು ಮೂರ್ಛೆ ಹೋಗಲು ಧೀರನಾದ ಆಂಜನೇಯನು ಲಕ್ಷ್ಮಣನನ್ನು ತನ್ನ ಹೆಗಲಮೇಲೇರಿಸಿಕೊಂಡು ಬೇಗನೆ ಶ್ರೀರಾಮನ ಬಳಿಗೆ ಬಂದು ಅವನನ್ನು ಬಿಡಾರದಲ್ಲಿ ಮಲಗಿಸಿ, ರಾಮನಿಗೆ ನಮಸ್ಕಾರಮಾಡಿ ಶೈತ್ಯೋಪಚಾರಮಾಡಲು ತಕ್ಕವರನ್ನು ನೇಮಿಸಿ ತಾನು ರಾವಣನೆಲ್ಲಿ ಬರುವನೊ ಎಂದು ಎದುರು ನೋಡುತ್ತಿದ್ದನು.

## ಶ್ರೀರಾಮನ ಯುದ್ಧ ರಾವಣನ ಪರಾಜಯ.

ಶ್ರೀರಾಮನು ಇದೆಲ್ಲವನ್ನೂ ನೋಡಿ ಭ್ರಾಂತನಾಗಿ ಮೂರ್ಛಾಕ್ರಾಂತನಾಗದೆ ಧೈರ್ಯವನ್ನು ತಂದುಕೊಂಡು ಇದು ಯುದ್ಧಕ್ಕೆ ತಕ್ಕ ಸಮಯವೆ ಹೊರತು ಶೋಕಕ್ಕೆ ತಕ್ಕಕಾಲವಲ್ಲ ಆದ

ಕಾರಣ ಈಗ ನಾನು ಶೋಕಿಸುತ್ತ ನಿಂತುಕೊಂಡರೆ ಶತ್ರುವನ್ನು ಗೆಲ್ಲುವುದಕ್ಕಾಗದು ನನ್ನ ಪುರೋಭಿವೃದ್ಧಿಗೆ ಕಾರಣನಾಗಿ ನನಗೆ ಸರ್ವ ಸಹಾಯವನ್ನು ಮಾಡಿ ನನ್ನ ಪ್ರಾಣರೂಪನಾಗಿದ್ದ ಲಕ್ಷ್ಮಣನಿಗೆ ಇಂಥ ದುರ್ಗತಿಯನ್ನು ತಂದ ಹಗೆಯನ್ನು ಈ ಕ್ಷಣವೇ ಸಂಹರಿಸಿ ಬರುವೆನು. ನೀವು ಅದುವರೆಗೂ ಇಲ್ಲಿ ಎಚ್ಚರಿಕೆಯಿಂದ ಲಕ್ಷ್ಮಣನನ್ನು ಕಾದುಕೊಂಡಿರಿ ಎಂದು ಎಚ್ಚರಿಸಿ ತಾನು ತನ್ನ ಧನುರ್ಬಾಣಗಳನ್ನು ತೆಗೆದುಕೊಂಡು ರಾವಣನಿಗೆದುರಾಗಿ ನಿಂತು ಎಲೈ ರಾವಣನೇ! ಈ ನನ್ನ ಪ್ರತಿಜ್ಞೆಯನ್ನು ಕೇಳು, ನಾನು ಸಾಕ್ಷಾನ್ನಾರಾಯಣಾಂಶದಿಂದ ಸೂರ್ಯಕುಲೋತ್ಪನ್ನನಾದ ದಶರಥನಿಗೆ ಮಗನಾಗಿ ಹುಟ್ಟಿದುದು ಸತ್ಯವಾಗಿದ್ದರೆ ನಿರಂತರವೂ ಸತ್ಯವನ್ನು ಬಿಡದೆ ನಾನು ಧರ್ಮಮಾರ್ಗದಲ್ಲಿ ನಡೆಯುತ್ತಿದ್ದರೆ ನನ್ನ ಅಭಿವೃದ್ಧಿಯೂ ಸೀತೆಯ ಬಂಧವಿಮೋಚನೆಯೂ ದೇವತೆಗಳಿಗೆ ಪ್ರೀತಿಕರವಾಗಿದ್ದರೆ, ನಿನ್ನ ನಾಶವು ಲೋಕಕ್ಕೆ ಸಂತೋಷಕರವಾಗಿದ್ದರೆ ಈ ನನ್ನ ಬಾಣವು ನಿನ್ನನ್ನು ಕ್ಷಣಮಾತ್ರದಲ್ಲಿ ಸಂಹರಿಸಿ ಸೋಲಿಸದೆ ಬಿಡಲಾರದು ಎಂದು ಹೇಳಿ ಬಾಣವನ್ನು ಹೂಡಲು ದಿಕ್ಕುಗಳು ಬೆದರಿದವು ಲೋಕಗಳು ನಡುಗಿದವು. ದೇವತೆಗಳು ಭಯಪಟ್ಟರು ರಾಕ್ಷಸರು ಹೆದರಿ ಹಿಟ್ಟಾದರು ಕಪಿಗಳು ಸಂತೋಷದಿಂದ ಉಬ್ಬುತ್ತಿದ್ದರು. ಬಳಿಕ ರಾಮನು ಉಗ್ರರೂಪವಾದ ಆ ಬಾಣವನ್ನು ಹೊಡೆದು ರಾವಣನ ಧನುಸ್ಸನ್ನು ಮುರಿದು ಕವಚವನ್ನು ಕತ್ತರಿಸಿ ಸಾರಥಿಯನ್ನು ಕೊಂದು ಕುದುರೆಗಳನ್ನು ಕೆಡವಿ ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತಿರುವ ಆ ಬಾಣದುರಿಯನ್ನು ಸಹಿಸಲಾರದೆ ನಾಲಗೆ ಸೀಳಿ, ಎದೆಯೊಡೆದು ಕೈಕಾಲು ಮುರಿದು ಕಾಂತಿಗೆಟ್ಟು ಕೈಗುಂದಿ ಸಾಯುತ್ತಿರುವ ರಾಕ್ಷಸರನ್ನು ನೋಡಿ ರಾಮಾಸ್ತ್ರದ ಉರುಬೆಯನ್ನು ಸಹಿಸಲಾರದೆ ಪರಾಜಿತನಾಗಿ ರಾವಣನು ಲಂಕೆಯನ್ನು ಸೇರಿ ಒಡ್ಡೋಲಗದಲ್ಲಿ ಕುಳಿತು ತನ್ನ ಕಡೆಯವರೊಂದಿಗೆ ಕೂಡಿ ರಾಮನನ್ನು ಜಯಿಸುವ ಉಪಾಯವನ್ನು ಚಿಂತಿಸುತ್ತಿದ್ದನು.

## ರಾವಣನ ಮಂತ್ರಾಲೋಚನೆ.

ಹೀಗೆ ಸಭೆಯಲ್ಲಿ ಕುಳಿತು ಯೋಚಿಸುತ್ತಿದ್ದ ರಾವಣನು ಆಹಾ! ಕಾಲಗತಿಯನ್ನು ಏನು ಹೇಳಲಿ! ಅಪಜಯವನ್ನು ಕನಸಿನಲ್ಲಿಯೂ ಕಾಣದಿದ್ದ ರಾವಣನು ಕಾಡಮನುಷ್ಯರಿಂದ ಪರಾಜಿತನಾಗಿ ದುಃಖಪಡುವಂತಾಯಿತು. ವಿಭೀಷಣನು ಮೊದಲೆ ನನ್ನನ್ನು ತಿರಸ್ಕರಿಸಿ ರಾಮನ ಬಳಿಗೆ ಹೊರಟುಹೋದನು. ಕುಂಭಕರ್ಣನು ಮೃತನಾದನು ಇಂದ್ರಜಿತುವು ಯುದ್ಧದಲ್ಲಿ ಮಡಿದನು. ಅಕ್ಷಯಕುಮಾರನು ಆದಿಯಲ್ಲಿ ಅಂತ್ಯವನ್ನು ಹೊಂದಿದನು. ಉಳಿದ ವೀರಾಧಿವೀರರಾದ ಅತಿಕಾಯ, ಧೂಮ್ರಾಕ್ಷ, ಮಕರಾಕ್ಷ, ಕಾಲಜಂಘ, ಪ್ರಜಂಘ, ನಿಕುಂಭಾದಿಗಳೂ ನನಗೋಸ್ಕರವಾಗಿ ಪ್ರಾಣವನ್ನೊಪ್ಪಿಸಿದರು ಕಡೆಗೆ ನಾನೇ ಯುದ್ಧರಂಗಕ್ಕೆ ಹೋಗಿ ಕಾದಾಡಲಾರದೆ ಕಂಗೆಟ್ಟು ಹಿಂದಕ್ಕೆ ಓಡಿಬಂದೆನು ಇನ್ನು ಆ ರಾಮನ ಪರಾಕ್ರಮವೆಂಥದೊ ಕಾಣೆ ಅವನನ್ನು ಜಯಿಸುವಬಗೆ ಹೇಗೆ? ಏನುಮಾಡಲಿ! ಎಂದು ನಾನಾಪ್ರಕಾರವಾಗಿ ಚಿಂತಿಸಿ ಗೋಳಾಡುತ್ತಿದ್ದನು. ಆ ರಾವಣನ ರೋದನಧ್ವನಿಯನ್ನು ಕೇಳಿ ಮಂಡೋದರಿಯು ಅಂತಃಪುರದಿಂದ ಓಲಗಶಾಲೆಗೆ ಬಂದು ಗಂಡನ ದುರವಸ್ಥೆಯನ್ನು ನೋಡಿಮರುಗಿ ಸಮಾಧಾನ ಮಾಡುತ್ತ ಎಲೈ ದಶಕಂಠನೇ ನೀನು ಧೀರನಾದರೂ ವಿವೇಕಿಯಲ್ಲ ವಿಭೀಷಣನು ಹೇಳಿದ ನೀತಿಯನ್ನು ಕೇಳದೆ ಅವನನ್ನು ಭಂಗಪಡಿಸಿ ಹೊರಕ್ಕೆ ನೂಕಿದೆ ನಾನು ಹೇಳಿದ ಯೋಚನೆಯನ್ನು ಕೇಳದೆ ಮಕ್ಕಳನ್ನು ಮಾರಿಗೆ ತುತ್ತುಮಾಡಿದೆ, ನಿಮ್ಮ ತಾಯ ಮಾತನ್ನು ತಿರಸ್ಕರಿಸಿ ಕುಂಭಕರ್ಣನನ್ನು ಕಳೆದುಕೊಂಡೆ ಗುರುವಾಕ್ಯವನ್ನು ಮೀರಿ ರಾಕ್ಷಸಸೇನೆಯನ್ನು ಕಾಡುಪಾಲು ಮಾಡಿದೆ, ಬ್ರಹ್ಮನನ್ನು ಪೀಡಿಸಿ ವರಬಲವನ್ನು ನೀಗಿಕೊಂಡೆ ಕಡೆಗೆ ರಾಮಚಂದ್ರನಲ್ಲಿ ಹಗೆ [illegible]ಧಿಸಿ ಪರಾಜಿತನಾಗಿ [illegible] ಇನ್ನು ಮಾಡತಕ್ಕದ್ದೇನು? ಈಗಲಾದರೂ ನೀನು ನನ್ನ ಮಾತಿ

ನಂತೆ ರಾಮಚಂದ್ರನನ್ನು ಶರಣುಹೊಕ್ಕು ಸೀತೆಯನ್ನು ಅವನಿಗೊಪ್ಪಿಸಿ, ಬೇಡಿಕೊಂಡರೆ ಸುಖವಾಗಿರಬಹುದು ಹಾಗೆಮಾಡು ಹೆಂಗಸಿನಮಾತು ಎಂದು ಅಲಕ್ಷ್ಯಮಾಡಬೇಡ ದಯಾಳುವಾದ ರಾಮನು ನಿನ್ನನ್ನು ಮನ್ನಿಸಿ ಕಾಪಾಡದೆ ಇರಲಾರನು ಎಂದು ನಾನಾಪ್ರಕಾರವಾಗಿ ನೀತಿಯನ್ನು ಹೇಳಿದರೂ ಕೇಳದೆ ನಾಚಿಕೆಯಿಂದ ತಲೆಬಾಗಿ ರಾವಣನು ಮಂಡೋದರಿಯನ್ನು ಅಂತಃಪುರಕ್ಕೆ ಕಳುಹಿಸಿ ತಾನು ತನ್ನ ಹಠವನ್ನು ಸಾಧಿಸಿ ರಾಮನಮೇಲೆ ಯುದ್ಧಮಾಡಲು ಕೃತ್ರಿಮೋಪಾಯಗಳನ್ನು ಹುಡುಕುತ್ತ ಹಂಬಲಿಸುತ್ತಿದ್ದನು.

## ಶ್ರೀರಾಮನಿಗೆ ಜಾಂಬವಂತನು ಸಮಾಧಾನ ಹೇಳಿದುದು.

ಹೀಗೆ ರಾವಣನು ಹಿಮ್ಮೆಟ್ಟಿ ಲಂಕೆಗೆ ಓಡಿಹೋದಮೇಲೆ ರಾಮನು ಹಿಂದಿರುಗಿ ತನ್ನ ಶಿಬಿರಕ್ಕೆ ಬಂದು ಮೂರ್ಛಾಕ್ರಾಂತನಾಗಿ ಬಿದ್ದಿರುವ ತಮ್ಮನನ್ನು ನೋಡಿ ಹಂಬಲಿಸುತ್ತ ಯಾರಿಂದಲೂ ಕೀಳುವುದಕ್ಕಾಗದ ಲಕ್ಷ್ಮಣದೇಹದಲ್ಲಿ ಹೊಕ್ಕಿದ್ದ ಶಕ್ತಿಯನ್ನು ತನ್ನ ಕೈಯಿಂದಲೆ ಕಿತ್ತುಹಾಕಿ, ಹಾ! ತಮ್ಮಾ ಲಕ್ಷ್ಮಣ! ಲೋಕೈಕವೀರನಾದ ನಿನಗೆ ಇಂಥ ಕಷ್ಟಬಂತೆ ಸುಕುಮಾರ ಶರೀರಿಯಾದ ನೀನು ಮರದ ತುಂಡಿನಂತೆ ಮರಳುನೆಲದಲ್ಲಿ ಹೊರಳಾಡುತ್ತಿರುವೆಯಲ್ಲ ಅಣ್ಣನಾದ ನಾನು ನಿನ್ನ ಬಳಿಗೆ ಬಂದರೆ ವಿಚಾರಿಸದೆ ಸುಮ್ಮನಿರುವುದು ನ್ಯಾಯವೆ? ಅಯ್ಯೊ! ಲಕ್ಷ್ಮಣ ನನಗೆ ಇನ್ನಾರುಗತಿ, ಕ್ರೂರಮೃಗಗಳಿಂದಲೂ ದುಷ್ಟರಾಕ್ಷಸರಿಂದಲೂ ನಿಬಿಡವಾದ ಘೋರಾರಣ್ಯದಲ್ಲಿ ನನ್ನನ್ನು ಯಾವ ಬಾಧೆಯೂ ಇಲ್ಲದೆ ಸಂರಕ್ಷಿಸಿದ ನೀನು ಈ ಭಯಂಕರವಾದ ಯುದ್ಧರಂಗದಲ್ಲಿ ನನ್ನನ್ನು ಏಕಾಂಗಿಯಾಗಿ ಬಿಟ್ಟು ಹೊರಟುಹೋದೆಯಾ? ಹಾಗಲ್ಲದಿದ್ದರೆ ಇದುವರೆಗೂ ನಿದ್ರಾಹಾರಗಳನ್ನು ತೊರೆದಿದ್ದು ಈ ರಾವಣನೊಡನೆ ಯುದ್ಧಮಾಡಿದ ಶ್ರಮಪರಿಹಾರಕ್ಕೆ ನಿದ್ರೆಮಾಡುತ್ತಿರುವೆಯಾ! ನಾನು ಎಷ್ಟು ವಿಧವಾಗಿ ಮಾತನಾಡಿಸಿದರೂ ಒಂದು ಮಾತನ್ನಾದರೂ ಆಡದೆ ಸುಮ್ಮನಿರುವೆಯಲ್ಲಾ! ಲೋಕದಲ್ಲಿ ಸೀತೆಯಂಥ ಹೆಂಡತಿಯನ್ನಾದರೂ ಮರಳಿ ಪಡೆಯಬಹುದು ನಿನ್ನಂಥ ತಮ್ಮನನ್ನು ಇನ್ನೆಲ್ಲಿ ಕಾಣಲಿ! ನನ್ನಮೇಲೆ ಕೋಪವಾಗಿದ್ದರೆ ಮನ್ನಿಸಿ ಒಂದು ಮಾತನ್ನಾದರೂ ಆಡು! ಅಯ್ಯೊ! ವಿಧಿಯೆ ನಿರಪರಾಧಿಯಾದ ನನ್ನ ತಮ್ಮನನ್ನು ಕ್ರೂರವಾದ ಅಪಮೃತ್ಯುವಿನ ಕೈಗೆ ಕೊಟ್ಟು ನನ್ನನ್ನು ಹೀಗೆ ನರಳಿಸುತ್ತಿರವೆಯಾ? ಎಂದು ಬಗೆಬಗೆಯಾಗಿ ಹಂಬಲಿಸಿ ಲಕ್ಷ್ಮಣನ ಗುಣಪರಂಪರೆಗಳನ್ನು ನೆನೆದು ಗೋಳಿಡುತ್ತ ಸುಗ್ರೀವನನ್ನು ಕರೆದು ಅಯ್ಯಾ! ಅರೆಗಳಿಗೆಯಾದರೂ ಲಕ್ಷ್ಮಣನನ್ನು ತೊರೆದು ನಾನೊಬ್ಬನೆ ಇರಲಾರದೆ ಸೀತಾವಿರಹವನ್ನಾದರೂ ಸಹಿಸಿಕೊಂಡು ಬದುಕಬಲ್ಲೆ ಲಕ್ಷ್ಮಣನಿಲ್ಲದಮೇಲೆ ನಾನು ಕ್ಷಣಕಾಲವೂ ಬದುಕಲಾರೆ ಆದಕಾರಣ ನಾನು ಲಕ್ಷ್ಮಣನಗತಿಯನ್ನೆ ಅನುಸರಿಸುವೆನು ನೀನು ಸೇನಾಸಮೇತನಾಗಿ ಕಿಷ್ಕಿಂಧೆಗೆ ಹೋಗಿ ಸುಖವಾಗಿರು. ಎಲೈ ಆಂಜನೇಯನೇ ಇಲ್ಲಿ ಬಾ! ನೀನು ನನಗೆ ಪ್ರಾಣರೂಪನಾದ ಪರಮಭಕ್ತನು ಸಂಗಡ ಕರೆದುಕೊಂಡು ಅಯೋಧ್ಯೆಗೆ ಹೋಗಿ ನನ್ನ ತಮ್ಮನಾದ ಭರತನಿಗೆ ಇಲ್ಲಿನ ವೃತ್ತಾಂತವನ್ನು ವಿವರಿಸಿ ಅಯೋಧ್ಯೆಯನ್ನು ವಿಭೀಷಣನಿಗೆ ಕೊಟ್ಟುಬಿಡುವಂತೆ ನಾನೇ ಹೆಳಿದೆನೆಂದು ತಿಳಿಸು, ಇನ್ನು ನನ್ನ ಮಾರ್ಗವನ್ನು ನಾನು ನೋಡಿಕೊಳ್ಳುತ್ತೇನೆ, ನಾನೊಬ್ಬನೆ ಅಯೋಧ್ಯೆಗೆ ಹೋದರೆ ಸುಮಿತ್ರೆಗೆ ಏನುಹೇಳಲಿ! ಭರತಶತ್ರುಘ್ನರು ಕೇಳಿದರೆ ಅವರನ್ನು ಹೇಗೆ ಸಮಾಧಾನ ಮಾಡಲಿ! ನನ್ನ ಈ ದುಃಖವನ್ನು ಹೇಗೆ ಸಹಿಸಲಿ! ನಿಷ್ಕಳಂಕವಾಗಿದ್ದ ಸೂರ್ಯವಂಶಕ್ಕೆ ನನ್ನಿಂದ ಕಳಂಕವುಂಟಾಯಿತು ಇನ್ನು ಬದುಕಿ ಫಲವಿಲ್ಲ ಪ್ರಾಣವನ್ನು ತೊರೆದುಕೊಳ್ಳುವುದೆ ಮೇಲು ಎಂದು ಹಂಬಲಿಸಿ ಲಕ್ಷ್ಮಣನನ್ನು ತಬ್ಬಿಕೊಂಡು ಅಳುತ್ತಿರಲು, ಅನುಭವಶಾಲಿಯಾದ ಜಾಂಬವಂತನು ಎದ್ದು ಶ್ರೀರಾಮನಿಗೆ ನಮಸ್ಕರಿಸಿ ಸ್ವಾಮಿಾ! ಮನುಷ್ಯಲೀಲೆಗೆ ತಕ್ಕಂತೆ ಮಾಯಾನಾಟಕ ಸೂತ್ರಧಾರಿಯಾಗಿ ನೀನೆ ಹೀಗೆ

ಅಳುತ್ತ ಕುಳಿತುಕೊಂಡರೆ ಅಜ್ಞಾನಿಗಳಾದ ನಮ್ಮಗಳ ಪಾಡೇನು ಏಕೆ ದುಃಖಪಡುತ್ತಿರುವೆ! ಸುಮ್ಮನಿರು ಸಮಾಧಾನವನ್ನು ತಂದುಕೊ? ಇಗೊ! ನೋಡು ಲಕ್ಷ್ಮಣನು ಸತ್ತಿಲ್ಲ ಪ್ರಾಣಸಹಿತನಾಗಿದಾನೆ, ಅದಕ್ಕೆ ತಕ್ಕ ಗುರುತುಗಳು ಕಾಣಬರುತ್ತಿವೆ ಇಂಥ ಪರಿಕ್ಷೆಯನ್ನು ಮಾಡಿ ಮುಂದಿನ ಕಾರ್ಯಸಾಧನೆಗೆ ತಕ್ಕ ಉಪಾಯವನ್ನು ಯೋಚಿಸದೆ, ದೇಹವು ಮೃದುವಾಗಿದೆ, ಅಂಗೈಗಳು ನಖಗಳೂ ಮಾರ್ದ್ರವವಾಗಿ ಮೃದುಭಾವವನ್ನು ಸೂಚಿಸುತ್ತಿವೆ. ಆದಕಾರಣ ಇದು ಮೂರ್ಛೆಯೆ ಹೊರತು ಮರಣವಲ್ಲ, ಈಗಲೆ ಹನುಮಂತನನ್ನು ಕಳುಹಿಸಿ ಸಂಜೀವನ ಪರ್ವತವನ್ನು ತರಿಸಿದರೆ ಲಕ್ಷ್ಮಣನು ಬದುಕಿಕೊಳ್ಳುವನು, ನಮಗೆ ಸಂತೋಷವಾಗುವುದು, ನಿನಗೆ ಸಹಾಯವಾಗುವುದು ಹಗೆಯೂ ಸಾಯುವನು, ಲೋಕವೂ ಒಪ್ಪುವುದು ಸರ್ವವೂ ಸಂತೋಷಮಯವಾಗುವುದು ಎಂದು ಸಮಾಧಾನ ಹೇಳಲು ಶ್ರೀರಾಮನು ಧೈರ್ಯವನ್ನು ತಂದುಕೊಂಡು ತನ್ನ ಭಕ್ತನಾದ ಆಂಜನೇಯನನ್ನು ಕರೆದು ಲಕ್ಷ್ಮಣನ ಪ್ರಾಣರಕ್ಷಣೆಗೋಸ್ಕರ ನೀನು ಮರಳಿ ಸಂಜೀವನ ಪರ್ವತವನ್ನು ತರಬೇಕೆಂದು ಹೇಳಿ ಅವನನ್ನು ಆಶೀರ್ವದಿಸಿ ಕಳುಹಿಸಿದನು.

## ರಾವಣನು ಕಾಲನೇಮಿಯನ್ನು ಕಳುಹಿಸಿದುದು.

ಬಳಿಕ ಆಂಜನೇಯನು ಶ್ರೀರಾಮರ ಅಪ್ಪಣೆಯಂತೆ ಸಂಜೀವನ ಪರ್ವತವನ್ನು ತರಲು ನಿಶ್ಚಯಿಸಿ ಗುರುಹಿರಿಯರಿಗೆ ನಮಸ್ಕಾರಮಾಡಿ ರಾಮನಿಗೆ ಅಭಿವಂದಿಸಿ ಜಾಂಬವಂತನನ್ನು ಸ್ಮರಿಸುತ್ತ ಶ್ರೀರಾಮನಿಗೆ ಜಯವಾಗಲಿ! ರಾಮಕಾರ್ಯವು ನಿರ್ವಿಘ್ನವಾಗಿ ನೆರವೇರಲಿ ಎಂದು ಹಾರೈಸುತ್ತ ಆಕಾಶಮಾರ್ಗದಲ್ಲಿ ಹೊರಟು ಸಮುದ್ರವನ್ನು ಹಾರಿ ಪರ್ವತ ಸಮೂಹವನ್ನು ಕಳೆದು ಸುವೇಲಾದ್ರಿಯ ಮಾರ್ಗವಾಗಿ ಸಂಜೀವನ ಪರ್ವತಕ್ಕೆ ಹೋಗುತ್ತಿದ್ದನು. ಇದನ್ನು ತಿಳಿದು ರಾವಣನು ಹೇಗಾದರೂಮಾಡಿ ರಾಮಕಾರ್ಯಕ್ಕೆ ವಿಘ್ನಮಾಡಬೇಕು. ಆಂಜನೇಯನು ತರುವ ಸಂಜೀವನಪರ್ವತವು ರಣರಂಗಕ್ಕೆ ಬಾರದಂತೆ ಅಡ್ಡಿಮಾಡಿ ಹನುಮಂತನನ್ನು ಮಧ್ಯಮಾರ್ಗದಲ್ಲೆ ತಡೆದು ನಿಲ್ಲಿಸಿದರೆ ತನ್ನ ಕಾರ್ಯವು ಜಯವಾಗುವುದೆಂದು ತಿಳಿದು ತನಗೆ ಆಪ್ತನಾದ ಕಾಲನೇಮಿಯ ಬಳಿಗೆ ಬಂದು ಅವನಿಂದ ಸತ್ಕೃತನಾಗಿ ಕುಶಲಪ್ರಶ್ನೆಗಳು ನಡೆದ ತರುವಾಯ ಕಾಲನೇಮಿಯು ಎಲೈ ರಾಕ್ಷಸಾಧಿಪತಿಯೆ! ತ್ರಿಲೋಕವೀರನಾದ ನೀನು ಈ ಸಮರಾತ್ರಿಯಲ್ಲಿ ಪರಿಹೊತ್ತನ್ನೂ ನೋಡದೆ ನೀನೊಬ್ಬನೆ ಇಲ್ಲಿ ಬರಲು ಕಾರಣವೇನು? ಎಂದು ಕೇಳಿದನು. ಆಗ ರಾವಣನು ಎಲೈ ಕಾಲನೇಮಿಯೆ ನೀನು ಮಹಾ ತಂತ್ರಜ್ಞನು, ಧೈರ್ಯಶಾಲಿ, ಬುದ್ಧಿಯಲ್ಲಿ ನಿನ್ನನ್ನು ಮೀರಿಸತಕ್ಕವರು ಯಾರೂ ಇಲ್ಲ ಇಂಥ ನಿನ್ನಿಂದ ನನಗೆ ಒಂದು ಸಹಾಯವಾಗಬೇಕಾಗಿದೆ ಅದನ್ನು ನೀನು ಮಾಡಿಕೊಟ್ಟರೆ ನಾನೂ ನನ್ನ ರಾಜ್ಯವೂ, ನನ್ನ ಕೀರ್ತಿಯೂ ಉಳಿದು ರಾಕ್ಷಸವಂಶದವರಿಗೆ ಶ್ರೇಯಸ್ಸಾಗುವುದು ಹಾಗಿಲ್ಲದೆ ಹೋದರೆ ಸರ್ವನಾಶವುಂಟಾಗಿ ಲೋಕವೇ! ಹಾಳಾಗುವುದು, ಈಗ ನಾನು ಹೇಳುವುದನ್ನು ಚೆನ್ನಾಗಿ ಕೇಳಿ ಅದರಂತೆ ನಡೆಸಿಕೊಡು, ಇಲ್ಲವಾದರೆ ನಿನ್ನ ಪ್ರಾಣಗಳೆ ಉಳಿಯಲಾರವು ಎಂದು ಹೆದರಿಸಿ ಕೇಳೈ ಕಾಲನೇಮಿಯೆ, ನಿನ್ನೆ ನಡೆದ ಯುದ್ಧದಲ್ಲಿ ಲಕ್ಷ್ಮಣನು ನನ್ನ ಬಾಣದಿಂದ ಮೂರ್ಛಾಕ್ರಾಂತನಾಗಿ ರಣರಂಗದಲ್ಲಿ ಬಿದ್ದುಹೋದನು ಅವನನ್ನು ಎಬ್ಬಿಸುವುದಕ್ಕಾಗಿ ಸಂಜೀವನ ಪರ್ವತವನ್ನು ತರುವಂತೆ ಶ್ರೀರಾಮನು ಆಂಜನೇಯನಿಗೆ ಹೇಳಿ ಕಳುಹಿಸಿರುವನು. ಆ ಆಂಜನೇಯನು ಸಂಜೀವನ ಪರ್ವತವನ್ನು ನಿರಾಯಾಸದಿಂದ ಕ್ಷಣಮಾತ್ರದಲ್ಲಿ ತಂದು ಬಿಡುವನು. ನೀನು ಅವನು ಬರುವ ಮಾರ್ಗದಲ್ಲಿ ಚಂದ್ರದ್ರೋಣ ಪರ್ವತದ ಬಳಿಯಲ್ಲಿರುವ ಸರೋವರದ ಹತ್ತಿರ ಒಂದು ಪರ್ಣಶಾಲೆಯನ್ನು ಮಾಡಿಕೊಂಡು ತಪಸ್ಸುಮಾಡುತ್ತಿದ್ದು ಹೇಗಾದರೂ ಮಾಡಿ ನಿನ್ನ ತಂತ್ರದಿಂದ ಅಂಜನೇಯನನ್ನು ಕೊಂದುಬಿಡು ಹಾಗಿಲ್ಲವಾದರೆ ಉಪಾಯಾಂತರದಿಂದ ಅವನನ್ನು

ತಡೆದು ಆ ಸರೋವರವನ್ನು ಹೋಗುವಂತೆಮಾಡು, ಅಲ್ಲಿರುವ ಮೊಸಳೆಯು ಅವನನ್ನು ಕೊಂದುಬಿಡುವುದು, ಇಲ್ಲವಾದರೆ ಸಂಕಟಪಡಿಸಿ ಸುಸ್ತುಮಾಡುವುದು ಅಷ್ಟುಹೊತ್ತಿಗೆ ಬೆಳಗಾಗಿ ಹೋದರೆ ಸಂಜೀವನಪರ್ವತವನ್ನು ತಂದರೂ ಸಾರ್ಥಕವಾಗದೆ ವ್ಯರ್ಥವೆ ಆಗುವುದು. ಬಳಿಕ ಲಕ್ಷ್ಮಣನು ಬದುಕಲಾರನು ಆಮೇಲೆ ನನಗೆ ಜಯವುಂಟಾಗುವುದು ಎಂದು ಹೇಳಿ ಕಾಲನೇಮಿಯು ಮನಃಪೂರ್ವಕವಾಗಿ ಒಪ್ಪದಿದ್ದರೂ ರಾವಣನು ಬಲಾತ್ಕಾರದಿಂದ ಕಾಲನೇಮಿಯನ್ನು ಒಡಂಬಡಿಸಿ ಕಳುಹಿಸಲು ಖೂಳನಾದ ಈ ರಾವಣನ ಕೈಯಿಂದ ಸಾಯುವುದಕ್ಕಿಂತಲೂ, ರಾಮಭಕ್ತನಾದ ಆಂಜನೇಯನ ಮೂಲಕ ಮಡಿಯುವುದೇ ಮೇಲು ಎಂದು ತಿಳಿದು ಕಾಲನೇಮಿಯು ಮಾಯಾರೂಪಿಯಾಗಿ ಮನೆಯನ್ನು ಬಿಟ್ಟುಹೊರಟು ಸರೋವರದ ಬಳಿಗೆ ಬಂದನು.

## ಕಾಲನೇಮಿಯು ಮಾಯಾತಪಸ್ವಿಯಾದುದು.




ಕಾಲನೇಮಿಯು ತನ್ನ ಮಾಯಾಬಲದಿಂದ ಚಂದ್ರದ್ರೋಣ ಪರ್ವತದ ಬಳಿಯಲ್ಲಿರುವ ಸರೋವರದಹತ್ತಿರ ಒಂದು ಆಶ್ರಮವನ್ನು ನಿರ್ಮಿಸಿಕೊಂಡು ತಾನು ಕೃಷ್ಣಾಜಿನ ಕಮಂಡಲುಗಳನ್ನು ವಹಿಸಿ ಜಪಮಾಲೆಯನ್ನು ಹಿಡಿದು ಧ್ಯಾನಾರೂಢನಾಗಿ ಸಿದ್ಧಾಸನದಲ್ಲಿ ಕುಳಿತು ತಪಸ್ಸುಮಾಡುತ್ತಿದ್ದನು, ಅವನ ಬಳಿಯಲ್ಲಿ ಅನೇಕಾನೇಕ ವಟುಗಳು ವೇದಮಂತ್ರಗಳನ್ನು ಪಠಿಸುತ್ತ ಋಷಿಪುತ್ರರಂತೆ ಕಂಗೊಳಿಸುತ್ತಿದ್ದರು. ಆ ಆಶ್ರಮದ ಉಪವನದಲ್ಲಿ ಪುಷ್ಪವಾಟಿಕೆಯೂ ಫಲವೃಕ್ಷಗಳು ನಿಬಿಡವಾಗಿ ಮನೋಹರವಾಗಿದ್ದವು. ಹೀಗೆ ಬಹು ರಮ್ಯವಾಗಿ ಹೃದಯಂಗಮವಾಗಿರುವ ಆಶ್ರಮದಲ್ಲಿ ಕಾಲನೇಮಿಯು ಕಪಟಸನ್ಯಾಸಿಯಾಗಿ ತಪಸ್ಸುಮಾಡುತ್ತಿರುವುದನ್ನು ತಿಳಿಯದೆ ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ಆಂಜನೇಯನು ಓಹೊ! ಇದೇನು ದಾರಿತಪ್ಪಿ ಬಂದಹಾಗಿದೆ ಮೊದಲು ನಾನು ಈ ಮಾರ್ಗವಾಗಿ ಬಂದಾಗ ಇಲ್ಲಿ ಯಾವ ಆಶ್ರಮವೂ ಇರಲಿಲ್ಲ ಈಗ ಇದು ಹೊಸದಾಗಿದೆ ನಾನು ಮಾರ್ಗತಪ್ಪಿ ಬಂದಿರಬಹುದು ಆಗಲಿ! ಈ ಆಶ್ರಮಕ್ಕೆ ಹೋಗಿ ಅಲ್ಲಿರುವ ತಪಸ್ವಿಗಳನ್ನು ಕೇಳಿದರೆ ನಿಜವಾದ ಸಂಗತಿ ತಿಳಿಯುವುದು ಎಂದು ಆ ತಪೋವನಕ್ಕೆಬಂದು ಋಷಿಗೆ ನಮಸ್ಕರಿಸಿ ನಿಂತುಕೊಂಡನು. ಕೂಡಲೆ ಆ ಮಾಯಾತಪಸ್ವಿಯು ಆಂಜನೇಯನನ್ನು ಕುರಿತು ಅಯ್ಯಾ! ನಾವು ತ್ರಿಕಾಲಜ್ಞಾನಿಗಳು ನಮಗೆ ತಿಳಿಯದ ವಿಷಯವೆ ಇಲ್ಲ. ನೀನು ರಾಮಕಾರ್ಯಾರ್ಥವಾಗಿ ಮೂರ್ಛೆಹೊಂದಿ ಬಿದ್ದಿರುವ ಲಕ್ಷ್ಮಣನನ್ನು ಬದುಕಿಸಬೇಕೆಂದು ಸಂಜೀವನಪರ್ವತವನ್ನು ತರುವುದಕ್ಕಾಗಿ ಹೊರಟುಬಂದಿರುವೆ ನಮ್ಮ ಜ್ಞಾನದೃಷ್ಟಿಯಿಂದ ಇದೆಲ್ಲವನ್ನು ನಾವು ತಿಳಿದುಕೊಂಡೆವು ಈದಿನ ಈ ಆಶ್ರಮದಲ್ಲೆ ಇದ್ದು ವಿಶ್ರಮಿಸಿಕೊಂಡು ಬೆಳಿಗ್ಗೆ ಹೊರಡಬಹುದು ಎಂದು ಉಪಚಾರೋಕ್ತಿಗಳನ್ನು ಹೇಳಲು ಹನುಮಂತನು ಈ ದಿನ ಇಲ್ಲಿ ನಿಲ್ಲಲು ಅವಕಾಶವಿಲ್ಲ ಹೊರಟೇತೀರಬೇಕು ನನಗೆ ಬಹಳ ದಾಹವಾಗಿದೆ ಕುಡಿಯುವುದಕ್ಕೆ ನೀರುಕೊಡಿ ಎಂದು ಕೇಳಲು ಅಯ್ಯಾ! ನಮ್ಮ ಕಮಂಡಲದಲ್ಲಿರುವ ಜಲವು ನಿನಗೆ ಸಾಕಾಗಲಾರದು ಆದಕಾರಣ ನೀನು ಈ ಸರೋವರದಲ್ಲಿಳಿದು ನಿನಗೆ ಬೇಕಾದಷ್ಟು ನೀರನ್ನು ಕುಡಿದು ದಾಹವನ್ನು ತೀರಿಸಿಕೊಳ್ಳಬಹುದೆಂದು ಹೇಳಿ ಕಳುಹಿಸಲು, ಆಗ ಆಂಜನೇಯನು ತನ್ನ ಆತುರದಿಂದ ಬೇಗನೆ

ದಾಹವನ್ನು ತೀರಿಸಿಕೊಂಡು ಹೊರಡಬೇಕೆಂಬ ಯೋಚನೆಯಿಂದ ಆ ಸರೋವರದ ಮಧ್ಯ ಭಾಗಕ್ಕೆ ಹೋಗಿ ನೀರು ಕುಡಿಯುತ್ತಿರಲು ಶಾಪವಶದಿಂದ ಮೊಸಳೆಯ ರೂಪವನ್ನು ಹೊಂದಿ ಆ ಕೊಳದಲ್ಲಿದ್ದ ಅಪ್ಸರಸ್ತ್ರೀಯು ಆಂಜನೇಯನ ಕಾಲನ್ನು ಬಲವಾಗಿ ಹಿಡಿದುಕಚ್ಚಲು ಧೀರ ನಾದ ಆಂಜನೇಯನು ಮೊಸಳೆಯ ಮಹಿಮೆಯನ್ನು ತಿಳಿದು ಅದನ್ನು ಸಂಹರಿಸಬೇಕೆಂದು ಬಹು ಸೂಕ್ಷ್ಮರೂಪದಿಂದ ಅದರ ಉದರವನ್ನು ಹೊಕ್ಕು ದೊಡ್ಡದಾಗಿ ಬೆಳೆದು ಹೊಟ್ಟೆಯನ್ನು ಸೀಳಿ ಕೊಂಡು ಹೊರಕ್ಕೆ ಬಂದನು. ಆಗ ಮೊಸಳೆಯ ಆಕಾರವನ್ನು ಪಡೆದಿದ್ದ ಅಪ್ಸರಸ್ತ್ರೀಯು ತನ್ನ ನಿಜಾಕಾರವನ್ನು ವಹಿಸಿ ಆನಂದಭರಿತಳಾಗಿ ಆಂಜನೇಯನಿಗೆ ನಮಸ್ಕರಿಸಿ ತನ್ನ ವೃತ್ತಾಂ ತವನ್ನು ಆವನೊಡನೆ ಹೀಗೆ ಹೇಳತೊಡಗಿದಳು.

## ಧ್ಯಾನಮಾಲಿನಿಯ ವೃತ್ತಾಂತ.




ಆಗ ಆಶ್ಚರ್ಯಭರಿತನಾದ ಆಂಜನೇಯನು ಅಮ್ಮಾ! ನೀನು ಯಾರು ಮೊದಲು ಮೊಸ ಳೆಯಾ ಗಿದ್ದು ಈಗ ಹೆಂಗಸಾಗಲು ಕಾರಣವೇನು? ಈ ಕೊಳ ದಲ್ಲಿ ಏಕೆ ವಾಸಮಾಡಿಕೊಂಡಿದ್ದೆ ನಿನ್ನ ವೃತ್ತಾಂತ ವೆಲ್ಲವನ್ನು ನನಗೆ ವಿಶದವಾಗಿ ಹೇಳಬೇಕೆಂದು ಕೇಳಲು ಸಂತೋಷಭರಿತಳಾಗಿ ಅಪ್ಸರಸ್ತ್ರೀಯು ಆಂಜನೇಯನಿಗೆ ನಮಸ್ಕಾರಮಾಡಿ ಎಲೈ ಮಹಾನು ಭಾವನೆ! ನಿನ್ನಿಂದ ನನ್ನ ಶಾಪವಿಮೋಚನೆಯಾಯಿತು ನನಗೆ ನೀನು ದೇವರೇಸರಿ ನಿನ್ನಲ್ಲಿ ನಾನು ಸುಳ್ಳು ಹೇಳಲಾರೆ! ನಿಜವಾದ ನನ್ನ ಚರಿತ್ರೆಯನ್ನು ಹೇಳು ವೆನು ಕೇಳು. ಪೂರ್ವದಲ್ಲಿ ಸ್ವರ್ಗವಾಸಿಯಾಗಿದ್ದ ಧ್ಯಾನಮಾಲಿನಿಯೆಂಬ ಅಪ್ಸರಕನ್ನಿಕೆಯೆ ನಾನು, ಒಂದು ದಿನ ಜಲಕ್ರೀಡೆಗಾಗಿ ಸರೋವರಕ್ಕೆ ಬಂದಿದ್ದ ಕಾಲದಲ್ಲಿ ದುಷ್ಟನಾದ ರಾವಣನು ನನ್ನನ್ನು ಕಂಡು ಮೋಹಿತನಾಗಿ ಬಲಾತ್ಕಾರದಿಂದ ನನ್ನೊಡನೆ ರಮಿಸಿದನು. ಆಗ ಅತಿಕಾಯನೆಂಬ ಮಗನು ಹುಟ್ಟಲು ರಾವಣನು ಅವನನ್ನು ಎತ್ತಿಕೊಂಡು ಲಂಕೆಗೆ ಹೊರಟುಹೋದನು. ಬಳಿಕ ನಾನು ನನ್ನ ಮನೆಗೆ ಹೋಗಲು ನನ್ನ ಪತಿಯು ಈ ವಿಚಾರವನ್ನು ತಿಳಿದು ನಿನ್ನನ್ನು ಬಲಾತ್ಕಾರದಿಂದ ವಶಪಡಿಸಿಕೊಂಡು ಕೆಡಿಸಿದ ರಾವಣನು ಪತ್ನೀಪುತ್ರ ಸಹಿತನಾಗಿ ನಾಶವಾಗಲಿ ಪರಪುರುಷನೊಡನೆ ಕೂಡಿದ್ದ ನೀನು ಮೊಸಳೆಯಾಗಿ ಹೋಗು ಎಂದು ಶಾಪವನ್ನು ಕೊಟ್ಟನು. ಆಗ ಆರ್ತಳಾದ ನಾನು ಪತಿಯನ್ನು ಬೇಡಿಕೊಂಡು ಮನ್ನಿಸಬೇಕೆಂದು ಪ್ರಾರ್ಥಿಸಲು ದಯಾಶಾಲಿಯಾದ ಆತನು ರಾಮಕಾರ್ಯಾರ್ಥ ವಾಗಿ ಬಂದ ಆಂಜನೇಯನಿಂದ ನಿನಗೆ ಶಾಪವಿಮೋಚನೆಯಾಗಿ ಸುಖವುಂಟಾಗುವುದು ಎಂದು ಹೇಳಿದನು. ಅಂದಿನಿಂದ ಇದುವರೆಗೂ ನಾನು ಮೊಸಳೆಯಾಗಿ ನಿನ್ನ ಬರವನ್ನು ಹಾರೈಸುತ್ತಿದ್ದೆನು ಈದಿನನಿನ್ನ ದರ್ಶನದಿಂದ ನನ್ನ ಶಾಪ ಪರಿಹಾರವಾಯಿತು ಇಲ್ಲಿ ತಪಸ್ಸುಮಾಡುತ್ತಿರುವವನು ನಿಜವಾದ ಋಷಿಯಲ್ಲ ಮಾಯಾವಿಯಾದ ಕಾಲನೇಮಿ ಎಂಬ ರಾಕ್ಷಸನು ಇವನನ್ನು ನಂಬಬೇಡ ನಿನ್ನ ಸಾಹಸದಿಂದ ಇವನನ್ನು ಕೊಂದು ಮುಂದಿನ ಕೆಲಸವನ್ನು ಮಾಡಿಕೊ! ನಾನು ಹೋಗಿ ಬರುತ್ತೇನೆ ನಿನಗೆ ಮಂಗಳವಾಗಲಿ! ರಾಮನಿಗೆ ಜಯವಾಗಲಿ! ಸೀತೆಯ ಸಂತೋಷ ಹೆಚ್ಚಲಿ! ಲೋಕಕ್ಕೆಲ್ಲ ಮಂಗಳವಾಗಲಿ! ದೇವತೆಗಳಿಗೆ ಸಂತೋಷಗಲಿ! ರಾವಣನ ವಂಶವು ನಾಶವಾಗಲಿ ಎಂದು ಹೇಳಿ ತಾನು ಸಂತೋಷದಿಂದ ದೇವಲೋಕಕ್ಕೆ ಹೊರಟುಹೋದಳು.

## ಕಾಲನೇಮಿಯು ಸಂಹಾರ.

ಹೀಗೆ ಧ್ಯಾನಮಾಲಿನಿಯಿಂದ ನಿಜವಾದ ವೃತ್ತಾಂತವನ್ನು ತಿಳಿದು ಆಂಜನೇಯನು ರೋಷಭೀಷಣನಾಗಿ ಹಿಂದಿರುಗಿ ಋಷಿಯ ಆಶ್ರಮಕ್ಕೆ ಬಂದು ಅವನ ಕಪಟೋಪಾಯಗಳಿಗೆ ಭ್ರಾಂತ



ನಾಗವೆ ಎಲೈ ಗುರುವೆ? ಇಗೋ! ನೀನು ಮಾಡುತ್ತಿರುವ ಕಪಟತಪಸ್ಸಿಗೆ ಇದೆ ಗುರುದಕ್ಷಿಣೆ ಇದನ್ನು ತೆಗೆದುಕೊ! ಎಂದು ಮುಷ್ಟಿಘಾತದಿಂದ ಅವನ ಎದೆಯನ್ನು ಹೊಡೆಯಲು ಕಾಲನೇಮಿಯು ರಕ್ತವನ್ನು ಕಾರುತ್ತ ಕೆಳಕ್ಕೆ ಬಿದ್ದು ತನ್ನ ಮಾಯಾಬಲದಿಂದ ಸುಗ್ರೀವನವೇಷವನ್ನು ತಾಳಿ ಬಂದು ಎದುರಿಗೆ ನಿಂತು ಎಲೈ ಆಂಜನೇಯನೆ ಲಕ್ಷ್ಮಣನು ಬದುಕಿದನು ನೀನು ಸಂಜೀವನಾದ್ರಿಯನ್ನು ತರಬೇಡ ನನ್ನೊಡನೆ ಹೊರಟುಬಾ! ಹೋಗೋಣ ಎಂದು ಹೇಳಲು ಅದನ್ನು ನಂಬದೆ ಹನುಮಂತನು ರುದ್ರಾಕಾರನಾಗಿ ಆ ಕಾಲನೇಮಿಯನ್ನು ತುಳಿದು ಕೊಂದನು. ಕೂಡಲೆ ಆಶ್ರಮವು ಮಾಯವಾಗಿ ಅಲ್ಲಿ ಯಾರೂ ಇಲ್ಲದೆ ಪೂರ್ವದಲ್ಲಿನಂತೆ ಬರಿಯ ಅರಣ್ಯವಾಗಿ ಕಾಣುತ್ತಿದ್ದಿತು.

## ಆಂಜನೇಯನು ಸಂಜೀವನ ಪರ್ವತವನ್ನು ತಂದುದು.

ಆಬಳಿಕ ಆಂಜನೇಯನು ಅತ್ಯಂತ ಹರ್ಷದಿಂದ ಹೊರಟು ಚಂದ್ರದ್ರೋಣ ಪರ್ವತವನ್ನು ದಾಟಿ ಮೇರು ಮಾಲ್ಯವಂತಗಳನ್ನು ಕಳೆದು ಸಂಜೀವಾದ್ರಿಯಬಳಿಗೆ ಹೋಗಿ ಎಲ್ಲಿ ಕಾಲವಿಳಂಬವಾಗುವುದೊ! ಎಂಬ ಭಯದಿಂದ ತನ್ನ ಬಾಲಕ್ಕೆ ಅಪ್ಪಣೆಮಾಡಿ ಸಂಜೀವನಪರ್ವತವನ್ನು ಅಲ್ಲಾಡಿಸಿ ಕಿತ್ತು ತನ್ನ ಹೆಗಲಮೇಲೆ ಇಡುತ್ತಿರಲು ಅಲ್ಲಿದ್ದ ದೇವತೆಗಳೂ ಅಪ್ಸರರೂ ಒಟ್ಟಾಗಿ ಯುದ್ಧಕ್ಕೆ ಬಂದರು ಆಗ ಹನುಮನು ತನ್ನ ಶಕ್ತಿ ಸಾಹಸಗಳಿಂದ ಅವರನ್ನು ಹೊಡೆದೋಡಿಸಿ ರಾಮಕಾರ್ಯಾರ್ಥವಾಗಿ ತೆಗೆದುಕೊಂಡು ಹೋಗುತ್ತಿರುವ ವೀರನಾದ ಆಂಜನೇಯನಿಗೆ ಅಡ್ಡಿಯಾಗಿ ನೀವು ನಿಲ್ಲಬೇಡಿ ಹೊರಟುಹೋಗಿ ಎಂದು ಗರ್ಜಿಸುತ್ತ ಪುನಃ ಸಂಜೀವನ ಪರ್ವತವನ್ನು ಎತ್ತುವುದಕ್ಕೆ ಹೋಗಲು ಆ ದೇವತೆಗಳು ಭಯಭಕ್ತಿಯಿಂದ ಆಂಜನೇಯನಿಗೆ ನಮಸ್ಕರಿಸಿ ಎಲೈ ಮಾರುತಿಯೇ! ರಾಮದೂತನಾದ ನಿನಗೆ ನಾವು ಅಡ್ಡಿಮಾಡಲಾರೆವು ಆದರೆ ರಾಮಕಾರ್ಯವಾದಮೇಲೆ ನಮಗೆ ಆಶ್ರಯಭೂತವಾಗಿರುವ ಈ ಪರ್ವತವನ್ನು ಮೊದಲಿದ್ದಂತೆ ಇಲ್ಲಿಯೆ ನೆಲೆಗೊಳಿಸಿ ನಮ್ಮನ್ನು ಕಾಪಾಡಬೇಕೆಂಬದಾಗಿ ಬೇಡಿಕೊಂಡರು. ದಯಾಳುವಾದ ಆಂಜನೇಯನು ಹಾಗೆಯೆ ಆಗಲಿ! ನಿಮ್ಮ ಇಷ್ಟಾನುಸಾರ ನಡೆಸುವೆನು ಹೆದರಬೇಡಿ ಮೂರ್ಛೆ ಹೋಗಿರುವ ಲಕ್ಷ್ಮಣನು ಎದ್ದಮೇಲೆ ಈ ಸಂಜೀವನ ಪರ್ವತವನ್ನು ಇಲ್ಲೆ ತಂದಿಡುತ್ತೇನೆ ಸಮಾಧಾನಚಿತ್ತರಾಗಿ ಸಂತೋಷದಿಂದಿರಿ ಎಂದು ಅವರನ್ನು ಒಪ್ಪಿಸಿ ತಾನು ನಿರ್ವಿಘ್ನವಾಗಿ ಆ ಪರ್ವತವನ್ನು ಹೊತ್ತುಕೊಂಡು ವಾಯುವೇಗದಿಂದ ರಣಭೂಮಿಯನ್ನು ಕುರಿತು ಪ್ರಯಾಣಮಾಡಿದನು. ಹೀಗೆ ಬರುತ್ತಿರುವಾಗ ತನ್ನ ವೇಗದೊಡನೆ ಸಂಜೀವನ ಮೂಲಿಕೆಗಳ ಕಾಂತಿಯೂ ಸೇರಿ ಏಕುಕಾಲದಲ್ಲಿ ಸೂರ್ಯೋದಯವಾಗುವಂತೆ ಪ್ರಕಾಶವು ಹೆಚ್ಚಿತು ಇದನ್ನು ಕಂಡು ರಾಮನ ಭ್ರಾಂತನಾಗಿ ಆಹಾ! ಲಕ್ಷ್ಮಣನು ಇನ್ನು ಇಳಲೆ ಇಲ್ಲ! ಸಂಜೀವನ ಪರ್ವತವನ್ನು ತರುವು

ದಕ್ಕೆ ಹೋದ ಆಂಜನೇಯನು ಇನ್ನೂ ಬರಲಿಲ್ಲ ಹಾಗಿದ್ದರೂ ಸೂರ್ಯನು ಧೈರ್ಯದಿಂದ ಉದಯಿಸುತ್ತಿರುವನು ಆಗಲಿ ಇವನ ಗರ್ವವನ್ನು ಮುರಿಯುವೆನು ? ಎಲೈ ಸುಗ್ರೀವನೇ ! ನನ್ನ ಧನುರ್ಬಾಣಗಳೆಲ್ಲಿ ತೆಗೆದುಕೊಂಡು ಬಾ ಎಂದು ಆರ್ಭಟಿಸಲು ತ್ರಿಕಾಲಜ್ಞಾನಿಯಾದ ಜಾಂಬವಂತನು ಎದ್ದು ನಿಂತು ಸ್ವಾಮಿ ! ಈಗ ಇನ್ನೂ ರಾತ್ರಿಯಲ್ಲಿ ಮೂರುಜಾವ ಮಾತ್ರ ಕಳೆದಿದೆ ಸೂರ್ಯೋದಯವಾಗಿಲ್ಲ ತಾವು ಭ್ರಾಂತರಾಗಬೇಡಿ ನಿಮ್ಮ ಭಕ್ತನಾದ ಆಂಜನೇಯನು ತರುತ್ತಿರುವ ಸಂಜೀವನಾದ್ರಿಯ ಗಿಡಮೂಲಿಕೆಗಳ ಪ್ರಕಾಶವು ಹೊರಹೊರಟು ಹಬ್ಬಿಕೊಂಡು ಸೂರ್ಯೋದಯವಾದಂತೆ ಕಾಣುತ್ತಿದೆ ಸೈರಣೆಯನ್ನು ತಂದುಕೊಂಡು ಸ್ವಲ್ಪಹೊತ್ತು ಶಾಂತರಾಗಿದ್ದರೆ ಕ್ಷಣಮಾತ್ರದಲ್ಲಿ ಆಂಜನೇಯನು ಸಂಜೀವನ ಪರ್ವತವನ್ನು ತಂದು ತಮ್ಮೆದುರಿಗಿಡುವನು ಎಂದು ಹೇಳುತ್ತಿರುವಷ್ಟರಲ್ಲಿ ಹನುಮನು ಹಾರಿಬಂದು ಸಂಜೀವನಾದ್ರಿಯನ್ನು ರಾಮನ ಬಳಿಯಲ್ಲಿರಿಸಿ ಕೈಮುಗಿದು ಎಲೈ ಸ್ವಾಮಿಯೆ ! ಕಪಟಿಯಾದ ರಾವಣನು ಮಾರ್ಗಮಧ್ಯದಲ್ಲಿ ಮಾಡಿದ ತಂತ್ರಗಳನ್ನು ಕಳೆದು ನಿರ್ವಿಘ್ನವಾಗಿ ಸಂಜೀವನಪರ್ವತವನ್ನು ತರುವುದು ಸ್ವಲ್ಪ ಸಾವಕಾಶವಾಯಿತು ಕ್ಷಮಿಸಬೇಕು ಎಂದು ನಮಸ್ಕರಿಸಿದನು. ರಾಮನು ಸಂತೋಷಭರಿತನಾಗಿ ಹನುಮನನ್ನು ಹರಸಿ ಆಲಿಂಗಿಸಿಕೊಂಡು ಸುಮ್ಮನಾದನು.

## ಭರತನು ದುಃಸ್ವಪ್ನವನ್ನು ಕಂಡು ಹೆದರಿದುದು.

ಇತ್ತ ಅಯೋಧ್ಯಾಪಟ್ಟಣದಲ್ಲಿ ರಾಮಧ್ಯಾನನಿರತನಾಗಿ ಸುಖದಿಂದಿರುತ್ತಿದ್ದ ಭರತನಿಗೆ ಲಕ್ಷ್ಮಣನು ಯುದ್ಧರಂಗದಲ್ಲಿ ಮೂರ್ಛಾಕ್ರಾಂತನಾಗಿಬಿದ್ದ ರಾತ್ರಿಯಲ್ಲಿ ಭಯಂಕರವಾದ ದುಸ್ವಪ್ನವುಂಟಾಗಿ ಗಾಬರಿಗೊಂಡು ನಿದ್ರೆಯಿಂದೆಚ್ಚತ್ತು ಹಾ ! ಇದೇನು ವಿಚಿತ್ರ ರಾಮನು ಅರಣ್ಯಕ್ಕೆ ಹೋದಮೊದಲು ಇದುವರೆಗೂ ಯಾವ ವಿಧವಾದ ದುಸ್ವಪ್ನವನ್ನೂ ಕಾಣದಿದ್ದವನಿಗೆ ಈ ದಿನ ಸರಿಹೊತ್ತಿನಲ್ಲಿ ಹೀಗೆ ಭಯಂಕರವಾದ ಕನಸುಕಂಡು ಎಚ್ಚರವಾಗಲು ಕಾರಣವೇನು ? ಅರಣ್ಯವಾಸದಲ್ಲಿರುವ ರಾಮಲಕ್ಷ್ಮಣರು ಹೇಗಿರುವರೊ ! ಸೀತೆ ಏನಾದಳೊ ! ಸರ್ವರಿಗೂ ಸೌಖ್ಯವಾಗಿರುವುದೊ ! ಇಲ್ಲವೊ ! ಎಂದು ಚಿಂತಿಸುತ್ತ ಕಳವಳಗೊಂಡು ಅರಮನೆಯಲ್ಲಿರಲಾರದೆ ಧನುರ್ಬಾಣಗಳನ್ನು ತೆಗೆದುಕೊಂಡು ಹೊರಕ್ಕೆ ಬಂದು ಆಕಾಶವನ್ನು ನೋಡುತ್ತಿರಲು ಅಂತರಿಕ್ಷದಲ್ಲಿ ಅಸಾಧ್ಯವಾದ ಸಂಜೀವನ ಪರ್ವತವನ್ನು ಹೊತ್ತುಕೊಂಡು ಬರುತ್ತಿರುವ ಆಂಜನೇಯನು ಇವನ ಕಣ್ಣಿಗೆ ಕಾಣಿಸಿದನು. ಆಗ ಭರತನು ಓಹೋ ! ಎಂದಿಗೂ ಇಲ್ಲದ ಈ ಭೂತವು ನನಗೆ ಕಾಣಿಸಿದುದು ಈ ಕಾರಣದಿಂದಲೆ ಇರಬಹುದು. ಇದನ್ನು ಈಕ್ಷಣವೆ ಪರಿಹರಿಸುವೆನೆಂದು ಹೆದೆಯನ್ನು ಮೀಟಿ ಬಾಣವನ್ನು ಹೂಡಲು ಧರ್ಮದೇವತೆಯಾದ ಆಕಾಶವಾಣಿಯು ಭರತನನ್ನು ಕುರಿತು "ಎಲೈ ಭರತಪುತ್ರನೆ! ದುಡುಕಬೇಡ ಇವನು ಧೀರನಾದ ಅಂಜನಾಪುತ್ರನು ಶ್ರೀರಾಮಭಕ್ತರಲ್ಲಿ ಅಗ್ರಗಣ್ಯನು ಇವನಮೇಲೆ ಕೈಮಾಡಬೇಡ" ಎಂದು ಹೇಳಲು ಭರತನು ಭ್ರಾಂತನಾಗಿ ಸುಮ್ಮನೆ ನಿಂತುಕೊಂಡನು. ಆಗ ಆಂಜನೇಯನು ಭರತನನ್ನು ನೋಡಿ ರಾಮನಿಗೆ ಸದೃಶನಾದ ಸತ್ಪುರುಷನಾಗಿ ಕಾಣುತ್ತಾನೆ ಎಂದು ಸಂತೋಷದಿಂದ ಅವನಿಗೆ ನಮಸ್ಕರಿಸಿ ಸಮುದ್ರತೀರದಲ್ಲಿ ತನ್ನನ್ನು ಎದುರಿಸಿದ ಮಾಲ್ಯವಂತಾದಿ ರಾಕ್ಷಸರನ್ನು ಹಿಕ್ಕಲಿಕ್ಕಿ ಕ್ಷಣಮಾತ್ರದಲ್ಲಿ ನಿರಾಯಾಸದಿಂದ ಯುದ್ಧಭೂಮಿಯನ್ನು ಸೇರಿ ಶ್ರೀರಾಮನನ್ನು ಕಂಡನು. ಶ್ರೀರಾಮನು ಸಂತೋಷಭರಿತನಾಗಿ ತನ್ನ ಭಕ್ತರಲ್ಲಿ ಅಗ್ರಗಣ್ಯನಾಗಿ ಮಹಾಶೂರನಾಗಿರುವ ಆಂಜನೇಯನಿಗೆ ಮುಂದಿನ ಕಲ್ಪದ ಬ್ರಹ್ಮಪಟ್ಟವು ಲಭಿಸಲಿ ! ಎಂದು ಆಶೀರ್ವದಿಸಿ ತೃಪ್ತನಾದನು.

## ಲಕ್ಷ್ಮಣನು ಮೂರ್ಛೆ ತಿಳಿದೇಳುವುದು.

ಹೀಗೆ ಹನುಮಂತನು ಸಂಜೀವಪರ್ವತವನ್ನು ತಂದಮೇಲೆ ವೈದ್ಯಶ್ರೇಷ್ಠನಾದ ಸುಷೇಣನು ರಾಮನಿಗೆ ನಮಸ್ಕರಿಸಿ ಆತನ ಅಪ್ಪಣೆಯನ್ನು ಪಡೆದು ಇನ್ನು ಅರ್ಧಮುಹೂರ್ತದೊಳಗಾಗಿ ಲಕ್ಷ್ಮಣನನ್ನು ಎಬ್ಬಿಸಿ ಮೊದಲಿಗಿಂತಲೂ ಇಮ್ಮಡಿಯಾದ ಪರಾಕ್ರಮವುಳ್ಳ ಸಿಂಹದಂತೆ ಮಾಡುವೆನು ಎಂದು ಸಮಾಧಾನಮಾಡಿ ತನಗೆ ಬೇಕಾದ ಜೀವಮೂಲಿಕೆಗಳನ್ನು ಜ್ಯೋತಿರ್ಧಾತುಗಳನ್ನು ಹುಡುಕಿತಂದು ಮೊದಲು ವಿಶಲ್ಯಕರಣಿಯ ಸಾರವನ್ನು ಗಾಯಗಳಿಗೆ ಲೇಪಿಸಿ ಸೌವರ್ಣಕರಣಿಯಿಂದ ತೇಜಸ್ಸನ್ನು ತುಂಬಿ ಅಮೃತಕರಣಿಯರಸವನ್ನು ಆಘ್ರಾಣಿಸುವಂತೆ ಮಾಡಿ ಸಂಜೀವಕರಣಿಯನ್ನು ಅರೆದು ಕುಡಿಸಿ ಅರಗಳಿಗೆಯಹೊತ್ತು ಗಾಳಿಯನ್ನು ಬೀಸುತ್ತ ಶರೀರದಲ್ಲಿ ಶಾಖವು ಹರಡಿಕೊಳ್ಳುವಂತೆ ತನ್ನ ಉಛ್ವಾಸದಿಂದ ಕಿವಿಗಳನ್ನು ಊದಿದನು. ತಕ್ಷಣವೆ ಲಕ್ಷ್ಮಣನು ಪ್ರಜ್ಞಾವಂತನಾಗಿ ಕಣ್ಣುಗಳನ್ನು ತೆರೆದು ಸುತ್ತಲೂ ನೋಡಿ ಮೈಮುರಿದುಕೊಂಡೆದ್ದು ಮಹಾ ತೇಜಸ್ವಿಯಾಗಿ ಸುಷೇಣ ಸುಗ್ರೀವ ಜಾಂಬವಂತರನ್ನು ಆಲಿಂಗಿಸಿಕೊಂಡು ಹನುಮಂತನನ್ನು ಕೊಂಡಾಡಿ ನಸುನಗುತ್ತ ರಾಮನಬಳಿಗೆ ಬಂದು ನಮಸ್ಕರಿಸಿ ನಿಂತುಕೊಂಡನು. ಆಗ ಶ್ರೀರಾಮನಿಗೆ ಉಂಟಾದ ಆನಂದಕ್ಕೆ ಪಾರವೇ ಇಲ್ಲ ಕಪಿಗಳ ಸಂತೋಷಕ್ಕೆ ನೆಲೆಯಿಲ್ಲ ಹನುಮಂತನ ಉತ್ಸಾಹಕ್ಕೆ ಕಡೆಯಿಲ್ಲ ರಾವಣನಿಗೆ ಜಯವಿಲ್ಲ ರಾಕ್ಷಸರಿಗೆ ಉಳಿವಿಲ್ಲ ರಾಮನಿಗೆ ಹಗೆಯೆ ಇಲ್ಲ ಎಂದು ಸೂಚಿಸುವಂತೆ ಅರುಣೋದಯವಾಗಲು ಸರ್ವರೂ ಸಂತೋಷಭರಿತರಾದರು. ಕೂಡಲೆ ಹನುಮಂತನು ತಾನು ಸಂಜೀವನಪರ್ವತವನ್ನು ತರುವಾಗ ದೇವತೆಗಳಿಗೆ ಮಾತು ಕೊಟ್ಟಿದ್ದಂತೆ ಸಂಜೀವನಪರ್ವತವನ್ನು ಇದ್ದ ಸ್ಥಳದಲ್ಲಿಯೆ ಇಡುವುದಕ್ಕಾಗಿ ಹೋಗುತ್ತಿರಲು ರಾವಣನು ತನ್ನ ಕಡೆಯ ಕ್ರೂರರಾದ ಸ್ಥೂಲಜಂಘ ಮಹಾಘನು ಶಂಖವರ್ಣ ಕಾಲಜಂಘ ಮಹಾವೃಷ ಮೊದಲಾದ ಅನೇಕ ರಾಕ್ಷಸರನ್ನು ಕರೆದು ಇಗೋ ಹನುಮಂತನು ಸಂಜೀವನಪರ್ವತವನ್ನು ಹೊತ್ತುಕೊಂಡು ಕ್ಷೀರಸಾಗರದ ಮಾರ್ಗವಾಗಿ ಹೋಗುತ್ತಿರುವನು. ನೀವು ಅಲ್ಲಿಗೆ ಹೋಗಿ ಅವನನ್ನು ಕೊಂದು ಸಮುದ್ರಕ್ಕೆ ಎಸೆದು ಸಂಜೀವನಾದ್ರಿಯನ್ನು ಸಮುದ್ರದಲ್ಲಿ ಮುಳುಗಿಸಿ ಹೊರಟುಬನ್ನಿ ಎಂದು ಹೇಳಲು ಅವರು ಅಲ್ಲಿಂದ ಹೊರಟು ವಾಯುವೇಗದಿಂದ ಓಡಿಬಂದು ಆಂಜನೇಯನನ್ನು ಅಡ್ಡಗಟ್ಟಿ ಜಗಳಕ್ಕೆ ನಿಂತರು. ಶೂರನಾದ ಆಂಜನೇಯನು ಅವರನ್ನು ಲಕ್ಷ್ಯಮಾಡದೆ ಕ್ಷಣಮಾತ್ರದಲ್ಲಿ ತನ್ನ ಬಾಲಕ್ಕೆ ಆಜ್ಞಾಪಿಸಿ ಎಲ್ಲರನ್ನೂ ಒಟ್ಟಿಗೆ ಒಂದು ಹೊರೆಯಾಗಿ ಬಿಗಿದುಕಟ್ಟಿ ಮೇಲಕ್ಕೆತ್ತಿ ಗಿರಗಿರನೆ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಹೊಡೆದು ಸತ್ತುಬಿದ್ದಿದ್ದ ರಾಕ್ಷಸರನ್ನು ಸಮುದ್ರಕ್ಕೆಸೆದು ತಾನು ನಿರಾಯಾಸದಿಂದ ಹೋಗಿ ಸೂರ್ಯೋದಯವಾಗುವುದಕ್ಕೆ ಮೊದಲೆ ಸಂಜೀವನಪರ್ವತವನ್ನು ಅದರ ಸ್ಥಾನದಲ್ಲಿ ನೆಲೆಗೊಳಿಸಿ ಸಂತೋಷಭರಿತನಾಗಿ ಅಲ್ಲಿಂದ ಹೊರಟು ಶ್ರೀರಾಮನಬಳಿಗೆ ಬಂದು ನಮಸ್ಕರಿಸಿದನು. ಅಷ್ಟುಹೊತ್ತಿಗೆ ಜಗಚ್ಚಕ್ಷುವಾದ ಸೂರ್ಯನು ಸೀತೆಯ ದುಃಖವು ಕೊನೆಗಂಡಿತು ರಾಮನ ಕಷ್ಟವು ಪರಿಹಾರವಾಯಿತು ಲೋಕಕ್ಕೆ ಮಂಗಳವುಂಟಾಗಿ ಸತ್ಯವು ನೆಲೆಗೊಂಡಿತು ಎಂದು ಎಚ್ಚರಿಸುವಂತೆ ಪೂರ್ವಾದ್ರಿಯ ಶಿಖರದಲ್ಲಿ ಪೂರ್ಣಪ್ರಕಾಶನಾಗಿ ಹೊಳೆಯುತ್ತಿದ್ದನು.

## ರಾವಣನಿಗೆ ಶುಕ್ರಾಚಾರ್ಯರ ಉಪದೇಶ.

ಇತ್ತ ರಾವಣನು ತನ್ನ ತಂತ್ರಗಳೊಂದೂ ನಡೆಯದೆ ತಾನು ಯುದ್ಧಕ್ಕೆ ಕಳುಹಿಸಿದ ರಾಕ್ಷಸರೊಬ್ಬರೂ ಹಿಂದಿರುಗಿಬಾರದೆ ಆಂಜನೇಯನ ಪರಾಕ್ರಮದಿಂದ ಲಕ್ಷ್ಮಣನು ಬದುಕಿಕೊಂಡು ರಾಮಸೇನೆಯಲ್ಲಿ ಆನಂದಮಯವಾಗಿರುವುದನ್ನು ಕಂಡು ತನಗೆ ಕಾಲಕ್ಕೆ ತಕ್ಕಂತೆ ಮಂತ್ರಾಲೋಚನೆಯನ್ನು ಹೇಳತಕ್ಕವರೇ ಇಲ್ಲವಾದಕಾರಣ ಬಹಳ ಚಿಂತಿಸುತ್ತಿ[illegible]

ಕಡೆಗೆ ಧೈರ್ಯವನ್ನು ತಂದುಕೊಂಡು ತಮ್ಮ ಗುರುವಾದ ಶುಕ್ರಾಚಾರ್ಯರಬಳಿಗೆ ಹೋಗಿ ತನ್ನ ಕಷ್ಟವನ್ನೆಲ್ಲ ಹೇಳಿಕೊಂಡು ನಮಸ್ಕರಿಸಿ ಎಲೈ ಗುರುವರ್ಯನೆ! ನನಗೆ ಈಗ ಪ್ರಾಪ್ತವಾಗಿರುವ ಈ ನರವಾನರ ಶತ್ರುಗಳನ್ನು ನಿಗ್ರಹಿಸುವುದಕ್ಕೆ ತಕ್ಕ ಉಪಾಯವನ್ನು ಹೇಳಿಕೊಟ್ಟು ನನ್ನನ್ನು ಕಾಪಾಡಬೇಕು? ಶಿಷ್ಯರಿಗೆ ಗುರುವಲ್ಲದೆ ಅನ್ಯರಾರು? ನಿನ್ನನ್ನು ಶರಣುಹೊಂದಿ ಬಂದಿರುವೆನು ಯಾವುದಾದರೂ ಒಂದು ಉಪಾಯವನ್ನು ಹೇಳಿ ನನ್ನನ್ನು ಉದ್ಧರಿಸು ಎಂದು ಬೇಡಿಕೊಳ್ಳಲು ಶುಕ್ರಾಚಾರ್ಯರು ಎಲೈ ಲಂಕೇಶ್ವರನೆ! ನೀನು ತಿಳಿವಳಿಕೆಯುಳ್ಳವನೆ ಸರಿ ಆದರೂ ನಿನಗೆ ಬಹುಜನ ಸತ್ಪುರುಷರ ಶಾಪದಿಂದ ಅಜ್ಞಾನವುಂಟಾಗಿ ಅಹಂಕಾರ ಹೆಚ್ಚಿದೆ ಈ ವಾನರರನ್ನೂ ಮನುಷ್ಯರನ್ನೂ ಗೆಲ್ಲಲು ನಿನ್ನಿಂದಾಗದು ಆದರೂ ಒಂದು ಉಪಾಯವನ್ನು ಹೇಳುವೆನು ಕೇಳು. ಈಗ ನಾನು ಹೇಳಿಕೊಡುವ ಮಂತ್ರವನ್ನು ಲಕ್ಷೋಪಲಕ್ಷವಾಗಿ ಜಪಿಸಿ ಪಾತಾಳಹೋಮವನ್ನು ಮಾಡಿದರೆ ನಿನ್ನನ್ನು ಜಯಿಸತಕ್ಕವರೇ ಇಲ್ಲ ಆದರೆ ಅದು ನಿರ್ವಿಘ್ನವಾಗಿ ನಡೆದು ನೀನು ಇದನ್ನು ಸಾಂಗವಾಗಿ ಮಾಡಬೇಕು ಹಾಗಿಲ್ಲವಾದರೆ ನಿನಗೆ ಮರಣ ತಪ್ಪದು ಎಂದು ಹೇಳಿ ತಾನು ತಕ್ಕ ಮಂತ್ರವನ್ನು ಉಪದೇಶಿಸಿ ಪಾತಾಳಹೋಮದ ಕ್ರಮವನ್ನು ತಿಳಿಸಿ ರಾವಣನಿಗೆ ಆಶೀರ್ವಾದಮಾಡಿ ಕಳುಹಿಸಿದನು.

## ರಾವಣನು ಪಾತಾಳಹೋಮ ಮಾಡಿದುದು.

ಹೀಗೆ ಶುಕ್ರಾಚಾರ್ಯರಿಂದ ತನಗೆ ಉಪದೇಶವಾದ ಬಳಿಕ ರಾವಣನು ಸಂತೋಷಭರಿತನಾಗಿ ಪಾತಾಳಹೋಮ ಮಾಡಲು ಸರಿಯಾದ ಸ್ಥಳವನ್ನು ಗೊತ್ತುಮಾಡಿ ಹೋಮಕ್ಕೆ ಬೇಕಾದ ಪದಾರ್ಥಗಳನ್ನೆಲ್ಲ ಸಿದ್ಧಪಡಿಸಿಕೊಂಡು ತನ್ನ ಶಕ್ತಿ ಸಾಹಸಗಳಿಗೆ ತಕ್ಕಂತೆ ಬಲಾಢ್ಯರಾದ ರಾಕ್ಷಸರನ್ನು ಬಾಗಿಲಲ್ಲಿ ಕಾವಲಿಟ್ಟು ವಿದ್ಯುಜ್ಜಿಹ್ವನನ್ನು ಕರೆದು ಯಾರನ್ನೂ ಒಳಗೆ ಬಿಡದಂತೆ ಅಪ್ಪಣೆಮಾಡಿ ತಾನು ಸ್ನಾನಮಾಡಿ ಶುಚಿರ್ಭೂತನಾಗಿ ರಕ್ತವಸ್ತ್ರಗಳನ್ನುಟ್ಟು ರಕ್ತಗಂಧಮಾಲ್ಯಾದಿಗಳಿಂದ ಅಲಂಕೃತನಾಗಿ ಸಿದ್ಧಾಸನದಲ್ಲಿ ಕುಳಿತು ಹೋಮದ್ರವ್ಯಗಳನ್ನು ತರಿಸಿಕೊಂಡು ಅಗ್ನಿಕುಂಡದಲ್ಲಿ ಯಜ್ಞೇಶ್ವರನನ್ನು ಭಕ್ತಿಯಿಂದ ಪ್ರತಿಷ್ಠಿಸಿ ಗುರುವಾಕ್ಯಾನುಸಾರವಾಗಿ ಕಕ್ಕೆಯುಸಮಿತ್ತುಗಳು ಎಳ್ಳು ಲಾಜೆ ಅಕ್ಷತೆ ದೂರ್ವೆ ಮಾಂಸಖಂಡಗಳಿಂದ ಆಹುತಿಯನ್ನು ಕೊಟ್ಟು ಜಪಸಂಪೂರ್ತಿಯಾಗಿ ತಾನು ಮಹಾನಿಷ್ಠೆಯಿಂದ ಪ್ರಾಣಾಯಾಮಸಹಿತನಾಗಿ ಅಂತರ್ಮುಖನಾಗಿ ಕುಳಿತು ಮಂತ್ರವನ್ನು ಜಪಿಸುತ್ತಿದ್ದನು. ಆಗ ಅಗ್ನಿಕುಂಡದಲ್ಲಿ ಹೋಮಮಾಡಿದ ಹೊಗೆಯು ದಶದಿಕ್ಕುಗಳನ್ನು ಆವರಿಸಿಕೊಂಡು ಬರಲು, ರಾಮಚಂದ್ರನು ಆಶ್ಚರ್ಯಭರಿತನಾಗಿ ವಿಭೀಷಣನನ್ನು ಕುರಿತು ಇದೇನು ಆಶ್ಚರ್ಯ? ರಣರಂಗವೆಲ್ಲ ಹೀಗೆ ಧೂಮಮಯವಾಗಲು ಕಾರಣವೇನು ಎಂದು ಕೇಳಿದನು. ಅದಕ್ಕೆ ವಿಭೀಷಣನು ಸ್ವಾಮಿ ರಾವಣನು ಶುಕ್ರಾಚಾರ್ಯನನ್ನು ಮರೆಹೊಕ್ಕು ಅವರು ಉಪದೇಶಿಸಿದ ರೀತಿಯಲ್ಲಿ ಪಾತಾಳಹೋಮವನ್ನು ಮಾಡುತ್ತಿರುವನು. ಆ ಹೋಮದ ಹೊಗೆಯು ಹೀಗೆ ಹಬ್ಬಿಕೊಂಡಿದೆ ಎಂದು ಹೇಳಿ ಈ ಪಾತಾಳಹೋಮವು ಪೂರ್ತಿಯಾದರೆ ರಾವಣನನ್ನು ಜಯಿಸುವುದಕ್ಕಾಗುವುದಿಲ್ಲ. ಆದಕಾರಣ ಈಗಲೆ ಶೂರರಾದ ಕಪಿಗಳನ್ನು ಕಳುಹಿಸಿ ಆ ಯಾಗವನ್ನು ಹಾಳುಮಾಡಬೇಕೆಂದು ಹೇಳಲು, ರಾಮನು ಆಶ್ಚರ್ಯಭರಿತನಾಗಿ ರಾವಣನು ಮಹಾ ಶೂರನೇ ಹೌದು ಇವನ ಸಾಹಸವು ವರ್ಣನಾತೀತವಾಗಿರುವುದೆಂದು ಆಶ್ಚರ್ಯಯುಕ್ತನಾಗಿ ಅಂಗದ ಹನುಮಂತರನ್ನು ಕರೆದು ನೀವು ಈ ಕ್ಷಣವೇ ಹೋಗಿ ಪಾತಾಳಲಂಕೆಯಲ್ಲಿ ರಾವಣನು ಮಾಡುತ್ತಿರುವ ಹೋಮವನ್ನು ಧ್ವಂಸಮಾಡಿ ಬನ್ನಿರೆಂದು ಆಜ್ಞಾಪಿಸಲು ಅಂಗದಾದಿ ವೀರರು ಆನಂದಭರಿತರಾಗಿ ಅಲ್ಲಿಂದ ಹೊರಟು ಲಂಕೆಯನ್ನು ಪ್ರವೇಶಿಸಿದರು.

## ಮಂಡೋದರಿಯ ಮಾನಭಂಗ.

ಹೀಗೆ ಲಂಕೆಯನ್ನು ಹೊಕ್ಕು ಬಂದ ಕಪಿಗಳು ಸಿಕ್ಕಿದವರನ್ನೆಲ್ಲಾ ಹೊಡೆದು ಕೊಲ್ಲುತ್ತ ಹೆಂಗಸರನ್ನು ನೋಯಿಸಿ ಹಿಂಸಿಸುತ್ತ ರಾವಣನಿರುವ ಸ್ಥಳವನ್ನು ತೋರಿಸಿ ಎಂದು ಗರ್ಜಿಸುತ್ತಿರಲು ವಿಭೀಷಣನ ಹೆಂಡತಿಯಾದ ಸರಮೆಯು ತನ್ನ ಕಣ್ಣು ಸನ್ನೆಯಿಂದ ಪಾತಾಳಲಂಕೆಯ ಮಾರ್ಗವನ್ನು ತೋರಿಸಲು, ಇಂಗಿತಜ್ಞನಾದ ಅಂಗದನು ಕ್ಷಣಮಾತ್ರದಲ್ಲಿ ಜಾಡೆಯನ್ನು ತಿಳಿದು ಗುಹೆಯ ಬಾಗಿಲಿಗೆ ಹಾಕಿದ್ದ ಬಂಡೆಯನ್ನು ಒದೆದು ನೂಕಿ ತನ್ನ ಕಪಿಬಲದೊಡನೆ ಒಳಹೊಕ್ಕು ಧ್ಯಾನಾರೂಢನಾಗಿ ಜಪಮಾಡುತ್ತ ಕುಳಿತಿರುವ ರಾವಣನನ್ನು ಕಂಡು ಕುಪಿತರಾಗಿ ಹೋಮಾಗ್ನಿಯನ್ನು ಕೆಡಿಸಿ ಹೋಮದ್ರವ್ಯಗಳನ್ನು ಚೆಲ್ಲಿ ಇತರ ಉಪಕರಣಗಳನ್ನು ಮುರಿದು ಮಹೋತ್ಸಾಹದಿಂದ ರಾವಣನ ತಲೆಯ ಮೇಲೇರಿ ತೊಡೆಯನ್ನು ಹತ್ತಿ ಹೆಗಲನ್ನು ಹೇರಿಕೊಂಡು ದೇಹವನ್ನು ಕಚ್ಚಿ ಕೊರೆದು ತಿವಿದು ಪರಚಿ ಬಗೆಬಗೆಯಾಗಿ ನೋಯಿಸಿದರೂ ಅವನು ತನ್ನ ಧ್ಯಾನವನ್ನು ಬಿಡದೆ ಮಹಾನಿಷ್ಠನಾಗಿ ಅಂತರ್ಮುಖನಾಗಿರುವುದನ್ನು ಕಂಡು ಖಿನ್ನರಾಗಿ ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಬಳಿಕ ಒಂದು ಉಪಾಯವನ್ನು ಚಿಂತಿಸಿ ಅಂಗದನು ಅಲ್ಲಿಂದ ಮಂಡೋದರಿಯನ್ನು ಜುಟ್ಟುಹಿಡಿದು ಎಳೆದುತಂದು ರಾವಣನೆದುರಿಗೆ ನಿಲ್ಲಿಸಿಕೊಂಡು ಅವಳನ್ನು ಮಾನಭಂಗಮಾಡಿದರೆ ಹೆಂಡತಿಯನ್ನು ರಕ್ಷಿಸುವುದಕ್ಕಾಗಿ ರಾವಣನು ತನ್ನ ತಪಸ್ಸನ್ನು ಬಿಡುವನೆಂದು ತಿಳಿದು ಬಗೆಬಗೆಯಾಗಿ ಮಂಡೋದರಿಯನ್ನು ಹಿಂಸಿಸುತ್ತಿದ್ದರೂ ಆವನು ಅಂತರ್ಮುಖನಾಗಿಯೆ ಇದ್ದುದನ್ನು ಕಂಡು ಸೀರೆಯನ್ನು ಸೆಳೆದು ಕುಪ್ಪಸವನ್ನು ಕಳಚಿ ಮಾನಭಂಗಕ್ಕೆ ಉಪಕ್ರಮಿಸಲು ಪತಿವ್ರತೆಯಾದ ಮಂಡೋದರಿಯು ಸಹಿಸಲಾರದೆ ಹಾ ! ಪ್ರಾಣಕಾಂತ ನಿನ್ನ ಹೇಡಿತನವನ್ನು ಎಷ್ಟು ಹೇಳಲಿ ! ಪರನಾರಿಯರನ್ನು ಕದ್ದುತಂದ ಧೀರನಾದ ನಿನ್ನೆದುರಿಗೆ ನಿನ್ನ ಹೆಂಡತಿಯನ್ನು ಅನ್ಯರು ಮಾನಭಂಗಮಾಡಿ ಕೆಡಿಸುತ್ತಿದ್ದರೆ ಹಂದೆಯಂತೆ ಕಣ್ಣುಮುಚ್ಚಿಕೊಂಡು ಪಕೆ ಸುಮ್ಮನಿರುವೆ ? ನನ್ನ ಮಾನ ಹೋದಮೇಲೆ ನೀನು ಜಪಹೋಮಗಳನ್ನು ಮಾಡಿ ಫಲವೇನು ? ನೀನು ಧೀರನಾಗಿದ್ದರೆ ಹಗೆಗಳ ಕೈಗೆ ಸಿಕ್ಕಿ ಹಾಳಾಗುತ್ತಿರುವ ನನ್ನನ್ನು ಬಿಡಿಸು ಇಲ್ಲವಾದರೆ ಯುದ್ಧಕ್ಕೆ ಹೋಗಿ ವೀರಸ್ವರ್ಗವನ್ನಾದರೂ ಹೊಂದು ಎರಡೂ ಇಲ್ಲದೆ ಹೀಗೆ ಕುಳಿತಿದ್ದರೆ ಕ್ಷಣಮಾತ್ರದಲ್ಲಿ ಈ ಕಪಿಗಳು ನನ್ನ ಮಾನಭಂಗಮಾಡಿ ನಿನ್ನನ್ನು ಕೊಲ್ಲದೆ ಬಿಡಲಾರರು ಎಂದು ಗಟ್ಟಿಯಾಗಿ ಕೂಗಿಕೊಳ್ಳಲು ರಾವಣನು ಮಂಡೋದರಿಯ ಧ್ವನಿಯನ್ನು ಕೇಳಿ ಕೋಪಾವಿಷ್ಟನಾಗಿ ಹಿಡಿದಿದ್ದ ಆಹುತಿಯನ್ನು ಕೆಳಕ್ಕೆ ಚೆಲ್ಲಿ ರೋಷಭೀಷಣನಾಗಿ ಅಂಗದನನ್ನು ಕುರಿತು ಎಲೈವಾನರನೆ ! ನಿನ್ನ ಪರಾಕ್ರಮವನ್ನು ಏನು ಹೇಳಲಿ ! ಹೆಂಗಸಿನಮೇಲೆ ಕೈಮಾಡಿ ಕೆಟ್ಟುಹೋಗುತ್ತಿರುವೆಯಾ ? ನಿಲ್ಲು ನಿಲ್ಲು ಒಂದು ಗರ್ಜಿಸಲು ಅಂಗದನು ಎಲೈ ರಾವಣನೆ ! ನೀನು ಯಾರೂ ಇಲ್ಲದ ಸಮಯದಲ್ಲಿ ಸೀತೆಯನ್ನು ಕದ್ದುತಂದ ಶೂರನು ನಾನು ನಿನ್ನೆದುರಿಗೆ ನಿನ್ನ ಹೆಂಡತಿಯನ್ನೆಳೆದು ಮಾನಭಂಗ ಮಾಡಿದೆನಲ್ಲ ನಮ್ಮಿಬ್ಬರಲ್ಲಿ ಹಂದೆಯಾರು ಶೂರನಾರು ನೀನೇ ಯೋಚಿಸು ಎಂದು ಹೇಳಿ ತಾನು ಬಂದ ಕೆಲಸವಾಯಿತೆಂದು ಸಂತೋಷಭರಿತನಾಗಿ ಉತ್ಸಾಹದಿಂದ ಕಪಿಗಳನ್ನು ಕೂಡಿಕೊಂಡು ರಾಮನಬಳಿಗೆ ಬಂದು ನಡೆದ ವೃತ್ತಾಂತವನ್ನು ಹೇಳಿ ನಮಸ್ಕರಿಸಿ ನಿಂತುಕೊಳ್ಳಲು ವಿಭೀಷಣನು ಸತ್ಯಸಂಧರಾದ ಕಪಿಸೇನೆಯವರನ್ನು ಅಭಿನಂದಿಸಿ ರಾಮನ ಕಾರ್ಯವನ್ನು ಪೂರೈಸುವುದಕ್ಕೆ ತಕ್ಕ ಸನ್ನಾಹವನ್ನು ಮಾಡುತ್ತಿದ್ದನು.

## ರಾವಣನು ಮಂಡೋದರಿಯನ್ನು ಸಂತೈಸಿದುದು.

ಅನಂತರದಲ್ಲಿ ರಾವಣನು ಅಂತಃಪುರಕ್ಕೆ ಹೋಗಿ ಆಭರಣಗಳು ಅಡಗಿ ಹೋಗಿ ಮಂಗಳಸೂತ್ರವು ಹರಿದು ಓಲೆಯೂ ಮುರಿದು ಕುಪ್ಪಸ ಹರಿದುಹೋಗಿ ವಸ್ತ್ರವು ಶಸ್ತ್ರಘಾತದಂತೆ ಕಳ

ಚಿಹೋಗಿ ತಲೆಯನ್ನು ಕೆದರಿಕೊಂಡು ಮುಖದಲ್ಲಿ ಮಂಗಳಚಿಹ್ನೆಯಿಲ್ಲದೆ ಹೊರಳಾಡುತ್ತ ರೋಧಿಸುತ್ತಿರುವ ಹೆಂಡತಿಯನ್ನು ನೋಡಿ ಪ್ರಿಯೆ ಮಂಡೋದರಿ ಹೆದರಬೇಡ ಚಿಂತೆಯನ್ನು ಬಿಡು ನಿನ್ನ ಪತಿಯಾದ ನಾನು ಕ್ಷಣಮಾತ್ರದಲ್ಲಿ ನಿನಗೆ ಅಪಚಾರಮಾಡಿದ ಹಗೆಗಳನ್ನು ಕೊಂದು ಬರುವೆನು ? ಸಂತೈಸಿಕೊ ಒಂದುವೇಳೆ ಈ ಹೊತ್ತಿನ ಯುದ್ಧದಲ್ಲಿ ನಾನು ಸತ್ತುಹೋದರೆ ನೀನು ಚಿಂತಿಸಬೇಡ ಮೊದಲು ಸೀತೆಯನ್ನು ಕೊಂದು ಬಳಿಕ ನೀನು ನನ್ನೊಡನೆ ಸಹಗಮನ ಮಾಡು ನನ್ನ ವಾಕ್ಯವನ್ನು ಕೇಳಿ ಅದರಂತೆ ನಡೆಸು ಎಂದು ಹೇಳಿದನು. ಅದನ್ನು ಕೇಳಿ ಕೋಪ ಭೀಷಣಳಾದ ಮಂಡೋದರಿಯು ಆಹಾ ! ಇದೇನು ಆಶ್ಚರ್ಯ ನಮ್ಮ ತಂದೆಯಾದ ಮಯನು ನನಗೆ ಮೊದಲೆ ಮುಪ್ಪೂ ಸಾವೂ ಇಲ್ಲದಂತೆ ವರವನ್ನು ಕೊಟ್ಟಿರುವನು. ಆದಕಾರಣ ನಾನು ನಿನ್ನೊಡನೆ ಸಹಗಮನಮಾಡಲು ಸಾಧ್ಯವಾಗಲಾರದು ನಿನ್ನ ವಾಕ್ಯವನ್ನು ನೀನೆ ಪಾಲಿಸಿಕೊ ಎಂದು ಹೇಳಲು ಚಿಂತಾಕ್ರಾಂತನಾದ ರಾವಣನು ಹೆಂಡತಿಯನ್ನು ಕುರಿತು ಎಲೌ ಮಂಡೋದರಿಯೆ ನಿನ್ನ ಅಭಿಪ್ರಾಯವು ತಿಳಿಯಿತು ನಾನು ಸತ್ತಮೇಲೆ ನಿನ್ನ ಸೌಭಾಗ್ಯವು ಕಮಲಪುಷ್ಪಗಳಿಲ್ಲದ ಕೊಳದಂತೆ ಕಾಂತಿಹೀನವಾಗಿರಲಿ ! ಎಂದು ಶಪಿಸಿ ಥಟ್ಟನೆದ್ದು ಓಲಗದ ಚಾವಡಿಗೆ ಬಂದು ಸಭೆಯನ್ನು ಸೇರಿಸಿ ಸಿಂಹಾಸನಾರೂಢನಾಗಿ ಉಳಿದುಳಿದ ರಾಕ್ಷಸರನ್ನೆಲ್ಲ ಕರೆಯಿಸಿ ನೀವೆಲ್ಲರೂ ರಾಮನೊಡನೆ ಯುದ್ಧಮಾಡಲು ಚತುರಂಗಬಲಸಮೇತರಾಗಿ ಹೊರಡಲು ಸಿದ್ಧರಾಗಿರಿ ಸದ್ಯದಲ್ಲಿ ನನ್ನ ರಥವನ್ನು ಹೂಡಿತಂದು ಸಿದ್ಧಪಡಿಸಿ ಎಂದು ಅಪ್ಪಣೆಮಾಡಲು ಅವರು ಕೂಡಲೆ ರಥವನ್ನು ಸಿದ್ಧಮಾಡಿ ತಂದು ನಿಲ್ಲಿಸಿದರು. ಆಗ ರಾವಣನು ಮಹಾಭಯಂಕರನಾಗಿ ಕಾಣುತ್ತ ತನ್ನ ಇಪ್ಪತ್ತು ಕೈಗಳಲ್ಲಿಯೂ ಆಯುಧವನ್ನು ಹಿಡಿದು ಕಿರೀಟಗಳನ್ನು ತರಿಸಿ ಧನುರ್ಬಾಣಧಾರಿಯಾಗಿ ರಥವನ್ನು ಹತ್ತಲು, ಯಮನೆ ಅವನಿಗೆ ಸಾರಥಿಯಾದನು. ರಥದ ಸೀತ್ಕಾರವೂ ಆನೆಗಳ ಘೀಂಕೃತಿಯೂ, ಕುದುರೆಗಳ ಹೇಷಾರವವೂ, ವೀರಭಟರ ಸಿಂಹನಾದವೂ, ರಥಿಕರ ಶಂಖಧ್ವನಿಯೂ ಭೇರಿ ತಮ್ಮಟೆ ಕಹಳೆ ಮೊದಲಾದ ವಾದ್ಯಗಳ ಧ್ವನಿಯೂ ಏಕವಾಗಿ ದಶದಿಕ್ಕುಗಳನ್ನು ಆವರಿಸಿಕೊಂಡು ಬರಲು ವೃಶ್ಚಿಕರೋಮ ಸರ್ಪರೋಮ ಖಡ್ಗರೋಮ ಅಗ್ನಿವರ್ಣ ಮೊದಲಾದ ಕ್ರೂರರಾಕ್ಷಸರನ್ನು ಸಂಗಡ ಕರೆದುಕೊಂಡು ರಣರಂಗಕ್ಕೆ ಬಂದು ಸಿಂಹನಾದ ಮಾಡುತ್ತ ಕಪಿಸೇನೆಯಮೇಲೆ ಬೀಳಲು ವಾನರರು ಕಲ್ಲುಗಳನ್ನೂ ಗುಂಡುಗಳನ್ನೂ ಮರಗಳನ್ನೂ ಹಿಡಿದು ಯುದ್ಧಮಾಡುತ್ತ ತುಮುಲಯುದ್ಧದಿಂದ ರಾವಣನ ಸೇನೆಯನ್ನು ಬಡಿದು ಭಂಗಪಡಿಸಿ ಹಿಮ್ಮೆಟ್ಟಿಸುತ್ತಿದ್ದರು. ಆಗ ರಾವಣನ ಸೇನೆಯಲ್ಲಿ ಲಕ್ಷೋಪಲಕ್ಷ ರಾಕ್ಷಸರು ಹತಭಾಗ್ಯರಾಗಿ ಮಡಿದುಹೋದರು.

## ವೃಶ್ಚಿಕರೋಮ ಸರ್ಪರೋಮರ ಸಂಹಾರ.

ಹೀಗೆ ರಾಕ್ಷಸಬಲವು ಕುಗ್ಗುತ್ತಿರುವುದನ್ನು ನೋಡಿ ವೃಶ್ಚಿಕರೋಮನಿಗೆ ಆಶ್ಚರ್ಯವುಂಟಾಗಿ ಕಾಡುಕಪಿಗಳಿಗೆ ಇಷ್ಟು ಪರಾಕ್ರಮವೆ ಎಂದು ಆರ್ಭಟಿಸುತ್ತ ರೋಮಾಂಚಯುಕ್ತನಾಗಿ ತನ್ನ ಮೈಯನ್ನು ಕೊಡವಲು ಕೋಟಾನುಕೋಟಿ ಚೇಳುಗಳು ತಂಡತಂಡವಾಗಿ ಹೊರಹೊರಟು ಕಪಿಗಳನ್ನು ಕಡಿದು ಹಾವಳಿ ಮಾಡುತ್ತಿದ್ದವು. ಅದರ ಉರಿಯನ್ನು ಸಹಿಸಲಾರದೆ ಕಪಿಗಳು ಚೀರ್ರನೆ ಚೀರಿಕೊಂಡು ಗೋಳಿಡುತ್ತಿರಲು ಧೀರನಾದ ಅಂಗದನು ಮುಳ್ಳುಗಿಡದ ಬೇರನ್ನು ಕೀಳುವ ಮಹಾಮಹಿಮನಂತೆ ಚಕ್ಕನೆ ಹಾರಿ ! ವೃಶ್ಚಿಕರೋಮನ ರಥವನ್ನು ಹತ್ತಿ ಅವನ ಬಿಲ್ಲನ್ನು ಕಿತ್ತುಕೊಂಡು ಅದನ್ನು ಮುರಿದು ಖಡ್ಗವನ್ನು ಸೆಳೆದು ಸಾರಥಿಯನ್ನು ಕೊಂದು ರಥವನ್ನು ಪುಡಿಪುಡಿಮಾಡಿ ಕುದುರೆಗಳನ್ನು ಯಮಲೋಕಕ್ಕೆ ಕಳುಹಿಸಿ ವೃಶ್ಚಿಕರೋಮನನ್ನು ಹಿಡಿದು ಅವನ ಎದೆಗೆ ಒದೆಯಲು ಅವನು ರಕ್ತವನ್ನು ಕಾರುತ್ತ ಕೆಳಕ್ಕೆ ಬಿದ್ದು

ಈ ಹಾಳು ರಾವಣನ ರಾಜ್ಯಭಾರಕ್ಕಿಂತಲೂ ಯಮನ ಅರಮನೆಯೆ ಆನಂದದಾಯಕವೆಂದು ಕೂಗುತ್ತಾ ತಾನು ಯಮಲೋಕವನ್ನು ಸೇರಿದನು. ಹೀಗೆ ವೃಶ್ಚಿಕರೋಮನು ಮಡಿಯಲು ಸರ್ಪರೋಮನು ಶಾಂತಿಹೀನನಾಗಿ ಶೌರ್ಯದಿಂದ ಆರ್ಭಟಿಸುತ್ತ ತನ್ನ ದೇಹವನ್ನು ಕೊಡವಿ ಲಕ್ಷೋಪಲಕ್ಷ ಸರ್ಪಗಳನ್ನು ಉದಿರಿಸಲು ಹಾವುಗಳು ಹಾವಳಿಮಾಡುತ್ತಾ ಹರಿದು ಬಂದು ಕಪಿಗಳನ್ನು ಕಚ್ಚಿ ಕೊಲ್ಲುತ್ತ ಬಂದವು ಬಳಿಕ ಕಪಿಸೇನೆಯವರು ಹೆದರಿ ಹಿಮ್ಮೆಟ್ಟುತ್ತಿರಲು ನಳನು ಅವರಿಗೆ ಅಭಯವನ್ನಿತ್ತು ಸಮಾಧಾನಮಾಡಿ ತಾನು ಶಸ್ತ್ರಧಾರಿಯಾಗಿ ಸರ್ಪರೋಮನ ರಥವನ್ನು ಮುರಿದು ಕುದುರೆಗಳನ್ನು ಕೊಂದು ಸಾರಥಿಯನ್ನು ಉರುಳಿಸಿ ಕಡೆಗೆ ಸರ್ಪರೋಮನನ್ನು ತನ್ನ ಸಾಹಸದಿಂದ ಕಡಿದು ರಣರಂಗದಲ್ಲಿ ಹಾಕಲು ಅಯ್ಯೋ ಈ ಯುದ್ಧರಂಗಕ್ಕಿಂತ ಕೃತಾಂತಲೋಕದಲ್ಲಿ ಕಷ್ಟಕಾರ್ಯಕವಿಲ್ಲದೆ ಸುಖವಾಗಿ ಬಾಳುವೆನೆಂದು ಹೇಳುತ್ತ ಸರ್ಪರೋಮನು ಸತ್ತು ಮೃತ್ಯುಲೋಕವನ್ನು ಸೇರಿದನು.

## ಖಡ್ಗರೋಮ, ಅಗ್ನಿವರ್ಣರ ಮರಣ.

ಬಳಿಕ ಖಡ್ಗರೋಮನು ಹಠಾತ್ತಾಗಿ ರಾಮಸೇನೆಯ ಮೇಲೆ ಬಿದ್ದು ಖಡ್ಗಗಳಿಂದ ಹೊಡೆದು ಕಪಿಗಳನ್ನು ಕೊಲ್ಲುತ್ತ ಬರಲು ಆಂಜನೇಯನು ಅವನಿಗೆದುರಾಗಿ ಬಂದು ರಥದ ಮೇಲೆ ಹಾರಿಬಿದ್ದು ಕೈಯಲ್ಲಿದ್ದ ಖಡ್ಗವನ್ನು ಕಿತ್ತುಕೊಂಡು ಅದರಿಂದಲೆ ಅವನನ್ನು ಹೊಡೆದು ಕೊಂದು ಆ ಬಳಿಕ ಅವನ ರಥ ಕುದುರೆ ಸಾರಥಿಗಳನ್ನು ಕಡಿದು ಪುಡಿಪುಡಿ ಮಾಡಿ ಹಿಂತಿರುಗಿ ಬಂದನು. ಇದನ್ನು ಕಂಡಕೂಡಲೆ ಅಗ್ನಿವರ್ಣನಿಗೆ ಹಾಹಾಕಾರ ಹೆಚ್ಚಿ ಪ್ರಳಯಾಗ್ನಿಯಂತೆ ಭುಗಿಲಿಡುವ ಜ್ವಾಲೆಯಿಂದ ಕಪಿಸೇನೆಯನ್ನು ಕೊಲ್ಲುತ್ತ ಬರಲು ಕಪಿಗಳು ಅದನ್ನು ತಾಳಲಾರದೆ ರಾಮನ ಬಳಿಗೆ ಬಂದು ಮೊರೆಯಿಟ್ಟರು. ಆಗ ವಿಭೀಷಣನು ಶ್ರೀರಾಮನನ್ನು ಕುರಿತು ಈ ಅಗ್ನಿವರ್ಣನು ಅಗ್ನಿದೇವನ ವರದಿಂದ ಗರ್ವಿತನಾಗಿ ಆರ್ಭಟಿಸುತ್ತಿರುವನು ಇವನನ್ನು ಹೀಗೆ ಬಿಟ್ಟರೆ ಕ್ಷಣಮಾತ್ರದಲ್ಲಿ ನಮ್ಮ ಸೇನೆಯನ್ನು ಸುಟ್ಟುಬಿಡುವನು ಆದಕಾರಣ ನೀವು ಬೇಗನೆ ಇದಕ್ಕೆ ತಕ್ಕ ಶಾಂತಿಯನ್ನು ಮಾಡಬೇಕೆಂದು ಹೇಳಲು ಶ್ರೀರಾಮನು ವಾರುಣಾಸ್ತ್ರವನ್ನು ಪ್ರಯೋಗಿಸಿ ಅಗ್ನಿ ಬಾಧೆಯನ್ನು ನಿವಾರಿಸಿಕೊಂಡು ತನ್ನ ಕಡೆಯವರನ್ನು ಸಂತೈಸಿ ಕಡೆಗೆ ರುದ್ರಾಸ್ತ್ರವನ್ನು ಹೂಡಿ ಹೊಡೆದು ಅಗ್ನಿವರ್ಣನನ್ನು ಕೊಂದು ರಾಮಸೇನೆಗೆ ಧೈರ್ಯವನ್ನು ಹೇಳಿ ಕ್ಷೇಮವನ್ನುಂಟುಮಾಡಿದನು.

## ರಾಮರಾವಣರ ಯುದ್ಧಪ್ರಾರಂಭ.

ಈರೀತಿಯಲ್ಲಿ ತನ್ನ ಕಡೆಗಾಲದಲ್ಲಿ ತನಗೆ ಆಪ್ತರಾಗಿದ್ದ ಮಹಾಶೂರರಾದ ವೃಶ್ಚಿಕರೋಮ, ಸರ್ಪರೋಮ, ಖಡ್ಗರೋಮ ಅಗ್ನಿವರ್ಣರೆಂಬ ರಾಕ್ಷಸರು ಕ್ಷಣಮಾತ್ರದಲ್ಲಿ ರಾಮಬಾಣದಿಂದ ಹತರಾದುದನ್ನು ಕಂಡು ರಾವಣನು ದಿಗ್ಭ್ರಾಂತನಾಗಿ ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತ ಇಮ್ಮಡಿಯಾದ ಕೋಪದಿಂದ ಧನುಸ್ಸನ್ನು ಹಿಡಿದು ಟಂಕಾರಮಾಡಿ ಶ್ರೀರಾಮನಿಗೆ ಎದುರಾಗಿ ನಿಂತು ಎಲೈ ನರಾಧಮನೇ! ಮನುಷ್ಯಮಾತ್ರದವನಾದ ನೀನು ರಾಕ್ಷಸರಾದ ನಮ್ಮೆದುರಿಗೆ ನಿಂತು ಬಹಳವಾಗಿ ಪರಾಕ್ರಮವನ್ನು ತೋರಿಸುತ್ತಿರುವೆ ಆಗಲಿ! ನಿನ್ನ ಶಕ್ತಿಸಾಮರ್ಥ್ಯಗಳನ್ನು ಈಗ ತೋರಿಸು ನೋಡೋಣ ಸಮಸ್ತ ಲೋಕವಿದ್ರಾವಣನಾದ ರಾವಣನೆದುರಿಗೆ ನಿಂತು ಯುದ್ಧಮಾಡಿದರೆ ನೀನು ರಾಮನೇ ಸರಿ! ಇಲ್ಲವಾದರೆ ನಿನ್ನನ್ನು ಹಂದೆ ಎಂದು ಲೋಕವು ಜರಿಯದೆ ಇರುವುದಿಲ್ಲ ಇಗೋ! ಈ ನನ್ನ ಬಾಣವನ್ನು ಸಹಿಸಿಕೊ ನೋಡೋಣ ಎಂದು ಮೂದಲಿಸುತ್ತ ಬಾಣಪ್ರಯೋಗ ಮಾಡಿದನು. ರಾಮನು ತನ್ನ ಬುದ್ಧಿಕೌಶಲದಿಂದ ರಾವಣನ ಬಾಣವನ್ನು ಮಧ್ಯದಲ್ಲಿ ಖಂಡಿಸಿ ತುಂಡುಮಾಡಿ ಕೆಡವಿ ತಾನು ಪ್ರತಿಬಾಣವನ್ನು

ಹೂಡಿ ಹೊಡೆಯಲು ಅದು ರಾವಣನ ಹೃದಯವನ್ನು ಭೇದಿಸಿಕೊಂಡು ಹೋಗಲು ದಶಕಂಠನು ಮೂರ್ಛಾಕ್ರಾಂತನಾಗಿ ರಥದಲ್ಲಿ ಮಲಗಿದನು. ಕೂಡಲೆ ಸಾರಥಿಯು ರಾವಣನ ದುರವಸ್ಥೆ





ಯನ್ನು ಕಂಡು ಯುಕ್ತಿಯಿಂದ ತನ್ನ ರಥವನ್ನು ಹಿಂದಕ್ಕೆ ತಿರುಗಿಸಿ ಲಂಕೆಯ ಕಡೆಗೆ ಹೋಗುತ್ತಿರಲು ರಾವಣನು ಕೂಡಲೆ ನೈಮುರಿದು ಮೂರ್ಛೆ ತಿಳಿದೆದ್ದು ಸಾರಥಿಯನ್ನು ಗದರಿ ಗರ್ಜಿಸುತ್ತ ಎಲೈ ಹೇಡಿಯೆ! ಶತ್ರುವಿಗೆ ಹಿಮ್ಮೆಟ್ಟಿ ಹಿಂದಕ್ಕೆ ರಥವನ್ನು ನಡೆಸಿಕೊಂಡು ಬಂದೆಯಾ? ನಿನ್ನ ಶೌರ್ಯವನ್ನು ಏನು ಹೇಳಲಿ! ಎಂದು ಗರ್ಜಿಸಲು ಸಾರಥಿಯು ರಾವಣನ ರಥವನ್ನು ಹಿಂದಿರುಗಿಸಿ ತಂದು ಶ್ರೀರಾಮನಿಗೆ ಎದುರಾಗಿ ನಿಲ್ಲಿಸಿದನು. ಬಳಿಕ ಶ್ರೀರಾಮನು ರಥಹೀನನಾಗಿ ಭೂಮಿಯಲ್ಲಿ ನಿಂತು ಯುದ್ಧಮಾಡುತ್ತಿರುವುದನ್ನು ಕಂಡು ತನ್ನ ಹಗೆಯಾದ ರಾವಣನು ರಥಾರೂಢನಾಗಿ ಶ್ರೀರಾಮನನ್ನು ಎದುರಿಸುತ್ತಿರುವದನ್ನು ಕಂಡು ಅಧರ್ಮಿಯಾದವನಿಗೆ ಅಟ್ಟಹಾಸಯುಕ್ತವಾದ ರಥವಿರುವಲ್ಲಿ ಧರ್ಮಸ್ವರೂಪನಾದ ಶ್ರೀರಾಮನು ವಿರಥನಾಗಿ ಯುದ್ಧಮಾಡುವುದು ಸರಿಯಲ್ಲವೆಂದು ತಿಳಿದು ಆಕಾಶದಲ್ಲಿ ದೇವತೆಗಳೊಡನೆ ನೆರೆದು ರಾಮರಾವಣರ ಯುದ್ಧವನ್ನು ನೋಡುತ್ತಿದ್ದ ದೇವೇಂದ್ರನು ತನ್ನ ಸಾರಥಿಯಾದ ಮಾತಲಿಯನ್ನು ಕರೆದು ಎಲೈ ಮಾತಲಿಯೆ! ನೀನು ಈಕ್ಷಣವೇ ರಥಾರೂಢನಾಗಿ ನನ್ನ ರಥವನ್ನು ತೆಗೆದುಕೊಂಡು ಹೋಗಿ ನೆಲದಲ್ಲಿ ನಿಂತು ಯುದ್ಧಮಾಡುತ್ತಿರುವ ರಾಮನ ಬಳಿಗೆ ಹೋಗಿ ನಿನಗೋಸ್ಕರನಾಗಿ ಇಂದ್ರನು ತನ್ನ ರಥವನ್ನು ಕಳುಹಿಸಿರುವನು ಇದನ್ನು ಆರೋಹಿಸಿ ಯುದ್ಧಮಾಡು ಎಂದು ನಾನು ಪ್ರಾರ್ಥಿಸಿದೆನೆಂದು ಹೇಳು ಎಂದು ಆಜ್ಞಾಪಿಸಲು ಮಾತಲಿಯು ಆನಂದಭರಿತನಾಗಿ ರಥದೊಡನೆ ಶ್ರೀರಾಮನ ಬಳಿಗೆ ಬಂದು ಸ್ವಾಮಿಾ! ನಾನು ಮಾತಲಿಯೆಂಬವನು, ಇಂದ್ರನ ಸಾರಥಿ ನೆಲದಲ್ಲಿ ನಿಂತು ಯುದ್ಧಮಾಡುತ್ತಿರುವ ನಿಮಗಾಗಿ ಇಂದ್ರನು ತನ್ನ ರಥವನ್ನು ಕಳುಹಿಸಿರುವನು. ಇದನ್ನು ಸ್ವೀಕರಿಸಿ ಯುದ್ಧಮಾಡಬೇಕು ಎಂದು ಹೇಳಲು ಶ್ರೀರಾಮನು ಸಂತುಷ್ಟನಾಗಿ ಆ ರಥದಲ್ಲಿ ಕುಳಿತು ರಾವಣನ ರಥವನ್ನು ಮೂರುಸಾರಿ ಪ್ರದಕ್ಷಿಣೆಮಾಡಿ ಸುತ್ತಿಕೊಂಡು ಬರಲು ಕೋಪಾವಿಷ್ಟನಾದ ರಾವಣನು ತನ್ನ ರಥವನ್ನು ತಂದು ಶ್ರೀರಾಮನ ರಥಕ್ಕೆ ಎದುರಾಗಿ ನಿಲ್ಲಿಸಿ ಆರ್ಭಟಿಸುತ್ತ ರೋಷಾವೇಶದಿಂದ ಹೊಡೆದಾಡುತ್ತಿದ್ದನು.

## ಅಗಸ್ತ್ಯರು ಶ್ರೀರಾಮನಿಗೆ ರಣರಂಗದಲ್ಲಿ ಆದಿತ್ಯಹೃದಯವನ್ನು ಉಪದೇಶಿಸಿದುದು.





ಬಳಿಕ ಪರಸ್ಪರ ಅಭಿಮುಖವಾಗಿ ನಿಂತಿರುವ ರಥದ ಸಾರಥಿಗಳಿಬ್ಬರೂ ಚಾಕಚಕ್ಯದಿಂದ ತಮ್ಮ ರಥವನ್ನು ನಡೆಸುತ್ತಿರಲು ರಥಿಕರಾದ ರಾಮ, ರಾವಣರು ಘೋರವಾಗಿ ಯುದ್ಧ ಮಾಡಲು ಆರಂಭಿಸಿದರು. ಬಾಣಗಳು ಬೆಟ್ಟಗಳಂತೆ ರಾಶಿಯಾಗಿ ಬಿದ್ದುವು ಖಡ್ಗಗಳು ಮುರಿದು ಚೂರಾದುವು ಪರಶು ಕುಂತಾಯುಧಗಳು ಪರಿವರಿದು ಹಾರಾಡತೊಡಗಿದುವು ಶಕ್ತಿಗಳು ಜ[illegible]ಲ್ಲನೆ ಭೂಮಿಗೆ ಬಿದ್ದು ಹೊರಳುತ್ತಿದ್ದುವು ರಾಮನ ಪರಾಕ್ರಮವು ಹೆಚ್ಚುತ್ತಬರಲು ರಾಕ್ಷಸರಾಜನಾದ ರಾವಣನು ಶಸ್ತ್ರಾಸ್ತ್ರಗಳಿಂದ ಇವನನ್ನು ಗೆಲ್ಲುವುದು ಅಸಾಧ್ಯವೆಂದು ತಿಳಿದು ತನ್ನ ಮಾಯಾಜಾಲದಿಂದ ಅಂಧಕಾರಮಯವಾದ ಅಸ್ತ್ರವನ್ನು ಹೂಡಿ ಹೊಡೆಯಲು ರಣರಂಗವು ಕಗ್ಗತ್ತಲೆ ಕವಿದು ಅಮಾವಾಸ್ಯೆಯ ರಾತ್ರಿಯಂತೆ ಗಾಢಾಂಧಕಾರಮಯವಾಗಿ ಕಣ್ಣು ಕಾಣದಹಾಗೆ ಭ್ರಾಂತಿಯನ್ನುಂಟುಮಾಡಿತು. ಇದನ್ನು ಕಂಡು ರಾಮನು ಭ್ರಾಂತನಾಗಿ ಹೃದಯದಲ್ಲಿ ಭಗವಂತನನ್ನು ಧ್ಯಾನಮಾಡುತ್ತ ಈ ಮಾಯಾವಿಯಾದ ರಾವಣನನ್ನು ಹೇಗೆ ಸಂಹರಿಸಲಿ ಎಂದು ಚಿಂತಿಸುತ್ತ ದಿಕ್ಕುತೋರದೆ ಸ್ವಲ್ಪಹೊತ್ತು ತನ್ನ ರಥದಲ್ಲಿ ಸುಮ್ಮನೆ ನಿಂತುಕೊಂಡನು. ಆ ಕಾಲದಲ್ಲಿ ದೇವತೆಗಳು ಅಗಸ್ತ್ಯಋಷಿಯನ್ನು ಪ್ರಾರ್ಥಿಸಿ ತಾವು ಈ ಕಾಲದಲ್ಲಿ ದೇವತೆಗಳಿಗೆ ಸಹಾಯಮಾಡಿ ಲೋಕಕಂಟಕನಾದ ರಾವಣನ ಸಂಹಾರೋಪಾಯವನ್ನು ಸೂಚಿಸಿ ಅವನ ಸೆರೆಯಿಲ್ಲದಂತೆ ಮಾಡಬೇಕೆಂದು ಬಿನ್ನೈಸಲು ಧರ್ಮಸ್ವರೂಪನಾದ ಅಗಸ್ತ್ಯ ಮಹರ್ಷಿಯು ಆನಂದಭರಿತನಾಗಿ ಭಕ್ತರನ್ನು ಉದ್ಧರಿಸುವುದಕ್ಕೆ ಬರುವ ಭಗವಂತನಂತೆ ಸೂಕ್ಷ್ಮರೂಪಿಯಾಗಿ ಯುದ್ಧಾಂಗಣವನ್ನು ಪ್ರವೇಶಿಸಿ, ಅಧರ್ಮವನ್ನು ನುಂಗುವ ನೃತ್ಯುದೇವತೆಯಂತೆ ಘೋರವಾದ ತೇಜಸ್ಸಿನಿಂದ ಕೂಡಿ ತನ್ನ ಪ್ರಕಾಶದಿಂದ ಕಗ್ಗತ್ತಲೆಯನ್ನು ನೀಗಿ ಶ್ರೀರಾಮನನ್ನು ಕಂಡು ಎಲೈ ರಾಮಚಂದ್ರನೇ ! ಹೆದರಬೇಡ ಧರ್ಮಕ್ಕೆ ಚ್ಯುತಿಯಿಲ್ಲ ಅಧರ್ಮಕ್ಕೆ ಅಭಿವೃದ್ಧಿಯಿಲ್ಲ ನಿನಗೆ ಎದುರಿಲ್ಲ ರಾವಣನಿಗೆ ಜಯವಾಗುವುದಿಲ್ಲ ನೀನು ಸತ್ಯಸ್ವರೂಪನು ನನ್ನ ವಾಕ್ಯವನ್ನು ಕೇಳಿ ಅದರಂತೆ ನಡೆಸಿದರೆ ನಿನಗೆ ಶೀಘ್ರದಲ್ಲೆ ಜಯವುಂಟಾಗಿ ಹಗೆಯು ಹರಿದು ರಾವಣನು ಸಾಯುವನು ಬಳಿಕ ಲೋಕಗಳಿಗೆಲ್ಲ ಸಂತೋಷವುಂಟಾಗುವುದು. ಎಲೈ ರಾಮಚಂದ್ರನೆ! ಯಾವ ಮನುಷ್ಯನು ತನ್ನ ಆಪತ್ಕಾಲದಲ್ಲಾಗಲಿ ಕಷ್ಟದಶೆಯಲ್ಲಾಗಲಿ ! ಮತ್ತಾವ ವಿಧವಾದ ತೊಂದರೆಯಲ್ಲಾಗಲಿ ಇರುವಾಗ ಮಹಾಮಂತ್ರವಾದ ಆದಿತ್ಯಹೃದಯವನ್ನು ದೃಢ ಮನಸ್ಕನಾಗಿ ಏಕಚಿತ್ತಮನೋಭಾವದಿಂದ ನಿರ್ಮಲನಾಗಿ ಮೂರುಸಾರಿ ಜಪಿಸಿ ಮೂಲಮಂತ್ರವನ್ನು ಜಪಿಸುವನೊ ಅಂಥವನಿಗೆ ಯಾವ ಬಾಧೆಯೂ ಇಲ್ಲದೆ ಬಂದ ಕಷ್ಟಗಳೆಲ್ಲ ಬಯಲಾಗಿ ಹಗೆಹರಿದು ಸುಖವುಂಟಾಗುವುದರಲ್ಲಿ ಸಂಶಯವಿಲ್ಲ. ಆದಕಾರಣ ನೀನೂ ಹಾಗೆ ಮಾಡಿದರೆ ನಿನಗೆ ಜಯವಾಗಿ ರಾವಣನು ಸಾಯುವನು ಎಂದು ಹೇಳಿ ಶ್ರೀರಾಮನಿಗೆ ತಕ್ಕ ರೀತಿಯಲ್ಲಿ

ಮಂತ್ರವನ್ನು ಉಪದೇಶಿಸಿ ಅದರ ಪುರಶ್ಚರಣ ವಿಧಾನವನ್ನು ತಿಳಿಸಿ ತಾನು ಯಾರಿಗೂ ತಿಳಿಯ ದಂತೆ ಅದೃಶ್ಯನಾದನು.

## ರಾಮ ರಾವಣರ ಯುದ್ಧ.

ಆಬಳಿಕ ಆನಂದಭರಿತನಾಗಿ ಶ್ರೀರಾಮನು ಅಗಸ್ತ್ಯಮಹಾಮುನಿಯು ಉಪದೇಶದಂತೆ ಏಕಚಿತ್ತ ಮನೋಭಾವದಿಂದ ಆದಿತ್ಯಹೃದಯವನ್ನು ಪಠಿಸಿ ಮೂಲಮಂತ್ರವನ್ನು ಸಮ್ಯಕ್ಕಾಗಿ ಜಪಿಸಿ ತೃಪ್ತನಾಗಲು ಕ್ಷಣಮಾತ್ರದಲ್ಲಿ ರಣರಂಗದಲ್ಲಿ ಕವಿದುಕೊಂಡಿದ್ದ ಕತ್ತಲೆಯು ನಾಶವಾ ಯಿತು. ಸೂರ್ಯಕೋಟಿ ಪ್ರಕಾಶವಂತೆ ಮಹಾಪ್ರಕಾಶವು ಕಾಣುತ್ತಿರಲು ರಾಮಚಂದ್ರನ ಪರಾಕ್ರಮವು ಮಧ್ಯಾಹ್ನಕಾಲದ ಮಾರ್ತಾಂಡನಂತೆ ಕ್ಷಣಕ್ಷಣಕ್ಕೂ ಹೆಚ್ಚುತ್ತ ಬರಲು ರಾವ ಣನ ಪರಾಕ್ರಮವು ಉದಯರಾಗವನ್ನು ಕಂಡ ಕತ್ತಲೆಯಂತೆ ಗಳಿಗೆಗಳಿಗೆಗೆ ತಗ್ಗುತ್ತ ಬಂದಿತು. ಹೀಗಿರುವಲ್ಲಿ ಉಭಯವೀರರಿಗೂ ಘೋರವಾದ ಯುದ್ಧವು ಕೈಗಟ್ಟಿತು. ಆಗ್ನೇಯಾಸ್ತ್ರ ವಾರುಣಾಸ್ತ್ರ ವಾಯುವ್ಯಾಸ್ತ್ರ ರುದ್ರಾಸ್ತ್ರಗಳೆ ಮೊದಲಾದ ಮಂತ್ರಾಸ್ತ್ರಗಳು ರಾವಣನಿಂದ ಬಿಡಲ್ಪಟ್ಟು ವ್ಯರ್ಥವಾಗಿ ಹೋದವು. ರಾಮನು ಅಡಿಗಡಿಗೆ ಹೆಚ್ಚುತ್ತಿರುವ ತನ್ನ ಪರಾಕ್ರಮ ದಿಂದ ಉಬ್ಬುತ್ತ ಶರವರ್ಷವನ್ನು ಕರೆದು ರಾವಣನನ್ನು ನೋಯಿಸುತ್ತಿದ್ದನು. ರಾಮಬಾಣಪ ಉರುಬೆಯನ್ನು ಸಹಿಸಲಾರದೆ ರಾವಣನು ಕ್ಷಣಕ್ಷಣಕ್ಕೂ ಹಾರಿಬಿದ್ದು ಮೂರ್ಛೆಹೋಗುತ್ತಿದ್ದನು ಹೀಗೆ ಹಗೆಯ ಶಕ್ತಿಸಾಮರ್ಥ್ಯಗಳು ಕೈಗುಂದುತ್ತಿರುವುದನ್ನು ಕಂಡು ಶೂರನಾದ ಶ್ರೀರಾಮನು ವೆಗ್ಗಳಿಸುತ್ತ ಮೊದಲಿಗಿಂತಲೂ ಇಮ್ಮಡಿಯಾದ ಪರಾಕ್ರಮದಿಂದ ಕಾದುತ್ತಬರಲು ರಾವಣನು ರೋಷಭೀಷಣನಾಗಿ ತನ್ನ ಸಾರಥಿಯಾದ ಯಮನನ್ನು ಕುರಿತು ರಥವನ್ನು ಸರಿಯಾಗಿ ನಡೆಸು ವಂತೆ ಎಚ್ಚರಿಸಿ ತಾನು ಕ್ರೂರವಾದ ಬಾಣಂಗಳನ್ನು ಹೊಡೆದು ಶ್ರೀರಾಮನ ಸಾರಥಿಯನ್ನು ರಥಾಶ್ವಗಳನ್ನು ನೋಯಿಸಿದನು. ಬಳಿಕ ಶ್ರೀರಾಮನಿಗೆ ಉಗ್ರಕೋಪವುಂಟಾಗಿ ತನ್ನ ಬಾಣ ಗಳಿಂದ ರಾವಣನ ರಥವನ್ನು ಪುಡಿಪುಡಿಮಾಡಿ ಕುದುರೆಗಳನ್ನು ಕೊಂದು ಸಾರಥಿಯನ್ನು ಮೂರ್ಛೆ ಗೊಳಿಸಿದನು ಬಳಿಕ ವೆಗ್ಗಳಿಸಿದ ರಾವಣನು ಪರಾಕ್ರಮದಿಂದ ಹೊಡೆದಾಡುತ್ತಿರಲು ಧೀರ ನಾದ ಶ್ರೀರಾಮನು ಉಗ್ರಾಸ್ತ್ರವನ್ನು ಹೂಡಿ ಹೊಡೆದು ರಾವಣನ ತಲೆಗಳನ್ನು ಕತ್ತರಿಸಿ ಬಾಹು ಗಳನ್ನು ಕಡಿದುರುಳಿಸಿ ಇನ್ನು ರಾವಣನತಂಟೆ ತೀರಿತು ಎಂದು ಸುಮ್ಮನೆ ಇರಲು ಅರೆಕ್ಷಣದಲ್ಲಿ ರಾವಣನ ಶಿರಸ್ಸುಮೂಡಿ ಬಾಹುಗಳು ಹುಟ್ಟಿ ಮರಳಿ ಯುದ್ಧಮಾಡುವುದಕ್ಕೆ ಬರಲು ಆಶ್ಚರ್ಯ ಭರಿತನಾದ ಶ್ರೀರಾಮನು ಅವುಗಳನ್ನು ಕಡಿದು ಕೆಡಹಲು ಹೊಸದಾದ ತಲೆಗಳೂ ಬಾಹುಗಳೂ ಹುಟ್ಟುತ್ತಲೆ ಬರಲು ರಾಮನು ಭ್ರಾಂತನಾಗಿ ಆಶ್ಚರ್ಯವಿಸ್ಮಯಗಳಿಂದ ಕೂಡಿ ವಿಭೀಷಣನನ್ನು ಕರೆದು ಎಲೈ ವಿಭೀಷಣನೆ ! ನಾನು ತಲೆ ಬಾಹುಗಳನ್ನು ಕಡಿದುಹಾಕುತ್ತಿದ್ದರೂ ಹೊಸಹೊಸ ದಾಗಿ ಈ ರಾವಣನಿಗೆ ತಲೆಗಳೂ ಬಾಹುಗಳೂ ಹುಟ್ಟುತ್ತವೆಯಲ್ಲ ! ಇದಕ್ಕೆ ಕಾರಣವೇನು ಎಂದು ಕೇಳಲು ವಿಭೀಷಣನು ಎಲೈ ರಾಮಚಂದ್ರನೇ! ಪಿತಾಮಹನಾದ ಬ್ರಹ್ಮನು ಈ ರಾವಣನ ನಾಭಿಕಮಲದಲ್ಲಿ ಅಮೃತಕಲಶವನ್ನಿಟ್ಟು ನಿಕ್ಷೇಪ ಮಾಡಿರುವನು. ಅದರ ಬಲದಿಂದ ಅವನಿಗೆ ಕಡಿದ ತಲೆಗಳು ಬಾಹುಗಳು ತಿರುತಿರುಗಿ ಹುಟ್ಟುತ್ತಿರುವುವು. ನೀನು ಮೊದಲು ಆ ಅಮೃತ ಕಲಶವನ್ನು ಹೊರಕ್ಕೆ ತೆಗೆದುಬಿಟ್ಟರೆ ರಾವಣನು ಏಕಶಿರಸ್ಸು ದ್ವಿಬಾಹುವಾಗಿ ನಿಲ್ಲುವನು. ಆಬಳಿಕ ಸುಲಭವಾಗಿ ಅವನನ್ನು ಸಂಹರಿಸಬಹುದು ಎಂದು ಹೇಳಿದನು. ಅದನ್ನು ಕೇಳಿ ಬುದ್ಧಿವಂತನಾದ ರಾಮನು ಧೈರ್ಯಯುಕ್ತನಾಗಿ ಆಗ್ನೇಯಾಸ್ತ್ರವನ್ನು ಹೂಡಿ ಹೊಡೆದು ರಾವ ಣನ ನಾಭಿಯಲ್ಲಿದ್ದ ಅಮೃತಕಲಶವನ್ನು ಹೊರಕ್ಕೆ ಕೆಡಹಿ ಮರಳಿ ಯುದ್ಧಮಾಡಿ ತಲೆಗಳನ್ನು

ಬಾಹುಗಳನ್ನು ಕತ್ತರಿಸಿಹಾಕುತ್ತಿದ್ದರೂ ಪುನಃ ಒಂದು ತಲೆಯೂ ಎರಡು ಕೈಗಳೂ ಹೊಸದಾಗಿ ರಾವಣನಿಗೆ ಹುಟ್ಟುತ್ತಲೆ ಬಂದವು.

## ರಾವಣನ ಸಂಹಾರ.

ಬಳಿಕ ರಾವಣನು ಕೋಪಾವಿಷ್ಟನಾಗಿ ತಮ್ಮನಾದ ವಿಭೀಷಣನು ತನ್ನಲ್ಲಿ ಸ್ವಲ್ಪವೂ ದಯೆಯಿಲ್ಲದವನಾಗಿ ತನ್ನ ಗುಟ್ಟನ್ನೆಲ್ಲ ರಾಮನಿಗೆ ಹೇಳಿ ಅವನಿಂದ ತನ್ನ ಹೃದಯದಲ್ಲಿದ್ದ





ಅಮೃತಕಲಶವನ್ನು ಹೊರಕ್ಕೆ ತೆಗೆಸಿದನು. ಕುಲಘಾತಕನಾಗಿ ಭ್ರಾತೃದ್ರೋಹಿಯಾದ ಇಂಥವನು ತಮ್ಮನಾದರೂ ಮನ್ನಿಸಬಾರದು ಇವನನ್ನು ಕೂಡಲೆ ಸಂಹರಿಸಬೇಕೆಂದು ಆರ್ಭಟಿಸುತ್ತ ಮಯನು ತನಗೆ ಆಶೀರ್ವಾದಪೂರ್ವಕವಾಗಿ ಕೊಟ್ಟಿದ್ದ ಒಂದು ಶಕ್ತಿಯನ್ನು ಅಭಿಮಂತ್ರಿಸಿ ಅದನ್ನು ವಿಭೀಷಣನಮೇಲೆ ಎಸೆದನು. ಅದನ್ನು ಕಂಡು ಶ್ರೀರಾಮನು ತನ್ನ ಕೈಚಳಕದಿಂದ ಕ್ಷಣಮಾತ್ರದಲ್ಲಿ ಇಂದ್ರಶಕ್ತಿಯನ್ನು ಪ್ರಯೋಗಿಸಿ ರಾವಣನ ಶಕ್ತಿಯನ್ನು ತುಂಡುಮಾಡಿ ಕೆಡವಿ ವಿಭೀಷಣನನ್ನು ಬದುಕಿಸಿದನು. ಹೀಗೆ ತನ್ನ ಶಕ್ತಿಯು ವ್ಯರ್ಥವಾಗಿ ವಿಭೀಷಣನಿಗೆ ಸುಖವಾಗಿ ರಾಮನ ಆಶ್ರಯ ದೊರೆದುದನ್ನು ಕಂಡು ದಶಕಂಠನು ರಾಮನಿಗೆದುರಾಗಿ ನಿಂತು ಎಲೈ ನರಾಧಮನೆ! ನನ್ನ ತಮ್ಮನನ್ನು ಒಳಗು ಮಾಡಿಕೊಂಡು ನನ್ನನ್ನೆ ಸಂಹರಿಸುವುದಕ್ಕೆ ನಿಂತೆಯಾ! ನಿನ್ನ ಪರಾಕ್ರಮವನ್ನು ಈಗ ನೋಡುವೆನು ತೋರಿಸು ಎಂದು ಗರ್ಜಿಸುತ್ತ ತನ್ನಬಳಿಯಲ್ಲಿ ಉಳಿದಿದ್ದ ಸಮಸ್ತವಾದ ಅಸ್ತ್ರಶಸ್ತ್ರಗಳನ್ನು ಏಕಕಾಲದಲ್ಲಿ ಶ್ರೀರಾಮನಮೇಲೆ ಪ್ರಯೋಗಿಸಲು ಅವು ರಾಮನ ಸನ್ನಿಧಾನವನ್ನು ಕೂಡ ಸೇರಲಾರದೆ ಮಧ್ಯಮಾರ್ಗದಲ್ಲಿಯೆ ನಿಂತು ಶ್ರೀರಾಮನಿಗೆ ನಮಸ್ಕರಿಸಿ ಭೂಮಿಗೆ ಬಿದ್ದುಹೋದವು. ಹೀಗೆ ರಾವಣನ ಪರಾಕ್ರಮವು ಕುಗ್ಗಿ ಕೋಪವು ಅಧಿಕವಾಗಿ ಹಗೆಯು ಹೆಚ್ಚಾಗಿ ತತ್ತರಿಸಲು ರಾವಣನು ಇನ್ನು ನಾನು ಬದುಕುವಹಾಗಿಲ್ಲ ಒಂದೆರಡು ಅಸ್ತ್ರಪ್ರಯೋಗದಲ್ಲೆ ನನಗೆ ಮರಣಪ್ರಾಪ್ತವಾಗುವುದು. ನನಗೆ ದೈವಬಲವು ದುರ್ಬಲವಾದಕಾರಣ ಇಂಥ ಅನರ್ಥಗಳಿಗೆ ಕಾರಣವಾಯಿತು ನಾನು ಹುಟ್ಟಿದುದು ಪವಿತ್ರವಾದ ಪುಲಸ್ತ್ಯಬ್ರಹ್ಮನವಂಶ ನನಗೆ ಕುಬೇರನು ಅಣ್ಣನಾಗಬೇಕು. ಕುಂಭಕರ್ಣನಂಥ ಮಹಾಶೂರನೇ ತಮ್ಮನು. ಮಗನು ಮಹೇಂದ್ರನನ್ನು ಜಯಿಸಿ ಪ್ರಸಿದ್ಧನಾದ ಇಂದ್ರಜಿತುವು, ನನ್ನ ಆಕಾರವನ್ನು ನೋಡಿದರೆ ಒಂದಲ್ಲ ಎರಡಲ್ಲ ಮೂರೂಅಲ್ಲ ಹತ್ತು ತಲೆಗಳುಂಟು ನಾನು ವಾಸಮಾಡು

ತ್ತಿರುವ ಲಂಕೆಯು ಸಮುದ್ರಮಧ್ಯದಲ್ಲಿ ಶಾಶ್ವತವಾಗಿ ನೆಲೆಗೊಂಡಿದೆ, ಇಷ್ಟೊಂದು ಸಹಾಯ ಸಂಪತ್ತಿಗಳಿದ್ದರೂ ಕೈಲಾಸವನ್ನು ಎತ್ತಿ ಪರಮೇಶ್ವರನನ್ನು ಮೆಚ್ಚಿಸಿದ ಧೀರನಾದ ನಾನು ಸಾಧಾರಣನಾದ ಕಾಡುಮನುಷ್ಯನ ಕೈಗೆಸಿಕ್ಕಿ ಪ್ರಾಣಬಿಡುವ ಕಾಲವೊದಗಿತು ಇನ್ನು ಏನು ಮಾಡುವುದಕ್ಕೂ ಸಾಧ್ಯವಿಲ್ಲ ಕಾಲಗತಿಯನ್ನು ಮೀರುವುದಕ್ಕೆ ಯಾರಿಂದಾದೀತು ಆದದ್ದಾಗಲಿ ಈ ರಾಮನನ್ನು ಸಂಹರಿಸದೆ ಬಿಡಲಾರೆನು. ನನಗೆ ದೈವಬಲವಿದ್ದರೆ ನನ್ನ ಹಗೆಯಾದ ರಾಮನು ಸಾಯಲಿ ! ಹಾಗಿಲ್ಲವಾದರೆ ಕಾಲಗತಿಯನ್ನು ಅನುಸರಿಸಿ ನಾನೇ ಸಾಯುವೆನು ಇನ್ನು ಬದುಕಿ ಪ್ರಯೋಜನವಿಲ್ಲ ಎಂದು ತನ್ನ ಅಂತ್ಯಕಾಲದ ಆಲೋಚನೆಗಳನ್ನು ಮಾಡುತ್ತ ಆಹಾ ! ಬಹಳ ಹೊತ್ತಾಯಿತು ಸಾವಕಾಶವಾದರೆ ಹಗೆಯು ಹೆಚ್ಚಿಕೊಳ್ಳುವನೆಂದು ಗಾಬರಿಗೊಂಡು ರುದ್ರಾಸ್ತ್ರವನ್ನು ಹೂಡಿ ಹೊಡೆಯಲು ಶ್ರೀರಾಮನು ರೋಷಭೀಷಣನಾಗಿ ನಸುನಗುತ್ತ ತಾನು ಬ್ರಹ್ಮಾಸ್ತ್ರವನ್ನು ಹೂಡಿ ಹೊಡೆದನು. ಅದು ಬ್ರಹ್ಮಾಂಡವನ್ನೆ ಥಡಥಡುಗಿಸುತ್ತ ಮಹಾಜ್ವಾಲೆಯೊಡನೆ ಬಂದು ರಾವಣನ ಹೃದಯವನ್ನು ಛೇದಿಸಿಕೊಂಡು ಹೊರಹೊರಟು ಪಾತಾಳಲಂಕೆಯನ್ನು ಸುಟ್ಟು ಶಾಂತವಾಗಿ ಮರಳಿ ಶ್ರೀರಾಮನಬಳಿಗೆ ಬಂದು ಸೇರಿತು ಬಳಿಕ ರಾವಣನು ಗತಪ್ರಾಣನಾಗಿ ರಥದಲ್ಲಿ ಬಿದ್ದುಕೊಂಡನು. ಕೈಕಾಲುಗಳು ತುಂಡಾದುವು ತಲೆಯು ಕಡಿದುಬಿದ್ದಿತು. ಆಗ ರಾವಣನ ದೇಹದಿಂದ ಹೊರಟುಬಂದ ಒಂದು ದಿವ್ಯತೇಜಸ್ಸು ಶ್ರೀರಾಮನಲ್ಲಿ ಐಕ್ಯವಾಯಿತು. ಇದನ್ನು ಕಂಡು ದೇವತೆಗಳು ಬಹಳ ಸಂತೋಷಪಟ್ಟು ಆನಂದಸಾಗರದಲ್ಲಿ ಮುಳುಗಿ ತೇಲುತ್ತ ಲೋಕಕಂಟಕನಾಗಿದ್ದ ರಾವಣನನ್ನು ಕೊಂದ ಶ್ರೀರಾಮನಮೇಲೆ ಹೂಮಳೆಯನ್ನು ಕರೆದು ದೇವದುಂದುಭಿಗಳನ್ನು ಬಾರಿಸಿ ಮಹಾಸಂತೋಷದಿಂದ ಜಯಜಯನಿನಾದವನ್ನು ಮಾಡುತ್ತ ಧರ್ಮಕ್ಕೆ ಚ್ಯುತಿಯಿಲ್ಲ ಅಧರ್ಮಕ್ಕೆ ಅಭಿವೃದ್ಧಿಯಿಲ್ಲ ಸೀತೆಗೆ ದುಃಖವಿಲ್ಲ ರಾವಣನಿಗೆ ಉಳಿವಿಲ್ಲ ರಾಕ್ಷಸರಿಗೆ ಜಯವಿಲ್ಲ ಪರಹಿಂಸಕರಿಗೆ ಪುಣ್ಯವಿಲ್ಲ ಪರೋಪಕಾರಿಗಳಿಗೆ ಪಾಪವೇ ಇಲ್ಲ ಎಂಬುದನ್ನು ರಾವಣನ ಸಂಹಾರದಿಂದ ಲೋಕಕ್ಕೆ ತಿಳಿಸುವಂತಾಯಿತು ಎಂದು ಹೊಗಳುತ್ತಿರಲು ರಾವಣನಕಡೆಯವರು ತಮ್ಮ ಸ್ವಾಮಿಯು ಸತ್ತುದನ್ನು ಕಂಡು ಶೋಕಭೀತರಾಗಿ ಲಂಕಗೆ ಓಡಿಹೋದರು.

## ಸೀತೆಗೆ ಶುಭವಾರ್ತೆಯನ್ನು ತಿಳಿಸಿದುದು.

ಬಳಿಕ ಶ್ರೀರಾಮನು ಮಾತಲಿಯನ್ನು ಕರೆದು ಎಲೈ ಸಾರಥಿಯೆ ! ಇಂದ್ರನು ನನಗೆ ಮಾಡಿದ ಮಹೋಪಕಾರಕ್ಕಾಗಿ ಶ್ರೀರಾಮನು ಯಾವಜ್ಜೀವವೂ ದೇವತೆಗಳಿಗೆ ಚಿರಕಾಲ ಋಣಿಯಾಗಿರುವನೆಂದು ತಿಳಿಸು ಎಂದು ಹೇಳಿ ಮಾತಲಿಯನ್ನು ಕಳುಹಿಸಿದಮೇಲೆ ಆಪ್ತನಾದ ಆಂಜನೇಯನನ್ನು ಕರೆದು ಎಲೈ ಧೀರನಾದ ರಾಮಭಕ್ತನೆ ನಿನ್ನಿಂದ ರಾಮಕಾರ್ಯವು ನೆರವೇರಿತು ರಾಕ್ಷಸರು ಅಳಿದರು ರಾವಣನು ಮಡಿದನು. ವಿಭೀಷಣನಿಗೆ ಇನ್ನು ಪಟ್ಟಾಭಿಷೇಕಮಾಡಿ ನಾವು ಅಯೋಧ್ಯೆಗೆ ಹೊರಡುವ ಸನ್ನಾಹವನ್ನು ಮಾಡಬೇಕು. ಆದಕಾರಣ ನೀನು ತಡಮಾಡದೆ ಶೀಘ್ರವಾಗಿ ಹೋಗಿ ಆರ್ತಳಾಗಿರುವ ಸೀತೆಗೆ ರಾವಣನ ಮರಣವಾರ್ತೆಯನ್ನು ತಿಳಿಸಿಬಾ ಎಂದು ಆಜ್ಞಾಪಿಸಿದನು. ಬಳಿಕ ಆಂಜನೇಯನು ವಾಯುವೇಗದಿಂದ ಅಶೋಕವನಕ್ಕೆ ಬಂದು ಅಸುರಸ್ತ್ರೀಯರ ಕಾವಲಿನಲ್ಲಿ ಆರ್ತಳಾಗಿ ಕಂಗೆಟ್ಟಿರುವ ಸೀತೆಯನ್ನು ಕಂಡು ಮಾತಾಡಿ ! ಅಮ್ಮ ಲೋಕಮಾತೆ ! ನಿನ್ನ ಹಗೆಯಾದ ರಾವಣನು ರಾಮಬಾಣವನ್ನಾಶ್ರಯಿಸಿ ಮುಕ್ತಿಸಾಮ್ರಾಜ್ಯವನ್ನನುಭವಿಸಲು ಶಕ್ತಿಹೀನನಾಗಿ ರಣರಂಗದಿಂದ ಓಡಿಹೋಗಿ ಯಮನ ಪಟ್ಟಣವನ್ನು ಸೇರಿದನು. ಲಂಕೆಯಲ್ಲಿದ್ದ ರಾಕ್ಷಸರೆಲ್ಲರೂ ಯುದ್ಧದಲ್ಲಿ ಸತ್ತರು. ರಾವಣನ ಪರಿವಾರವೆಲ್ಲ ಹಾಳಾಯಿತು. ಈ ವಾರ್ತೆಯನ್ನು ನಿಮಗೆ ತಿಳಿಸಿಬರುವಂತೆ ಶ್ರೀರಾಮನ ಅಪ್ಪಣೆಯಾದುದ

ರಿಂದ ನಾನು ಇಲ್ಲಿಗೆ ಬಂದೆನು. ಇನ್ನು ಚಿಂತಿಸಬೇಡ ಸಂತೋಷವಾಗಿರು ನನಗೆ ಅಪ್ಪಣೆ ಮಾಡಿದರೆ ಇದುವರೆಗೂ ನಿನ್ನನ್ನು ಕಾಡಿಪೀಡಿಸುತ್ತಿದ್ದ ಈ ರಾಕ್ಷಸ ಸ್ತ್ರೀಯರನ್ನು ಕ್ಷಣಮಾತ್ರದಲ್ಲಿ ನಾಶಮಾಡುವೆನು ಎಂದು ಹೇಳಲು ಕರುಣಾಳುವಾದ ಸೀತಾದೇವಿಯು ದುಷ್ಟನಾದ ರಾವಣನ ಆಜ್ಞಾನುಸಾರವಾಗಿ ಈ ಹೆಂಗಸರು ನನ್ನನ್ನು ಪೀಡಿಸಿದರೆ ಹೊರತು ಅವರು ತಮ್ಮ ಸ್ವಬುದ್ಧಿಯಿಂದ ನನ್ನನ್ನು ಪೀಡಿಸಲಿಲ್ಲ ಆದಕಾರಣ ಅವರು ನಿರಪರಾಧಿಗಳು ಅವರಗೊಡವೆಗೆ ಹೋಗಬೇಡ ಎಂದು ಹೇಳಲು ಆಂಜನೇಯನು ಸಂತೋಷಭರಿತನಾಗಿ ಸೀತಾದೇವಿಗೆ ನಮಸ್ಕರಿಸಿ ಅವಳ ಅಪ್ಪಣೆಯನ್ನು ಪಡೆದು ಅತಿ ಜಾಗರೂಕನಾಗಿ ಅಶೋಕವನವನ್ನು ಬಿಟ್ಟು ರಾವಣನ ಅಂತಃಪುರವನ್ನು ಸೇರಿದನು.

## ರಾವಣನ ಮರಣವಾರ್ತೆಯನ್ನು ಕೇಳಿ ಮಂಡೋದರಿಯು ಪ್ರಲಾಪಿಸಿದುದು.

ಹೀಗೆ ಅಶೋಕವನದಿಂದ ಹೊರಟ ಆಂಜನೇಯನು ರಾವಣನ ಅರಮನೆಯನ್ನು ಹೊಕ್ಕು ಅಂತಃಪುರದಲ್ಲಿ ತನ್ನ ಗಂಡನಿಗೆ ಜಯವಾಗಲಿ! ಎಂದು ಹಾರೈಸುತ್ತಿದ್ದ ಪತಿವ್ರತಾಶಿರೋಮಣಿಯಾದ ಮಂಡೋದರಿಯನ್ನು ಕಂಡು ದುರುಳನಾದ ರಾವಣನು ತನ್ನ ದುರ್ಮಾರ್ಗದಿಂದ ಈ ದಿನ ರಾಮಬಾಣಕ್ಕೆ ಸಿಕ್ಕಿ ಹತನಾದನು ಎಂದು ಹೇಳಲು ಮಂಡೋದರಿಯು ಮಹಾ ದುಃಖದಿಂದ ಹಾ! ರಾವಣ! ಪ್ರಾಣನಾಯಕ! ಸ್ವರ್ಗಸುಖವನ್ನು ಪಡೆವುದಕ್ಕಾಗಿ ದುರ್ಮಾರ್ಗವನ್ನು ಅವಲಂಬಿಸಿದೆಯಾ! ಇನ್ನು ಲಂಕೆಗೆ ಗತಿಯಾರು! ಯಾರ ಮಾತನ್ನೂ ಕೇಳದೆ ನಿನ್ನ ಹಟವನ್ನೆ ಮುಂದುಮಾಡಿಕೊಂಡು ಮಕ್ಕಳನ್ನು ಮಾರಿಗೆ ತುತ್ತಾಗಿ ಕೊಟ್ಟು ಬಂಧುಬಳಗದವರನ್ನು ಕೊಲ್ಲಿಸಿ ಕಡೆಗೆ ನೀನೂ ಸತ್ತುಹೋದೆಯಾ? ಎಂದು ಬಗೆಬಗೆಯಾಗಿ ಪ್ರಲಾಪಿಸುತ್ತ ತನ್ನ ಪರಿವಾರದೊಂದಿಗೆ ಹೊರಟು ಯುದ್ಧಭೂಮಿಗೆ ಬಂದು ಸತ್ತುಬಿದ್ದಿರುವ ರಾವಣನ ದೇಹದಮೇಲೆ ಮೂರ್ಛಾಕ್ರಾಂತಳಾಗಿ ಬಿದ್ದು ಹೊರಳಿ ಮರಳಿ ಚೇತರಿಸಿಕೊಂಡೆದ್ದು ರಾಮನಕಡೆಗೆ ತಿರುಗಿ ನೋಡುತ್ತ ದೈನ್ಯದಿಂದ ಗೋಳಿಟ್ಟು ಅಳುತ್ತಿದ್ದಳು. ಆಗ ವಿಭೀಷಣನು ಸಹೋದರ ವಾತ್ಸಲ್ಯಭರಿತನಾಗಿ ಮಹಾಶೋಕದಿಂದ ರಾವಣನ ದುರ್ಗುಣಗಳನ್ನು ದುರ್ಮಾರ್ಗಗಳನ್ನು ನೆನೆದು ಹಂಬಲಿಸುತ್ತ ಆಹಾ! "ಮರಣಾಂತಾನಿವೈರಾಣಿ" ಎಂದು ಶಾಸ್ತ್ರದಲ್ಲಿ ಹೇಳಿರುವಕಾರಣ ಇನ್ನು ಏನು ಮಾಡುವುದಕ್ಕೂ ಸಾಧ್ಯವಿಲ್ಲವೆಂದು ಚಿಂತಿಸುತ್ತಿರಲು ಶ್ರೀರಾಮನು ವಿಭೀಷಣನನ್ನು ಕರೆದು ಎಲೈ ರಾಕ್ಷಸೇಶ್ವರನೆ! ಇನ್ನು ಪ್ರಲಾಪಿಸಿ ಪ್ರಯೋಜನವಿಲ್ಲ ನೀನು ಧೈರ್ಯಶಾಲಿಯಾಗಿ ಮಂಡೋದರಿಯನ್ನು ಸಂತೈಸಿ ನಿಮ್ಮ ಅಣ್ಣನಿಗೆ ಉತ್ತರಕ್ರಿಯಾದಿಗಳನ್ನು ಮಾಡಿ ಪರಿಶುದ್ಧನಾಗು ಎಂದು ಹೇಳಲು ವಿಭೀಷಣನು ಸ್ವಾಮಿ! ಕುಲದ್ರೋಹಿಯಾಗಿ ಪರಮಪಾತಕಿಯಾಗಿ ದುರಾಚಾರಸಂಪನ್ನನೆನಿಸಿಕೊಂಡಿದ್ದ ರಾವಣನನ್ನು ನಾನು ಹೇಗೆ ಮುಟ್ಟಿ ಸಂಸ್ಕರಿಸಲಿ ಎಂದು ಹೇಳಲು ಶ್ರೀರಾಮನು ಅಯ್ಯಾ! ನೀನು ಹಾಗೆ ಹೇಳಬೇಡ ಈ ರಾವಣನು ಬ್ರಹ್ಮವಂಶದಲ್ಲಿ ಹುಟ್ಟಿದವನು ಶಿವಪೂಜಾದುರಂಧರನು ಅಲ್ಲದೆ ರಾಮಬಾಣದಿಂದ ಹತನಾದವನು ಇವನಿಗಿಂತ ಪರಿಶುದ್ಧರೆ ಇಲ್ಲ ಆದಕಾರಣ ನೀನು ಧರ್ಮಾವಲಂಬಿಯಾಗಿದ್ದರೆ ಈ ಕ್ಷಣವೆ ರಾವಣನ ಉತ್ತರಕ್ರಿಯಾದಿಗಳನ್ನು ಮಾಡಿ ಪರಿಶುದ್ಧನಾಗು ಎಂದು ಹೇಳಲು ವಿಭೀಷಣನು ರಾಮಾಜ್ಞಾನುಸಾರವಾಗಿ ಅಣ್ಣನಿಗೆ ಉತ್ತರಕ್ರಿಯಾದಿಗಳನ್ನು ಮಾಡಿ ಮಂಡೋದರಿಯನ್ನು ಸಂತೈಸಿ, ತಾನು ಶುಚಿಭೂತನಾಗಿ ಮಿಂದು ರಾಕ್ಷಸಕುಲಕ್ರಮಾಗತವಾದ ಪದ್ಧತಿಯನ್ನು ಅನುಸರಿಸಿ ಸರ್ವವೂ ಸುಲಲಿತವಾಗಿ ನಡೆಯುವಂತೆ ಏರ್ಪಡಿಸಿ ತಾನೂ ತೃಪ್ತನಾಗಿ ಕಡೆಗೆ ಕರುಣಾಳುವಾದ ಶ್ರೀರಾಮನ ಪಾದವನ್ನು ಆಶ್ರಯಿಸಿ ರಾಮನ ಸನ್ನಿಧಿಯಲ್ಲಿ ನಿಂತುಕೊಂಡನು.

## ಲಂಕೆಯಲ್ಲಿ ವಿಭೀಷಣನ ಪಟ್ಟಾಭಿಷೇಕ.



ಬಳಿಕ ಶ್ರೀರಾಮನು ತನಗೆ ಆಪ್ತರಾದ ಸುಗ್ರೀವ ಹನುಮ ಆಂಜನೇಯ ಜಾಂಬವಂತರನ್ನು ಕರೆದು ಅಯ್ಯಾ ! ನೀವೆಲ್ಲರೂ ಲಕ್ಷ್ಮಣಸಮೇತರಾಗಿ ಲಂಕೆಗೆ ಹೋಗಿ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಾಭಿಷೇಕವನ್ನು ಮಾಡಿಬನ್ನಿ ಎಂದು ಹೇಳಿದನು. ಆ ಮಾತನ್ನು ಕೇಳಿ ಸರ್ವರೂ ಸಂತೋಷಭರಿತರಾಗಿ ರಾಮನ ಅಪ್ಪಣೆಯಂತೆ ಲಂಕೆಗೆ ಹೊರಟು ಬಂದು ವಿಭೀಷಣನ ಪಟ್ಟಾಭಿಷೇಕಕ್ಕಾಗಿ ಬೇಕಾದ ಉಪಕರಣಗಳನ್ನು ಸಿದ್ಧಪಡಿಸಿಕೊಂಡರು. ಬಳಿಕ ಸುಮುಹೂರ್ತದಲ್ಲಿ ವಿಭೀಷಣನನ್ನು ಲಂಕಾನಗರದಲ್ಲಿ ರಾವಣನ ಅರಮನೆಗೆ ಕರೆದುತಂದು ರತ್ನಸಿಂಹಾಸನದಮೇಲೆ ಕುಳ್ಳಿರಿಸಿ ಜಾಂಬವ ಸುಗ್ರೀವ ಹನುಮಂತ ಅಂಗದಾದಿಗಳು ನಾಲ್ಕುಕಡೆಯಲ್ಲಿಯೂ ಬಳಸಿನಿಂತು ಸಂತೋಷಪಡುತ್ತಿರಲು ವೈದಿಕ ಶಾಸ್ತ್ರಾನುಸಾರವಾದ ಮಂತ್ರಪುರಸ್ಸರವಾಗಿತಂದ ಚತುಸ್ಸಮುದ್ರದ ಉದಕಗಳಿಂದ ಅಭಿಷೇಚನೆಮಾಡಿ ರಾಕ್ಷಸರಾಜ್ಯದಸಾಮ್ರಾಜ್ಯ ಪಟ್ಟಾಭಿಷಿಕ್ತನಾದ ಗುರುತಿಗಾಗಿ ರತ್ನಕಿರೀಟವನ್ನು ಅವನ ಶಿರಸ್ಸಿಗೆ ಅಳವಡಿಸಿ ಪಟ್ಟದಕತ್ತಿಯನ್ನು ಕೈಗೆಕೊಟ್ಟು ಗುರುಹಿರಿಯರಿಗೆ ವಂದನೆಮಾಡಿಸಿ ಮಂಗಳವಾದ್ಯಗಳು ಘೋರ್ಗರೆಯುತ್ತಿರಲು ಲಕ್ಷ್ಮಣನ ಅಪ್ಪಣೆಯಂತೆ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಾಭಿಷೇಕವನ್ನು ಮಾಡಿಸಿದರು. ಹೀಗೆ ಪಟ್ಟಾಭಿಷಿಕ್ತನಾದ ಬಳಿಕ ವಿಭೀಷಣನು ಕೃತಜ್ಞತಾಪುರಸ್ಸರವಾಗಿ ಶ್ರೀರಾಮನಿಗೆ ಮಣಿದು ನಮಸ್ಕಾರಮಾಡಿ ತಾನು ತಂದಿದ್ದ ಕಪ್ಪಕಾಣಿಕೆಗಳನ್ನು ದಶರಥರಾಮನ ಪಾದಾರವಿಂದಗಳಿಗೆ ಸಮರ್ಪಿಸಲು ಎಲ್ಲರೂ ಜಯಜಯವೆಂದು ಹೊಗಳಿದರು. ಕಪಿನಾಯಕರು ಸಂತೋಷದಿಂದ ಕುಣಿದಾಡಿದರು. ಕಳಿದುಳಿದ ರಾಕ್ಷಸರು ಶ್ರೀರಾಮನ ಅಪ್ಪಣೆಯಂತೆ ವಿಭೀಷಣನನ್ನು ಓಲೈಸುತ್ತಿದ್ದರು. ಭಕ್ತವತ್ಸಲನೆಂಬ ಬಿರುದನ್ನು ಮೆರೆಯಿಸುವಂತೆ ವಿಭೀಷಣನಿಗೆ ಪಟ್ಟಾಭಿಷೇಕವಾದ ಸಂತೋಷದಿಂದ ರಾಮನು ತನ್ನ ಭಕ್ತನಾದ ವಿಭೀಷಣನನ್ನು ಕುರಿತು ಅಯ್ಯಾ ! ನೀನು ಪರಮಪಾವನನು ನಿನ್ನಲ್ಲಿ ಭಗವದ್ಭಕ್ತಿಯು ಚೆನ್ನಾಗಿ ನೆಲೆಗೊಂಡಿದೆ ಸದಾಚಾರವಂತನಾದ ನಿನಗೆ ಶ್ರೇಯಸ್ಸು ಅಭಿವೃದ್ಧಿಯಾಗುವುದು. ಈ ಅರ್ಥದಲ್ಲಿ ಸಂದೇಹವಿಲ್ಲ

ನಿನ್ನ ಚರಿತ್ರೆಯೂ, ನಿನ್ನ ಕೀರ್ತಿಯೂ, ಆಚಂದ್ರಾರ್ಕವಾಗಿ ಭೂಮ್ಯಾಕಾಶಗಳಿರುವವರೆಗೂ ಸ್ಥಿರವಾಗಿರಲಿ! ನಿನಗೆ ಮರಣವಿಲ್ಲ, ನೀನು ಚಿರಂಜೀವಿಯಾಗಿ ರಾಜ್ಯಭಾರಮಾಡುತ್ತ ಸುಖವಾಗಿರು ಎಂದು ಆಶೀರ್ವದಿಸಿ ವಿಭೀಷಣನ ನೆತ್ತಿಯಮೇಲೆ ತನ್ನ ಹಸ್ತವನ್ನಿಟ್ಟು ಮೈದಡವಿ ಆಲಿಂಗಿಸಿಕೊಂಡು ಸಂತೈಸಲು ವಿಭೀಷಣನು ಶ್ರೀರಾಮಚಂದ್ರನ ಆಶೀರ್ವಾದ ಅಭಿಮಾನಗಳಿಗೆ ಸಂತುಷ್ಟನಾಗಿ ಭಕ್ತಿಭಾವದಿಂದ ನಮಸ್ಕರಿಸಿ ನಿಂತುಕೊಂಡನು.

## ಸರಮೆಯು ಸೀತೆಯನ್ನು ಅಲಂಕರಿಸಿ ಕಳುಹಿಸಿದುದು.

ಆಗ ಶ್ರೀರಾಮನು ವಿಭೀಷಣನನ್ನು ನೋಡಿ ಹಸನ್ಮುಖಿಯಾಗಿ ಅಯ್ಯಾ! ನಿನ್ನ ದಯದಿಂದ ಶತ್ರುನಿಗ್ರಹವಾಗಿ ಧರ್ಮಸ್ಥಾಪನೆ ಮಾಡಿದಂತಾಯಿತು ದುಷ್ಟರಾಕ್ಷಸರೆಲ್ಲರೂ ಮಡಿದು ಹೋದರು. ನಿನಗೆ ಪಟ್ಟಾಭಿಷೇಕವೂ ಆಯಿತು. ಬಹುಕಾಲದಿಂದ ನನ್ನನ್ನು ಅಗಲಿ ಅಸುರ ಸಂಘದಲ್ಲಿ ಸೆರೆಯಾಗಿದ್ದ ಸೀತೆಯನ್ನು ಮಂಗಳಸ್ನಾನಾದಿಗಳಿಂದ ಪರಿಶುದ್ಧಿಗೊಳಿಸಿ ನನ್ನ ಬಳಿಗೆ ಕರೆದುಕೊಂಡು ಬಾ! ಎಂದು ಆಜ್ಞಾಪಿಸಿದನು. ಕೂಡಲೆ ವಿಭೀಷಣನು ಪರಮಸಂತೋಷದಿಂದ ಹೊರಟುಬಂದು ತನ್ನ ಹೆಂಡತಿಯಾದ ಸರಮೆಯನ್ನು ಕರೆದು ಸೀತಾದೇವಿಗೆ ಮಂಗಳ ಸ್ನಾನವನ್ನು ಮಾಡಿಸಿ ಅವಳನ್ನು ತಕ್ಕರೀತಿಯಲ್ಲಿ ಅಲಂಕಾರ ಮಂಡಿತೆಯಾಗಿ ಮಾಡಿ ಶ್ರೀರಾಮರ ಬಳಿಗೆ ಕರೆದುಕೊಂಡು ಹೋಗಲು ಸಿದ್ಧಪಡಿಸುವಳಾಗು ಎಂದು ಎಚ್ಚರಿಸಿದನು ಭಕ್ತಿವಂತಳಾದ ಸರಮೆಯು ಮಹಾಭಕ್ತಿಯಿಂದ ಸೀತೆಯ ಬಳಿಗೆಬಂದು ನಮಸ್ಕಾರಮಾಡಿ ತಾಯೆ! ಜಗಜ್ಜನನಿ! ನಿನ್ನಂಥ ಮಹಾಮಹಿಮರ ಪಾದಸೇವೆಮಾಡಿ ನಾನು ಧನ್ಯಳಾಗಬೇಕೆಂದಿದ್ದೇನೆ ನಿನ್ನ ಭಕ್ತಳಾದ ನನ್ನನ್ನು ಉದ್ಧರಿಸುವುದಕ್ಕಾಗಿ ರಾಕ್ಷಸ ಸ್ತ್ರೀಯೆಂದು ಉದಾಶೀನಮಾಡದೆ ನಾನು ಮಾಡುವ ಸೇವೆಯನ್ನು ಕೈಗೊಂಡು ನೀನು ರಾಮನ ಬಳಿಗೆ ಹೋಗಲು ಅಲಂಕಾರಸಹಿತಳಾಗಬೇಕು ದಯಮಾಡಿ ಹೊರಡು ಎಂದು ಹೇಳಿ ತನ್ನ ಅರಮನೆಗೆ ಕರೆದುಕೊಂಡು ಹೋಗಿ ದಿವ್ಯವಾದ ರತ್ನಪೀಠದಲ್ಲಿ ಕುಳ್ಳಿರಿಸಿ ಮಲ್ಲಿಗೆ ಸಂಪಗೆ ಜಾಜಿ ವಕುಳ ಮುಂತಾದ ಪುಷ್ಪಗಳ ತೈಲವನ್ನು ಹಚ್ಚಿ ದಿವ್ಯವಾದ ಪರಿಮಳೋದಕದಿಂದ ಸ್ನಾನಮಾಡಿಸಿ ಉಡುವುದಕ್ಕೆ ಯೋಗ್ಯವಾದ ಪೀತಾಂಬರವನ್ನು ಕೊಟ್ಟು ತನ್ನಲ್ಲಿದ್ದ ಆಭರಣಗಳನ್ನು ಸೀತಾದೇವಿಗೆ ಇಟ್ಟು ಅಲಂಕರಿಸಿ ಜಡೆಯನ್ನು ಹೆಣೆದು ಹೂಮುಡಿಸಿ, ಮುಂಗುರುಳಿಗೆ ಧೂಪದ ಹೊಗೆಯನ್ನುಕೊಟ್ಟು ಮುಖವಾಸ ಮೊದಲಾದ ಸಲಕರಣೆಗಳಿಂದ ತಾಂಬೂಲವನ್ನು ಕೊಟ್ಟು ದಿವ್ಯಸುಂದರವಾದ ರತ್ನಪಾತ್ರೆಯಲ್ಲಿ ಹಸುವಿನ ಹಾಲನ್ನುಕಾಯಿಸಿ ಸಕ್ಕರೆ ಜೇನುತುಪ್ಪಗಳನ್ನು ಬೆರಸಿ ಅದನ್ನು ಕುಡಿಯುವುದಕ್ಕೆಕೊಟ್ಟು ಮಗಳನ್ನು ನಾಗಕಳುಹಿಸುವ ತಾಯಿಯು ತನ್ನ ಪುತ್ರಿಗೆ ಬೇಕಾದ ಫಲತಾಂಬೂಲ ಮಂಗಳ ದ್ರವ್ಯಾದಿಗಳನ್ನು ಕೊಟ್ಟು ಆಶೀರ್ವದಿಸುವಂತೆ ಲೋಕಮಾತೆಯಾದ ಸೀತಾದೇವಿಗೆ ಭಕ್ತಿಭಾವದಿಂದ ನಮಸ್ಕರಿಸಿ ಸಂತೋಷಯುಕ್ತಳಾಗಿ ಮಂಗಳದ್ರವ್ಯಗಳೊಡನೆ ಫಲವನ್ನು ಸಮರ್ಪಿಸಿ ನಿನ್ನ ಸೇವೆಯಿಂದ ನನ್ನ ಜನ್ಮವು ಸಾರ್ಥಕವಾಯಿತು, ನಾನು ಧನ್ಯಳಾದೆನು ನನ್ನ ಕುಲವು ಪವಿತ್ರವಾಯಿತು ಇನ್ನು ನೀನು ನಿನ್ನ ಪತಿಯಸನ್ನಿಧಿಗೆ ಹೊರಡಬಹುದು ಎಂದು ಹೇಳಿ ಆನಂದಭಾಷ್ಪವನ್ನು ಸುರಿಸುತ್ತ ನಿಂತುಕೊಳ್ಳಲು, ಪುಷ್ಪವೃಷ್ಟಿಯು ಸುರಿಯಿತು. ದೇವತೆಗಳು ಆನಂದಪಟ್ಟರು. ಅಷ್ಟುಹೊತ್ತಿಗೆ ವಿಭೀಷಣನು ಮಂಗಳವಾದ್ಯಗಳೊಡನೆ ಪಲ್ಲಕ್ಕಿಯನ್ನು ತಂದು ಸೀತಾದೇವಿಗೆ ನಮಸ್ಕರಿಸಿ ಅವಳನ್ನು ಅದರಲ್ಲಿ ಕೂರಿಸಿಕೊಂಡು ಸಂಭ್ರಮಯುಕ್ತನಾಗಿ ನಡೆದು ಬರುತ್ತಿರುವ ಸ್ತ್ರೀಸಮೂಹದೊಡನೆ ಉತ್ಸವಪೂರ್ವಕವಾಗಿ ರಾಮನ ಬಳಿಗೆ ಕರೆದುಕೊಂಡು ಬರುತ್ತಿರಲು, ಕಪಿಕರಡಿಗಳು ಮಹೋತ್ಸಾಹದಿಂದ ಸೀತಾದೇವಿಯನ್ನು ನೋಡಲು ಉಬ್ಬಿಕುಣಿಯುತ್ತ ಹರ್ಷಧ್ವನಿಯು ದಶದಿಕ್ಕುಗಳನ್ನು ತುಂಬಿಕೊಳ್ಳಲು ದಂಡಿಗೆಯನ್ನು ಹೊತ್ತುಕೊಂಡು

ಅಲಂಕಾರಮಂಡಿತೆಯಾದ ಸೀತಾದೇವಿಯನ್ನು ನೋಡಿನೋಡಿ ಹಿಗ್ಗುತ್ತ ಮಹಾಸಂತೋಷ ದಿಂದ ಸೀತಾಮಾತೆಗೆ ಜಯವಾಗಲಿ! ರಾಮಚಂದ್ರನಿಗೆ ಮಂಗಳವಾಗಲಿ! ಲೋಕಕ್ಕೆಲ್ಲ ಸುಖವಾಗಲಿ! ನಮ್ಮ ಇಷ್ಟಾರ್ಥ ನೆರವೇರಲಿ! ಎಂದು ಹೊಗಳುತ್ತ ಬಹು ಸಂಭ್ರಮದಿಂದ ಸೀತೆಯನ್ನು ಕರೆದುತಂದು ಶ್ರೀರಾಮನ ಸನ್ನಿಧಿಯಲ್ಲಿ ಪಲ್ಲಕ್ಕಿಯಿಂದಿಳಿಸಿ ಕೈಮುಗಿದು ನಿಂತು ಕೊಂಡರು. ವಿಭೀಷಣನು ಪತ್ನಿಸಹಿತನಾಗಿ ಶ್ರೀರಾಮನಿಗೆ ನಮಸ್ಕರಿಸಿ, ಎಲೈ ದೇವದೇವನೆ! ಇನ್ನು ನಿನ್ನ ಅರ್ಧಾಂಗಿಯಾದ ಈ ಲೋಕಮಾತೆಯನ್ನು ಸ್ವೀಕರಿಸಿ ಸುಖವಾಗಿ ಬಾಳು! ಎಂದು ಹೇಳುತ್ತ ದೀರ್ಘದಂಡಪ್ರಣಾಮಿಯಾಗಿ ಕೈಮುಗಿದು ಶ್ರೀರಾಮನ ಕೃಪಾಕಟಾಕ್ಷವನ್ನು ಎದುರುನೋಡುತ್ತಿದ್ದನು.

## ಸೀತೆಯ ಸತ್ಯಪರೀಕ್ಷೆ ಅಗ್ನಿದೇವನ ಆದರಣೆ.



ಬಳಿಕ ಸೀತಾದೇವಿಯು ಪಲ್ಲಕ್ಕಿಯಿಂದಿಳಿದು ಮೆಲ್ಲಮೆಲ್ಲಗೆ ನಡೆದುಬಂದು ಶ್ರೀರಾಮರ ಮುಖವನ್ನು ನೋಡಿ ಆನಂದಭರಿತಳಾಗಿ ಪುಳಕೋದ್ಗತವಾದ ಆನಂದಭಾಷ್ಪದಿಂದ ನೆನೆದು ಹರ್ಷಯುಕ್ತಳಾಗಿ ತನ್ನ ಪತಿಯ ಪಾದಾರವಿಂದವನ್ನು ಮುಟ್ಟಿ ನಮಸ್ಕರಿಸಿ ಲಜ್ಜೆಯಿಂದ ತಲೆ ಬಾಗಿ ನಿಂತುಕೊಂಡಳು. ಆಗ ತನ್ನ ಹೆಂಡತಿಯಾದ ಸೀತಾದೇವಿಯ ಸೌಂದರ್ಯವನ್ನು ನೋಡಿ ರಾಮನು ಭ್ರಾಂತನಾಗಿ ಇಂಥ ಸುಂದರಿಯಾದ ಸ್ತ್ರೀರತ್ನವನ್ನು ನೋಡಿ ಅತ್ಯಂತ ಕಾಮುಕನಾದ ರಾವಣನು ಸಹಿಸಿಕೊಂಡು ಸುಮ್ಮನಿರಬಲ್ಲನೆ! ಎಂದಿಗೂ ಇಲ್ಲ ಕಾಮಚಾರಿಗಳಾದ ರಾಕ್ಷಸರ ಗುಂಪಿನಲ್ಲಿ ಒಂಟಿಯಾಗಿ ಸೆರೆಸಿಕ್ಕಿದವಳನ್ನು ರಾಮನು ಪರಿಗ್ರಹಿಸಿ ಮನೆಗೆ ಕರೆದುತಂದನು ಎಂದು ಲೋಕವು ನಿಂದಿಸದೆ ಇರಲಾರದು ಇದೂ ಅಲ್ಲದೆ ಹೆರವರು ಎತ್ತಿಕೊಂಡು ಹೋದ ಹೆಂಡತಿಯನ್ನು ಬಿಡಿಸಿಕೊಂಡು ಬರಲಾರದೆ ಹೋದನೆಂಬ ಅಪಖ್ಯಾತಿಯೂ ಬರುವುದು ಆದ ಕಾರಣ ನಾನು ಇದೆಲ್ಲವನ್ನು ತಪ್ಪಿಸಿಕೊಂಡು ನಿನ್ನ ಸೆರೆಯನ್ನು ಬಿಡಿಸಿ ಹೊರಗೆ ಕರೆದುತಂದೆನು. ಇನ್ನು ನೀನು ಸುಖವಾಗಿ ನಿರ್ಯೋಜನೆಯಿಂದ ಯಾರಮನೆಯಲ್ಲಿಯಾದರು ಇರು, ಸುಗ್ರೀವ, ಅಂಗದ, ನಳ, ನೀಲ, ವಿಭೀಷಣ, ಲಕ್ಷ್ಮಣರು ನಿನ್ನನ್ನು ಹೆತ್ತತಾಯಿಯಂತೆ ಪೋಷಿಸುವರು

ಇದಕ್ಕೆ ಸಂಶಯವಿಲ್ಲವೆಂದು ಹೇಳಿದನು. ಆಗ ಸೀತಾದೇವಿಯು ಖಿನ್ನಳಾಗಿ ತನ್ನ ಪತಿಯ ಪಾದದ ಮೇಲೆ ಬಿದ್ದು ಹೊರಳಾಡಿ ದುಃಖಿಸುತ್ತ ಎಲೈ ರಾಮಚಂದ್ರನೆ! ನೀನು ಹೇಳುವ ಮಾತುಗಳನ್ನು ಕೇಳಿ ನನಗೆ ತುಂಬ ವ್ಯಸನಪ್ರಾಪ್ತವಾಗುತ್ತಿದೆ ರಾಕ್ಷಸರ ಬಂದಿಯಲ್ಲಿದ್ದರೂ ಎಂಥ ಕಷ್ಟಬಂದರೂ ನಾನು ರಾಮಚಂದ್ರನನ್ನು ಹೊರತು ಮತ್ತಾವ ಪರಪುರುಷನನ್ನೂ ಕನಸಿನಲ್ಲಿಯೂ ಕಂಡವಳಲ್ಲ! ಇಂಥವಳನ್ನು ನೀನು ತಿರಸ್ಕರಿಸುವುದು ಸರಿಯಲ್ಲ. ಈ ವಿಧವಾದ ಅಭಿಪ್ರಾಯವನ್ನು ಆಂಜನೇಯನು ಮುದ್ರಿಕೆಯನ್ನು ತಂದಾಗಲೆ ಹೇಳಿ ಕಳುಹಿಸಿದ್ದರೆ ಮೊದಲೆ ನಾನು ಪ್ರಾಣತ್ಯಾಗವನ್ನಾದರೂ ಮಾಡಿಕೊಳ್ಳುತ್ತಿದ್ದೆ ನಿನಗೂ ಕಷ್ಟ ತಪ್ಪುತ್ತಿದ್ದಿತು. ಈಗ ಹೀಗೆ ಹೇಳುವುದು ನ್ಯಾಯವೆ! ರಾಮಚಂದ್ರ ನಿನ್ನನ್ನು ಬಿಟ್ಟು ನಾನು ಎಲ್ಲಿಗೆ ಹೋಗಲಿ! ನನಗೆ ದಿಕ್ಕುಯಾರು! ನಾನೇ ನಿನ್ನ ಮನಸ್ಸಿನ ಸಂಶಯವನ್ನು ಪರಿಹರಿಸುವುದಕ್ಕಾಗಿ ಈ ಅಗ್ನಿಯಲ್ಲಾದರೂ ಪ್ರವೇಶಮಾಡಿ ಸಮಾಧಾನ ಪಡಿಸುವೆನೆಂದು ಹೇಳುತ್ತ ವಿಭೀಷಣನ ಮುಖವನ್ನು ನೋಡಲು ಇಂಗಿತಜ್ಞನಾದ ವಿಭೀಷಣನು ಲಕ್ಷ್ಮಣನ ಸಹಾಯದಿಂದ ರಾಮನ ಅಪ್ಪಣೆಯನ್ನು ಪಡೆದು ಅಗ್ನಿಕುಂಡವನ್ನು ತೆಗಿಸಿ ಅದರಲ್ಲಿ ಕಾಷ್ಠಗಳನ್ನು ತುಂಬಿ ಜ್ವಾಜ್ವಲ್ಯಮಾನವಾಗಿ ಉರಿಯುತ್ತಿರುವ ಅಗ್ನಿಯನ್ನು ಪ್ರತಿಷ್ಠಿಸಿದನು. ಆಗ ಸೀತಾದೇವಿಯು ಶ್ರೀರಾಮನಿಗೆ ನಮಸ್ಕರಿಸಿ ಅಂಜಲಿಬದ್ಧಳಾಗಿ ಭಕ್ತಿಭಾವದಿಂದ ರಾಮಧ್ಯಾನಮಾಡಿ ಮೂರುಸಾರಿ ಅಗ್ನಿದೇವನಿಗೆ ಪ್ರದಕ್ಷಿಣೆ ಮಾಡಿ ಬಂದು ಎದುರಿಗೆ ನಿಂತು ದಿಗ್ದೇವತೆಗಳಿಗೂ ತ್ರಿಮೂರ್ತಿಗಳಿಗೂ ದಶರಥನಿಗೂ ಭೂದೇವಿಗೂ ಜನಕರಾಯನಿಗೂ ವಂದನೆಗಳನ್ನು ಸಮರ್ಪಿಸಿ ಭಕ್ತಿಯುಕ್ತಳಾಗಿ ಈ ಅಗ್ನಿಪ್ರವೇಶದ ಮೂಲಕ ತನ್ನ ಮಹಿಮೆಯನ್ನು ಪ್ರಸಿದ್ಧಪಡಿಸಬೇಕೆಂದು ಆದಿಲಕ್ಷ್ಮಿಯ ಅವತಾರ ಸ್ವರೂಪಿಣಿಯಾದ ಸೀತಾದೇವಿಯು ಸೆರಗನ್ನು ಸಿಕ್ಕಿಸಿಕೊಂಡು ನೆರಿಗಳನ್ನು ಹದಮಾಡಿಕೊಳ್ಳುತ್ತ ಅಂತರ್ಮುಖಿಳಾಗಿ ನಿಂತು ಕೈಮುಗಿದುಕೊಂಡು ಎಲೈ ದೇವಾಧಿದೇವತೆಗಳಿರಾ! ಎಲೌ ಭೂಮಾತೆಯೆ! ಓ ದಿಗ್ದೇವತೆಗಳಿರಾ! ನಾನು ಹುಟ್ಟಿದಾಗಿನಿಂದ ಇದುವರೆಗೂ ದೃಢಚಿತ್ತಳಾಗಿದ್ದರೆ ದೊರ್ಕೆಯಾದ ದಶರಥಪುತ್ರನ ಪಾದಾರವಿಂದವನ್ನು ಸದಾ ಸ್ಮರಿಸುತ್ತ ಬಾಳಿದವಳಾದರೆ ಅನ್ಯಪುರುಷನನ್ನು ಕನಸಿನಲ್ಲಿಯೂ ಕಾಣದವಳಾಗಿದ್ದರೆ, ಮನೋವಾಕ್ಕಾಯ ಕರ್ಮಗಳಲ್ಲಿ ಒಂದರಲ್ಲಿಯೂ ನ್ಯೂನತೆ ಇಲ್ಲದೆ ಸರ್ವಸಮ್ಮತಿಯಿಂದ ನಾನು ರಾಮಚಂದ್ರನೆ! ನನ್ನ ಗಂಡನೆಂದು ತಿಳಿದುಕೊಂಡು ವರ್ತಿಸುತ್ತಿದ್ದರೆ ನನ್ನ ಭಕ್ತಿಭಾಗ್ಯವು ಬಾಹಿರವೆ ಎಣಿಸಲಾಗಿದ್ದರೆ ನಮ್ಮೆದುರಿಗೆ ನಾನು ಈ ಅಗ್ನಿಕುಂಡವನ್ನು ಪ್ರವೇಶಿಸಿದಾಗ ನನಗೆ ಯಾವ ಬಾಧೆಯೂ ಇಲ್ಲದೆ ಸುಖವಾಗಿರಲಿ! ಎಂದು ಗಟ್ಟಿಯಾಗಿ ಹೇಳಿ ತಾನು ಅಗ್ನಿಯನ್ನು ಪ್ರವೇಶಿಸಿದಳು ಕೂಡಲೆ ಸುಗ್ರೀವ ಅಂಗದ ನಳ ನೀಲ ಜಾಂಬವಂತ ಲಕ್ಷ್ಮಣರು ಹಾಹಾ! ಎಂದು ಹಮ್ಮೈಸುತ್ತಿರಲು ಹನುಮಂತನು ಹುಸಿನಗೆಯನ್ನು ಬೀರುತ್ತ ಸೀತಾ ದೂತನಾದ ನನಗೆ ತಣ್ಣಗೆ ಆಗಿದ್ದ ಅಗ್ನಿದೇವನು ನಮ್ಮ ತಾಯಿಯಾದ ಸೀತೆಯನ್ನು ನೋಯಿಸುವನೆ! ಎಂದಿಗೂ ಇಲ್ಲ ಸುಮ್ಮನಿರಿ ಎಂದು ಸಮಾಧಾನ ಮಾಡುತ್ತಿರಲು, ಅಗ್ನಿಯು ಶೀತಳನಾಗಿ ಸೀತಾದೇವಿಯನ್ನು ತನ್ನ ಜ್ವಾಲೆಯೆಂಬ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿಕೊಂಡು ತಾನು ಭಕ್ತಿಯಿಂದಾಕೆಗ ನಮಸ್ಕರಿಸಿ ಉಪಚರಿಸುತ್ತಿದ್ದನು. ಬಳಿಕ ಕಮಲಸರೋವರವನ್ನು ಹೊಕ್ಕ ಹಂಸಪಕ್ಷಿಯಂತೆ ಸೀತಾದೇವಿಯು ಕಾಂತಿಯುಕ್ತಳಾಗಿ ಮುಡಿದ ಹೂವು ಬಾಡದೆ ಭಕ್ತಿಭಾವದಿಂದ ರಾಮಮಂತ್ರವನ್ನು ಜಪಿಸುತ್ತ ಸಹಸ್ರಾರಪದ್ಮದಲ್ಲಿ ಮಂಡಿಸಿ ತೋರುವ ಮಹಾಲಕ್ಷ್ಮಿಯಂತೆ ಸರ್ವರಿಗೂ ಆಶ್ಚರ್ಯವನ್ನುಂಟುಮಾಡುತ್ತ ಸಂಪೂರ್ಣ ಕಳೆಗಳಿಂದ ಶೋಭಿಸುತ್ತಿದ್ದಳು.

## ಅಗಸ್ತ್ಯರ ಆಗಮನ ಅಗ್ನಿಯ ಆದೇಶ.

ಇದೆಲ್ಲವನ್ನು ನೋಡುತ್ತಿದ್ದ ಅಗಸ್ತ್ಯಮಹರ್ಷಿಯು ಆಶ್ಚರ್ಯಭರಿತನಾಗಿ ಮುಂದಕ್ಕೆ ಬಂದು ರಾಮನನ್ನು ಕುರಿತು ಎಲೈ ದಶರಥಪುತ್ರನೇ! ನಿನ್ನ ಮನಸ್ಸಿನ ಕಳಂಕವನ್ನು ಈ ಅಗ್ನಿ ಕುಂಡದಲ್ಲಿ ಹಾಕಿ ಉರಿಸಿಬಿಡು. ನಿಷ್ಕಳಂಕಿಣಿಯಾದ ಲೋಕಮಾತೆಯಲ್ಲಿ ಯಾವ ದೋಷವೂ ಇಲ್ಲ. ಅವಳ ಪಾತಿವ್ರತ್ಯವನ್ನು ಪರೀಕ್ಷಿಸುವುದಕ್ಕೆ ಬ್ರಹ್ಮಾದಿಗಳಿಗೂ ಅಸಾಧ್ಯವಾಗಿದೆ ಸಾಕ್ಷಾನ್ನಾರಾಯಣಾಂಶ ಸಂಭೂತನಾದ ನಿನಗೆ ತಿಳಿಯದ ಸಂಗತಿಯೆ ಇಲ್ಲ ಈ ಜಾನಕಿ ಜಗಜ್ಜನನಿ ಲೋಕವಿಖ್ಯಾತೆ ಮಹಾಪತಿವ್ರತೆ ಕಳಂಕರಹಿತಳು ಅಗ್ನಿಯು ಆಕೆಯ ಪಾತಿವ್ರತ್ಯಬಲದಿಂದ ಶೀತಳನಾಗಿ ಸೀತೆಯನ್ನು ಉಪಚರಿಸುತ್ತಿರುವನು ನೋಡು ಇನ್ನು ಮನಃಕಷಾಯವನ್ನು ತೊರೆದು ಆದಿಲಕ್ಷ್ಮೀಸ್ವರೂಪಳಾದ ಇವಳನ್ನು ಪತ್ನಿಯಾಗಿ ಸ್ವೀಕರಿಸಿ ಸುಖದಿಂದ ಬಾಳು ನಿಮ್ಮ ಪಿತೃದೇವತೆಗಳಿಗೆ ಇದು ಸಂತೋಷಕರವಾಗಿದೆ ನಾನು ಸತ್ಯವಾಗಿ ಹೇಳುತ್ತೇನೆ ಕೇಳು ಅಗೋ ಆಕಾಶಮಾರ್ಗದಲ್ಲಿ ತ್ರಿಮೂರ್ತಿ ಸಹಿತನಾಗಿ ಬಂದಿರುವ ನಿಮ್ಮ ತಂದೆಯಾದ ದಶರಥನು ನಿನ್ನೊಡನೆ ಮಾತಾಡಬೇಕೆಂದು ಕುತೂಹಲಿಸುತ್ತಿರುವನು. ತ್ರಿಮೂರ್ತಿಗಳೂ ಕೂಡ ನಿನ್ನ ಪತ್ನಿ ನಿಷ್ಕಳಂಕೆಯೆಂದು ಸಾರಿಹೇಳುತ್ತಿರುವರು ನೋಡು ಎನಲು ಶ್ರೀರಾಮನು ಕಣ್ಣೆತ್ತಿ ನೋಡುತ್ತಿರುವಷ್ಟರಲ್ಲಿ ಅಗ್ನಿದೇವನು ಅಡ್ಡವಾಗಿ ಬಂದು ಎಲೈ ರಾಮಚಂದ್ರನೆ! ನಿರ್ದೋಷಿಯಾದ ನಿನ್ನ ಹೆಂಡತಿಯನ್ನು ಉದಾಸೀನದಿಂದ ತಿರಸ್ಕರಿಸಬೇಡ ಮಹಾಪತಿವ್ರತೆಯರಲ್ಲಿ ಈ ಸೀತಾರಮಣಿಯು ಅಗ್ರಗಣ್ಯಳು ಇವಳನ್ನು ಆದರದಿಂದ ಸ್ವೀಕರಿಸಿ ಬಾಳುತ್ತಿದ್ದರೆ ನಿನ್ನ ವಂಶವು ಅಭಿವೃದ್ಧಿಯಾಗಿ ನಿನಗೆ ಸುಖವಾಗುವುದು ನಾನು ನಿನ್ನ ಭಕ್ತನು ನಿನ್ನ ಸೂತ್ರವನ್ನು ಅನುಸರಿಸಿ ನಡೆಯುವ ಬಂಟನಾದರೂ ನನಗೆ ತೋರಿದ ಸಹಜವಾದ ಗುಣಧರ್ಮಗಳನ್ನು ನಿರ್ವಂಚನೆಯಿಂದ ನಿನಗೆ ಹೇಳಿರುವೆನು ಎಂದು ನಮಸ್ಕರಿಸಿ ಹೊರಟುಹೋದನು, ಬಳಿಕ ದಶರಥನೊಡನೆ ಆಕಾಶಮಾರ್ಗದಲ್ಲಿ ಬಂದು ನಿಂತಿದ್ದ ತ್ರಿಮೂರ್ತಿಗಳು ಶ್ರೀರಾಮನನ್ನು ಕುರಿತು ಎಲೈ ರಾಮಚಂದ್ರನೆ! ನೀನು ಅನುಮಾನಪಡಬೇಡ ನಿನ್ನ ಹೆಂಡತಿಯಾದ ಸೀತೆಯು ಮಹಾಪತಿವ್ರತೆ ಅತಿಯಾಗಿ ಹೆಚ್ಚಿ ಲೋಕಕಂಟಕರಾಗಿದ್ದ ರಾಕ್ಷಸರನ್ನು ಕೊಂದು ಭೂಭಾರವನ್ನು ಇಳಿಸುವ ಕಾರ್ಯದಲ್ಲಿ ನಿನಗೆ ಸಹಾಯಮಾಡುವುದಕ್ಕಾಗಿ ಲೋಕದಲ್ಲಿ ಹೆಂಗಸಾಗಿ ಮನುಷ್ಯಾವತಾರದಿಂದ ಹುಟ್ಟಿದ ಮಹಾಲಕ್ಷ್ಮಿಯೆ ಇವಳು ಇವಳಲ್ಲಿ ಅನುಮಾನಪಡಬೇಡ ಇವಳನ್ನು ಅನಾದರಣೆ ಮಾಡಬೇಡ! ಇದೆಲ್ಲವೂ ಲೋಕವಿಡಂಬನಕ್ಕಾಗಿ ನಡೆಸುತ್ತಿರುವ ಕಪಟನಾಟಕ ಸೂತ್ರಧಾರಿಣದ ಕೆಲಸಗಳು ಇನ್ನು ಅಗ್ನಿಮುಖದಿಂದ ಪರಿಶುದ್ಧಳಾದ ಸೀತೆಯನ್ನು ನೀನು ಪರಿಗ್ರಹಿಸಿದರೆ ನಿನಗೆ ಯಾವ ಅಪವಾದವೂ ಬರಲಾರದು ನನ್ನ ಮಾತನ್ನು ನಂಬು ಸೀತೆಯನ್ನು ಸಂತೈಸು ಶಾಶ್ವತ ಸುಖಕೀರ್ತಿಗಳಿಂದ ರಾಜ್ಯವನ್ನಾಳಿ ಸಂತತಿಗಳನ್ನು ಪಡೆದು ಸುಖವಾಗಿರು ಎಂದು ಹೇಳಿ ಸುಮ್ಮನಾದರು.

## ದಶರಥನು ರಾಮನಿಗೆ ವಿವೇಕ ಹೇಳಿದುದು.

ಹೀಗೆ ತ್ರಿಮೂರ್ತಿಗಳು ಶ್ರೀರಾಮನಿಗೆ ಸೀತಾವೃತ್ತಾಂತವನ್ನು ಹೇಳಿ ಸುಮ್ಮನಾಗಲು, ರಾಮಲಕ್ಷ್ಮಣರು ಅವರ ಬಳಿಯಲ್ಲಿ ನಿಂತಿದ್ದ ನಮ್ಮ ತಂದೆಯಾದ ದಶರಥನನ್ನು ಕಂಡು ಭಕ್ತಿಭಾವದಿಂದ ನಮಸ್ಕರಿಸಿದನು. ಆಗ ದಶರಥನು ಆನಂದಭರಿತನಾಗಿ ದೇವತೆಗಳ ಅಪ್ಪಣೆಯಂತೆ ರಾಮಲಕ್ಷ್ಮಣರನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಶೀರ್ವದಿಸಿ ಸೀತೆಯ ಮುಖವನ್ನು ನೋಡಿ ಹರ್ಷಿಸುತ್ತ ತನ್ನ ಮಗನನ್ನು ಕುರಿತು ಇಂತೆಂದನು. ಎಲೈ ರಾಮಚಂದ್ರನೆ ನೀನು ಮಹಾವಿಷ್ಣುವಿನ ಅಂಶದಿಂದ ವರಪ್ರಧಾನ ರೂಪವಾಗಿ ನನಗೆ ಮಗನಾಗಿ ಹುಟ್ಟಿದ

ನಾರಾಯಣನು ನಿನ್ನ ಹೆಂಡತಿಯಾದ ಸೀತೆಯು ನಿನ್ನ ಅವತಾರಕಾರ್ಯಕ್ಕೆ ಸಹಾಯಮಾಡಲು, ಹುಟ್ಟಿದ ಆದಿಲಕ್ಷ್ಮೀ ಸ್ವರೂಪಳು ಇವಳಿಗಿಂತಲೂ ಪತಿವ್ರತೆಯರಾದವರು ಯಾರು ಇಲ್ಲ ಇವಳು ಮಹಾನಿಷ್ಠಳು ಅಲ್ಲದೆ ಕುಲವರ್ಧಿನಿ ನಿಷ್ಕಪಟಿ ಮಹಾಪವಿತ್ರಳಾದ ಇವಳನ್ನು ನೋಯಿಸದೆ ಸುಖಸಂತೋಷದಿಂದ ಪಟ್ಟಾಭಿಷಿಕ್ತನಾಗಿ ರಾಜ್ಯವನ್ನಾಳುತ್ತಿರು ಎಲೈ ಲಕ್ಷ್ಮಣನೆ ! ಅಣ್ಣನ ಅಪ್ಪಣೆಯನ್ನು ಮೀರದೆ ಅವನ ನೆರಳಿನೋಪಾದಿಯಲ್ಲಿ ಶ್ರೀರಾಮನನ್ನು ವರ್ತಿಸುತ್ತ ಸೀತೆಯ ಸೇವೆಯನ್ನು ಮಾಡುತ್ತಿರು ಎಂದು ಹೇಳಿ ಸೊಸೆಯ ಕಡೆಗೆ ತಿರುಗಿ ಎಲೌ ಜಗನ್ಮಾತೆಯಾದ ಜಾನಕಿಯೆ ! ಲೋಕಾಪವಾದವನ್ನು ಕಳೆದುಕೊಳ್ಳುವುದಕ್ಕಾಗಿ ರಾಮನು ಹೀಗೆ ಮಾಡಿದನು ಅಲ್ಲದೆ ನಿನ್ನಲ್ಲಿ ಅವನಿಗೆ ಅನುಮಾನವೂ ಅನಾದರಣೆಯೂ ಇಲ್ಲ. ನೀನು ದೃಢಮನಸ್ಕಳಾಗಿ ಸಂತೋಷದಿಂದಿದ್ದರೆ ನಮ್ಮ ವಂಶವು ಅಭಿವೃದ್ಧಿಯಾಗಿ ನನಗೆ ಸಂತೋಷವುಂಟಾಗುವುದು. ನಿನ್ನಂಥ ಪತಿವ್ರತೆಯಾದ ಸೊಸೆಯೂ ರಾಮನಂಥ ಶೂರನಾದ ಮಗನೂ ಹುಟ್ಟಿದುದರಿಂದ ನಮ್ಮ ಕುಲವು ಪವಿತ್ರವಾಯಿತು ನಾನು ಕೃತಾರ್ಥನಾದೆನು ಸ್ವರ್ಗಸುಖವು ಲಭಿಸಿತು ಲೋಕದಲ್ಲಿ ಆಚಂದ್ರಾರ್ಕವಾದ ಕೀರ್ತಿಯುಂಟಾಯಿತು ಇನ್ನು ನಾನು ಹೋಗಿಬರುತ್ತೇನೆಂದು ಹೇಳಿ ದೇವತೆಗಳಿಗೆ ವಂದಿಸಿ ಮಕ್ಕಳನ್ನು ಹರಿಸಿ ಸೊಸೆಗೆ ಆಶೀರ್ವದಿಸಿ ತಾನು ಸ್ವರ್ಗಲೋಕಕ್ಕೆ ಹೊರಟುಹೋದನು.

## ಸತ್ತಸೈನ್ಯವನ್ನು ಬದುಕಿಸಿದುದು.

ಬಳಿಕ ರಾಮನು ಸಂತೋಷಭರಿತನಾಗಿ ಎಲ್ಲರನ್ನೂ ಸಂತೈಸಿ ತಮ್ಮ ಅಪ್ಪಣೆಯಂತೆ ನಡೆಯುತ್ತೇನೆ ಆದರೆ ಈಗ ನನಗೋಸ್ಕರವಾಗಿ ನೀವೆಲ್ಲರೂ ಇಲ್ಲಿ ಬಂದು ನೆರೆದು ನನ್ನ ಚರಿತ್ರೆಯನ್ನು ವಿವರವಾಗಿ ಹೇಳಲಾಗಿ ನಾನು ಎಲ್ಲವನ್ನು ಗ್ರಹಿಸಿಕೊಂಡೆನು. ಆದರೆ ದೇವಾಂಶದಿಂದ ನನ್ನ ಕಾರ್ಯಕ್ಕಾಗಿ ಕಪಿ ಕರಡಿಗಳ ರೂಪದಿಂದ ಅವತಾರ ಮಾಡಿದ ಈ ವಾನರಸೈನ್ಯದವರು ಧರ್ಮಸ್ಥಾಪನೆಗಾಗಿ ನಾನು ರಾವಣನೊಡನೆ ಮಾಡಿದ ಯುದ್ಧದಲ್ಲಿ ಶಸ್ತ್ರಾಸ್ತ್ರಗಳಘಾತದಿಂದ ಮಡಿದು ಸತ್ತುಬಿದ್ದಿರುವರು. ಇವರನ್ನು ಹೀಗೆಯೇ ಬಿಟ್ಟು ಹೋಗುವದು ಧರ್ಮವಲ್ಲ ಆಶ್ರಿತರನ್ನು ಆದರಿಸಿ ಕಾಪಾಡಬೇಕಾದುದು ದೇವತೆಗಳ ಧರ್ಮವಾದ ಕಾರಣ ನೀವೆಲ್ಲರೂ ದಯಮಾಡಿ ಯುದ್ಧದಲ್ಲಿ ಮಡಿದ ಕಪಿಸೈನ್ಯದವರನ್ನೆಲ್ಲ ಬದುಕಿಸಿ ಅವರಿಗೆ ಅಮೋಘವಾದ ಹಣ್ಣುಹಂಪಲುಗಳ ಆಹಾರವು ದೊರೆಯುವಂತೆ ಏರ್ಪಡಿಸಿ ನನ್ನ ಮನಸ್ಸನ್ನು ಸಂತೋಷಪಡಿಸಿ ತಮ್ಮ ಕೀರ್ತಿಯನ್ನು ಪ್ರಕಾಶಗೊಳಿಸಬೇಕೆಂದು ಪ್ರಾರ್ಥಿಸಿದನು. ಅದನ್ನು ಕೇಳಿ ಸಂತೋಷಚಿತ್ತರಾದ ತ್ರಿಮೂರ್ತಿಗಳು ರಾಮನನ್ನು ಕುರಿತು ಎಲೈ ಆದಿದೇವಸ್ವರೂಪನೆ! ಸರ್ವತಂತ್ರ ಸ್ವತಂತ್ರನಾಗಿ ಸರ್ವಜ್ಞನಾಗಿ ಸಚ್ಚಿದಾನಂದರೂಪನಾಗಿ ಆದಿಲಕ್ಷ್ಮಿಯೊಡನೆ ಅವತಾರಮಾಡಿರುವ ಲೀಲಾ ಮಾನುಷವಿಗ್ರಹನಾದ ನಿನ್ನ ಅಭಿಮತವು ನಮಗೆ ಪರಮಾನಂದವನ್ನುಂಟುಮಾಡಿತು ದೇವತೆಗಳು ಮೆಚ್ಚಿದರು ನಿನ್ನ ಇಷ್ಟಾರ್ಥವು ಕೈಗೂಡಲಿ "ತಥಾಸ್ತು" ಎಂದು ಹೇಳಿ ತಮ್ಮ ಹಸ್ತಪುಟದಿಂದ ಅಭಿಮಂತ್ರಿಸಲ್ಪಟ್ಟ ಕಮಂಡಲೋದಕವನ್ನು ಮಳೆಯ ಹನಿಯಂತೆ ಸುರಿಸಿ ಸತ್ತುಬಿದ್ದಿದ್ದ ಕಪಿಕರಡಿಗಳನ್ನೆಲ್ಲ ಬದುಕಿಸಿದರು ಆಗ ಮೊದಲಿಗಿಂತಲೂ ಇಮ್ಮಡಿಯಾದ ತೇಜಸ್ಸಿನಿಂದ ಹೊಳೆಯುತ್ತ ಸತ್ತಸೈನ್ಯವು ಹೊಡರಿಕೊಂಡು ಮೇಲಕ್ಕೆದ್ದು ರಾಮನೆದುರಿಗೆ ನಿಂತಿರುವ ದೇವಾಧಿದೇವತೆಗಳಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆದು ಉಲ್ಲಾಸಯುಕ್ತನಾಗಿ ಅಲ್ಲಿದ್ದ ಉಪವನಗಳಲ್ಲಿ ನಿಬಿಡವಾಗಿ ತುಂಬಿದ್ದ ಹಣ್ಣುಹಂಪಲುಗಳನ್ನು ತಿಂದು ಆನಂದಸಾಗರದಲ್ಲಿ ಮುಳುಗಿ ಸಂತೋಷಪಡುತ್ತ ರಾಮನನ್ನು ಕೊಂಡಾಡಿ ಸೀತೆಗೆ ನಮಸ್ಕರಿಸಿ, ದೇವತೆಗಳನ್ನು ಹೊಗಳಿ, ಸತ್ತಸೇನೆಯನ್ನು ಮರಳಿ ಬದುಕಿಸಿದ ಸತ್ಯಾತ್ಮನೆ! ಶ್ರೀರಾಮಚಂದ್ರನೆ! ರಘುಕುಲ ತಿಲಕನೆ! ಭಕ್ತವತ್ಸಲನೆ! ನಿನಗೆ ಜಯವಾಗಲಿ! ಎಂದು ಹೊಗಳುತ್ತಿದ್ದರು.

## ಕಪಿಗಳು ಪುಷ್ಪಕವಿಮಾನವನ್ನು ಹತ್ತಿದುದು,



ಅನಂತರದಲ್ಲಿ ಶ್ರೀರಾಮನು ತನ್ನ ಸೇನಾ ಜನರ ಉಲ್ಲಾಸ ಉತ್ಸಾಹಗಳನ್ನು ನೋಡಿ ಸಂತೋಷ ಪಡುತ್ತ ಉಕ್ಕಿ ಬರುತ್ತಿರುವ ಆನಂದದಿಂದ ಸೇನಾಪತಿಗಳಾದ ಅಂಗದ, ಸುಗ್ರೀವ, ನಳ, ನೀಲ, ಜಾಂಬುವಂತ, ವಿಭೀಷಣರನ್ನು ಕರೆದು ಮರ್ಯಾದೆಯಿಂದ ಅವರನ್ನು ಸತ್ಕರಿಸಿ ಮೃದುಮಧುರ ವಾಕ್ಕುಗಳಿಂದ ಅವರನ್ನು ಸಂತೈಸುತ್ತ ಇಂತೆಂದನು:— ಎಲೈ ಧೀರಾಗ್ರಗಣ್ಯರಿರಾ ! ನೀವೆಲ್ಲರೂ ನನಗೋಸ್ಕರ ಬಹು ಪ್ರಯಾಸ ಪಟ್ಟಿರುವಿರಿ ? ಅನ್ನ ಆಹಾರಗಳಿಲ್ಲದೆ ಅತ್ಯಂತ ಭಯಂಕರವಾದ ಯುದ್ಧದಲ್ಲಿ ನೊಂದು ಶ್ರಮಪಟ್ಟಿರುವಿರಿ? ನಿಮ್ಮ ಸಾಹಸದಿಂದ ನನಗೆ ಜಯವಾಯಿತು ಸೀತೆಯ ಬಂಧನವೂ ಕಳೆಯಿತು ಹಗೆಗಳು ಹಾಳಾದರು ಲೋಕಕ್ಕೆ ಸುಖವುಂಟಾಯಿತು ಧರ್ಮವು ನೆಲೆಗೊಂಡಿತು ದೇವತೆಗಳು ತೃಪ್ತರಾದರು ನಿಮ್ಮಂಥ ಮಹಿಮರನ್ನು ಪೂರ್ವಪುಣ್ಯದಿಂದ ನಾನು ಕಂಡವನಾದೆ ನಿಮಗೆಲ್ಲರಿಗೂ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ ಇನ್ನು ನೀವೆಲ್ಲರೂ ನಿಮ್ಮ ಪರಿವಾರಸಹಿತರಾಗಿ ನಿಮ್ಮನಿಮ್ಮ ಪಟ್ಟಣಗಳಿಗೆ ಹೋಗಿ ಪತ್ನೀಪುತ್ರರಿಂದ ಕೂಡಿ ಪರಿವಾರ ಪರಿವೃತರಾಗಿ ಸುಖದಿಂದ ಬಾಳಿ ಎಂದು ಹೇಳಿ ಎಲ್ಲರಿಗೂ ಆಶೀರ್ವಾದಮಾಡಿ ಹೊರಡುವುದಕ್ಕೆ ಅನುಮತಿಯನ್ನು ಕೊಟ್ಟನು. ಅದನ್ನು ಕೇಳಿ ಖಿನ್ನರಾದ ವಿಭೀಷಣ ಸುಗ್ರೀವಾದಿಗಳು ರಾಮಭಕ್ತನಾದ ಆಂಜನೇಯನನ್ನು ಮುಂದುಮಾಡಿಕೊಂಡು ಬಂದು ಶ್ರೀರಾಮನಿಗೆ ನಮಸ್ಕರಿಸಿ ಸ್ವಾಮಿ ತಮ್ಮ ಅಪ್ಪಣೆಯಂತೆ ಶಿರಸಾವಹಿಸಿ ನಡೆಯಲು ನಾವೆಲ್ಲರೂ ಸಿದ್ಧರಾಗಿದ್ದೇವೆ ಆದರೆ ತಾವು ಸೀತಾಸಮೇತರಾಗಿ ಅಯೋಧ್ಯೆಯನ್ನು ಸೇರಿ ಪಟ್ಟಾಭಿಷಿಕ್ತರಾಗುವುದನ್ನು ನಾವು ಕಣ್ಣಾರೆ ನೋಡಿ ಭರತ ಶತ್ರುಘ್ನರ ದರ್ಶನವನ್ನು ಮಾಡಿಕೊಂಡು ಒಂದೆರಡುದಿನ ಅಯೋಧ್ಯಾಪಟ್ಟಣದಲ್ಲಿದ್ದು ತಮ್ಮ ಸೇವೆಯನ್ನು ಮಾಡಿಬರಬೇಕೆಂಬ ಕುತೂಹಲವು ನಮ್ಮನ್ನು ಬಹಳವಾಗಿ ಬಾಧಿಸುತ್ತಿದೆ ತಾವು ದಯಮಾಡಿ ನಮಗೆ ಅನುಗ್ರಹಮಾಡಿ ಪ್ರೀತಿಪೂರ್ವಕವಾಗಿ ನಮ್ಮ ಕೋರಿಕೆಯನ್ನು ನಡೆಸಿಕೊಡಬೇಕೆಂದು ಬೇಡಿಕೊಂಡರು. ಭಕ್ತವತ್ಸಲನಾದ ರಾಮನಿಗೆ ಅದನ್ನು ಕೇಳಿದಕೂಡಲೆ ಎದೆಕರಗಿ ಕರುಣಹುಟ್ಟಿ ಸಂತೋಷಭರಿತನಾಗಿ ನಿಮ್ಮ ಇಷ್ಟಾನುಸಾರವಾಗಿಯೆ ಆಗಲಿ ಇನ್ನು ಅಯೋಧ್ಯೆಗೆ ಹೊರಡುವುದಕ್ಕೆ ಸಿದ್ಧವಾಗಿರಿ ಎಂದು ಅಪ್ಪಣೆಮಾಡಿದನು. ಬಳಿಕ ವಿಭೀಷಣನು ರಾಮಾಜ್ಞೆಯನ್ನು ಶಿರಸಾವಹಿಸಿ ದೇವಯೋಗ್ಯವಾಗಿ ಲಕ್ಷೋಪಲಕ್ಷ ಗಂಟೆಗಳಿಂದ ಹೊಳೆಯುತ್ತ ಧ್ವಜಪತಾಕೆಗಳಿಂದ ತುಂಬಿ ತುಳುಕುತ್ತ ನೋಡುವುದಕ್ಕೆ ಮನೋಹರವಾಗಿದ್ದ "ಪುಷ್ಪಕ" ವೆಂಬ ವಿಮಾನವನ್ನು ತಂದು ನಿಲ್ಲಿಸಿದನು. ಕೂಡಲೆ ಶ್ರೀರಾಮನು ಸೀತಾಸಮೇತನಾಗಿ ವಿಮಾನವನ್ನು ಹತ್ತಿದನು ಲಕ್ಷ್ಮಣನು ಅವರ ಹಿಂದೆ ತಾನು ಹತ್ತಿ ಕುಳಿತುಕೊಂಡನು. ಬಳಿಕ ವಿಭೀಷಣ, ಸುಗ್ರೀವ, ಅಂಗದ ಜಾಂಬವಂತ, ಹನುಮಂತ, ನಳ, ನೀಲ ಮೊದಲಾದ ಕಪಿನಾಯಕರು ಆನಂದಭರಿತರಾಗಿ ರಾಮನಿಗೆ ನಮಸ್ಕರಿಸಿ ಪುಷ್ಪಕ ವಿಮಾನವನ್ನು ಹತ್ತಿದರು. ಕಡೆಗೆ ಪರಿವಾರದವರಲ್ಲಿ ಉಳಿದ ಸಕಲ ಕಪಿ ಕರಡಿಗಳೂ ವಿಮಾನವನ್ನು ಹತ್ತಿ ಕುಳಿತು ಅಯೋಧ್ಯೆಗೆ ಹೊರಡಲು ಉತ್ಸಾಹಯುಕ್ತರಾಗಿದ್ದರು.

## ಸೀತಾಲಕ್ಷ್ಮಣರೊಡನೆ ಶ್ರೀರಾಮನು ಅಯೋಧ್ಯೆಗೆ ಹೊರಟುದು.



ಹೀಗೆ ಎಲ್ಲರೂ ವಿಮಾನದಲ್ಲಿ ಕುಳಿತುಕೊಂಡ ಮೇಲೆ ಆಂಜನೇಯನಿಗೆ ಆನಂದವು ಉಕ್ಕಿಬಂದು ಸಂತೋಷವಿಮ್ಮಡಿಸಲು ಆತನು ವಿಮಾನದಲ್ಲಿ ಎದ್ದುನಿಂತು ರಾಮರಿಗೆ ನಮಸ್ಕರಿಸಿ ಸೀತೆಗೆ ವಂದಿಸಿ, ಸೀತಾರಾಮರಿಗೆ ಜಯವಾಗಲಿ! ಅಯೋಧ್ಯಾನಾಥನಿಗೆ ಮಂಗಳವಾಗಲಿ! ಶ್ರೀರಾಮನಿಗೆ ಶೀಘ್ರದಲ್ಲಿ ಪಟ್ಟಾಭಿಷೇಕವಾಗಲಿ! ನನಗೆ ರಾಮಧ್ಯಾನವು ಸ್ಥಿರವಾಗಿರಲಿ, ಪುಷ್ಪಕವನ್ನುಏರುವ ಪುಣ್ಯವು ಲಭಿಸಿದ ಸರ್ವರಿಗೂ ಆನಂದ ಪರಂಪರೆಗಳಾಗಲಿ! ಇನ್ನು ಅಯೋಧ್ಯೆಯನ್ನು ಕುರಿತು ವಿಮಾನವು ನಡೆದುಹೋಗಲಿ! ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಹಸನ್ಮುಖಿಯಾಗಿ ಅದನ್ನು ಕೇಳುತ್ತ ಶ್ರೀರಾಮನು "ತಥಾಸ್ತು" ಎಂದು ಹೇಳಲು ಎಲ್ಲರೂ ಜಯಜಯವೆಂದು ಹೊಗಳುತ್ತಿರಲು ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು ದೇವದುಂದುಭಿಗಳು ಮೊಳಗಿದವು ದೇವತೆಗಳು ಹರ್ಷಚಿತ್ತರಾಗಿ "ಉಘೆ" ಎಂದು ಕೂಗುತ್ತಿರುವ ಸಂತೋಷಸಂಭ್ರಮದಿಂದ ವಿಮಾನವು ಚಲಿಸುತ್ತಿರುವ ಚಂದ್ರಮಂಡಲದಂತೆ ಹೊಳೆಯುತ್ತ ಮುಂದಕ್ಕೆ ಹೊರಟಿತು.

ಆಗ ಶ್ರೀರಾಮನು ಆನಂದಭರಿತನಾಗಿ ತನ್ನ ಅರ್ಧಾಂಗಿಯಾದ ಸೀತೆಗೆ ವಿನೋದಾರ್ಥವಾಗಿ ತಾವು ಸಂಚರಿಸಿದ ಸ್ಥಳಗಳ ಗುರುತನ್ನೂ ಮಾಡಿದ ಕೆಲಸಗಳನ್ನೂ ವಿವರಿಸಿ ಹೇಳತೊಡಗಿ ಇಂತೆಂದು ಹೇಳಿದನು. ಎಲೈ ಜಾನಕಿಯೆ! ನೀನು ನಮ್ಮನ್ನು ಅಗಲಿಹೋದಮೇಲೆ ತಂತ್ರಿಯಾದ ರಾವಣನ ವಿಚಾರವನ್ನು ತಿಳಿದುಕೊಂಡು ನಿನ್ನನ್ನು ಬಿಡಿಸಿಕೊಂಡು ಬರುವವರೆಗೂ ನಾವು ಮಾಡಿದ ಕೆಲಸಕಾರ್ಯಗಳನ್ನು ವಿವರಿಸಿಹೇಳುವೆನು ಕೇಳು, ಇಗೋ ಇದು ನೀಲನು ಪ್ರಹಸ್ತನನ್ನು ಕೊಂದ ಸ್ಥಳ. ಇದು ಕುಂಭಕರ್ಣನನ್ನು ನಾನು ಸಂಹಾರಮಾಡಿದ ಜಾಗ, ಇದು ಲಕ್ಷ್ಮಣನು ಅತಿಕಾಯನನ್ನು ಕೊಂದ ಕಡೆ, ಇದು ಮಕರಾಕ್ಷನು ಮಡಿದುಬಿದ್ದ ಕಣ, ಲಕ್ಷ್ಮಣನು ಮತ್ತೆ ಮೇಘನಾದನನ್ನು ನಿಗ್ರಹಿಸಿದ ತಾಣ, ಇಂತಿದು ನಾನು ರಾವಣನನ್ನು ಸಂಹರಿಸಿದ ಯುದ್ಧರಂಗ, ಇಂದ್ರಜಿತುವು ನಾಗಪಾಶದಿಂದ ಲಕ್ಷ್ಮಣನನ್ನು ಮೂರ್ಛೆಗೊಳಿಸಿದ ಸ್ಥಳವಿದು, ರಾವಣನ ಮೂಲಬಲದವರು ಸತ್ತ ಜಾಗವಿದು, ವಿಭೀಷಣನು ಬಂದು ನನ್ನನ್ನು ಮರೆಹೊಕ್ಕುದು ಇಲ್ಲಿ, ಇದು ನಳನು ಕಟ್ಟಿದ ಸೇತುವೆ, ಇಂತಿದು ಸಮುದ್ರರಾಜನನ್ನು ನಾನು ಶೋಷಿಸಿದ ತಾವು ಇದು, ನಾನು ದರ್ಭಶಯನದಲ್ಲಿ ಮಲಗಿದ ಜಾಗ ಎಂದು ಎಲ್ಲವನ್ನು ವಿವರಿಸಿ ಹೇಳುತ್ತ ಬರುವಷ್ಟರಲ್ಲಿ ವಿಮಾನವು ದಕ್ಷಿಣ ಸಮುದ್ರದ ಉತ್ತರ ತೀರವನ್ನು ಸೇರಿ ಅಲ್ಲಿಂದ ಮುಂದಕ್ಕೆ ಹೊರಡದೆ ನಿಂತುಕೊಂಡಿತು. ಅದನ್ನು ಕಂಡು ಭ್ರಾಂತರಾದ ಸುಗ್ರೀವಾದಿಗಳು ರಾಮನನ್ನು ಕುರಿತು ಎಲೈ ರಾಮಚಂದ್ರನೆ! ಇಲ್ಲಿನವರೆಗೂ ನಿರಾಯಾಸವಾಗಿ ನಡೆದುಬಂದ ವಿಮಾನವು ಈ ಸ್ಥಳದಲ್ಲಿ ಮುಂದಕ್ಕೆ ಹೊರಡದೆ ನಿಂತುಬಿಡುವುದಕ್ಕೆ ಕಾರಣವೇನು? ಎಂದು ಕೇಳಿದನು. ಆಗ ವಿಭೀಷಣನು ಅಂಜಲಿಬದ್ಧನಾಗಿ ರಾಮನಿಗೆ ನಮಸ್ಕರಿಸಿ ಎಲೈ ಪ್ರಭುವೆ! ಕರುಣಾಳುವಾದ ನೀನು ಸತ್ಯಸಂಧತೆಯಿಂದ ಆಚಂದ್ರಾರ್ಕವಾಗಿ ಈ ಲಂಕೆ

ಯನ್ನು ಆಳುತ್ತಿರು ಎಂದು ಆಶೀರ್ವದಿಸಿ ಕೊಟ್ಟು ನನ್ನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿರುವೆ ಈ ಸೇತುವೆಯ ಮಾರ್ಗವಾಗಿ ಲಂಕೆಗೆ ಬೇಕಾದವರು ಬಂದುಬಿಡಬಹುದು ದೇವತೆಗಳು ಸ್ವರ್ಗವನ್ನು ಸೇರಿಹೋಗುವರು ಲಂಕೆಗೆ ಅಧರ್ಮಸಂಪರ್ಕವುಂಟಾಗಿ ರಾಜ್ಯವು ಕೆಡುವುದು ಆದಕಾರಣ ನಮಗೆ ಅಧರ್ಮವು ಸೋಂಕದಂತೆ ದೇವತೆಗಳಲ್ಲದ ಇತರರು ಲಂಕೆಗೆ ಬಾರದಂತೆ ಕಟ್ಟಪ್ಪಣೆಯನ್ನು ಮಾಡಿ ನಮ್ಮನ್ನು ಕಾಪಾಡಬೇಕು ಎಂದು ಕೇಳಿದನು. ಆಗ ರಾಮನು ವಿಭೀಷಣನ ವಾಕ್ಯಗಳನ್ನು ಕೇಳಿ ಸಂತುಷ್ಟನಾಗಿ ಇಲ್ಲಿಂದ ಮುಂದೆ ದೇವತೆಗಳಲ್ಲದ ಅನ್ಯರು ಈ ಲಂಕೆಗೆ ಬಾರದೆ ಇರಲಿ! ಇದಕ್ಕಾಗಿ ಈ ಸೇತುವೆಯನ್ನು ಹೊಡೆದು ಮುರಿಯುವೆನು ಎಂದು ಹೇಳಿ ತನ್ನ ಧನುಸ್ಸನ್ನು ತೆಗೆದುಕೊಂಡು ಸೇತುವೆಯ ಮುಂಭಾಗದಲ್ಲಿ ತುಂಡುಮಾಡಿ ಕತ್ತರಿಸಿ ಮೂರುಭಾಗವಾಗಿ ಮಾಡಿ ಇನ್ನು ನಿನ್ನ ಕೋರಿಕೆಯು ನೆರವೇರುವುದು. ಆದರೆ ಈಶ್ವರಭಕ್ತನಾಗಿ ಮಹಾನಿಷ್ಠನಾಗಿ, ಬ್ರಹ್ಮನಿಂದ ವರವನ್ನು ಪಡೆದು ಬ್ರಹ್ಮವಂಶದಲ್ಲಿ ಹುಟ್ಟಿ ಪ್ರಸಿದ್ಧನಾದ ನಿಮ್ಮ ಅಣ್ಣನಾದ ರಾವಣನನ್ನು ನಾವು ಯುದ್ಧದಲ್ಲಿ ಕೊಂದಕಾರಣ ನಮ್ಮೆಲ್ಲರಿಗೂ ಭಯಂಕರವಾದ ಬ್ರಹ್ಮಹತ್ಯ ದೋಷವುಂಟಾಗಿದೆ ಅದನ್ನು ಕಳೆದುಕೊಳ್ಳಬೇಕಾದರೆ ನಾವು ಇಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಬೇಕು ಶಿವಪೂಜೆ, ಶಿವಮಂತ್ರ ಜಪ, ಶಿವಾಲಯ ಪ್ರತಿಷ್ಠೆಗಳಿಂದ ಮಹಾಪಾಪಗಳೆಗವೂ ನಾಶವಾಗುವುವು. ಆದಕಾರಣ ನಮಗೆ ಈಗ ಶಿವಲಿಂಗ ಸ್ಥಾಪನೆ ಮಾಡುವುದಕ್ಕಿಂತಲೂ ಹೆಚ್ಚಾದ ಮತ್ತೊಂದು ಕೆಲಸವಿಲ್ಲ ಅದಕ್ಕಾಗಿ ನಿಮ್ಮೆಲ್ಲರೊಡನೆ ಕೂಡಿ ನಾನು ಈ ಸ್ಥಳದಲ್ಲಿ ಶಿವಲಿಂಗ ಪ್ರತಿಷ್ಠೆಯನ್ನು ಮಾಡಿ ಮುಂದಕ್ಕೆ ಹೊರಡುವೆನೆಂದು ಹೇಳಿಸರ್ವರೂ ಸಮ್ಮತಿಸಿದ ಬಳಿಕ ಸಂತೋಷಭರಿತನಾದ ಶ್ರೀರಾಮನು ತನ್ನ ಆಜ್ಞಾನುಸಾರ ಸರ್ವರೂ ಸಮುದ್ರದ ತೀರದಲ್ಲಿ ಬೀಡುಬಿಟ್ಟು ಕಾದುಕೊಂಡಿರುವಂತೆ ಏರ್ಪಡಿಸಲು ಕಪಿಸೇನಾನಾಯಕರೂ, ಕಪಿಸೇನೆಯೂ, ಸುಗ್ರೀವಾದಿಗಳು ಶ್ರೀರಾಮನು ಮಾಡುವ ರಾಮೇಲಿಂಗ ಪ್ರತಿಷ್ಠೆಯನ್ನು ನೋಡುವ ತವಕದಿಂದ ಕುತೂಹಲಪಡುತ್ತಿದ್ದರು.

## ರಾಮನು ಲಿಂಗಪ್ರತಿಷ್ಠೆ ಮಾಡಿದುದು.



ಧ್ಯಾನಾರೂಢನಾದ ಶ್ರೀರಾಮನು ಕುಲಗುರುವಾದ ವಶಿಷ್ಠನನ್ನೂ ಸಪ್ತರ್ಷಿಗಳನ್ನೂ ಧ್ಯಾನಿಸಲು ಕೂಡಲೆ ಮಹರ್ಷಿಗಳೆಲ್ಲರೂ ಸಮುದ್ರತೀರಕ್ಕೆ ಬಂದು ಸೇರಿದರು. ಕಶ್ಯಪಾದಿ ಸಪ್ತಋಷಿಗಳು ತಮ್ಮ ಶಿಷ್ಯಮಂಡಲಿಯೊಡನೆ ಅಲ್ಲಿಗೆ ಬಂದರು. ವಿಶ್ವಾಮಿತ್ರನೂ ರಾಮನನ್ನು ನೋಡಿ ಆನಂದಭರಿತನಾಗಿ ನೀನು ಮಾಡಿದ ಹತ್ಯದ ನಿಮಿತ್ತವಾಗಿ ನಿನ್ನನ್ನು ಆಶ್ರಯಿಸಿಕೊಂಡ

ಮಹಾ ಭಯಂಕರ ರೂಪದಿಂದ ಮಹಾಪಾತಕಗಳು ಬಂದು ಕಾಡುತ್ತಿರುವುವು ನೋಡು ಎನಲು ಕೂಡಲೆ ಪಾಪರೂಪದಿಂದ ಬ್ರಹ್ಮಹತ್ಯಾದಿ ಭಾವಗಳನ್ನು ತಳೆದು ಸಾಕಾರದಿಂದ ಎದುರಿಗೆ ಬಂದು ನಿಂತಿರುವ ಘೋರರೂಪಿಗಳು ಸ್ವಾಮಿ! ನಮಗೆ ಯಾರೂ ದಿಕ್ಕಿಲ್ಲದೆ ನಿನ್ನಬಳಿಗೆ ಬಂದು ಸೇರಿದೆವು ದಯಾಳುವಾದ ನೀನು ರಾವಣನ ಪಾಪರಾಶಿಯನ್ನು ಸುಟ್ಟು ಸುಖರೂಪ ವಾದ ಮೋಕ್ಷವನ್ನು ಅವನಿಗೆ ಕೊಟ್ಟಂತೆ ನಮ್ಮನ್ನು ಕಾಪಾಡಬೇಕೆಂದು ಬೇಡಿಕೊಳ್ಳುತ್ತಿದ್ದವು. ಶ್ರೀರಾಮನು ತಲೆದೂಗಿ ಅವುಗಳಿಗೆ ಅಭಯವನ್ನು ಕೊಟ್ಟು ತನ್ನ ಪಾಪಪರಿಹಾರಕ್ಕಾಗಲ್ಲದೆ ಲೋಕದ ಜನಗಳಿಗೆ ಭಗವದ್ಭಕ್ತಿಯನ್ನು ತೋರಿಸಿ, ಅನುಗ್ರಹಿಸಬೇಕೆಂದು ತಾನೇ ಸಾಕ್ಷಾತ್ತಾಗಿ ನಿಂತು ಪುಣ್ಯಕ್ಷೇತ್ರದಲ್ಲಿ ಶಿವಲಿಂಗ ಪ್ರತಿಷ್ಠೆಯನ್ನು ಮಾಡತೊಡಗಿದನು. ಹೀಗೆ ರಾಮ ದೇವರಿಂದ ಪ್ರತಿಷ್ಠೆಯಾದ ಲಿಂಗಕ್ಕೆ ರಾಮೇಶಲಿಂಗವೆಂದೂ ಅದನ್ನು ಪ್ರತಿಷ್ಠಿಸಿದ ಸ್ಥಳಕ್ಕೆ ರಾಮೇಶ್ವರವೆಂದೂ ಪ್ರಸಿದ್ಧವಾದ ಹೆಸರುಂಟಾಯಿತು. ಈ ಪುಣ್ಯಕ್ಷೇತ್ರವೂ ಪಾವನಲಿಂಗಗಳೆರಡೂ ಈಗಲೂ ದಕ್ಷಿಣಸಮುದ್ರದ ಒಂದು ಭಾಗದಲ್ಲಿ ಕಂಗೊಳಿಸುತ್ತಿರುವುವು ಇಂಥ ಕ್ಷೇತ್ರದಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಬೇಕೆಂದು ಸಂಕಲ್ಪಿಸಿ ಶ್ರೀರಾಮನು ಬ್ರಹ್ಮನನ್ನು ಧ್ಯಾನ ಮಾಡಲು ಆತನು ಬಂದು ರಾಮನಿಂದ ಸತ್ಕೃತನಾಗಿ ಶಿವಲಿಂಗಪ್ರತಿಷ್ಠೆಗೆ ತಕ್ಕ ಸುಮುಹೂರ್ತವನ್ನು ಹುಡುಕಿ ಲಗ್ನವನ್ನು ಗೊತ್ತುಮಾಡಿ ಇದೇ ಲಗ್ನದಲ್ಲಿ ಲಿಂಗಪ್ರತಿಷ್ಠೆಯಾಗಬೇಕು ಎಂದು ಹೇಳಲು ಶ್ರೀರಾಮನು ಆಂಜನೇಯನನ್ನು ಕರೆದು ಎಲೈ ಭಕ್ತಾಗ್ರಗಣ್ಯನೇ! ನೀನು ಕ್ಷಣಮಾತ್ರದಲ್ಲಿ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಸುಂದರವಾಗಿರುವ ಒಂದು ಶಿವಲಿಂಗವನ್ನು ಹುಡುಕಿ ಸಕಾಲಕ್ಕೆ ಸರಿಯಾಗಿ ಇಲ್ಲಿಗೆ ತರಬೇಕು. ತಡಮಾಡಬೇಡ ಹೊರಡು ಎಂದು ನುಡಿದನು. ಆಂಜನೇಯನು ಅದನ್ನು ಕೇಳಿ ಭಕ್ತಿಯುಕ್ತನಾಗಿ ಶ್ರೀರಾಮನಿಗೆ ನಮಸ್ಕರಿಸಿ ವಾಯುವೇಗದಿಂದ ಹಿಮಾಲಯಪರ್ವತಕ್ಕೆ ಬಂದು ಶಿವಲಿಂಗವನ್ನು ಹುಡುಕುತ್ತಿದ್ದನು ಹೀಗೆ ಹುಡುಕುತ್ತಿರುವಾಗ ಸರಿಯಾದ ಲಿಂಗವು ಸಿಕ್ಕದೆಹೋದಕಾರಣ ಆಂಜನೇಯನು ರಿಕ್ತಹಸ್ತದಲ್ಲಿ ಸ್ವಾಮಿಯಬಳಿಗೆ ಬರಬಾರದೆಂದು ಲಿಂಗವನ್ನು ಹುಡುಕುತ್ತಲೆ ಇರುವಲ್ಲಿ ಬ್ರಹ್ಮನಿಯಾಮಕವಾದ ಕಾಲವು ಮೀರಿಹೋಗುತ್ತ ಬಂದುದರಿಂದ ತನ್ನ ಕಾರ್ಯವು ಸಾರ್ಥಕವಾಗಲೆಂದು ಶ್ರೀರಾಮಚಂದ್ರನು ಶಾಸ್ತ್ರವಿಚಕ್ಷಣೆಯಿಂದ ತಿಳಿದು ಪಾರ್ಥಿವ ಲಿಂಗವನ್ನು ಮರಳಿನಿಂದಮಾಡಿ ತನ್ನ ಸ್ವಹಸ್ತದಿಂದ ನಿಯಾಮಕವಾಗಿದ್ದ ಕಾಲಕ್ಕೆ ಸರಿಯಾಗಿ ಶಿವಲಿಂಗವನ್ನು ಮಂತ್ರಪುರಸ್ಸರವಾಗಿ ಶಾಸ್ತ್ರವಿಧಿಯಂತೆ ದೇವರ್ಷಿಗಳ ಸಮೂಹದೊಡನೆ ವೇದಘೋಷವಾಗುತ್ತಿರುವ ಕಾಲದಲ್ಲಿ ಪ್ರತಿಷ್ಠೆಮಾಡಿದನು ದೇವತೆಗಳು ಜಯಜಯನಿನಾದದಿಂದ ಹೂಮಳೆಯನ್ನು ಸುರಿಸಿದರು ದೇವದುಂದುಭಿಗಳು ಮೊಳಗಿದವು ಸರ್ವರೂ ರಾಮೇಶ್ವರ ಕ್ಷೇತ್ರದಲ್ಲಿ ಶ್ರೀರಾಮನಿಂದ ಪ್ರತಿಷ್ಠಿತವಾದ ರಾಮೇಲಿಂಗವೆಂಬ ಸೈಕತಲಿಂಗವನ್ನು ನೋಡಿ ಆನಂದಭರಿತರಾಗಿ ವೇದೋಕ್ತಮಾರ್ಗದಿಂದ ಶಿವಧ್ಯಾನ ಮಾಡುತ್ತಿದ್ದರು ಅಷ್ಟುಹೊತ್ತಿಗೆ ಆಂಜನೇಯನು ಒಂದು ಲಿಂಗವನ್ನು ತಂದು ಶ್ರೀರಾಮನ ಮುಂದಿರಿಸಿ ನಮಸ್ಕಾರಮಾಡಿ ಸ್ವಾಮಿ ಇದನ್ನು ಪ್ರತಿಷ್ಠೆಮಾಡಬೇಕು ಎಂದು ಬೇಡಿಕೊಂಡನು ಕೂಡಲೆ ಶ್ರೀರಾಮನು ಹಸನ್ಮುಖಿಯಾಗಿ ನಸುನಗುತ್ತ ಎಲೈ ವೀರಾಗ್ರಗಣ್ಯನೇ! ಬ್ರಹ್ಮನಿಯಾಮಕವಾದ ಮುಹೂರ್ತವು ಕಳೆಯುವುದರೊಳಗಾಗಿ ನೀನು ಬಾರದೆ ಸಾವಕಾಶ ಮಾಡಿದುದರಿಂದ ನಾನು ಸಕಾಲದಲ್ಲಿ ಕರ್ಮವನ್ನು ನಡೆಸಬೇಕೆಂದು ಸೈಕತಲಿಂಗವನ್ನು ಮಾಡಿ ಪ್ರತಿಷ್ಠೆಮಾಡಿದೆನು ಇನ್ನು ಅದನ್ನು ತೆಗೆಯುವುದು ಅಸಾಧ್ಯ ನೀನೇ ಬೇಕಾದರೆ ಆ ಲಿಂಗವನ್ನು ತೆಗೆದು ಇದನ್ನು ಪ್ರತಿಷ್ಠೆಮಾಡು ಎಂದು ಹೇಳಲು ಹನುಮಂತನು ತನ್ನ ಶ್ರಮವು ವ್ಯರ್ಥವಾಯಿತಲ್ಲ ಎಂಬ ರೋಷದಿಂದ ಬಾಲವನ್ನು ಆ ಸೈಕತಲಿಂಗಕ್ಕೆ ಸುತ್ತಿ ಎಷ್ಟು ಸಾಹಸಮಾಡಿ

ಕಿತ್ತರೂ ಆ ಸೈಕತಲಿಂಗವು ರಾಮನಿಂದ ಪ್ರತಿಷ್ಠೆಯಾದಕಾರಣ ಸ್ವಲ್ಪವೂ ಅಲ್ಲಾಡದೆ ಸ್ಥಿರ ವಾಗಿ ನಿಂತಿರುವುದನ್ನು ಕಂಡು ಆಂಜನೇಯನು ಈಶ್ವರಪ್ರಭಾವವನ್ನು ತಿಳಿಯುವುದು ಕಷ್ಟ ನನ್ನ ಶಕ್ತಿಗೆ ಇದು ಸಾಧ್ಯವಿಲ್ಲವೆಂದು ಖಿನ್ನನಾಗಿ ಸುಮ್ಮನಾದನು. ಆಗ ಶ್ರೀರಾಮನು ತನ್ನ ಕಮಂಡಲೋದಕದಿಂದ ಮಂತ್ರಪೂತವಾದ ತೀರ್ಥವನ್ನು ತೆಗೆದು ಆಂಜನೇಯನಮೇಲೆ ಪ್ರೋಕ್ಷ ಣೆಮಾಡಿ ಹನುಮಂತನಿಗೆ ಉಂಟಾಗಿದ್ದ ಗರ್ವವನ್ನು ಹೋಗಲಾಡಿಸಿದನು. ಬಳಿಕ ಹನುಮಂ ತನಿಗೆ ದಿವ್ಯಜ್ಞಾನವುಂಟಾಗಿ ಎಲೈ ದಯಾಳುವೆ! ಭಕ್ತವತ್ಸಲನಾದ ನಿನ್ನಲ್ಲಿ ನಾನು ಕಪಿಗಳಿಗೆ ಸಹಜವಾದ ಚಪಲಸ್ವಭಾವದಿಂದ ಮಾಡಿದ ಅಪರಾಧವನ್ನು ಕ್ಷಮಿಸಿ ನನ್ನನ್ನು ಕಾಪಾಡಬೇಕು ಎಂದು ಬೇಡಿಕೊಂಡನು ಆಗ ಶ್ರೀರಾಮನು ಹನುಮಂತನನ್ನು ಕರುಣಾಕಟಾಕ್ಷದಿಂದ ನೋಡಿ ಎಲೈ ಆಂಜನೇಯನೆ ನೀನು ಶ್ರಮಪಟ್ಟು ತಂದ ಲಿಂಗವನ್ನು ಇಲ್ಲಿ ಪ್ರತಿಷ್ಠಿಸು ಇದಕ್ಕೆ ಹನುಮೇ ಶ್ವರಲಿಂಗವೆಂದು ಹೆಸರಾಗಲಿ! ಎಂದು ಹೇಳಿ ಆ ಲಿಂಗವನ್ನು ಪ್ರತಿಷ್ಠೆಮಾಡಿಸಿ ಬಳಿಕ ಎಲ್ಲರೂ ಕೇಳುವಂತೆ ಹೀಗೆ ಹೇಳಿದನು. ರಾಮೇಶ್ವರ ಕ್ಷೇತ್ರದಲ್ಲಿ ನನ್ನಿಂದ ಸ್ಥಾಪಿತವಾದ ರಾಮೇಶ್ವರ ಲಿಂಗವನ್ನು ದರ್ಶನಮಾಡಿ ಭಕ್ತಿಭಾವದಿಂದ ಪೂಜಿಸಿದವರು ಹನುಮೇಶಲಿಂಗವನ್ನು ದರ್ಶನ ಮಾಡಿ ಪೂಜಿಸದೆ ಇದ್ದರೆ ಅವರಿಗೆ ರಾಮೇಶ್ವರದ ಯಾತ್ರಾಫಲವು ದೊರೆಯಲಾರದು ಎಂದು ಹೇಳುತ್ತ ಆ ಕ್ಷೇತ್ರದ ಸಕಲ ತೀರ್ಥಗಳನ್ನು ಆಕರ್ಷಿಸಿ ತನ್ನ ಧನುಸ್ಸಿನ ಕೊನೆಯಿಂದ ಅದನ್ನು ಒಂದು ಸರೋವರದಲ್ಲಿರಿಸಿ ಈ ತೀರ್ಥದಲ್ಲಿ ಸ್ನಾನಮಾಡಿ ಈ ಕ್ಷೇತ್ರದ ಲಿಂಗಗಳನ್ನು ದರ್ಶನ ಮಾಡಿದವರಿಗೆ ಬ್ರಹ್ಮಹತ್ಯಾದಿ ಮಹಾ ಪಾತಕಗಳು ನಾಶವಾಗಲಿ! ಎಂದು ವರವನ್ನು ಕೊಟ್ಟು ತನ್ನೆದುರಿಗೆ ನಿಂತಿದ್ದ ಬ್ರಹ್ಮಹತ್ಯಾದಿ ಪಾಪರಾಶಿಗಳಿಗೆ ಮುಕ್ತಿಯನ್ನುಂಟುಮಾಡಿ ಕಾಮಾತುರ ದಿಂದ ನನ್ನನ್ನು ಮದುವೆಯಾಗೆಂದು ಬಂದು ಕೇಳಿಕೊಂಡ ಕನ್ಯಾಕುಮಾರಿಯನ್ನು ಕುರಿತು ಎಲೌ ಕಾಮುಕಿಯೆ! ನಾನು ಏಕಪತ್ನೀವ್ರತಸ್ಥನು ಅನ್ಯನಾರಿಯರನ್ನು ಬಯಸತಕ್ಕವನಲ್ಲ ನೀನು ಲಜ್ಜಾಹೀನಳಾಗಿ ಮದುವೆಯಾಗಬೇಕೆಂದು ಬಂದಕಾರಣ ವಿಕಾರರೂಪವನ್ನು ಪಡೆದು ಕಂಸನ ಆಸ್ಥಾನದಲ್ಲಿರು ನಾನು ಕೃಷ್ಣಾವತಾರಮಾಡಿ ಕಂಸನನ್ನು ಕೊಂದಮೇಲೆ ನಿನ್ನ ವಿಕಾರ ವಾದ ರೂಪವನ್ನು ಹೋಗಲಾಡಿಸಿ ದಿವ್ಯವಾದ ಸೌಂದರ್ಯವನ್ನು ಕೊಟ್ಟು ನಿನ್ನ ಇಷ್ಟಾರ್ಥ ವನ್ನು ನೆರವೇರಿಸುತ್ತೇನೆಂದು ಹೇಳಿ ಸಮಾಧಾನಮಾಡಿ ಕಳುಹಿಸಿ ವಿಭೀಷಣನಿಗೆ ಸಂತೋಷ ವುಂಟಾಗುವಂತೆ ಶಿವಲಿಂಗ ಪ್ರತಿಷ್ಠೆಯಾದ ಬಳಿಕ ವಿಮಾನಾರೂಢನಾಗಿ ಮುಂದೆ ತೆರಳಿದನು.

## ಶ್ರೀರಾಮನ ಭರದ್ವಾಜಾಶ್ರಮ ಪ್ರವೇಶ.

ವಿಮಾನವು ಮುಂದಕ್ಕೆ ಹೋಗುತ್ತ ನಿರಾಯಾಸದಿಂದ ಸುಖವಾಗಿ ರಮ್ಯವಾಗಿದ್ದ ಅನೇಕ ದೇಶಗಳನ್ನು ದಾಟಿ ಋಷ್ಯಮೂಕ ಪರ್ವತದ ಬಳಿಗೆ ಬರಲು ಶ್ರೀರಾಮನು ಪ್ರಿಯೆ! ಜಾನಕಿ ಇಲ್ಲಿ ನೋಡು ಇದು ಸುಗ್ರೀವನು ಅಣ್ಣನಿಗೆ ಹೆದರಿ ಅವಿತುಕೊಂಡಿದ್ದ ಋಷ್ಯಮೂಕ ಪರ್ವತ. ಈ ಸ್ಥಳದಲ್ಲಿ ನನಗೂ ಸುಗ್ರೀವನಿಗೂ ಸ್ನೇಹವುಂಟಾಯಿತು ಅಗೋ ಎದುರಿಗೆ ಕಾಣುತ್ತಿರುವ ಆ ಗುಡ್ಡದಮೇಲೆ ಯುದ್ಧಮಾಡುತ್ತಿದ್ದ ವಾಲಿಯನ್ನು ನಾನು ಕೊಂದೆನು ಇದು ನಾನೂ ಲಕ್ಷ್ಮಣನೂ ನಿನ್ನನ್ನು ಹುಡುಕುತ್ತ ಬರುತ್ತಿದ್ದಾಗ ಆಂಜನೇಯನು ನಮ್ಮನ್ನು ಸಂಧಿಸಿ ಮಾತಾಡಿ ಆದರಿಸಿದ ಸ್ಥಳ ಇತ್ತ ನೋಡು ಇದೇ ದಿವ್ಯತೀರ್ಥವಾದ ಪಂಪಾಸರೋವರವೆಂಬ ಪುಣ್ಯಕ್ಷೇತ್ರ ಇದು ನಿನ್ನನ್ನು ರಾವಣನು ಕದ್ದುಕೊಂಡು ಹೋಗುವಾಗ ನಿಮ್ಮ ಮಾವನಿಗೆ ಸ್ನೇಹಿತನಾದ ಜಟಾ ಯುವು ಕಂಡು ರಾವಣನೊಡನೆ ಯುದ್ಧಮಾಡಿದ ಸ್ಥಳ ಎದುರಿಗೆ ಕಾಣಿಸುತ್ತ ಪ್ರಕಾಶಮಾನ ವಾಗಿರುವ ಈ ಪಟ್ಟಣವೆ ಕಿಷ್ಕಿಂಧೆ ಎಂಬ ಸುಗ್ರೀವನ ರಾಜಧಾನಿ ಎಂದು ತೋರಿಸುತ್ತ ಬರು ತ್ತಿರಲು ಹರ್ಷಚಿತ್ತಳಾದ ಸೀತೆಯು ಸ್ವಾಮಿ! ಇದು ಕಿಷ್ಕಿಂಧಾ ಪಟ್ಟಣವಾದರೆ ಸುಗ್ರೀವನ

ರಾಣಿವಾಸದವರನ್ನು ಕರೆಸಿ ಅವರನ್ನು ನನ್ನೊಡನೆ ಕರೆದುಕೊಂಡು ಹೋಗಬೇಕು ಎಂದು ಪ್ರಾರ್ಥಿಸಿದಳು. ರಾಮನು ಅದಕ್ಕೆ ಸಮ್ಮತಿಸಿ ಸುಗ್ರೀವನ ಹೆಂಡತಿಯಾದ ತಾರಾದೇವಿಯನ್ನು ಪರಿವಾರಸಹಿತ ಕರೆಸಿ ವಿಮಾನದಲ್ಲಿ ಕೂರಿಸಿಕೊಂಡು ಹೊರಟುಬರುತ್ತ ಸ್ವಲ್ಪಹೊತ್ತಿನಲ್ಲಿಯೆ ಪವಿತ್ರವಾದ ಗೋದಾವರೀತೀರವನ್ನು ಕಂಡನು. ಆಗ ಶ್ರೀರಾಮನು ಎಲೌ ಲಲನಾಮಣಿಯೆ ಇತ್ತ ನೋಡು ಇದೇ ಪಂಚವಟಿಕ್ಷೇತ್ರ ಇದು ನಮ್ಮ ಪರ್ಣಶಾಲೆಯಿದ್ದ ಸ್ಥಳ ಇಲ್ಲಿ ನಾನು ಖರ ದೂಷಣರನ್ನು ಸಂಹಾರಮಾಡಿದೆನು. ಇದೆಲ್ಲ ನಿನಗೆ ಜ್ಞಾಪಕವಿದೆಯೆ ಎಂದು ಹೇಳುತ್ತ ಮಧ್ಯಾಹ್ನಕಾಲಕ್ಕೆ ಸರಿಯಾಗಿ ಭರದ್ವಾಜ ಖುಷಿಯ ಆಶ್ರಮದ ಬಳಿಗೆ ಬಂದು ಆ ದಿನ ಅಲ್ಲಿದ್ದ ಖುಷಿಗಳ ಸೇವೆಯನ್ನು ಮಾಡಿ ಅವರ ಆಶೀರ್ವಾದವನ್ನು ಪಡೆದು ಮುಂದೆ ಹೊರಡಬೇಕೆಂದು ಶ್ರೀರಾಮನು ವಿಮಾನವನ್ನು ನಿಲ್ಲಿಸಿ ಆಶ್ರಮವನ್ನು ಹೊಕ್ಕು ಆನಂದಭರಿತನಾಗಿ ಖುಷಿಗಳಿಗೆ ನಮಸ್ಕರಿಸಿ ಅವರ ಪತ್ನಿಯ ಆದರಣೆಯನ್ನು ಕಂಡು ಅತ್ಯಂತ ಹರ್ಷಚಿತ್ತನಾಗಿ ಆ ದಿನ ಅಲ್ಲಿಯೆ ತಂಗಿದ್ದು ಮಾರನೆಯದಿನ ಮುಂದಕ್ಕೆ ಹೊರಡಬೇಕೆಂದು ಪ್ರಾರ್ಥಿಸಿದ ಭರದ್ವಾಜ ಖುಷಿಯ ಅನುಮತಿಯಂತೆ ಶ್ರೀರಾಮನು ಸೀತಾಸಮೇತನಾಗಿ ತನ್ನ ಪರಿವಾರದೊಂದಿಗೆ ಪರಮ ಪಾವನವಾದ ಆ ಖುಷ್ಯಾಶ್ರಮದಲ್ಲಿ ಸಂತೋಷದಿಂದ ನಲಿಯುತ್ತಿದ್ದನು.

## ಹನುಮಂತನು ಭರತನಿಗೆ ರಾಮನ ಕುಶಲವನ್ನು ತಿಳಿಸಿದುದು.

ಹೀಗೆ ಭರದ್ವಾಜಾಶ್ರಮಕ್ಕೆ ಬಂದ ದಿನಕ್ಕೆ ಹದಿನಾಲ್ಕು ವರ್ಷ ತುಂಬಿಹೋಗುತ್ತಿರುವುದನ್ನು ಕಂಡು ಶ್ರೀರಾಮನು ತನ್ನೆದುರಿಗೆ ಭರತನು ಮಾಡಿದ ಪ್ರತಿಜ್ಞೆಯನ್ನು ಜ್ಞಾಪಕಕ್ಕೆ ತಂದುಕೊಂಡು ಓಹೊ ಈ ದಿನದೊಳಗೆ ನನ್ನ ಕುಶಲವಾರ್ತೆಯನ್ನು ಭರತನಿಗೆ ತಿಳಿಸದೆಹೋದರೆ ಬಹಳ ಅನರ್ಥಕ್ಕೆ ಕಾರಣವಾಗುವುದೆಂದು ತಿಳಿದು ಭರದ್ವಾಜರ ಅಪ್ಪಣೆಯಂತೆ ಆಂಜನೇಯನನ್ನು ಕರೆದು ಎಲೈ ರಾಮದೂತನೆ! ಈ ದಿನ ಸಾಯಂಕಾಲದೊಳಗಾಗಿ ನೀನು ನಂದಿಗ್ರಾಮಕ್ಕೆ ಹೋಗಿ ಅಲ್ಲಿ ನನ್ನ ಆಗಮನವನ್ನೇ ಕಾದುಕೊಂಡಿರುವ ಭರತನಿಗೆ ನಿಮ್ಮಣ್ಣನಾದ ರಾಮನು ಸೀತಾಲಕ್ಷ್ಮಣರೊಡನೆ ಸುಖದಿಂದ ಹೊರಟುಬಂದು ಭರದ್ವಾಜ ಮಹರ್ಷಿಯ ಆಶ್ರಮದಲ್ಲಿ ತಂಗಿರುವನು ನಾಳೆ ಬೆಳಗಾಗುತ್ತಲೆ ಅಲ್ಲಿಂದ ಹೊರಟು ನಿನ್ನ ಬಳಿಗೆ ಬರುವನು ಸರ್ವರೂ ಕ್ಷೇಮವಾಗಿದ್ದಾರೆ ನಿನ್ನ ಘೋರಪ್ರತಿಜ್ಞೆಯನ್ನು ನಡೆಸಬೇಡ ಸೈರಿಸಿಕೊಂಡು ಸಂತೋಷದಿಂದಿರು ಎಂದು ಹೇಳಿ ಭರತನನ್ನು ಸಮಾಧಾನಪಡಿಸು, ಎಂದು ಹೇಳಲು ಧೀರನಾದ ಆಂಜನೇಯನು ರಾಮನ ಅಪ್ಪಣೆಯಂತೆ ಅಲ್ಲಿಂದ ಹೊರಟು ಬಾಲಬ್ರಹ್ಮಚಾರಿಯಂತೆ ವೇಷವನ್ನು ಧರಿಸಿಕೊಂಡು ವಾಯುವೇಗದಲ್ಲಿ ಬರುತ್ತ ಗಂಗಾನದಿಯನ್ನು ದಾಟಿ ಭಕ್ತನಾದ ಗುಹನನ್ನು ಕಂಡು ನಾಳೆಯದಿನ ಶ್ರೀರಾಮನು ಪತ್ನೀಪರಿವಾರದೊಡನೆ ಈ ಮಾರ್ಗವಾಗಿ ನಂದಿಗ್ರಾಮಕ್ಕೆ ಹೋಗುವುದಕ್ಕಾಗಿ ಬರುವನು. ಎಂದು ಹೇಳಿ ಅಲ್ಲಿಂದ ಹೊರಟು ನಂದಿಗ್ರಾಮದ ಸಮೀಪಕ್ಕೆ ಬಂದನು.

ಅಷ್ಟುಹೊತ್ತಿಗೆ ಸಂಧ್ಯಾಕಾಲವಾಗುತ್ತಿರಲು ಭರತನು ಶ್ರೀರಾಮನ ವನವಾಸದ ಅವಧಿಯು ಈ ದಿನಕ್ಕೆ ಮುಗಿದುಹೋಯಿತು ಇನ್ನೂ ರಾಮನು ಬರಲಿ ಇಲ್ಲ ಅವನ ಕುಶಲವಾರ್ತೆಯು ತಿಳಿಯದಿರುವಕಾರಣ ಜಿತೇಂದ್ರಿಯರಾಗಿ ಸತ್ಯಪ್ರತಿಜ್ಞರಾಗಿರುವ ಸೂರ್ಯವಂಶದ ದೊರೆಗಳ ವಂಶದಲ್ಲಿ ಹುಟ್ಟಿದ ನಾನು ನನ್ನ ಪ್ರತಿಜ್ಞೆಯನ್ನು ನೆರವೇರಿಸದಿದ್ದರೆ ನಮ್ಮ ಕುಲಕ್ಕೆ ಅಪಖ್ಯಾತಿಯುಂಟಾಗುವುದು ಧರ್ಮವು ದೂರವಾಗುವುದು ಮಹಾಪಾಪವು ಸಂಘಟಿಸಿ ನನ್ನ ಶ್ರೇಯಸ್ಸನ್ನೆ ಹಾಳುಮಾಡುವುದು. ಆದಕಾರಣ ನಾನು ಪ್ರತಿಜ್ಞೆ ಮಾಡಿದ್ದಂತೆ ಅಗ್ನಿಪ್ರವೇಶ ಮಾಡುವುದೆ ಸರಿ! ಎಂದು ನಿಶ್ಚಯಿಸಿ ಪುರೋಹಿತ ಪರಿವಾರಸಹಿತ ಶತ್ರುಘ್ನನಮೂಲಕ ಚಿತಿ

ಯನ್ನು ಏರ್ಪಡಿಸಿ ಭಗಧಗನೆ ಉರಿಯುತ್ತಿರುವ ಅಗ್ನಿಕುಂಡವನ್ನು ಪೂಜಿಸಿ ಪ್ರದಕ್ಷಿಣೆಮಾಡಿ ತನ್ನ ದೇಹವನ್ನು ಅಗ್ನಿಗೆ ಆಹುತಿಯಾಗಿ ಕೊಡಲು ಸಿದ್ಧನಾಗಿದ್ದನು. ಅಷ್ಟುಹೊತ್ತಿಗೆ ಸರಿಯಾಗಿ ಬಾಲಬ್ರಹ್ಮಚಾರಿಯ ರೂಪದಿಂದ ಇದೆಲ್ಲವನ್ನು ನೋಡುತ್ತಿದ್ದ ಆಂಜನೇಯನು ಇನ್ನು ನಾನು ಸುಮ್ಮನಿದ್ದರೆ ಕೆಲಸ ಕೆಟ್ಟುಹೋಗಿ ಮಹಾನರ್ಥವಾಗುವುದು. ಆದಕಾರಣ ಈಗಲೆ ಭರತನಿಗೆ ರಾಮನ ಕುಶಲವಾರ್ತೆಯನ್ನು ತಿಳಿಸುವೆನೆಂದು ಯೋಚಿಸಿ ಎಲೈ ಭರತಪುತ್ರನೇ! ಸತ್ಯಪ್ರತಿಜ್ಞನಾದ ನಿನಗೆ ಮಂಗಳವಾಗಲಿ ನಿಮ್ಮಣ್ಣನಾದ ಶ್ರೀರಾಮನು ಸುಖವಾಗಿರುವನು ಲಕ್ಷ್ಮಣನು ಕುಶಲದಿಂದಿರುವನು ಸೀತೆಯು ಸಂತೋಷದಿಂದ ರಾಮಸಾನ್ನಿಧ್ಯದಲ್ಲಿರುವಳು ನಾನು ರಾಮದೂತನಾದ ಆಂಜನೇಯನು ಶ್ರೀರಾಮನು ತನ್ನ ಪತ್ನೀಪರಿವಾರದೊಡನೆ ಲಕ್ಷ್ಮಣ ಸಮೇತನಾಗಿ ಪುಷ್ಪಕವಿಮಾನಾರೂಢನಾಗಿ ನಂದಿಗ್ರಾಮಕ್ಕೆ ಬರುತ್ತಿದ್ದು ಮಧ್ಯಾಹ್ನಕಾಲವಾದಕಾರಣ ಭರದ್ವಾಜಮಹರ್ಷಿಯ ಆಶ್ರಮದಲ್ಲಿ ತಂಗಿರುವನು. ನಾಳೆ ಬೆಳಿಗ್ಗೆ ಇಲ್ಲಿಗೆ ಬರುತ್ತಾನೆ ನಿನ್ನ ಕ್ರೂರಪ್ರತಿಜ್ಞೆಯನ್ನು ಬಿಡು ನನ್ನ ಮಾತನ್ನು ನಂಬು ನಿಜವಾಗಿಯೂ ರಾಮನು ಸುಖವಾಗಿದ್ದಾನೆ ನೀನು ಅಗ್ನಿಪ್ರವೇಶ ಮಾಡಬೇಡ ನನ್ನಕುಶಲವಾರ್ತೆಯನ್ನು ಭರತನಿಗೆ ತಿಳುಹಿಸಿ ಅವನ ಪ್ರಾಣವನ್ನುಳಿಸು ಎಂದು ಅಪ್ಪಣೆಮಾಡಿ ಶ್ರೀರಾಮನೆ ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು. ಆದಕಾರಣ ನಾನು ಬಹು ವೇಗವಾಗಿ ಹೊರಟು ನಿನ್ನ ಬಳಿಗೆ ಬಂದು ರಾಮನ ಕುಶಲವಾರ್ತೆಯನ್ನು ನಿನಗೆ ತಿಳಿಸಿರುವೆನು ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಆ ಮಾತುಗಳು ಕಿವಿಗೆ ಬಿದ್ದಕೂಡಲೆ ಭರತನಿಗೆ ಮಹಾ ಸಂತೋಷವುಂಟಾಗಿ ಸುತ್ತಲೂ ನೋಡಿ ಆಂಜನೇಯನನ್ನು ಕಂಡು ಭಕ್ತಿಭಾವದಿಂದ ಅವನನ್ನು ಆಲಿಂಗಿಸಿಕೊಂಡು ನಲಿಯುತ್ತ ಬಗೆಬಗೆಯಿಂದ ಹೊಗಳಿ ಆಂಜನೇಯನ ಮೂಲಕ ಶ್ರೀರಾಮನು ಹದಿನಾಲ್ಕುವರ್ಷ ವನವಾಸ ಕಾಲದಲ್ಲಿ ಮಾಡಿದ ಕೆಲಸ ಕಾರ್ಯಗಳನ್ನು ಕೇಳಿ ತಿಳಿದುಕೊಂಡು ಆನಂದಭರಿತನಾಗಿ ಆಂಜನೇಯನನ್ನು ಸಂತೈಸಿದನು. ಬಳಿಕ ಆಂಜನೇಯನು ಅಯ್ಯಾ ! ಶ್ರೀರಾಮನು ಸೀತಾಲಕ್ಷ್ಮಣ ಸಮೇತನಾಗಿ ನಾಳೆ ನಿನ್ನ ಬಳಿಗೆ ಬರುವನೆಂದು ಹೇಳಲು ಭರತನು ಸಂತೋಷದಿಂದ ಶ್ರೀರಾಮನ ಆಗಮನವನ್ನು ನಿರೀಕ್ಷಿಸುತ್ತಿದ್ದನು.

## ಅಯೋಧ್ಯೆಯ ಅಲಂಕಾರ ರಾಮನ ಆಗಮನ ನಿರೀಕ್ಷಣೆ.

ಆ ಬಳಿಕ ಭರತನು ರಾಮನು ಬರುತ್ತಾನೆಂಬ ಸಂತೋಷವಾರ್ತೆಯನ್ನು ಅಯೋಧ್ಯಾಪುರದ ಜನರಿಗೂ ಅಂತಃಪುರದ ಸ್ತ್ರೀಯರಿಗೂ ತಿಳಿಸಿ ಸರ್ವಾಲಂಕಾರ ಸುಂದರವಾಗಿರುವಂತೆ ಪಟ್ಟಣವನ್ನು ಅಲಂಕರಿಸಿ ಪ್ರಜೆಗಳೆಲ್ಲರೂ ರಾಮನನ್ನು ಎದುರುಗೊಳ್ಳುವುದಕ್ಕೆ ಸಿದ್ಧರಾಗಿರಬೇಕೆಂದು ಡಂಗುರವನ್ನುಹೊಯ್ಸಿ ಅನಂತರ ನೀನು ಚತುರಂಗ ಸೇನಾಸಮೇತನಾಗಿ ಮಂತ್ರಿಪರಿವಾರದವರೊಂದಿಗೆ ಹೊರಟು ಅಲಂಕೃತವಾದ ಪಟ್ಟದಾನೆಯಮೇಲೆ ಆಂದೋಳನವನ್ನಿರಿಸಿ ಛತ್ರಚಾಮರಸಹಿತವಾಗಿ ಹೊರಟು ನಂದಿಗ್ರಾಮಕ್ಕೆ ಬಂದು ಸೇರಬೇಕು ಎಂದು ಶತ್ರುಘ್ನನಿಗೆ ಹೇಳಿ ಕಳುಹಿಸಲು ಆತನು ಆನಂದಭರಿತನಾಗಿ ಅಯ್ಯೋಧ್ಯೆಗೆ ಹೋಗಿ ಮಂತ್ರಿಪರಿವಾರದವರಿಗೆ ಶ್ರೀರಾಮನ ಆಗಮನವನ್ನು ತಿಳಿಸಲು ಅವರು ಪ್ರಜೆಗಳಿಗೆ ತಿಳಿಯುವಂತೆ ಡಂಗುರವನ್ನು ಹೊಯ್ಸಿ ಪ್ರಸಿದ್ಧಪಡಿಸಿದರು. ಕೂಡಲೆ ಉಕ್ಕುತ್ತಿರುವ ಹರ್ಷದಿಂದ ಪಟ್ಟಣದ ಜನಗಳೆಲ್ಲರೂ ಸೇರಿ ಶ್ರೀರಾಮನನ್ನು ಇದಿರುಗೊಳ್ಳುವ ಕುತೂಹಲದಿಂದ ಪಟ್ಟಣದಲ್ಲಿ ಗುಡಿ ತೋರಣಗಳನ್ನು ಕಟ್ಟಿಸಿ ಚಪ್ಪರಗಳನ್ನು ಹಾಕಿಸಿ ಸಾರಣೆ ಕಾರಣೆಗಳಿಂದ ಅಲಂಕೃತವಾಗಿ ಮನೋಹರವಾಗಿದ್ದಿತು. ಅಯೋಧ್ಯೆಯಲ್ಲಿ ಎಲ್ಲಿನೋಡಿದರೂ ಆಗರು ಚಂದನ ಗುಗ್ಗುಳ ಧೂಪಗಳ ಹೊಗೆಯನ್ನು ಕೊಟ್ಟು ಪುಷ್ಪಪಲ್ಲವಗಳಿಂದ ಮನೆ ಮಠಗಳನ್ನು ಹಾಡುತ್ತ ಹಾಸ್ಯ ವಿನೋದ ಸರಸ ಸಂಗೀತಗಳಿಂದ

ಪ್ರಜೆಗಳನ್ನು ತೃಪ್ತಿಪಡಿಸುತ್ತಿರುವ ಜನಸಮೂಹದೊಡನೆ ತಾಳಮೇಳ ನೃತ್ಯಾದಿಗಳಿಂದ ಕೂಡಿ ಮನೋಹರವಾದ ರಾಮಭಜನೆಯನ್ನು ಮಾಡುತ್ತ ಸರ್ವರೂ ಒಟ್ಟಾಗಿ ಅರಮನೆಯ ಬಳಿಗೆ ಬಂದು ಸೇರಲು ಮಂತ್ರಿಗಳು ಏರ್ಪಡಿಸಿದ್ದ ಪ್ರಕಾರ ಆನೆ ಕುದುರೆ ರಥ ಕಾಲಾಳುಗಳಸೇನೆಯು ನಿಬಿಡವಾಗಿ ತುಂಬಿಕೊಳ್ಳಲು ಮಂಗಳ ಮಜ್ಜನ ಮಾಡಿಸಿ ಮಂತ್ರಪೂತವಿಧಿಯಿಂದ ಪೂಜಿಸಿದ ಪಟ್ಟದಾನೆಯ ಮೇಲೆ ಚಿನ್ನದ ಪಾಲಕ್ಕಿಯನ್ನಿಟ್ಟು ಅದರಲ್ಲಿ ಛತ್ರಚಾಮರ ಸಹಿತವಾಗಿ ಶ್ರೀರಾಮರ ಪಾದುಕೆಗಳನ್ನು ಸ್ಥಾಪಿಸಿ ತಾನು ಅದರ ಬಲಭಾಗದಲ್ಲಿ, ಎಡಭಾಗದಲ್ಲಿ ಮಂತ್ರಿಗಳು ನಡೆದು ಬರುತ್ತಿರಲು ಪಟ್ಟಣದ ಜನರು ಕಿಕ್ಕಿರಿದು ತುಂಬಿ ಸಂಭ್ರಮದಿಂದ ಉತ್ಸವವನ್ನು ನೋಡಿ ಆನಂದಿಸುತ್ತ ಅಬ್ಬಾ! ಕೈಕಯಿ ಮಾಡಿದ ಮಾಯೆಗೆ ಕಾಡುಪಾಲಾದ ರಾಮನು ಇಂದಿಗೆ ಊರಿಗೆ ಬಂದ ಹಾಗಾಯ್ತು ಯಾರಿಗೆ ಏನು ಶಾಶ್ವತ ಎಂದು ಆಡಿಕೊಳ್ಳುತ್ತಿರಲು ಶತ್ರುಘ್ನನು ಹುಸಿನಗೆಯಿಂದೆಲ್ಲವನ್ನೂ ನೋಡುತ್ತ ಮೆಲ್ಲಮೆಲ್ಲಗೆ ಬಂದು ನಂದಿಗಾಮವನ್ನು ಸೇರಿ ಭರತನಿಗೆ ನಮಸ್ಕರಿಸಲು ಭರತನು ಸಮುದ್ರಘೋಷದಂತೆ ಬರುತ್ತಿರುವ ಸೇನಾನಿವಹವನ್ನು ನಕ್ಷತ್ರಮಂಡಲದಂತೆ ಕಿಕ್ಕಿರಿದು ತುಂಬಿರುವ ಜನರನ್ನು ಕರ್ಣಾಮೃತದಂತೆ ಕಿವಿಗೆ ಬೀಳುತ್ತಿರುವ ರಾಮಧ್ಯಾನದ ಧ್ವನಿಯನ್ನೂ ಕೇಳುತ್ತ ಸಂತೋಷ ಸಾಗರದಲ್ಲಿ ಮುಳುಗಿ ಶ್ರೀರಾಮನ ಆಗಮನವನ್ನು ನಿರೀಕ್ಷಿಸುತ್ತಿದ್ದನು.

## ರಾಮನು ಅಯೋಧ್ಯೆಯನ್ನು ಸೇರಿ ಅನುಜರನ್ನು ಆದರಿಸಿದುದು.

ಹೀಗೆ ರಾಮನ ನಿರೀಕ್ಷಣೆಯಲ್ಲಿಯೆ ಆ ರಾತ್ರಿಯನ್ನು ಕಳೆದು ಮರುದಿನ ಉಷಃಕಾಲಕ್ಕೆದ್ದು ನಿತ್ಯಕರ್ಮ ನಿಮಿತ್ತವಾದ ಸ್ನಾನ ಸಂಧ್ಯಾವಂದನೆಗಳನ್ನು ತೀರಿಸಿಕೊಂಡು ಇಷ್ಟದೇವರನ್ನು ಪೂಜಿಸಿ ಸಂತೋಷಭರಿತರಾಗಿ ಭರತ ಶತ್ರುಘ್ನರಿಬ್ಬರೂ ಪರಿವಾರದಿಂದೊಡಗೂಡಿ ನಂದಿಗ್ರಾಮದ ಬಹಿರಂಗಣದಲ್ಲಿ ನಿಂತು ಎಷ್ಟುಹೊತ್ತಿಗೆ ಶ್ರೀರಾಮನ ವಿಮಾನವು ಬರುವುದೋ! ಯಾವಾಗ ರಾಮಾದಿಗಳ ಮುಖವನ್ನು ನೋಡುವೆವೊ! ಎಂದಿಗೆ ಸುಖಸಂದರ್ಶನವು ಲಭಿಸುವುದೋ! ಈ ಪಾದುಕೆಗಳನ್ನು ರಾಜ್ಯಸಹಿತ ಶ್ರೀರಾಮನಿಗೆ ಯಾವಾಗ ಒಪ್ಪಿಸಿ ಧನ್ಯನಾಗುವೆನೋ! ಎಂದು ಬಗೆಬಗೆಯಾಗಿ ಹಂಬಲಿಸುತ್ತ ಆಂಜನೇಯನೊಡನೆ ಅಧಿಕ ಸಂತೋಷದಿಂದ ರಾಮಾದಿಗಳ ಧೈರ್ಯ ಶೌರ್ಯ ಪರಾಕ್ರಮಗಳನ್ನು ಕುರಿತು ಮಾತನಾಡುತ್ತ ಸಂದಣಿಸಿ ನಿಂತುಕೊಂಡರು. ಅದನ್ನು ಕಂಡು ಪುರಜನರೂ ಪರಿವಾರದವರೂ ಸಂತೋಷಚಿತ್ತರಾಗಿ ತಮುತಮಗೆ ತಕ್ಕಂತೆ ಅಲಂಕಾರ ಆಭರಣಗಳಿಂದ ಸುಂದರರಾಗಿ ದಿವ್ಯವಾದ ಉಡುಪುಗಳನ್ನು ಧರಿಸಿ ನಿರ್ಮಲಾಂತಃಕರಣದಿಂದ ಶ್ರೀರಾಮನನ್ನೆ ಧ್ಯಾನಿಸುತ್ತ ತಾವೂ ಅಲ್ಲಿಗೆ ಬಂದು ಸೇರಿದರು ಇತ್ತಲಾಗಿ ಭರದ್ವಾಜಾಶ್ರಮದಲ್ಲಿ ಸುಖಶಯನದಲ್ಲಿ ಪವಡಿಸಿ ನಿದ್ರೆಮಾಡಿದ ಶ್ರೀರಾಮನು ಋಷಿಜನರ ಉಷಃಕಾಲಸ್ತೋತ್ರಗಳನ್ನು ಕೇಳುತ್ತ ಪಂಚಪಂಚ ಉಷಃಕಾಲದಲ್ಲೆದ್ದು ಕುಳಿತನು ಸೀತೆಯನ್ನು ಲಕ್ಷ್ಮಣನು ಎಚ್ಚರಗೊಳಿಸಿತಾನು ಅವರೊಡನೆ ಸ್ನಾನಾದಿಗಳನ್ನೂ ನಿತ್ಯಕರ್ಮವನ್ನೂ ತೀರಿಸಿಕೊಂಡು ಕುಲದೇವತೆಯನ್ನು ಪೂಜಿಸಿ ಇಷ್ಟದೇವತೆಯ ಆರಾಧನೆಯನ್ನುಮಾಡಿ ಪರಿಶುದ್ಧವಾದ ಮನಸ್ಸಿನಿಂದ ಪಾವನವಾದ ಋಷ್ಯಾಶ್ರಮದ ದೇವತೆಗಳಿಗೂ ಋಷಿಗಳಿಗೂ ಅವರ ಪತ್ನಿಯರಿಗೂ ಎರಗಿ ನಮಸ್ಕಾರಮಾಡಿ ಅವರ ಆಶೀರ್ವಾದವನ್ನು ಸ್ವೀಕರಿಸಿ ಸಂತುಷ್ಟನಾಗಿ ಸುಖಪ್ರಯಾಣಕ್ಕೆ ಸಿದ್ಧವಾಗುವಂತೆ ನೇಮಿಸಲು ಸುಗ್ರೀವಾದಿಗಳನ್ನು ಕರೆದು ಆಜ್ಞಾಪಿಸಿದನು. ಬಳಿಕ ವಿಭೀಷಣ, ಜಾಂಬವಂತ, ಅಂಗದ, ನಳ, ನೀಲರ ಸಹಾಯದಿಂದ ಸರ್ವರೂ ನಿತ್ಯಕರ್ಮವನ್ನು ತೀರಿಸಿಕೊಂಡು ಅಯೋಧ್ಯೆಗೆ ಹೊರಡಲು ಸಿದ್ಧರಾಗಿ ರಾಮನನ್ನು ಕಂಡು ಋಷಿಗಳಿಗೆ ಮಣಿದು ಋಷಿಪತ್ನಿಯರ ಅಪ್ಪಣೆಯನ್ನು ಪಡೆದು ಆನಂದಭರಿತರಾಗಿ ಭರದ್ವಾಜರ ಅಪ್ಪಣೆಯನ್ನು ಪಡೆದು

ಆ ದಂಪತಿಗಳನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಶ್ರೀರಾಮನೂ ಸೀತಾಲಕ್ಷ್ಮಣರೊಡನೆ ವಿಮಾನವನ್ನು ಹತ್ತಲು ದೇವದುಂದುಭಿಗಳು ಮೊಳಗಿದವು ಗಗನತಳದಿಂದ ಹೂಮಳೆಯು ಸುರಿಯಿತು. ಋಷಿಗಳು ಸ್ವಸ್ತಿವಾಚನವನ್ನು ಹೇಳುತ್ತಿದ್ದರು. ಋಷಿಪತ್ನಿಯರು ಆರತಿಗಳನ್ನು ಬೆಳಗಿ ಮಂಗಳಗೀತೆಗಳನ್ನು ಹಾಡುತ್ತ ಆಶೀರ್ವದಿಸಿದರು. ಕೂಡಲೆ ಸಂತೋಷ ಸಂಭ್ರಮದಿಂದ ವಿಮಾನವು ಹೊರಟು ಪ್ರಯಾಣವಾಗಿ ಬರುತ್ತ ಕ್ಷಣಮಾತ್ರದಲ್ಲಿ ನಂದಿಗ್ರಾಮವನ್ನು ಸೇರಿತು. ಆಗ ಶ್ರೀರಾಮನು ವಿಮಾನದಲ್ಲಿ ಕುಳಿತುಕೊಂಡು ತನ್ನನಿರೀಕ್ಷಣೆಯಲ್ಲಿಯೆ ನಿರತರಾಗಿ ಕಾದುಕೊಂಡಿರುವ ತಮಂದಿರನ್ನು ಅವರಸಂಗಡ ನೆರೆದುನಿಂತಿರುವ ಪರಿವಾರದವರನ್ನೂ ಸಮುದ್ರದಂತೆ ಸಂದಣಿಸಿ ಆಕಾಶವನ್ನೆ ನೋಡುತ್ತಿರುವ ಆದರಪೂರ್ಣರಾದ ಪ್ರಜೆಗಳನ್ನು ಕಂಡು ಸಂತೋಷಪಡುತ್ತ ಹಸನ್ಮುಖಿಯಾಗಿ ಅದೆಲ್ಲವನ್ನು ಸೀತೆಗೆ ತೋರಿಸಿ ಹೇಳುತ್ತ ನಂದಿಗ್ರಾಮದ ಬಳಿಯಲ್ಲಿದ್ದ ಭರತನ ಆಶ್ರಮವನ್ನು ನಿರಾಯಾಸವಾಗಿ ಬಂದು ಸೇರಿದನು.

## ಭರತನು ರಾಮನನ್ನು ಕಂಡು ಪಾದುಕೆಗಳನ್ನು ಒಪ್ಪಿಸಿದುದು.

ಬಳಿಕ ಶ್ರೀರಾಮರ ಆಗಮನವನ್ನೆ ನಿರೀಕ್ಷಿಸುತ್ತಿದ್ದ ಭರತನು ಸಂಭ್ರಮದಿಂದ ದಿಕ್ಕುದಿಕ್ಕುಗಳನ್ನು ನೋಡುತ್ತ ನಿಂತಿರಲು ಆಂಜನೇಯನು ಪುಷ್ಪಕ ವಿಮಾನವು ಬರುತ್ತಿರುವ ಜಾಡೆಯನ್ನುತಿಳಿದು ಹತ್ತಿರಕ್ಕೆ ಬರುತ್ತಲೆ ಭರತನನ್ನು ಕುರಿತು ಎಲೈ ಭರತಪುತ್ರನೆ! ಅಗೋ ನೋಡು ಶ್ರೀರಾಮನು ಪುಷ್ಪಕ ವಿಮಾನಾರೂಢನಾಗಿ ಇಲ್ಲಿಗೆ ಬಂದೆಬಿಟ್ಟನು ಎಂದು ತೋರಿಸಲು ಭರತನು ಸಂತೋಷದಿಂದುಬ್ಬಿದ ಮೈಯುಳ್ಳವನಾಗಿ ಆನಂದಭಾಷ್ಪವನ್ನು ಸುರಿಸುತ್ತ ಅಡಿಗಡಿಗೂ ನಮಸ್ಕಾರಮಾಡಿ ಆಲಿಂಗನಸುಖವನ್ನು ಅಭಿನಯಿಸುತ್ತ ಆತುರದಿಂದ ವಿಮಾನದಬಳಿಗೆ ಓಡಿಬಂದು ಆನಂದಮಯವಾದ ದೇಹದಿಂದ ಪರವಶನಾಗಿ ಶ್ರೀರಾಮನ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಲು ವಾತ್ಸಲ್ಯಭರಿತನಾದ ಶ್ರೀರಾಮನು ಭರತನನ್ನು ಬರಸೆಳೆದು ತಬ್ಬಿಕೊಂಡು ಮೈದಡವಿ ಕಣ್ಣಿನ ನೀರನ್ನು ಒರಸಿ ಮಹಾಪ್ರೀತಿಯಿಂದ ಸಂತೈಸಿ ತನ್ನ ಬಲದ ತೊಡೆಯಮೇಲೆ ಕುಳ್ಳಿರಿಸಿಕೊಂಡನು ಕೂಡಲೆ ಶತ್ರುಘ್ನನು ಬಂದು ಭರತನಂತೆಯೇ ಶ್ರೀರಾಮನಿಗೆ ಮಣಿಯಲು ಮಹೋತ್ಸಾಹದಿಂದ ಅವನನ್ನು ಆಲಿಂಗಿಸಿಕೊಂಡು ಸಮಾಧಾನಮಾಡಿ ತನ್ನ ಎಡದ ತೊಡೆಯಮೇಲೆ ಕೂರಿಸಿಕೊಂಡು ಅನುಜರಿಬ್ಬರನ್ನೂ ಆದರದಿಂದ ಮನ್ನಿಸಲು ಕೂಡಲೆ ಭರತ ಶತ್ರುಘ್ನರಿಬ್ಬರೂ ಲಕ್ಷ್ಮಣನನ್ನು ಕಂಡು ಆನಂದಭರಿತರಾಗಿ ಕುಶಲಪ್ರಶ್ನೆಯನ್ನುಮಾಡಿ ತಬ್ಬಿಕೊಂಡು ಮುದ್ದಾಡಿ ಕಡೆಗೆ ಸುಗ್ರೀವನನ್ನು ನೋಡಿ ಎಲೈ ವಾನರಕುಲತಿಲಕನೆ! ನೀನೂ ನಮಗೆ ಒಡಹುಟ್ಟಿದವನು ನಿನ್ನ ಸಹಾಯ ಸಂಪತ್ತಿಯು ಸದಾ ನಮಗೆ ಸ್ಮರಣೀಯವಾಗಿದೆ ನೀನು ಇಲ್ಲಿಂದ ಮುಂದೆ ನಮ್ಮ ಸಹೋದರನಂತೆಯೆ! ಸರಿ ಎಂದು ಹೊಗಳಿ ಹಸ್ತಲಾಘವದಿಂದ ಅವನನ್ನು ಮನ್ನಿಸಿ ವಿಭೀಷಣಾದಿಗಳನ್ನು ಆದರಿಸಿ ಸುಖಸಲ್ಲಾಪಗಳಿಂದ ಮಾತನಾಡುತ್ತಿದ್ದರು.

ಅಷ್ಟುಹೊತ್ತಿಗೆ ಭರತನು ಈದಿನವೆ ಸುದಿನ ಇಂದೇ ಶುಭಮುಹೂರ್ತ ಈಹೊತ್ತೆ ಸುಖಸಾಧನೆಗೆ ಸಮಯ! ಇದೇ ನನ್ನ ಭಾಗ್ಯದಫಲ ಇನ್ನು ನನ್ನ ಭಾರವನ್ನು ನಾನು ಇಳಿಸಿಕೊಂಡು ಸರ್ವಶಕ್ತನಾದ ಶ್ರೀರಾಮನನ್ನು ಆಶ್ರಯಿಸಿ ಬಾಳಬೇಕು ಹಾಗಿಲ್ಲವಾದರೆ ಹದಿನಾಲ್ಕು ವರ್ಷದಿಂದ ನಾನು ಅನುಭವಿಸಿದ ವನವಾಸವೇ ನನಗೆ ಗತಿಯಾಗುವುದು. ನಾಥನಾದ ಶ್ರೀರಾಮನು ವಿಧಿಯಂತೆ ನಮ್ಮನ್ನು ಕಾಪಾಡುತ್ತಿರುವಾಗ ಈ ರಾಜ್ಯಭಾರದ ಹೊರೆಯನ್ನು ನಾನು ಹೊರಲಾರೆ ಈಗಲೆ ಇದನ್ನು ಶ್ರೀರಾಮರ ವಶಮಾಡಿ ಧನ್ಯನಾಗುವೆನೆಂದು ಶತ್ರುಘ್ನನೊಡನೆ ಹೇಳಲು ಅವನು ಭರತನ ಮಾತನ್ನೂ ಅನುಮೋದಿಸಿ ನಿನ್ನ ಅಭಿಪ್ರಾಯವು ನನಗೆ ಸಮ್ಮತವಾಗಿದೆ ಹಾಗೆ ಮಾಡುವುದೆ ಸುಖ ಎಂದು ಹೇಳಲು ಭರತ ಶತ್ರುಘ್ನರಿಬ್ಬರೂ ಪಾದುಕೆಗಳನ್ನು ತಲೆಯಮೇಲೆ

ಹೊತ್ತುಕೊಂಡು ಶ್ರೀರಾಮನ ಬಳಿಗೆ ಬಂದು ಅದನ್ನು ಅವನೆದುರಿಗಿರಿಸಿ ನಮಸ್ಕಾರ ಮಾಡಿ ಎಲೈ ರಾಮಚಂದ್ರನೆ! ನಿನ್ನ ಅಪ್ಪಣೆಯಂತೆ ನಾನು ಈ ಪಾದುಕೆಗಳ ಮೂಲಕ ರಾಜ್ಯಭಾರ ಮಾಡಿ ದೇಶಕೋಶಗಳನ್ನು ಬಹಳವಾಗಿ ವೃದ್ಧಿಗೊಳಿಸಿ ಇದುವರೆಗೂ ಕಾಪಾಡಿಕೊಂಡು ಬಂದೆನು. ಇನ್ನು ಈ ರಾಜ್ಯಭಾರವನ್ನು ನೀನೆವಹಿಸಿ ನಮ್ಮನ್ನು ಕಾಪಾಡಬೇಕು ನನ್ನಿಂದಾಗದು ಎಂದು ಬೇಡಿಕೊಂಡನು. ಶ್ರೀರಾಮನು ತಮ್ಮನ ಮಾತಿಗೊಡಂಬಟ್ಟು ಹಸನ್ಮುಖಿಯಾಗಿ ವಿಮಾನದಿಂದಿಳಿದು ತಾಯಿಯರಿಗೆ ನಮಸ್ಕರಿಸಿ ಅವರಿಗೆ ಸೀತಾ ಲಕ್ಷ್ಮಣರ ದರ್ಶನವನ್ನು ಮಾಡಿಸಲು ಅವರೆಲ್ಲರೂ ಆನಂದಭರಿತರಾಗಿ ರಾಮನನ್ನು ಹೊಗಳುತ್ತ ಸೀತಾಲಕ್ಷ್ಮಣರನ್ನು ಆದರಿಸಿ ಅಕ್ಕರೆಯಿಂದ ಸಂತೈಸಿದರು. ಬಳಿಕ ಶ್ರೀರಾಮನು ಸಂತೋಷಭರಿತನಾಗಿ ತನ್ನ ಮಂತ್ರಿವರ್ಗದವರನ್ನು ಕಾಣಿಸಿಕೊಂಡು ಅವರ ಯೋಗಕ್ಷೇಮವನ್ನು ವಿಚಾರಿಸಿ ಪರಿವಾರದವರನ್ನು ಪ್ರೀತಿಯಿಂದ ಕಂಡು ಮನ್ನಿಸುತ್ತ ಪುರಜನರಿಗೆ ದರ್ಶನ ಸುಖವನ್ನು ಕೊಟ್ಟು ಅಟ್ಟಹಾಸದಿಂದ ಭರತ ಶತ್ರುಘ್ನರು ಹಸ್ತಲಾಘವನ್ನು ಕೊಡುತ್ತಿರಲು ಆಶ್ರಮವನ್ನು ಪ್ರವೇಶಿಸಿ ಅಲ್ಲಿ ತನಗೋಸ್ಕರವಾಗಿ ಸಿದ್ಧಪಡಿಸಿದ್ದ ರತ್ನಪೀಠದಲ್ಲಿ ಕುಳಿತು ಒಡ್ಡೋಲಗವನ್ನು ಹೊಕ್ಕು ಸಭಾಮಧ್ಯದಲ್ಲಿ ತಾನು ಸುಖಾಸೀನನಾಗಿ ಕುಳಿತಿದ್ದನು.

## ವಸಿಷ್ಠರ ಅಪ್ಪಣೆಯಂತೆ ರಾಮನು ಜಟಾವಲ್ಕಲಗಳನ್ನು ತ್ಯಜಿಸಿದುದು.

ಹೀಗೆ ಸಭೆಯಲ್ಲಿ ಕುಳಿತಿರುವ ಶ್ರೀರಾಮನನ್ನು ಅವನೊಡನೆ ಬಂದಿರುವ ಕಪಿವೀರರನ್ನೂ ಭಕ್ತಶಿಖಾಮಣಿಯಾದ ವಿಭೀಷಣನನ್ನೂ ಉಳಿದ ಪರಿವಾರದವರನ್ನು ನೋಡಿ ಸಭಾಜನರು ಸಂತೋಷಭರಿತರಾಗಿ ಮೌನದಿಂದಿದ್ದರು. ಆಗ ಭರತನು ವಸಿಷ್ಠರಿಗೆ ನಮಸ್ಕರಿಸಿ ಭರದ್ವಾಜರಿಗೆ ವಂದಿಸಿ ಎಲೈ ಮಹರ್ಷಿಗಳಿರಾ! ನೀವು ಸರ್ವಜ್ಞರಾದ ಮಹಾತ್ಮರು ಚಕ್ರವರ್ತಿಯಾದ ದಶರಥನಿಗೆ ಪುತ್ರಕಾಮೇಷ್ಟಿಯ ವರದಿಂದ ಹುಟ್ಟಿದ ಸೀಮಂತ ಪುತ್ರನಾದ ಶ್ರೀರಾಮನು ಪಟ್ಟಾಭಿಷಿಕ್ತನಾಗಿ ರಾಜ್ಯಭಾರ ಮಾಡಲು ಅರ್ಹನಾದವನು ಅಂಥವನು ನಮ್ಮೆದುರಿಗೆ ನಿಮ್ಮಂತೆ ಜಟಾವಲ್ಕಲಗಳನ್ನು ಧರಿಸಿರುವುದು ನಮಗೆ ತುಂಬ ವಿಷಾದಕರವಾಗಿದೆ ದಯಮಾಡಿ ತಾವಿಬ್ಬರೂ ಶ್ರೀರಾಮಚಂದ್ರನನ್ನು ಎಚ್ಚರಗೊಳಿಸಿ ಈ ಜಟಾವಲ್ಕಲಗಳನ್ನು ಇಲ್ಲಿಯೆ ನೀಗಿಬಿಟ್ಟು ರಾಜಾಲಂಕಾರಮಂಡಿತನಾದ ಶ್ರೀರಾಮನನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆಂದು ಪ್ರಾರ್ಥಿಸಲು ವಸಿಷ್ಠರು ಆನಂದಭರಿತರಾಗಿ ಭರದ್ವಾಜರ ಅಪ್ಪಣೆಯನ್ನು ಪಡೆದು ಸಭೆಯಲ್ಲಿ ಎದ್ದು ನಿಂತು ಶ್ರೀರಾಮನನ್ನು ಕುರಿತು ಹೀಗೆ ಹೇಳತೊಡಗಿದರು:—ಎಲೈ ರಾಮಚಂದ್ರನೆ! ನೀನು ಸಾಧಾರಣ ಮನುಷ್ಯನಲ್ಲ ಲೋಕಕಂಟಕರಾಗಿದ್ದ ರಾಕ್ಷಸರ ಬಾಧೆಯನ್ನು ಪರಿಹರಿಸಿ ಭೂಭಾರವನ್ನು ತಗ್ಗಿಸುವುದಕ್ಕಾಗಿ ಪುತ್ರಕಾಮೇಷ್ಟಿಯ ವ್ಯಾಜ್ಯದಿಂದ ದಶರಥನಿಗೆ ಮಗನಾಗಿ ಹುಟ್ಟಿದೆ ನಿನ್ನ ಸತಿಯಾದ ಸೀತೆ ಆದಿಶಕ್ತಿಸ್ವರೂಪಳು ನೀನು ಮಾಡಬೇಕಾದ ದುಷ್ಟನಿಗ್ರಹ ಶಿಷ್ಟಪರಿಪಾಲನೆಗೆ ಸಹಾಯವಾಗಿ ತಾನು ಭೂಪುತ್ರಿಯಾಗಿ ಅವತಾರಮಾಡಿ ಯಜ್ಞವ್ಯಾಜ್ಯದಿಂದ ಭೂಶೋಧನಾ ಕಾಲದಲ್ಲಿ ಜನಕರಾಯನಿಗೆ ಮಗಳಾಗಿ ದೊರೆದು ಬೆಳೆದು ನಿನ್ನನ್ನು ಮದುವೆಯಾಗಿ ತನ್ನ ಕರ್ತವ್ಯವನ್ನು ನೆರವೇರಿಸಿದಳು. ಶ್ರೇಷ್ಠವಾದ ಸೂರ್ಯವಂಶವನ್ನು ಪಾವನಮಾಡಿ ಪರಿಶುದ್ಧವಾದ ಕೀರ್ತಿಯನ್ನು ಪಡೆಯಲು ದಶರಥನು ನಿನ್ನಂಥ ಮಗನನ್ನು ಪಡೆಯಬೇಕೆಂದು ಬಹು ಪ್ರಯಾಸದಿಂದ ಪುತ್ರಕಾಮೇಷ್ಟಿಯನ್ನು ಮಾಡಿ ಧನ್ಯನಾದನು. ಇಂಥ ಮಹಾಮಹಿಮನಾದ ನೀನು ನಿನ್ನ ವಂಶಕ್ಕೂ ಅವತಾರಕ್ಕೂ ಅನುಕೂಲಿಸುವಂತೆ ರಾಜಯೋಗ್ಯವಾದ ವೇಷವನ್ನು ಧರಿಸಿ ಪ್ರಜಾಪಾಲನೆಯನ್ನು ಮಾಡುತ್ತ ಪುತ್ರಪೌತ್ರರನ್ನು ಪಡೆದು ಸುಖವಾಗಿ ಬಾಳಿ ಕೀರ್ತಿಯನ್ನು ಸಂಪಾದಿಸಬೇಕು. ಆದಕಾರಣ ಋಷಿಯೋಗ್ಯವಾದ ಈ ನಾರು

ಸೀರೆ ಜಡೆಮುಡಿಗಳನ್ನು ತೊರೆದು ಮಂಗಳಸ್ನಾನಮಾಡಿ ವಿಧಿವತ್ತಾಗಿ ಧರಿಸಿದ ರಾಜಾಭರಣಗಳಿಂದ ಅಯೋಧ್ಯೆಯನ್ನು ಪ್ರವೇಶಮಾಡಿ ಪುರಜನ ಪರಿಜನರನ್ನು ಸಂತೋಷಪಡಿಸಿ ನಾಳೆ ಪ್ರಾತಃಕಾಲದಲ್ಲಿ ಶ್ರೇಷ್ಠವಾದ ಸುಮುಹೂರ್ತದಲ್ಲಿ ಪಟ್ಟಾಭಿಷಿಕ್ತನಾಗಬೇಕು ಇದು ಸರ್ವರಿಗೂ ಸಮ್ಮತವಾಗಿದೆ ಜನವಾಕ್ಯವನ್ನು ಮೀರಬಾರದು ಅನುಜರನ್ನು ಅನಾದರಣೆ ಮಾಡಬಾರದು ಅಪಕೀರ್ತಿಗೆ ಒಳಗಾಗಬಾರದು ಎಂದು ಶಾಸ್ತ್ರವಚನವು ಕೂಗುತ್ತಿದೆ ಆದಕಾರಣ ನೀನು ಸಂತೋಷಚಿತ್ತನಾಗಿ ಈ ಜಟಾಭಾರವನ್ನು ತೆಗೆದು ವಲ್ಕಲಗಳನ್ನು ತೊರೆದು ರಾಜಚಿಹ್ನೆಗಳಿಂದ ಅಲಂಕೃತನಾಗಬೇಕೆಂದು ಹೇಳಿ ಆಶೀರ್ವದಿಸಲು ಶ್ರೀರಾಮನು ಗುರುವಾಕ್ಯವನ್ನು ಕೇಳಿ ಆನಂದಭರಿತನಾಗಿ ತಮ್ಮ ಅಪ್ಪಣೆಯನ್ನು ನಾನೆಂದಿಗೂ ಮೀರುವವನಲ್ಲ ನಿಮ್ಮ ಇಷ್ಟದಂತೆ ಆಗಬಹುದು ಎಂದು ಹೇಳಲು ಭರತಶತ್ರುಘ್ನರು ಆನಂದಭರಿತರಾಗಿ ಜಟಾಪಟಲಗಳನ್ನು ಬಿಡಿಸಿದರು. ಬಳಿಕ ಲಕ್ಷ್ಮಣನು ನಾರುಮುಡಿಗಳನ್ನು ತೆಗೆಸಿ, ದಿವ್ಯವಾದ ಸುಗಂಧ ತೈಲಗಳನ್ನು ಹಚ್ಚಿ ಶ್ರೀರಾಮನಿಗೆ ದಿವ್ಯವಾದ ಅಭ್ಯಂಜನವನ್ನು ರಾಜಯೋಗ್ಯವಾದ ಅಲಂಕಾರಗಳನ್ನು ಮಾಡಿಸಿ ಆಭರಣಸುಂದರನಾದ ಶ್ರೀರಾಮನನ್ನು ಸಭೆಗೆ ಕರೆದು ತಂದು ಕುಳ್ಳಿರಿಸಿದರು.

## ರಾಮನು ಅಯೋಧ್ಯೆಯನ್ನು ಸೇರಿ ಆಶ್ರಿತರನ್ನು ಆದರಿಸಿದುದು.

ಬಳಿಕ ಲಕ್ಷ್ಮಣನಿಗೂ ಮಂಗಳಸ್ನಾನವನ್ನು ಮಾಡಿಸಿ, ಭರತಶತ್ರುಘ್ನರು ತಾವೂ ದಿವ್ಯವಾದ ಉಡಿಗೆತೊಡಿಗೆಗಳನ್ನು ತೊಟ್ಟು ಸುಗ್ರೀವ ಜಾಂಬವಂತ ಅಂಗದ ಆಂಜನೇಯ ನಳ ನೀಲಾದಿ ಕಪಿವೀರರೆಲ್ಲರೂ ದಿವ್ಯವಾದ ಉಡುಪುಗಳನ್ನು ಆಭರಣಗಳನ್ನು ತೊಟ್ಟು ವಿಭೀಷಣನನ್ನು ಕುದುರೆಯಮೇಲೆ ಕುಳ್ಳಿರಿಸಿ ಉಳಿದವರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಆನೆ ಕುದುರೆ ರಥಗಳನ್ನು ಸಿದ್ಧಮಾಡಿ ರಾಮನಿಗೆ ತಿಳಿಸಲು ಶ್ರೀರಾಮನು ದಶರಥನ ರಾಣಿವಾಸದವರೊಡನೆ ಸೀತಾದೇವಿಯನ್ನು ಅಂದಣದಲ್ಲಿ ಕುಳಿರಿಸಿ ನಗರವನ್ನು ಹೊಕ್ಕು ಅಂತಃಪುರವನ್ನು ಪ್ರವೇಶ ಮಾಡುವಂತೆ ಆಜ್ಞಾಪಿಸಿ ಕಳುಹಿಸಲು ಅವರೆಲ್ಲರೂ ರಾಜಮರ್ಯಾದೆಯಿಂದ ಹೊರಟುಬಂದು ಅರಮನೆಯನ್ನು ಸೇರಿದರು. ಆನಂತರದಲ್ಲಿ ದಿವ್ಯವಾದ ರತ್ನಾಂದೋಳನವನ್ನು ಹತ್ತಿ ಶ್ರೀರಾಮನು ಕುಳಿತುಕೊಳ್ಳಲು ಎಲ್ಲರೂ ಜಯಜಯವೆಂದು ಹೊಗಳುತ್ತ ಸಂತೋಷದಿಂದ ಕರತಾಡನಮಾಡಿ “ಉಘೆ” ಎಂದು ಕೂಗುತ್ತಿರಲು ವಸಿಷ್ಠರು ರಾಮನಿಗೆ ವಿಜಯವಾಗಲೆಂದು ಆಶೀರ್ವದಿಸಿ ಸ್ವಸ್ತಿವಾಚನವನ್ನು ಹೇಳುತ್ತ ಮುಂದೆ ಹೊರಟರು. ಉಳಿದ ಋಷಿಗಳು ಗುಂಪಾಗಿ ಸೇರಿ ವೇದಘೋಷ ಮಾಡುತ್ತ ಬರುತ್ತಿರಲು ಲಕ್ಷ್ಮಣನು ಶ್ವೇತಛತ್ರಿಯನ್ನು ಹಿಡಿದನು. ಭರತ ಶತ್ರುಘ್ನರು ಚಾಮರಗಳನ್ನು ಬೀಸುತ್ತಿದ್ದರು. ವಿಭೀಷಣನು ಎಡಭಾಗದಲ್ಲಿಯೂ ಸುಗ್ರೀವನು ಬಲಭಾಗದಲ್ಲಿಯೂ ಅಂಜಲಿಬದ್ಧರಾಗಿ ಅನುಜ್ಞೆಯನ್ನು ನಿರೀಕ್ಷಿಸುತ್ತ ಹೊರಟರು. ಅಂಗದನು ಪರಿವಾರದವರನ್ನು ಕ್ರಮವರಿತು ನಡೆಸುತ್ತ ಸೇನೆಯ ಸಂಚಾರಕ್ಕೆ ಅಧಿಪತಿಯಾದನು ಆಂಜನೇಯನು ರಾಮರ ಹತ್ತಿರದಲ್ಲಿದ್ದುಕೊಂಡು ಹೊಗಳುತ್ತ ದಶರಥಪುತ್ರ ಪರಾಕು, ಸೀತಾನಾಥ ಪರಾಕು, ಭಕ್ತವತ್ಸಲ ಪರಾಕು, ಶತ್ರುಸಂಹಾರ ಪರಾಕು, ಲೀಲಾಮಾನುಷವಿಗ್ರಹ ನಿನಗೆ ಪರಾಕು ಎಂದು ಹೊಗಳುತ್ತಿದ್ದನು. ಉಳಿದ ಸಾಮಂತ ನರಪತಿಗಳೂ, ಋಷಿಗಣಗಳೂ, ಶಿಷ್ಯಮಂಡಲಿಯವರೂ ರಾಮನ ಪಾಲಕಿಯನ್ನು ಹಿಂಬಾಲಿಸಿ ಬರುತ್ತಿರಲು ನಗರವನ್ನು ಪ್ರವೇಶಿಸಿ ಅಯೋಧ್ಯೆಯ ರಾಜಬೀದಿಯಲ್ಲಿ ಉತ್ಸವವಾಗಿ ಹೊರಟುಬರುತ್ತ ಎರಡು ಕಡೆಗಳಲ್ಲಿಯೂ ಕಿಕ್ಕಿರಿದು ತುಂಬಿಹೋಗಿ ಮಂಗಳವಾದ್ಯ ಶೋಭಾನ ಪಾಠಗಳಿಂದ ಆರತಿಗಳನ್ನು ತಂದು ಬೆಳಗುತ್ತಿರುವ ಸುವಾಸಿನಿಯರ ಸುಕಟಾಕ್ಷ ಮರೀಚಿಯನ್ನು ತನ್ನ ದಿವ್ಯದೃಷ್ಟಿಯಿಂದ ಪಾವನಮಾಡುತ್ತ ಸಂತೋಷಭರಿತನಾಗಿ ಪ್ರಜೆಗಳನ್ನು ಸಂತೈಸಿ ಮುಗುಳು ನಗೆಯಿಂದ ಆದರಿಸುತ್ತ ರಾಜಬೀದಿ

ಗಳನ್ನು ದಾಟಿ ಅರಮನೆಯ ಬಳಿಗೆ ಬಂದು ಪಾಲಕಿಯನ್ನು ನಿಲ್ಲಿಸಿ ಭರತಲಕ್ಷ್ಮಣರು ಹಸ್ತಲಾಘವನ್ನು ಕೊಡಲು ಶತ್ರುಘ್ನನು ಮಾರ್ಗವನ್ನು ಸೂಚಿಸುತ್ತಿರುವಲ್ಲಿ ಅಂಜನಾಪುತ್ರನ ಅತಿಶಯವಾದ ಪಾದಸೇವೆಯನ್ನು ಕೈಕೊಳ್ಳುತ್ತ ಮೆಲ್ಲಮೆಲ್ಲಗೆ ನಡೆದು ಬಂದು ರಾಣಿವಾಸದ ಸ್ತ್ರೀಯರು ಆರತಿಗಳನ್ನು ತಂದು ಬೆಳಗುತ್ತಿರಲು ಮಂದಹಾಸದಿಂದ ಅವರನ್ನು ನೋಡಿ ಆನಂದಿಸುತ್ತ ಓಲಗಶಾಲೆಯ ಮುಂಭಾಗದಲ್ಲಿ ಕಾದುಕೊಂಡು ಹೊಗಳುತ್ತ ವಂದಿಮಾಗದ ಸ್ತುತಿಪಾಠಕರ ಸಮೂಹದೊಡನೆ ಪ್ರಜೆಗಳೂ ಪುರಪ್ರಮುಖರೂ ಒಪ್ಪಿಸಿದ ಕಪ್ಪಕಾಣಿಕೆಗಳನ್ನು ಆದರದಿಂದ ಸ್ವೀಕರಿಸಿ ಅವರನ್ನು ಮೃದುಮಧುರ ವಾಕ್ಯಗಳಿಂದ ಸಂತೈಸುತ್ತ ಒಡ್ಡೋಲಗಕ್ಕೆ ನಡೆತಂದು ಮಣಿಮಯವಾದ ರತ್ನಪೀಠದಲ್ಲಿ ಕುಳಿತುಕೊಂಡನು. ಬಳಿಕ ವಶಿಷ್ಠರ ಆಶೀರ್ವಾದವೂ ಮಂತ್ರಪುರಸ್ಸರವಾಗಿ ನಡೆದು ಸಭಿಕರನ್ನು ಆದರಿಸುವಂತೆ ಅನುಜ್ಞೆಯಾಗಲು ಸಭಿಕರೆಲ್ಲರೂ ಸಂತೋಷದಿಂದ ಕುಳಿತುಕೊಂಡರು. ಆನಂದಸಾಗರದಲ್ಲಿ ಮುಳುಗಿ ಅಲೆಕೊಲೆಗಳಿಲ್ಲದೆ ಶಾಂತಮಯವಾದ ಸಂತೋಷವನ್ನು ಅನುಭವಿಸುತ್ತ ಸರ್ವರೂ ಸುಖಾಸೀನರಾಗಿದ್ದು ರಾಮನ ಅಪ್ಪಣೆಯನ್ನು ಪಡೆದು ತಂತಮ್ಮ ನಿವಾಸಗಳಿಗೆ ತೆರಳಿದರು. ಅನಂತರ ಭರತನು ಶ್ರೀರಾಮನ ಅಪ್ಪಣೆಯಂತೆ ಕಪಿನಾಯಕರಿಗೂ ವಿಭೀಷಣನಿಗೂ ಅವನ ಪರಿವಾರದವರಿಗೂ ಯೋಗ್ಯವಾದ ಬಿಡಾರವನ್ನು ಬಿಡಿಸಿ ಅವರಿಗೆ ಬೇಕಾದ ಸಲಕರಣೆಗಳನ್ನೊದಗಿಸಿಕೊಟ್ಟು ಸಂತೈಸಲು ಸರ್ವರೂ ಸಂತೋಷಪಟ್ಟು ಸುಖದಿಂದ ಆ ದಿನ ಮಧ್ಯಾಹ್ನಕಾಲದ ಕರ್ಮವನ್ನು ತೀರಿಸಿ ವಿಶ್ರಮಿಸಿಕೊಂಡರು. ರಾಮಚಂದ್ರನೂ ತನ್ನ ಪರಿವಾರದವರ ಯೋಗಕ್ಷೇಮವನ್ನು ವಿಚಾರಿಸಿ ಎಲ್ಲರೂ ಸುಖಭೋಜನದಿಂದ ಸಂತುಷ್ಟರಾಗಿ ವಿಶ್ರಮಿಸಿಕೊಳ್ಳುತ್ತಿರುವುದನ್ನು ಕಂಡು ಸಂತೋಷಪಟ್ಟು ತಾನು ಆರೋಗಣೆಯನ್ನು ಮಾಡಿ ಸುಖದಿಂದಿದ್ದನು ಹೀಗಿರುತ್ತಿರಲು ಸಂತೋಷಭರಿತನಾದ ಸುಗ್ರೀವನು ತನ್ನ ಬಿಡಾರದಿಂದ ಹೊರಟು ಅರಮನೆಗೆ ಬಂದು ಭರತನನ್ನು ಕಂಡು ಕುಶಲಪ್ರಶ್ನೆ ಮಾಡುತ್ತಿರಲು ಎಲೈ ಕಪಿರಾಜನೆ ನಾಳೆಯದಿನ ಬೆಳಿಗ್ಗೆ ಸೂರ್ಯೋದಕ್ಕೆ ಸರಿಯಾಗಿ ಶ್ರೀರಾಮಚಂದ್ರನು ರಾಜ್ಯಾಭಿಷಿಕ್ತನಾಗಿ ಪಟ್ಟಭದ್ರನೆನಿಸಿಕೊಳ್ಳಬೇಕು ಆದಕಾರಣ ನಿನ್ನ ಸೇವಕರನ್ನು ಕಳುಹಿಸಿ ಚತುಸ್ಸಮುದ್ರಗಳ ತೀರ್ಥಗಳನ್ನು ತರಿಸುವವನಾಗು ಎಂದು ಹೇಳಲು ಸುಗ್ರೀವನು ಶಾಂತನಾಗಿ ಭಕ್ತಿಯನ್ನು ತೋರಿಸುತ್ತ ನೀಲನನ್ನು ಕಳುಹಿಸಿ ಪೂರ್ವಸಮುದ್ರದ ಉದಕವನ್ನೂ ಅಂಗದನನ್ನು ಹೊರಡಿಸಿ ದಕ್ಷಿಣ ಸಮುದ್ರದ ಜಲವನ್ನೂ ನಳನನ್ನು ಕಳುಹಿಸಿ ಪಶ್ಚಿಮ ಸಮುದ್ರದ ತೀರ್ಥವನ್ನೂ ಆಂಜನೇಯನ ಮೂಲಕ ಉತ್ತರ ಸಮುದ್ರೋದಕವನ್ನು ತರಿಸಿ ಎಲ್ಲವನ್ನು ಸಿದ್ಧಗೊಳಿಸಿದನು.

## ಶ್ರೀರಾಮನ ಪಟ್ಟಾಭಿಷೇಕ ಮಹೋತ್ಸವ.

ಬಳಿಕ ದಶರಥನ ಮಂತ್ರಿಗಳಾದ ದೃಷ್ಟ, ಜಯಂತ, ವಿಜಯ, ಸಿದ್ಧಾರ್ಥ, ಅರ್ಥನಾಥ, ಅಶೋಕ ಮಂತ್ರಿಪಾಲ, ಸುಮಂತ್ರರೆಂಬ ಅಷ್ಟಪ್ರಧಾನರ ಅಪ್ಪಣೆಯಂತೆ ಪಟ್ಟಣವು ಬಹುರಮ್ಯವಾಗಿ ಅಲಂಕೃತವಾಗಿ ಸಾರಣೆ ಕಾರಣೆಗಳಿಂದ ಮನೋಹರವಾಗಿದ್ದಿತು. ಗುಡಿ ತೋರಣಗಳು ಮಣಿಮಂಟಪಗಳೂ ಅಲ್ಲಿಗಲ್ಲಿಗೆ ನಿಬಿಡವಾಗಿ ಸೇರಿ ಜನರ ಕಣ್ಮನಗಳಿಗೆ ಆನಂದವನ್ನುಂಟುಮಾಡುತ್ತಿತ್ತು. ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ಬಂದ ಜನಗಳಿಗೆ ಅನುಕೂಲವಾಗುವಂತೆ ಏಲಕ್ಕಿ, ಲಾವಂಚ, ಕರ್ಪೂರಮಿಶ್ರವಾದ ಶೀತಳೋದಕವೂ ಗುಡೋದಕ ಕ್ಷೀರಧಾರೆಗಳಿಂದೊಪ್ಪುತ್ತಿರುವ ಅರವಟ್ಟಿಗೆಗಳಿಂದಲೂ ಆ ನಗರವನ್ನು ಅಲಂಕರಿಸಿರಲು ಹೆಂಗಸರು ಮಕ್ಕಳು ಮುದುಕರು ಬಡವರು ಅಂಗಹೀನರು ಮೊದಲಾಗಿ ಭಿಕ್ಷುಕರೆಲ್ಲರೂ ಬಂದು ಪಟ್ಟಣದ ಶೃಂಗಾರವನ್ನು ನೋಡುತ್ತ ಪಾನೀಯ ಪಣ್ಯಾವಾರಗಳಿಂದ ಹೊಟ್ಟೆಯನ್ನು ತುಂಬಿಸಿಕೊಂಡು ತೃಪ್ತರಾಗಿ

ಎಂದಿಗೆ ಬೆಳಗಾಗುವುದೋ ಯಾವಾಗ ರಾಮನ ಪಟ್ಟಾಭಿಷೇಕವನ್ನು ನೋಡುವೆವೋ ಎಂದು ಹಾರೈಸುತ್ತ ಹಸನ್ಮುಖಿಗಳಾಗಿ ನಿದ್ರೆಯನ್ನು ತೊರೆದು ಉಲ್ಲಾಸದಿಂದ ಓಡಾಡುತ್ತಿದ್ದರು. ಅಷ್ಟುಹೊತ್ತಿಗೆ ಲೋಕಕ್ಕೆ ಮಂಗಳವಾಗಲಿ ! ರಾಮನಿಗೆ ಜಯವಾಗಲಿ ! ಪಾಪಗಳು ಹರಿದು



ಹೋಗಲಿ ! ಎನ್ನುವಂತೆ ಕೋಳಿ ಕೂಗಿತು ಅನುರಾಗಯುಕ್ತರಾದ ಪ್ರಜೆಗಳ ಸಂತೋಷವನ್ನು ಲೋಕಕ್ಕೆ ಸೂಚಿಸುವಂತೆ ಪೂರ್ವದಿಕ್ಕಿನಲ್ಲಿ ಅರುಣೋದಯವಾಯಿತು. ತನ್ನವಂಶದ ಉನ್ನತಿಯನ್ನು ನೋಡಿ ಸಂತೋಷಪಡುವ ನೆನದಿಂದ ದಿನಮಣಿಯಾದ ಸೂರ್ಯನು ಸುಪ್ರಕಾಶನಾಗಿ ಹೊಳೆದನು. ಬೆಳಗಾಗುತ್ತಲೆ ವಂದಿಮಾಗಧರ ಸ್ತೋತ್ರಪಾಠಗಳಿಂದ ಎಚ್ಚತ್ತು ಶ್ರೀರಾಮನು ವಶಿಷ್ಠರ ಅಪ್ಪಣೆಯಂತೆ ಸ್ನಾನಸಂಧ್ಯಾದಿಗಳನ್ನು ತೀರಿಸಿಕೊಂಡು ಮಂಗಳಮಯವಾದ ಅಲಂಕಾರಮಂಡಿತನಾಗಿ ತನ್ನ ಬಿಡಾರದಲ್ಲಿ ಕಾದುಕೊಂಡಿದ್ದನು. ಇತ್ತಲಾಗಿ ಸಭಾಮಂಟಪದಲ್ಲಿ ಸಿಂಹಾಸನಾರೋಹಣಕ್ಕೆ ಬೇಕಾದ ಪರಿಕರಗಳನ್ನು ಸಿದ್ಧಗೊಳಿಸಿ, ಅಂಗ, ವಂಗ, ಕಳಿಂಗ, ಕಾಶ್ಮೀರ, ಕರ್ಣಾಟ, ಕೇಕಯ, ಮೊದಲಾದ ಐವತ್ತಾರು ದೇಶಗಳಿಂದ ಬಂದಿದ್ದ ರಾಜಾಧಿರಾಜರಿಗೆ ತಕ್ಕ ಉಚಿತಾಸನಗಳನ್ನು ಕೊಟ್ಟು ಪರಿವಾರದವರನ್ನು ಎಚ್ಚರಿಸಿ, ಸೇನೆಯು ಸಿದ್ಧವಾಗಿ ನಿಂತು ರಾಜಮರ್ಯಾದೆಗಾಗಿ ಮಾಡುವ ಸಿಸ್ತುಗಳನ್ನು ಏರ್ಪಡಿಸಿ ಸುಮಂತ್ರನು ಸಭೆಯನ್ನು ಸಿದ್ಧಗೊಳಿಸಿದನು. ಆಗ ದಿವ್ಯವಾದ ವಾದ್ಯಗಳು ಮೊಳಗುತ್ತಿರಲು ವಂದಿಮಾಗಧರು ಹೊಗಳುತ್ತ ಸಾಹಿತ್ಯ ಸಂಗೀತಗಳ ರಚನೆಯು ಮೂರ್ತಿವತ್ತಾಗಿ ಬಂದಂತೆ ಸಂಗೀತ ಧ್ವನಿಯೂ ರಾಮನ ಸುಗುಣಗಳನ್ನು ವಿಸ್ತರಿಸಿ ಹೇಳುವ ಪದ್ಯಮಾಲೆಗಳೂ ಕಿವಿಗೆ ಬೀಳುತ್ತಿರಲು ಭರತಶಾಸ್ತ್ರದ ರೀತಿಯನ್ನು ಅನುಸರಿಸಿ ನಾಟ್ಯ ವಾದ್ಯ ನರ್ತನ ಕೌಶಲದಿಂದ ಸಭಿಕರನ್ನು ಆನಂದಗೊಳಿಸುತ್ತಿದ್ದ ನಟಸಮೂಹದ ನಾಟ್ಯರಚನೆಯು ತಾಂಡವಮೂರ್ತಿಯಾದ ಪರಮೇಶ್ವರನ ಲೀಲೆಯನ್ನು ಜ್ಞಾಪಿಸುತ್ತಿರಲು ಕುಲಗುರುವಾದ ವಶಿಷ್ಠನು ತಾನು ಗೊತ್ತುಮಾಡಿದ್ದ ಮುಹೂರ್ತಕ್ಕೆ ಸರಿಯಾಗಿ ಜಾಬಾಲಿ, ಗೌತಮ, ಕಶ್ಯಪ, ವಿಶ್ವಾಮಿತ್ರ, ವಾಲ್ಮೀಕಿ, ಭರದ್ವಾಜ ಮೊದಲಾದ ಋಷಿಗಳೊಡನೆ ಹೊರಟು ಮೊದಲು ಸೀತಾದೇವಿಯನ್ನು ಆಶೀರ್ವಾದಪುರಸ್ಸರವಾಗಿ ಅಂತಃಪುರದಿಂದ ಶ್ರೀರಾಮನ ಬಳಿಗೆ ಕರೆದು ತಂದು, ಅಲ್ಲಿಂದ ಸೀತಾಸಹಿತನಾದ ರಾಮನನ್ನು ವೇದಘೋಷಗಳಿಂದಲೂ ಸ್ವಸ್ತಿವಾಚನದಿಂದ ಸೊಗಳಿ ಕರೆದು ತಂದು ರತ್ನಖಚಿತವಾದ ಸಿಂಹಾಸನದಲ್ಲಿ ಕುಳ್ಳಿರಿಸಿ ಮಂತ್ರಪುರಸ್ಸರವಾಗಿ ಚತುಸ್ಸಮುದ್ರೋದಕಗಳನ್ನು ಪ್ರೋಕ್ಷಿಸಿ ಅಭಿಷೇಕಮಾಡಿ ಸಕಲ ಸಭಿಕರಿಂದಲೂ ಶಾಸ್ತ್ರೋಕ್ತಕ್ರಮದಿಂದ ಬ್ರಾಹ್ಮಣರು ಸುವಾಸಿನಿಯರು ಷೋಡಶಕನ್ಯಾಮಣಿಯರಿಂದ ಅಭಿಷೇಕವಾದ ಬಳಿಕ ಬ್ರಹ್ಮನಿರ್ಮಿತವಾದ ಮನುಚಕ್ರವರ್ತಿಯಿಂದ ಪರಂಪರಾಗತವಾಗಿ ದಶರಥನಿಗೆ ಬಂದಿದ್ದ ರತ್ನಕಿರೀಟವನ್ನು ದಿವ್ಯವಾದ ವಸ್ತ್ರಾಭರಣಗಳನ್ನು ಕೊಡಿಸಿ ಪಟ್ಟಾಭಿಷೇಕ ಮಾಡಿದರು. ಬಳಿಕ ಭರತನು ಶ್ವೇತಛತ್ರವನ್ನು ಹಿಡಿದನು ವಿಭೀಷಣನು ಚಾಮರವನ್ನು ಬೀಸಿದನು ಇಂದ್ರನು ವಾಯುದೇವನ ಮೂಲಕ ಮಂದಾರ ಮಾಲಿಕೆಯನ್ನು ತಂದು ಸಮರ್ಪಿಸಿದನು ಪಾರಿಜಾತದ ಪರಿಮಳವು ಸಭಾಂಗಣವನ್ನು ಆವರಿಸಿತು

ಮಂತ್ರಿ ಸಾಮಂತಾದಿಗಳು ದಿವ್ಯವಾದ ಮುಕ್ತಾಹಾರಗಳನ್ನು ಸಮರ್ಪಿಸಿದರು ಸಭೆಗೆಲ್ಲ ಸಂತೋಷವಾಗಲು ದೇವತೆಗಳು ತೃಪ್ತರಾಗಿ ಹೂಮಳೆಯನ್ನು ಸುರಿಸಿದರು ಪರಿವಾರದ ಜನರು ತಮ್ಮ ಜನ್ಮವು ಪಾವನವಾಯಿತೆಂದು ಹಿಗ್ಗಿದರು ಪುರಜನರು ಎಂದಿಗೂ ನೋಡದೆ ಇದ್ದ ವಿಚಿತ್ರ ವಿನೋದಗಳನ್ನು ಕಣ್ಣಾರೆ ನೋಡಿ ಸಂಭ್ರಮಪಡುತ್ತ ರಾಮನಿಗೆ ರಾಜ್ಯವಾಯಿತು ರಾಜ್ಯಕ್ಕೆ ದೊರೆಯಾಯಿತು ಸುಖಕ್ಕೆ ಕಾರಣವಾಯಿತು ಪಾಪರಾಶಿಯು ಸುಟ್ಟುಹೋಯಿತು ಪುಣ್ಯ ದ್ರುಮವು ಫಲಿಸಿತು ನಮಗೆ ಆನಂದವಾಯಿತು. ಇನ್ನು ಸರ್ವತೋಮುಖವಾಗಿ ಸತ್ಪುರುಷ ರನ್ನು ರಕ್ಷಿಸುವ ಶ್ರೀರಾಮಚಂದ್ರನಿಗೂ ಅವನ ಭಕ್ತರಿಗೂ ಆನಂದವಾಗಲಿ! ಎಂದು ಬೀದಿ ಬೀದಿಗಳಲ್ಲಿಯೂ ಸಂತೋಷದಿಂದ ಕೂಗಿ ಹೇಳುತ್ತಿರಲು ರಾಮಚಂದ್ರನ ಪಟ್ಟಾಭಿಷೇಕವು ಆಚಂದ್ರಾರ್ಕ ಸುಖಸ್ಥಾಯಿಯಾಗಿ ನಿರ್ವಿಘ್ನವಾಗಿ ಸೆರವೇರಿತು. ಮಂಥರೆಯು ಮುಡಿದಳು ಕೈಕಯಿಗೆ ಕಳುಣ ಹುಟ್ಟಿತು ನಾವು ಬದುಕಿದೆವು ಎಂದು ಸರ್ವರೂ ಹೊಗಳುತ್ತಿರಲು ಸುಖ ಶಾಂತಿ ಸಂರಂಭಗಳಿಂದ ಶ್ರೀರಾಮನು ಅಯೋಧ್ಯೆಯಲ್ಲಿ ಸೀತಾಸಮೇತನಾಗಿ ಶುಭಮುಹೂರ್ತ ದಲ್ಲಿ ಪಟ್ಟಾಭಿಷಿಕ್ತನಾಗಿ ರಾರಾಜಿಸುತ್ತಿದ್ದನು.

## ಶ್ರೀರಾಮನು ಸಭಿಕರನ್ನು ಸತ್ಕರಿಸಿ ಕಳುಹಿಸಿದುದು.

ಬಳಿಕ ಭಗನವಂಶ ಸಂಭೂತನಾದ ಶ್ರೀರಾಮನು ತನ್ನ ಪಟ್ಟಾಭಿಷೇಕ ಮಹೋತ್ಸವದ ಜ್ಞಾಪಕಾರ್ಥವಾಗಿ ವೇದವೇದಾಂಗ ಪಾರಂಗತರಾದ ಬ್ರಾಹ್ಮಣರನ್ನು ಕರೆಸಿ ಅವರನ್ನು ಆದರಿಸಿ ಅನ್ನವಸ್ತ್ರಧ್ಯಾಭರಣಗಳಿಂದ ತೃಪ್ತಿಗೊಳಿಸಿ ಬ್ರಾಹ್ಮಣರಿಗಾಗಿ ಒಂದು ಲಕ್ಷ ಗೋದಾನವನ್ನು ನೂರು ವೃಷಭದಾನವನ್ನೂ ಅನೇಕ ಗಜದಾನವನ್ನು ಮಾಡಿ ಅದೂ ಸಾಲದೆ ಮುನ್ನತ್ತು ಸುವ ರ್ಣಗಳನ್ನು ಕೊಟ್ಟು ಸರ್ವಸಮತ್ವದಿಂದ ಎಲ್ಲರೂ ತೃಪ್ತರಾಗಲು ಅವರನ್ನು ಆದರಿಸಿ ಕಳುಹಿಸಿ ಕೊಟ್ಟು ತನ್ನ ಇಷ್ಟಮಿತ್ರರನ್ನು ಸತ್ಕರಿಸುವುದಕ್ಕೆ ಆರಂಭಿಸಿ ದಿವ್ಯ ಕಾಂತಿಯುಕ್ತನಾದ ರತ್ನಮಾ ಲಿಕೆಯನ್ನು ಸುಗ್ರೀವನಿಗೆ ಕೊಟ್ಟನು. ಅಂಗದನನ್ನು ನೋಡಿ ನವರತ್ನ ಖಚಿತವಾದ ಭುಜಕೀ ರ್ತಿಯನ್ನು ಕೊಟ್ಟು ಆದರಿಸಿದನು. ಆಂಜನೇಯನನ್ನು ಕರೆದು ವಸ್ತ್ರಾಭರಣಗಳನ್ನು ಮಾತ್ರ ಅವನಿಗೆ ಕೊಟ್ಟು ಸೀತಾದೇವಿಯ ಮುಖವನ್ನು ನೋಡಲು ಸರ್ವಜ್ಞಳಾದ ಜಗನ್ಮಾತೆಯೇ ಸೀತಾರೂಪದಿಂದ ಅವತರಿಸಿರುವಕಾರಣ ರಾಮನ ಇಂಗಿತವನ್ನು ತಿಳಿದು ಸೀತೆಯು ತನ್ನ ಕೊರ ಳಿನಲ್ಲಿದ್ದ ಮುತ್ತಿನಸರವನ್ನು ತೆಗೆದು ಆಂಜನೇಯನಿಗೆ ಕೊಟ್ಟಳು. ಅದನ್ನು ಕಂಡು ಆನಂದಿಸುತ್ತ ಶ್ರೀರಾಮನು ಜಾಂಬವಂತ ನಳನೀಲ ಕುಮುದ ಗವಯ ಗವಾಕ್ಷ ಗಂಧಮಾದನ ಮೊದಲಾದ ಕಪಿವೀರರಿಗೂ ತಾರೆ ಮೊದಲಾದ ಸುಗ್ರೀವನ ರಾಣಿವಾಸದವರಿಗೂ, ವಿಭೀಷಣನೆ ಮುಂತಾದ ರಾಕ್ಷಸರಿಗೂ, ಸರಮೆಯೂದಿಯಾದ ರಾಕ್ಷಸಸ್ತ್ರೀಯರಿಗೂ ಉಚಿತವರಿತು ಯೋಗ್ಯವಾದ ಉಡುಗರೆ ಉಚಿತಗಳನ್ನು ಕೊಟ್ಟು ಅವರ ಆದರಣೆಗಾಗಿ ಸಂತೋಷಪಟ್ಟು ಎಲ್ಲರನ್ನೂ ಆಶೀರ್ವ ದಿಸಿ ಇನ್ನು ನಿಮ್ಮ ನಿಮ್ಮ ಸ್ವಸ್ಥಾನಗಳಿಗೆ ಹೊರಡಬಹುದು ಎಂದು ಅಪ್ಪಣೆ ಮಾಡಿದನು. ಬಳಿಕ ಭರತಪುತ್ರನಿಗೆ ಯುವರಾಜ್ಯಾಭಿಷೇಕವಾದುದನ್ನು ಕಂಡು ಧನ್ಯರಾಗಿ ಸರ್ವರೂ ತಂತಮ್ಮ ಪರಿವಾರದೊಂದಿಗೆ ಹೊರಟು ಸುಖವಾಗಿ ತಮ್ಮ ವಾಸಸ್ಥಾನವನ್ನು ಸೇರಿ ಸಂತೋಷದಿಂದ್ದರು.

## ರಾಮರಾಜ್ಯದ ಮಹಿಮೆ.

ಹೀಗೆ ಅಭಿಷಕ್ತನಾದ ರಾಮನು ಸತ್ಯದಿಂದ ರಾಜ್ಯಭಾರಮಾಡುತ್ತಿರಲು ಅವನ ರಾಜ್ಯ ದಲ್ಲಿ ಅಕಾಲಮರಣವೂ ಅತಿವೃಷ್ಟಿ ಅನಾವೃಷ್ಟಿಗಳೂ ಅಸತ್ಯವೂ ತಲೆಹಾಕದೆ ಮಾಯವಾದವು. ಕಾಲಕ್ಕೆ ಸರಿಯಾಗಿ ಮಳೆಹೊಯ್ದು ಭೂಮಿಯು ಹುಲುಸಾಗಿ ಬೆಳೆಯುತ್ತಿದ್ದಿತು. ಪ್ರಜೆಗಳಲ್ಲಿ ಸುಳ್ಳು ಕಳ್ಳತನ ವ್ಯಭಿಚಾರ ಕೊಲೆಪಾತಕ ಸೂತಕ ಕ್ಷುದ್ರ ಹಸಿವು ಬಾಯಾರಿಕೆ ಅತಿಲೋಭಗ

ಳಿಲ್ಲದೆ ಇರಲು ಸರ್ವರೂ ಶಾಂತರಾಗಿ ಸುಖದಿಂದ ಬಾಳುತ್ತಿರ್ದರು. ಸರ್ಪಗಳ ಹಾವಳಿಯೂ ಹುಲಿ ಕರಡಿಗಳ ಬಾಧೆಯೂ ವನಮೃಗಗಳ ಭೀತಿಯೂ ಸಿಂಹ ಶಾರ್ದೂಲಗಳ ಕಾಟವು ಇಲ್ಲದೆ ದೇಶವು ಸುಭಿಕ್ಷಮಯವಾಗಿದ್ದಿತು. ಹೆಂಗಸರು ವೈಧವ್ಯವನ್ನೇ ಕಾಣರು, ಅಕಾಲಮರಣವೆಂಬುದು ಅರಣ್ಯದ ಪಾಲಾಯಿತು. ರಾಗದ್ವೇಷಗಳಿಲ್ಲದಕಾರಣ ರಾಜ್ಯಕ್ಷೋಭೆಯೆ ಕಾಣುತ್ತಿರಲಿಲ್ಲ. ಶತ್ರುರಾಜರಿಲ್ಲದೆ ಏಕಾತಪತ್ರ ಸಾಮ್ರಾಜ್ಯವನ್ನು ಅನುಭವಿಸುತ್ತಿದ್ದ ಶ್ರೀರಾಮನ ರಾಜ್ಯಭಾರದಲ್ಲಿ ಸಕಲರಿಗೂ ಸರ್ವದಾ ಸುಖವೇ ಹೊರತು ದುಃಖವೆಂಬುದನ್ನೇ ಕಾಣರು ಸೂರ್ಯನು ಶಾಂತತೆಯನ್ನು ವಹಿಸಿ ಪ್ರಕಾಶಿಸುತ್ತಿದ್ದನು ವಾಯುವು ಸುಖಸ್ಪರ್ಶನಾಗಿ ಬೀಸುತ್ತಿದ್ದನು. ಚಾತುರ್ವರ್ಣ್ಯದವರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ತಮ್ಮ ಕುಲಾಚಾರವನ್ನು ಮೀರದೆ ನಡೆಯುತ್ತಿದ್ದರು. ವೇದಕರ್ಮಕ್ಕೆ ಚ್ಯುತಿಯಿಲ್ಲದೆ ನಿತ್ಯಸಂಪೂರ್ಣವಾಗಿ ಯಜ್ಞಯಾಗಾದಿಗಳು ನಡೆಯುತ್ತಿದ್ದವು. ಇಂಥ ರಾಮರಾಜ್ಯಕ್ಕೆ ದೊರೆಯಾದ ದಾಶರಥಿಯು ತನ್ನ ತಮ್ಮಂದಿರ ಸಹಾಯದಿಂದ ಅಶ್ವಮೇಧ ಪೌಂಡರೀಕ ವಾಜಪೇಯ ಮೊದಲಾದ ನಾನಾ ಯಜ್ಞಗಳನ್ನು ಅನೇಕ ಸಾರಿ ಮಾಡಿ ಭೂಲೋಕವನ್ನು ತೃಪ್ತಿಗೊಳಿಸಿ ತನ್ನ ಆಪ್ತಬಾಂಧವ ಆಶ್ರಿತವರ್ಗದವರಿಂದಲೂ ಮಾಡಿಸುತ್ತ ಬರಲು ಪ್ರಜೆಗಳೂ ಪರಿವಾರದವರೂ ಪರಿಪೂರ್ಣಾಯುಷ್ಕರಾಗಿ ಸತ್ಯಾಚಾರಸಂಪನ್ನರಾಗಿ ರೂಪಲಕ್ಷಣಸುಂದರರಾಗಿ ಧರ್ಮದೇವತೆಯ ಮಕ್ಕಳಿನಂತೆ ಅಧರ್ಮವನ್ನು ಹೊರನೂಕಿ ಸುಖಸಂತೋಷಗಳಿಂದ ಬಾಳುತ್ತಿರಲು ಹದಿನಾಲ್ಕು ಲೋಕದವರು ಹೋಗುತ್ತಿದ್ದರುದೇವತೆಗಳು ಸರಿ ಎಂದು ಒಪ್ಪಿದರು. ಲೋಕವು ಸುಭಿಕ್ಷವಾಗಿ ಸರ್ವರೂ ಶಾಂತಿಯಿಂದ ಕೂಡಿ ರಾಜಭಕ್ತಿ ಮರ್ಯಾದೆಗಳೊಡನೆ ರಾಮನನ್ನು ಸೇವಿಸುತ್ತ ಸುಖಸಂತೋಷಭರಿತರಾಗಿ ಆನಂದಸಾಗರದ ಅಲೆಗಳಲ್ಲಿ ಮುಳುಗಿ ತೇಲುತ್ತಿದ್ದರು.

## ಉತ್ತರಕಾಂಡದ ಕಥಾಸಾರ ಸೂಚನೆ.

ಹೀಗೆ ಪಟ್ಟಾಭಿಷಿಕ್ತನಾದ ಶ್ರೀರಾಮನು ಪಟ್ಟಮಹಿಷಿಯಾದ ಸೀತಾದೇವಿಯೊಡನೆ ಕೆಲವುಕಾಲ ಸುಖದಿಂದ ಕಾಲವನ್ನು ಕಳೆಯುತ್ತಿರುವಾಗ ಸೀತಾದೇವಿಯು ಗರ್ಭಿಣಿಯಾಗಿ, ತನ್ನ ವಂಶವೆಂಬ ಕಲ್ಪವೃಕ್ಷವು ಅಂಕುರವಾಯಿತೆಂದು ಶ್ರೀರಾಮನು ಆನಂದಿಸುತ್ತಿರುವಾಗ ತುಚ್ಛನಾದ ರಜಕನೊಬ್ಬನು ಅನ್ಯರ ಮನೆಯಲ್ಲಿ ಸೆರೆಯಾಗಿದ್ದ ಹೆಂಡತಿಯನ್ನು ಕರೆದು ತಂದು ಶ್ರೀರಾಮನು ಬಾಳುವಂತೆ ನಾನೆಂದಿಗೂ ಮಾಡಲಾರೆ. ನನಗೆ ಹೇಳದೆ ತೌರುಮನೆಗೆ ಹೊರಟುಹೋದ ಹೆಂಡತಿಯನ್ನು ನಾನೆಂದಿಗೂ ಪುನಃ ಸೇರಿಕೊಳ್ಳಲಾರೆನೆಂದು ದೂಷಣೆ ಮಾಡಿದನೆಂಬ ದೂರನ್ನು ಕೇಳಿ, ಶ್ರೀರಾಮನು ಗರ್ಭವತಿಯಾದ ಸೀತಾದೇವಿಯನ್ನು ಅರಣ್ಯಕ್ಕೆ ಕಳುಹಿಸಲಾಗಿ ಅಲ್ಲಿ ಋಷಿಶ್ರೇಷ್ಠನಾದ ವಾಲ್ಮೀಕಿಯು ಸೀತೆಯನ್ನುಕಂಡು ಸಂತೈಸಿ ತನ್ನಆಶ್ರಮಕ್ಕೆ ಕರೆದುಕೊಂಡು ಹೋಗಿ ಮಗಳೋಪಾದಿಯಲ್ಲಿ ಸಲಹುತ್ತಿದ್ದನು. ಬಳಿಕ ಕೆಲವು ದಿನಗಳಮೇಲೆ ಸುಮುಹೂರ್ತದಲ್ಲಿ ಲವಕುಶರು ಹುಟ್ಟಿದರು. ಆ ಮಕ್ಕಳಿಗೆ ವಾಲ್ಮೀಕಿಯು ವಿದ್ಯಾಬುದ್ಧಿಗಳನ್ನು ಕಲಿಸಿ ಪ್ರವೀಣರನ್ನಾಗಿ ಮಾಡಿದ ಬಳಿಕ ಪ್ರಾಯಸಮರ್ಥರಾದ ಆ ಲವಕುಶರು ತಂದೆಯಾದ ರಾಮನಿಂದ ಬಿಡಲ್ಪಟ್ಟ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿ ರಾಮನೊಡನೆ ಹೊಡೆದಾಡಿ ಅವನ ಸೇನೆಯನ್ನು ಕೊಂದು ರಾಮನನ್ನು ಮೂರ್ಛೆಗೊಳಿಸಲು ವಾಲ್ಮೀಕಿಯ ಪ್ರಭಾವದಿಂದ ಶ್ರೀರಾಮನಿಗೆ ಮೂರ್ಛೆ ತಿಳಿದು ಈ ಬಾಲಕರು ತನ್ನ ಮಕ್ಕಳೆಂದು ಅರಿತವನಾಗಿ ಋಷಿಯಿಂದ ಎಲ್ಲಾ ವೃತ್ತಾಂತವನ್ನು ತಿಳಿದು ಹರ್ಷಿತನಾಗಿ ಶ್ರೀರಾಮನು ವಾಲ್ಮೀಕಿಯ ಅಪ್ಪಣೆಯಂತೆ ಸೀತಾದೇವಿಯನ್ನು ಮಕ್ಕಳಾದ ಲವಕುಶರನ್ನು ಕೂಡಿಕೊಂಡು ಸಂತೋಷಯುಕ್ತನಾಗಿ ಅಯೋಧ್ಯೆಯಲ್ಲಿ ರಾಜ್ಯಭಾರಮಾಡುತ್ತಿದ್ದು ಸಮರ್ಥನಾದ ಮಗನಿಗೆ ರಾಜ್ಯಪದವಿಯನ್ನು ಒಪ್ಪಿಸಿ ತಾನು ತನ್ನ

ನಿಜರೂಪವನ್ನು ಸ್ವೀಕರಿಸಿ ಕೈವಲ್ಯಪದವಿಯನ್ನಲಂಕರಿಸಿ ಆದಿಲಕ್ಷ್ಮಿಸಮೇತನಾದ ಶ್ರೀಮನ್ನಾರಾಯಣನಾಗಿ ರಾರಾಜಿಸುತ್ತಿದ್ದನೆಂದು ಶ್ರೀಮದ್ವಾಲ್ಮೀಕಿ ರಾಮಾಯಣದ ಉತ್ತರಕಾಂಡದಲ್ಲಿ ಹೇಳಿದೆ.

## ರಾಮಾಯಣ ಪಾರಾಯಣದ ಫಲಶ್ರುತಿ.

ಅಕ್ಷರರೂಪದಿಂದ ನಾರಾಯಣನೂ, ಅರ್ಥರೂಪದಿಂದ ಆದಿಶಕ್ತಿಯೂ ಶಬ್ದರೂಪದಿಂದ ದೇವತೆಗಳೂ, ಧ್ವನಿಯಿಂದ ಸೂರ್ಯಚಂದ್ರರೂ ವಾಸಿಸುತ್ತಿರುವುದರಿಂದ ಈ ರಾಮಾಯಯಣವು ಸರ್ವದೇವತಾತ್ಮಕವಾಗಿದೆ. ಆದಕಾರಣ ಇಂಥ ರಾಮಾಯಣದ ಕಥೆಯನ್ನು ಯಾರು ಭಕ್ತಿಯಿಂದ ಹೇಳಿ ಕೇಳುವರೊ ಪುಸ್ತಕವನ್ನು ಪೂಜಿಸಿ ಪಠಿಸುತ್ತ ಯಾರು ನಿತ್ಯಪಾರಾಯಣ ಮಾಡುತ್ತಿರುವರೊ ಅಂಥವರು ಸಕಲ ಪಾಪವಿಮುಕ್ತರಾಗಿ ಶಾಶ್ವತವಾದ ಸೌಖ್ಯಸಂತೋಷಗಳನ್ನು ಪಡೆಯುವರು. ಅಲ್ಲದೆ ಆದಿಕಾವ್ಯವಾಗಿ ಯಶಸ್ಕರವಾಗಿ, ಆಯುಷ್ಯಪ್ರದವಾಗಿ ವಿಜಯದಾಯಕವೆನಿಸಿ ಆರ್ಷೇಯವಾಗಿ ಧನ್ಯ ಕಾವ್ಯವೆನಿಸುವ ಈ ವಾಲ್ಮೀಕಿ ರಾಮಾಯಣವನ್ನಾಗಲಿ ಆದರಲ್ಲಿ ಹೇಳಿರುವ ರಾಮಕಥೆಯನ್ನಾಗಲಿ ಶ್ರೀರಾಮನ ಪಟ್ಟಾಭಿಷೇಕ ವೃತ್ತಾಂತವನ್ನೇ ಆಗಲಿ ಕೇಳಿದವರು ಕಾವ್ಯಸಿದ್ಧಿಯನ್ನು ಪಡೆದು ತಂತಮ್ಮ ಕೋರಿಕೆಗಳನ್ನು ಕೈಗೂಡಿಸಿಕೊಳ್ಳುವರು. ಪುತ್ರಾರ್ಥಿಯಾಗಿ ಪಠಿಸುವನಿಗೆ ಪುತ್ರಸಂತಾನವೂ, ಧನಾರ್ಥಿಗಳಿಗೆ ಧನಸಂಪತ್ತು ಕನ್ಯಾರ್ಥಿಗಳಿಗೆ ವಿವಾಹಸೌಭಾಗ್ಯವೂ, ಕ್ಷತ್ರಿಯರಿಗೆ ಶೌರ್ಯಔದಾರ್ಯಗಳು ಬ್ರಾಹ್ಮಣರಿಗೆ ಬ್ರಹ್ಮಜ್ಞಾನವೂ ವೈಶ್ಯರಿಗೆ ವಂಶವೃದ್ಧಿಯೂ ಶೂದ್ರರಿಗೆ ಇಹಲೋಕದಲ್ಲಿ ಸೌಖ್ಯವೂ ಪರಲೋಕದಲ್ಲಿ ಪ್ರಾಶಸ್ತ್ಯವೂ ಲಭಿಸುವುದರಲ್ಲಿ ಯಾವ ಸಂದೇಹವೂ ಇಲ್ಲ ಆದಕಾರಣ ಋಷಿಶ್ರೇಷ್ಠನಾದ ಶ್ರೀವಾಲ್ಮೀಕಿಯಿಂದ ವಿರಚಿತವಾದ ಈ ರಾಮಾಯಣವೆಂಬ ಆದಿಕಾವ್ಯವನ್ನು ಯಾರು ಭಕ್ತಿಯಿಂದ ಪಠಿಸುವರೊ ಇತರರಿಗೆ ಓದಿ ಹೇಳುತ್ತಿರುವರೊ ಹೇಳಿದ ಕಥೆಯನ್ನು ದೃಢವಾದ ಮನಸ್ಸಿನಿಂದ ಕೇಳುತ್ತಿರುವರೊ ಅಂಥವರಿಗೆ ಕೋರಿದ ಕೋರಿಕೆಗಳು ಸಫಲವಾಗಿ ಕೈಗೂಡಿ ಪಾಪಕ್ಷಯವಾಗಿ ಪುಣ್ಯವು ವೃದ್ಧಿಯಾಗಿ ಸಕಲ ಸಂಪತ್ಸಮೃದ್ಧಿಯೊಡನೆ ಆಯುರಾರೋಗ್ಯ ಐಶ್ವರ್ಯ ಸುಖಸಂತಾನಗಳು ಪ್ರಾಪ್ತವಾಗಿ ಸತ್ಕೀರ್ತಿಯಿಂದ ಬಾಳುವರೆಂದು ಶಿಷ್ಯರಾದ ಲವಕುಶರಿಗೆ ವಾಲ್ಮೀಕಿಮಹರ್ಷಿಯು ಬೋಧಿಸಿದನೆಂಬ ಶ್ರೀರಾಮಾಯಣ ಕಥಾವಿಸ್ತಾರವಂ ವಚನರಚನೆಯಲ್ಲಿ ವಿವರಿಸಿದ ವಚನರಾಮಾಯಣ ಕಥಾಸಂಗ್ರಹದ ಲೇಖಕನಿಗೂ ಪಾಠಕರಿಗೂ ವಾಚಕರಿಗೂ ಮುದ್ರಾಪಕರಿಗೂ ಸಹ ಶ್ರೀರಾಮನು ಸರ್ವದಾ ಇತೋಽಪ್ಯತಿಶಯವಾದ ಸುಖಸಂತೋಷ ಸೌಭಾಗ್ಯ ಸತ್ಸಂತಾನ ಸಂಪತ್ಪರಂಪರೆಗಳನ್ನು ಕೊಟ್ಟು ಕಾಪಾಡಲಿ! ಎಂಬಿಲ್ಲಿಗೆ ವಚನ ರಾಮಾಯಣ ಕಥಾಸಂಗ್ರಹದಲ್ಲಿ ಉತ್ತರಕಾಂಡ ಕಥಾ ಸಹಿತವಾದ ಶ್ರೀಮದ್ರಾಮಾಯಣ ಪಾರಾಯಣ ಫಲಶ್ರುತಿಪ್ರಕರಣಂ ಸಂಪೂರ್ಣಂ.

ಶ್ಲೋ॥ ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾಬ್ಧಯೇ |
ಚಕ್ರವರ್ತಿ ತನೂಜಾಯ ಸಾರ್ವಭೌಮಾಯ ಮಂಗಳಂ ||

ಕಂದ॥ ಸಂಗತಮೆನೆ ರಾಮಾಯಣ | ಮಾಂಗೀ ರಸ ವರ್ಷದಲ್ಲಿ ಸಂಪೂರ್ಣತೆಯಿಂ ||
ಮಂಗಳಮಯ ಶುಭಲಗ್ನದೆ | ಸಾಂಗಂ, ತಾನೆನಿಸಿ ಮೆರೆದುದೀ ಧರೆಯೊಳಿಯಲ್ ||೧||

## ರಾಮಾಯಣ ಕಥಾಸಂಗ್ರಹಂ ಸಂಪೂರ್ಣಂ.

**ಓಂ ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ. ಹರಿಃ ಓಂ ತತ್ಸತ್.**

**ಶ್ರೀ. ಶ್ರೀ. ಶ್ರೀ.**

SHREE RASTU -

ಶ್ರೀರಸ್ತು.

HARI SHREE KRISHNAYA NAMAH

ಹರಿಃ ಓಂ ಶ್ರೀ ಕೃಷ್ಣಾಯ ನಮಃ.

HARE KRISHNAVATHARADA KATHE

# ಶ್ರೀ ಕೃಷ್ಣಾವತಾರದ ಕಥೆ.



ಸರ್ವತಂತ್ರ ಸ್ವತಂತ್ರನಾದ ಭಗವಂತನು ಲೋಕಸಂರಕ್ಷಣಾರ್ಥವಾಗಿ ಮಾಡಿದ ಹತ್ತು ಅವತಾರಗಳಲ್ಲಿ ಬಹು ಮುಖ್ಯವಾದುವು ರಾಮಾವತಾರ ಕೃಷ್ಣಾವತಾರಗಳು ಇವೆರಡೂ ಬಹು ಮುಖ್ಯವಾಗಿ ಸಂಪೂರ್ಣಾಂಶಗಳಿಂದ ಕೂಡಿ ಪರಿಶೋಭಿಸುತ್ತಿರುವುವೆಂದು ಶ್ರುತಿಸ್ಮೃತಿಗಳಲ್ಲಿಯೂ ಅಷ್ಟಾದಶ ಪುರಾಣಗಳಲ್ಲಿಯೂ ವಿಸ್ತಾರವಾಗಿ ಹೊಗಳಲ್ಪಟ್ಟಿದೆ. ರಾಮಾವತಾರದ ಕಥೆಯಾದ ರಾಮಾಯಣದಂತೆ ಕೃಷ್ಣಾವತಾರದ ಕಥೆಯೂ ಬಹು ವಿಸ್ತಾರವಾಗಿದೆ ಆದರೆ ಗ್ರಂಥವಿಸ್ತಾರವಾಗುವುದೆಂಬ ಭಯದಿಂದ ಇಲ್ಲಿ ಕೃಷ್ಣಾವತಾರದ ಕಥೆಯನ್ನು ಸಂಗ್ರಹಿಸಿ ಮುಖ್ಯವಿಷಯಗಳನ್ನು ಆರಿಸಿಕೊಂಡು ಬಹು ಸೂಕ್ಷ್ಮವಾಗಿ ಬರೆಯಲ್ಪಟ್ಟಿದೆ. ಹೀಗೆ ಬರೆಯಲ್ಪಟ್ಟಿರುವ ಕೃಷ್ಣಾವತಾರದ ಕಥೆಯು ಮಹಾಭಾರತ ಮತ್ತು ಬ್ರಹ್ಮವೈವರ್ತ ಪುರಾಣ ದೇವೀ ಭಾಗವತ ಶ್ರೀಮದ್ಭಾಗವತಾದಿಗಳಲ್ಲಿ ಯುಗಭೇದ ಕಾಲಭೇದ ಕರ್ತೃಭೇದಗಳಿಂದ ಸ್ವಲ್ಪ ಹೆಚ್ಚು ಕಡಿಮೆಯಾಗಿ ವ್ಯತ್ಯಾಸವನ್ನು ಪಡೆದಿದೆ, ಎಂಬುದು ಸ್ಪಷ್ಟವಾಗಿದೆ. ಅದನ್ನು ಇಲ್ಲಿ ನಾವು ಪ್ರಸ್ತಾಪಿಸಬೇಕಾಗಿಲ್ಲ. ಮುಖ್ಯವಾಗಿ ಪಾಪಸಂಕಲಿತವಾದ ಈ ಕಲಿಕಾಲದಲ್ಲಿ ಭಾಗವತ ಕಥಾಶ್ರವಣದಿಂದಲೆ ಪಾಪಕ್ಷಯವಾಗಿ ಪುಣ್ಯಸಂಪಾದನೆಯಾಗಬೇಕೆಂದಿರುವುದರಿಂದ ನಾರದ ಪುರಾಣದಲ್ಲಿ ಉದಾಹರಿಸಿರುವ ಶ್ಲೋಕದಲ್ಲಿ "ಕಲೌಕಲ್ಮಷಚಿತ್ತಾನಾಂ ಪಾಪದ್ರವ್ಯೋಪಜೀವಿನಾಂ | ವಿಧಿಕ್ರಿಯಾವಿಹೀನಾನಾಂ ಗತಿರ್ಗೋವಿಂದಕೀರ್ತನಂ ||" ಎಂದು ಹೇಳಿರುವುದರಿಂದ ಮುಖ್ಯವಾಗಿ ಲೋಕದಲ್ಲಿರುವ ಸರ್ವರೂ ಭಗವತ್ಕಥಾಶ್ರವಣವನ್ನು ಕೇಳಿ ಪಾಪವಿಮುಕ್ತರಾಗಿ ಪುಣ್ಯಸಂಪರ್ಕದಿಂದ ಧನ್ಯರಾಗಬಹುದು ಎಂಬ ಧ್ವನಿಯು ತೋರಿಬರುತ್ತಿರುವುದು. ಇಂಥ ಶ್ರವಣ ಮನನ ಪಠನಾದಿಗಳಿಗೆ ಯೋಗ್ಯವಾದ ಶ್ರೀಕೃಷ್ಣಾವತಾರದ ಕಥೆಗೆ ಮೂಲವೆಂತೆಂದರೆ:—



ರಾಮಾವತಾರದಲ್ಲಿ ಶ್ರೀರಾಮನು ಇಂದ್ರನಮಗನಾದ ವಾಲಿಯನ್ನು ನಿಗ್ರಹಿಸಿ ಸೂರ್ಯಪುತ್ರನಾದ ಸುಗ್ರೀವನನ್ನು ಸಂರಕ್ಷಿಸಿದಂತೆ ಕೃಷ್ಣಾವತಾರದಲ್ಲಿ ಸೂರ್ಯಪುತ್ರನನ್ನು ನಿಗ್ರಹಿಸಿ ಇಂದ್ರನಂದನನನ್ನು ಪರಿಪಾಲಿಸಬೇಕಾಯಿತು. ಅಲ್ಲದೆ ರಾಮಾವತಾರ ಕಾಲದಲ್ಲಿ ಸಂಹರಿಸಿದ ಕಾಲನೇಮಿ ಮೊದಲಾದ ರಾಕ್ಷಸರು ಕೃಷ್ಣಾವತಾರದಲ್ಲಿ ಕಂಸಾದಿಗಳಾಗಿ ಹುಟ್ಟಿ ಲೋಕಕಂಟಕರಾಗಿದ್ದ ಕಾರಣ ಅವರನ್ನು ಸಂಹರಿಸಿ ಭೂಭಾರವನ್ನು ತಗ್ಗಿಸಲು ತಾನು ಪ್ರಯತ್ನಪಡಬೇಕಾಗಿ ಭಗವಂತನು ಕೃಷ್ಣಾವತಾರಮಾಡುವುದಕ್ಕೆ ಎರಡನೆಯ ಕಾರಣವಾಯಿತು. ಇದೂ ಅಲ್ಲದೆ ವರಹಾವತಾರದಲ್ಲಿ ನಿಗ್ರಹಿಸಲ್ಪಟ್ಟ ರಾಕ್ಷಸರು ನರಕಾದಿಗಳಾಗಿ ಜನಿಸಿ ಲೋಕವನ್ನು ಪೀಡಿ

ಸುತ್ತಿದ್ದ ಕಾರಣ ಭಗವಂತನು ಕೃಷ್ಣಾವತಾರಮಾಡುವುದಕ್ಕೆ ಮೂರನೆಯ ಕಾರಣವೂ ಕಂಡು ಬಂದಿತು. ಈ ಮೂರುಕಾರಣಗಳಿಂದ ಮತ್ತು ಇನ್ನೂ ಅನೇಕ ಉಪಕಾರಣಗಳಿಂದಲೂ, ಕೃಷ್ಣಾವತಾರಕ್ಕೆ ಮೂಲಕಾರಣವಾಯಿತು. ಶ್ವೇತವರಾಹಕಲ್ಪದ ವೈವಸ್ವತ ಮನ್ವಂತರದ ೨೮ನೇ ದ್ವಾಪರಯುಗದ ಅಂತ್ಯಭಾಗದಲ್ಲಿ ಭೂದೇವಿಯು ಭಾರವನ್ನು ಸಹಿಸಲಾರದೆ ಸಂಕಟ ಪಡುತ್ತ ದೇವತೆಗಳೊಡನೆ ಹೊರಟು ಮಹಾವಿಷ್ಣುವಿನ ಬಳಿಗೆ ಹೋಗಿ ತನ್ನ ಭಾರವನ್ನು ತಗ್ಗಿಸಿ ಕಾಪಾಡಬೇಕೆಂದು ಕೇಳಿಕೊಂಡಳು. ಆಗ ಶ್ರೀಮನ್ನಾರಾಯಣನು ಭೂದೇವಿಯನ್ನು ಸಂತೈಸಿ ಬ್ರಹ್ಮಾದಿಗಳನ್ನು ಕುರಿತು ನಾನು ಇಷ್ಟರಲ್ಲೆ ಕೃಷ್ಣಾವತಾರಮಾಡಿ ಲೋಕವನ್ನು ಉದ್ಧರಿಸಿ ದೇವತೆಗಳನ್ನೂ ಋಷಿಗಳನ್ನೂ ಕಾಪಾಡಿ ರಾಕ್ಷಸರನ್ನು ನಿರ್ಮೂಲಮಾಡುವೆನೆಂದು ವರವನ್ನು ಕೊಟ್ಟು ತಾನು ಅವತಾರಮಾಡುವುದಕ್ಕೆ ತಕ್ಕ ಸಮಯವನ್ನು ನಿರೀಕ್ಷಿಸುತ್ತಿದ್ದನು. ಇವನಿಗೆ ಸಹಾಯಕರಾಗಿ ದೇವತೆಗಳು ತಮ್ಮ ಅಂಶದಿಂದ ಅವತಾರಮಾಡುತ್ತಿದ್ದರು. ಹೀಗಿರುವಲ್ಲಿ ದೇವಜನಕನಾದ ಕಶ್ಯಪಬ್ರಹ್ಮನೂ ಅವನ ಹೆಂಡತಿಯಾದ ಅದಿತಿದೇವಿಯೂ ತಪಸ್ಸುಮಾಡಿ ವರವನ್ನು ಪಡೆದು ಶ್ರೀಹರಿಯು ತಮಗೆ ಮಗನಾಗಬೇಕೆಂದು ಬೇಡಿಕೊಂಡಿರಲು ಅದರಂತೆ ಎರಡನೆಯ ಜನ್ಮದಲ್ಲಿ ದಶರಥ ಕೌಸಲೆಯರಾಗಿ ಹುಟ್ಟಿದ ಆ ಋಷಿದಂಪತಿಗಳಿಗೆ ಪುತ್ರನಾಗಿ ಶ್ರೀರಾಮನು ಜನಿಸಿ ಪ್ರಖ್ಯಾತನಾದನು. ನೆಪಮಾತ್ರಕ್ಕೆ ತಾಯ್ತಂದೆಗಳಾಗಿದ್ದ ಆ ದಂಪತಿಗಳು ಈಗ ವಸುದೇವದೇವಕಿಯರಾಗಿ ಹುಟ್ಟಿ ಶ್ರೀಕೃಷ್ಣಾವತಾರ ಕಾಲವನ್ನು ನಿರೀಕ್ಷಿಸುತ್ತಿದ್ದರು.

## ಕಂಸನ ಏಳಿಗೆ ವಸುದೇವ ದೇವಕಿಯರ ಬಂಧನ.

ಹೀಗಿರುವಲ್ಲಿ ಹಿಮಾಚಲಪರ್ವತದ ದಕ್ಷಿಣಭಾಗದಲ್ಲಿರುವ ಆರ್ಯಾವರ್ತದ ಮಧ್ಯಭಾಗದಲ್ಲಿ ಘೂರ್ಜರರ ವಾಸಸ್ಥಾನವಾದ ಯಮುನಾತೀರಕ್ಕೆ ಸಮೀಪವಾಗಿ ಮಧುರಾಪುರಿ ಎಂಬ ಪಟ್ಟಣವು ಪ್ರಸಿದ್ಧವಾಗಿದ್ದಿತು. ಅಲ್ಲಿಗೆ ದೊರೆಯಾದ ಉಗ್ರಸೇನನ ಮಗನು ತನ್ನ ತಂದೆಯನ್ನು ಸೆರೆಯಲ್ಲಿಟ್ಟು ತಾನೆ ರಾಜ್ಯಭಾರಮಾಡುತ್ತಿದ್ದನು. ಇವನು ಒಂದಾನೊಂದು ಕಾಲದಲ್ಲಿ ತನ್ನ ಚಿಕ್ಕಪ್ಪನಾದ ದೇವಕನೆಂಬವನಿಗೆ ಮಗಳಾಗಿ ಹುಟ್ಟಿದ ದೇವಕಿದೇವಿಯನ್ನು ಆನಕದುಂದುಭಿ ಎಂದು ಪ್ರಖ್ಯಾತನಾಗಿದ್ದ ವಸುದೇವನಿಗೆ ಕೊಟ್ಟು ಮದುವೆಮಾಡಿ ವಧೂವರರನ್ನು ಅತ್ಯುತ್ಸಾಹದಿಂದ ಆನೆಯಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿಕೊಂಡು ರಾಜಬೀದಿಯಲ್ಲಿ ಬರುತ್ತಿದ್ದನು.



ಆಗ ದೈವವಶದಿಂದ ಆಕಾಶದಲ್ಲಿ ಅಶರೀರವಾಣಿಯುಂಟಾಗಿ ಕಂಸನನ್ನು ಕುರಿತು ಹೀಗೆ ಹೇಳಿತು, ಎಲೈ ಕಂಸನೇ ನೀನು ಆನಂದಪರವಶನಾಗಿ ಮೈಮರೆತಿರಬೇಡ ಈ ದೇವಕಿಯ ಹೊಟ್ಟೆಯಲ್ಲಿ ಎಂಟನೆಯ ಗರ್ಭದಲ್ಲಿ ಹುಟ್ಟುವ ಗಂಡುಮಗನು ನಿನಗೆ ಮೃತ್ಯುವಾಗಿ ನಿನ್ನನ್ನು ಕೊಲ್ಲದೆಬಿಡನು ಎಂದು ಹೇಳಿತು. ಅದನ್ನು ಕೇಳಿದಕೂಡಲೆ ಕಂಸನು ರೋಷಭೀಷಣನಾಗಿ

ತಂಗಿಯನ್ನು ದುರದುರನೆ ನೋಡುತ್ತ ಇವಳಿದ್ದರಲ್ಲವೇ ನನಗೆ ಮೃತ್ಯುವಾದ ಮಗನು ಹುಟ್ಟು ವನು ಇವಳನ್ನೆ ಮೊದಲು ತೀರಿಸಿಬಿಟ್ಟರೆ ನನಗೆ ಹಗೆಯೆ ಇಲ್ಲವೆಂದು ತಿಳಿದು ಖಡ್ಗವನ್ನು ಹಿರಿದು ದೇವಕಿಯನ್ನು ಕಡಿಯುವುದಕ್ಕೆ ಹೊರಟನು ಆಗ ಹತ್ತಿರದಲ್ಲಿದ್ದ ವಸುದೇವನು ಕಂಸ ನನ್ನು ಶಾಂತವಚನಗಳಿಂದ ತಿಳಿಯಹೇಳಿ ವೃಥಾ ಕೋಪದಿಂದ ಸ್ತ್ರೀಹತ್ಯಮಾಡಿ ಕೆಟ್ಟುಹೋಗ ಬೇಡ ಇವಳು ಹೆರುವ ಮಕ್ಕಳನ್ನೆಲ್ಲ ಹುಟ್ಟಿದಕೂಲೆ ನಿನ್ನ ವಶಮಾಡುವೆನು ಆ ಮಕ್ಕಳನ್ನು ನೀನು ಬೇಕಾದಹಾಗೆ ಮಾಡಿಕೊ ಸದ್ಯಕ್ಕೆ ಇವಳತಂಟೆಗೆ ಬರಬೇಡ ಎಂದು ಸಂತೈಸಲು ದುರ್ದೈ ವದಿಂದ ವಂಚಿತನಾದ ಕಂಸನು ದೇವಕಿಯನ್ನು ಕೊಲ್ಲದೆ ಬಿಟ್ಟುಬಿಟ್ಟನು. ಬಳಿಕ ಭಗವತ್ಪ್ರೇ ರಿತನಾದ ನಾರದ ಮಹರ್ಷಿಯು ಕಂಸನ ಮಹಾ ಪಾಪವನ್ನು ವೃದ್ಧಿಗೊಳಿಸುವುದಕ್ಕಾಗಿ ಪ್ರಯ ತ್ನಪಟ್ಟು ಅವನ ಬಳಿಗೆ ಬಂದು ಅಯ್ಯಾ! ನೀನು ರಾಕ್ಷಸಕುಲದವನು ವಸುದೇವನು ದೇವತೆ ಗಳ ಕುಲಕ್ಕೆ ಸೇರಿದವನು ಆದಕಾರಣ ಮಹಾವಿಷ್ಣುವು ಅವನಿಗೆ ಮಗನಾಗಿ ಹುಟ್ಟಿ ನಿನ್ನನ್ನೂ ನಿನ್ನ ಕುಲವನ್ನೂ ಸಂಹಾರಮಾಡಿ ದೇವತೆಗಳನ್ನು ಸಂರಕ್ಷಿಸುವನು. ನೀನು ಇದಕ್ಕೆ ಮೊದಲೆ ಜಾಗರೂಕನಾಗಿ ನಿನ್ನ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವ ಉಪಾಯವನ್ನು ಹುಡುಕಿಕೊ! ಎಂದು ಹೇಳಿ ಹೊರಟುಹೋದನು. ಬಳಿಕ ಕಂಸಾಸುರನು ತನಗೆ ಆಪ್ತರಾದ ತೃಣಾವರ್ತ, ಬಕಾಸುರ ಚಾಣೂರಾದಿ ರಾಕ್ಷಸರನ್ನು ಕರೆಸಿ ನಾರದರು ಹೇಳಿದ ವೃತ್ತಾಂತವನ್ನು ಅವರಿಗೆ ತಿಳಿಸಿ ಧರ್ಮಸ್ವರೂಪನಾದ ವಿಷ್ಣುವು ವೇದಮಯನಾಗಿ ಯಜ್ಞಯಾಗ ಗೋಬ್ರಾಹ್ಮಣ ರೂಪ ದಿಂದಿರುತ್ತ ದೇವತೆಗಳನ್ನು ರಕ್ಷಿಸುತ್ತಿರುವಕಾರಣ ನಾವು ಯಜ್ಞಯಾಗಾದಿ ಸತ್ಕರ್ಮಗಳಿಗೂ, ದೇವ ಬ್ರಾಹ್ಮಣರ ಅಭಿವೃದ್ಧಿಗೂ ಅವಕಾಶಕೊಡದಂತೆ ನೋಡಿಕೊಂಡರೆ ಕ್ಷೀಣಬಲನಾದ ವಿಷ್ಣುವು ನಮ್ಮನ್ನು ಪೀಡಿಸಲಾರನು. ಬಳಿಕ ತಮಗೆ ಅಧಿಪತಿಯಾದ ಮಹಾವಿಷ್ಣುವೆ ಕ್ಷೀಣ ಬಲನಾದಮೇಲೆ ಅನಾಥರಾದ ದೇವತೆಗಳು ನಮ್ಮನ್ನು ಏನೂ ಮಾಡಲಾರರು ಎಂದು ಹೇಳಿ ವಸುದೇವ ಸಹಿತ ದೇವಕೀದೇವಿಯನ್ನು ಸೆರೆಯಲ್ಲಿಡಿಸಿ ಮಗು ಹುಟ್ಟಿದ ಕೂಡಲೆ ಆ ಮಗುವನ್ನು ನನಗೆ ತಂದುಕೊಡಬೇಕೆಂದು ಕಾವಲುಗಾರರಿಗೆ ಆಜ್ಞೆಮಾಡಿ ತಾನು ತನ್ನ ಕೆಲಸದಲ್ಲಿದ್ದನು. ಈ ರೀತಿಯಲ್ಲಿ ಸೆರೆಯಲ್ಲಿ ವಾಸಮಾಡುತ್ತಿದ್ದ ದೇವಕಿದೇವಿಯು ಹಡೆದ ಆರು ಮಕ್ಕಳನ್ನು ನಿಷ್ಕರುಣದಿಂದ ಕೊಂದು ಕಂಸನು ಭ್ರೂಣಹತ್ಯದೋಷಕ್ಕೆ ಭಾಗಿಯಾಗಿದ್ದನು.

## ಶ್ರೀ ಕೃಷ್ಣಾವತಾರ ಘಟ್ಟ.

ಹೀಗೆ ತಮ್ಮ ಮಕ್ಕಳೆಲ್ಲ ಸಾಯುತ್ತಿರುವುದರಿಂದ ಖಿನ್ನರಾಗಿ ವಸುದೇವ ದೇವಕಿಯ ರಿಬ್ಬರೂ ತಮ್ಮನ್ನು ಉದ್ಧರಿಸುವಂತೆ ಆರ್ತತ್ರಾಣಪರಾಯಣನಾದ ಶ್ರೀಹರಿಯನ್ನು ಧ್ಯಾನಿಸುತ್ತ ತದೇಕಧ್ಯಾನಾರೂಢರಾಗಿ ಕಾಲಹರಣಮಾಡುತ್ತಿದ್ದರು. ಇತ್ತ ಸರ್ವಚೈತನ್ಯ ಸ್ವರೂಪನಾದ ಶ್ರೀಮನ್ನಾರಾಯಣನು ತನಗೆ ಕೃಷ್ಣಾವತಾರ ಮಾಡುವ ಕಾಲವು ಸಮೀಪಿಸುತ್ತ ಬಂದುದರಿಂದ ತನ್ನ ಶಕ್ತಿಯಾದ ಮಾಯೆಯನ್ನು ಕರೆದು ನೀನು ಇಲ್ಲಿಂದ ನಂದಗೋಕುಲಕ್ಕೆ ಹೋಗಿ ವಸು ದೇವನ ಹೆಂಡತಿಯಾದ ದೇವಕಿಯ ಗರ್ಭದಲ್ಲಿ ಶೇಷಾಂಶದಿಂದ ಅವತರಿಸಿರುವ ಶಿಶುವನ್ನು ವಸುದೇವನ ಹೆಂಡತಿಯಾದ ರೋಹಿಣಿಯ ಗರ್ಭದಲ್ಲಿರಿಸಿ ನೀನು ನಂದಗೋಪನ ಹೆಂಡತಿಯಾದ ಯಶೋದೆಯ ಗರ್ಭದಲ್ಲಿ ಹುಟ್ಟು ಎಂದು ಆಜ್ಞೆಮಾಡಿ ಕಳುಹಿಸಲು ಮಾಯೆಯು ಅದರಂತೆ ನಡೆಸುವುದಕ್ಕಾಗಿ ಪ್ರಯತ್ನಪಡಲು ದೇವಕಿದೇವಿಗೆ ಗರ್ಭಸ್ರಾವವಾಯಿತು. ಅವಳ ನೆಂಟ ರೆಲ್ಲರೂ ದುಃಖಪಟ್ಟರು ರೋಹಿಣಿದೇವಿಯು ಗರ್ಭವತಿಯಾಗಿ ನಂದಗೋಕುಲವೆಂಬ ಹಳ್ಳಿಗೆ ಯಜಮಾನನಾಗಿದ್ದ ನಂದಗೋಪನ ಮನೆಯಲ್ಲಿ ಗಂಡುಮಗುವನ್ನು ಹಳೆದಳು ಆ ಮಗನೆ ಬಲ ರಾಮನಾದನು. ಆ ಬಳಿಕ ನಂದಗೋಪನ ಹೆಂಡತಿಯಾದ ಯಶೋದೆಯೂ ಸಹ ಗರ್ಭವನ್ನು

ಧರಿಸಿ ಕೆಲವುಕಾಲದಮೇಲೆ ಒಂದು ಹೆಣ್ಣು ಮಗುವನ್ನು ಹೆತ್ತಳು. ಹೀಗಾದಮೇಲೆ ಶ್ರೀಮನ್ನಾರಾಯಣನು ತನ್ನ ಸಂಪೂರ್ಣಾಂಶದಿಂದ ದೇವಕಿದೇವಿಯ ಎಂಟನೆಯಗರ್ಭವನ್ನು ಪ್ರವೇಶಿಸಿ ದಿವ್ಯ ತೇಜೋಮಯನಾಗಿ ಪ್ರಕಾಶಿಸುತ್ತಿದ್ದನು ಇದನ್ನು ಕಂಡು ಸಂತೋಷಭರಿತನಾಗಿ ದೇವತೆಗಳೂ ಋಷಿಗಳೂ ಆನಂದದಿಂದ ಭಗವಂತನನ್ನು ಸ್ತುತಿಸುತ್ತಿದ್ದರು. ಬಳಿಕ ದ್ವಾಪರಯುಗದ ಅಂತ್ಯಭಾಗದಲ್ಲಿ ಸುಮಾರು ನೂರತೊಂಭತ್ತಾರುಕೋಟಿ ವರ್ಷಗಳು ಕಳೆದಮೇಲೆ ಶುದ್ಧ ಚೈತನ್ಯಪ್ರದವಾದ ವಿಜಯಸಂವತ್ಸರದ ಶ್ರಾವಣ ಬಹುಳ ಅಷ್ಟಮಿ ಮಂಗಳವಾರ ರೋಹಿಣೀ ನಕ್ಷತ್ರದಿಂದ ಕೂಡಿದ ಸಮರಾತ್ರಿಯಲ್ಲಿ ವೃಷಭಲಗ್ನದಲ್ಲಿ ದಿವ್ಯತೇಜಃಪುಂಜನಾದ ಶ್ರೀಮನ್ನಾ







ರಾಯಣನು ಸೆರೆಮನೆಯಲ್ಲಿ ದೇವಕಿ ಗರ್ಭದಿಂದ ಅವತರಿಸಿದನು. ತತ್ಕಾಲ ಲಗ್ನವನ್ನು ನೋಡುವಲ್ಲಿ ವೃಷಭದಲ್ಲಿ ಚಂದ್ರನೂ, ಮಿಥುನದಲ್ಲಿ ರಾಹುವೂ, ಕಟಕದಲ್ಲಿ ಕುಜಬುಧರೂ, ಸಿಂಹದಲ್ಲಿ ರವಿಶನಿಗಳೂ, ಕನ್ಯೆಯಲ್ಲಿ ಶುಕ್ರನೂ, ಧನುಸ್ಸಿನಲ್ಲಿ ಕೇತುವೂ, ಮೇಷದಲ್ಲಿ ಗುರುವೂ ಇರುವುದರಿಂದ ಜಾತಕನು ಶತ್ರುಗಳನ್ನು ಗೆದ್ದು ಲೋಕವನ್ನು ರಕ್ಷಿಸಿ ಮಾತಾಪಿತೃಗಳಿಗೆ ಹಿತಕರನಾಗಿ ಬಾಂಧವರಲ್ಲಿ ಕಿರೀಟಸ್ವಾಮ್ಯನಾಗುವನೆಂದು ಜೋಯಿಸರು ಹೇಳಿದರು. ಆಗ ಶಂಖ ಚಕ್ರ ಗದಾ ಪದ್ಮಹಸ್ತನಾಗಿ ಚತುರ್ಭುಜಗಳಿಂದೊಪ್ಪಿ ಕೌಸ್ತುಭ ಪೀತಾಂಬರಧಾರಿಯಾಗಿ ಶ್ರೀಹರಿಯು ವಸುದೇವ ದೇವಕಿಯರನ್ನು ಸಂತೈಸಿ ಅಭಯಪ್ರಧಾನಮಾಡಿ ಈಗಲೆ ನನ್ನನ್ನು ಎತ್ತಿಕೊಂಡು ಹೋಗಿ ನಂದಗೋಕುಲದಲ್ಲಿ ನಂದಗೋಪನ ಹೆಂಡತಿಯಾದ ಯಶೋದೆಯ ಬಳಿಯಲ್ಲಿ ಇಟ್ಟು ಅಲ್ಲಿ ಹುಟ್ಟಿರುವ ಹೆಣ್ಣುಶಿಶುವನ್ನು ತಂದು ಇಲ್ಲಿ ಇಟ್ಟುಕೊಳ್ಳಿ ಇದರಿಂದ ನಿಮಗೆ ದೈವಸಹಾಯ ಉಂಟಾಗುವುದು ಎಂದು ಹೇಳಿ ಅದೃಶ್ಯನಾದನು. ಎಂದಿನಂತೆ ಹುಟ್ಟಿದ ಮಗುವು ಶಿಶುರೂಪದಿಂದ ಶೋಭಿಸುತ್ತಿತ್ತು ಆ ಶಿಶುವಿನ ದೇಹಕಾಂತಿಯಿಂದ ದಿವ್ಯವಾದ ತೇಜೋರಾಶಿಯಿಂದಲೂ ಕೂಡಿ ದೀಪರಹಿತವಾಗಿ ಕತ್ತಲೆಯಾಗಿದ್ದ ಸೆರೆಮನೆಯು ಇಂದ್ರನೀಲ ಮಂದಿರದಂತೆ ಪ್ರಕಾಶಮಾನವಾಯಿತು. ವಸುದೇವನ ಕಾಲಿಗೆ ಹಾಕಿದ್ದ ಸಂಕೋಲೆಯು ತನ್ನಷ್ಟಕ್ಕೆ ತಾನೆ ಕಳಚಿಕೊಂಡು ಕೆಳಗೆಬಿದ್ದಿತು. ಬೀಗ ಮುದ್ರೆಯಿಂದ ಭದ್ರವಾಗಿದ್ದ ಬಾಗಿಲುಗಳು ತೆರೆಯಲ್ಪಟ್ಟು ಎಚ್ಚರವಾಗಿ ಕಾಯುತ್ತಿದ್ದ ಕಾವಲುಗಾರರಿಗೆ ಗಾಢನಿದ್ರೆಯು ಆವರಿಸಿಕೊಂಡಿತು.

## ನಂದಗೋಕುಲ ಪ್ರವೇಶ ಆದಿಶಕ್ತಿಯು ಆಕರ್ಷಣೆ.

ಈ ಶುಭಸೂಚನೆಗಳನ್ನು ಕಂಡು ಹರ್ಷಿತನಾಗಿ ವಸುದೇವನು ದೇವವಾಕ್ಯವನ್ನು ಮಿೀರ ಬಾರದೆಂದು ಆ ಮಗುವನ್ನು ಎತ್ತಿಕೊಂಡು ಸೆರೆಮನೆಯಿಂದ ತೆರಳಿ ನಂದಗೋಕುಲಕ್ಕೆ ಹೊರಟನು. ಬೆಳದಿಂಗಳು ಬರುವ ಹೊತ್ತಾದರೂ ಮೋಡ ಮುಚ್ಚಿಕೊಂಡು ಮಳೆ ಸುರಿಯು ತ್ತಿದ್ದಕಾರಣ ಆದಿಶೇಷನು ತನ್ನ ಸಹಸ್ರ ಹೆಡೆಗಳನ್ನು ನಾರಾಯಣಾಂಶ ಸಂಭೂತನಾದ ಬಾಲ ಶಿಶು ಕೃಷ್ಣಮೂರ್ತಿಗೆ ಕೊಡೆಯಾಗಿ ಹಿಡಿದುಕೊಂಡು ಸಂಗಡಲೆ ಬರುತ್ತಿದ್ದನು. ಅವನ ಫಣಾಮಣಿಗಳ ಕಾಂತಿಯು ವಸುದೇವನಿಗೆ ಪ್ರಕಾಶವನ್ನು ಕೊಟ್ಟು ನಿರಾಯಾಸವಾಗಿ ಪ್ರಯಾ ಣಮಾಡಲು ಅನುಕೂಲವಾಗಿತ್ತು ಹೀಗೆ ನಡೆದುಬರುತ್ತ ಭಗವಂತನನ್ನು ಮನಸ್ಸಿನಲ್ಲಿ ಧ್ಯಾನಿಸಿ ಪುತ್ರೋತ್ಸವವಾದ ಸಂತೋಷದಿಂದ ಮಾಡಬೇಕಾದ ಧಾನಧರ್ಮಗಳನ್ನು ಮಾನಸಿಕವಾಗಿಮಾಡಿ ಸಂತೋಷದಿಂದ ಯಮುನಾತೀರಕ್ಕೆ ಬರುವಷ್ಟರಲ್ಲಿ ಮೊದಲು ರಾಮಾವತಾರದಲ್ಲಿ ಶ್ರೀ ರಾಮನಿಗೆ ದಾರಿಯನ್ನು ಕೊಟ್ಟು ಉಪಚರಿಸಿದಂತೆ ಯಮುನೆಯು ಎರಡು ಭಾಗವಾಗಿ ನಿಂತು ಮಧ್ಯದಲ್ಲಿ ವಸುದೇವನು ಮಗುವನ್ನು ಎತ್ತಿಕೊಂಡು ಹೋಗುವುದಕ್ಕೆ ಮಾರ್ಗಮಾಡಿಕೊಟ್ಟಳು. ಬಳಿಕ ವಸುದೇವನು ಸಂತೋಷದಿಂದ ಹೊರಟು ಊರಬಾಗಿಲಿಗೆ ಬರುವ ಹೊತ್ತಿಗೆ ನಂದ ಗೋಕುಲದ ಬಾಗಲು ತನ್ನಷ್ಟಕ್ಕೆತಾನೆ ಮಾರ್ಗಮಾಡಿಕೊಟ್ಟಿತು ಜನಗಳು ಎಚ್ಚರವಿಲ್ಲದೆ ಗಾಢ ನಿದ್ರೆಯಲ್ಲಿ ಮಗ್ನರಾಗಿದ್ದರು. ಆಗ ನಂದಗೋಪನಮನೆಗೆ ಹೋಗಿ ಯಶೋಧಾದೇವಿಯ ಮಗ್ಗುಲಲ್ಲಿ ಕೃಷ್ಣಮೂರುತಿಯನ್ನು ಇರಿಸಿ ಅವಳು ಹೆತ್ತಿದ್ದ ಹೆಣ್ಣು ಮಗುವನ್ನು ಎತ್ತಿಕೊಂಡು ಎಲ್ಲಿ ಬೆಳಗಾಗುವುದೊ ಯಾರು ಕಾಣುವರೊ ಎಂಬ ಭಯದಿಂದ ವಸುದೇವನು ಬೇಗಬೇಗನೆ ನಡೆದು ಬಂದು ಮಧುರಾಪುರಿಯ ಸೆರೆಮನೆಯನ್ನು ಸೇರಿ ದೇವಕಿಯ ಮಗ್ಗುಲಲ್ಲಿ ಆ ಹೆಣ್ಣು ಮಗುವನ್ನು ಮಲಗಿಸಿ ತಾನು ತನ್ನ ಸ್ಥಳವನ್ನು ಸೇರಿದನು ಅಷ್ಟುಹೊತ್ತಿಗೆ ಒಂದು ಮುಹೂರ್ತ ಕಾಲವಾಯಿತು ಕೂಡಲೆ ಸೆರೆಯಮನೆಯ ಬಾಗಿಲುಗಳು ಭದ್ರವಾದುವು ವಸುದೇವನ ಕಾಲಿನ ಸಂಕೋಲೆಯು ತಾನಾಗಿ ಬಂದು ತಗುಲಿಕೊಂಡಿತು. ಈ ಭಗವನ್ಮಾಯಾ ಪ್ರಭಾವವು ಪಟ್ಟಣ ದಲ್ಲಿ ಯಾರಿಗೂ ತಿಳಿಯದಿದ್ದರೂ ದೇವತೆಗಳೂ ಋಷಿಗಳೂ ಇದೆಲ್ಲವನ್ನು ತಿಳಿದು ಶುಭಮಸ್ತು, ಶತ್ರುಸಂಹಾರಮಸ್ತು, ದೇವದ್ವಿಜಾನಾಂ ಸರ್ವಸನ್ಮಂಗಳಾನಿಭವಂತು ಎಂದು ಹೇಳುತ್ತ ಪುಷ್ಪ ವೃಷ್ಟಿಯನ್ನು ಕರೆದು ಜಯಜಯವೆಂದು ಕೂಗಿ ದೇವದುಂದುಭಿಯನ್ನು ಬಾರಿಸಿದರು.

## ದುರ್ಗಾದೇವಿಯು ಕಂಸನಿಗೆ ಶಾಪವನ್ನು ಕೊಟ್ಟದು.



ಬಳಿಕ ದೇವದುಂದುಭಿ ಧ್ವನಿವು ಕೇಳಿಬ ರುತ್ತಲೆ ಮಾಯಾರೂಪಿಣಿಯಾಗಿ ಹುಟ್ಟಿದ ದುರ್ಗಾದೇವಿಯು ಅಳತೊಡಗಿದಳು ಆ ಧ್ವನಿಯನ್ನು ಕೇಳಿ ಕಾವಲುಗಾರರು ಎಚ್ಚತ್ತು ಕಂಸನ ಬಳಿಗೆ ಹೋಗಿ ದೇವಕಿ ಹೆಣ್ಣು ಮಗುವನ್ನು ಹಡೆದಳು ಎಂದು ಹೇಳಿದರು. ಅದನ್ನು ಕೇಳಿದ ಕೂಡಲೆ ಕಂಸನು ಥಟ್ಟನೆದ್ದುಬಂದು ಆ ಮಗುವನ್ನೆ ತ್ತಿಕೊಂಡು ಗರಗರನೆ ತಿರುಗಿಸಿ ಆಕಾಶ ಕ್ಕೆತ್ತಿ ಬಂಡೆಯಮೇಲೆ ಬಡಿಯಬೇಕೆಂದು ಪ್ರಯತ್ನಮಾಡುವಲ್ಲಿ ದುರ್ಗಾಂಶದಲ್ಲಿ ದುರ್ಗಮವಾದ

ಸಂಕಟಗಳನ್ನು ಪರಿಹರಿಸಿ ಇಷ್ಟಾರ್ಥ ಪ್ರಾಪ್ತಿಯನ್ನುಂಟುಮಾಡುವ ಶಕ್ತಿಯುಳ್ಳ ವಿಷ್ಣುಮಾಯಾ ಸ್ವರೂಪಿಣಿಯಾದ ಆ ಮಗುವು ಕಂಸನಕೈಯಿಂದ ನುಣಿಚಿಕೊಂಡು ಆಕಾಶಕ್ಕೆ ಹಾರಿ ತನ್ನ ನಿಜಾಕಾರದಿಂದ ನಿಂತು ಎಲೈ ಲೋಕಕಂಟಕನಾದ ಕಂಸನೇ ನಿರಪರಾಧಿಯಾದ ನನ್ನನ್ನು ನೀನು ನಿಷ್ಕಾರಣವಾಗಿ ಕೊಲ್ಲುವುದಕ್ಕೆ ಬಂದೆ ನಾನು ನಿನಗೆ ದಕ್ಕುವಳಲ್ಲ ನಿನ್ನನ್ನು ಕೊಲ್ಲುವ ಧೀರನಾದ ಕುಮಾರನು ಈ ಭೂಮಂಡಲದಲ್ಲಿ ಆಗಲೆ ಹುಟ್ಟಿ ಬೆಳೆಯುತ್ತಿರುವನು ಅವನಿಂದ



ನಿನಗೆ ಮರಣವಾಗುವುದು ಆನಂತರ ಲೋಕಕ್ಕೆ ಸುಖವಾಗುವುದು, ಎಂದು ಹೇಳಿ ಸ್ವರ್ಗಲೋಕವನ್ನು ಸೇರಿದಳು. ಇಂಥ ವಿಷ್ಣುಮಾಯಾರೂಪಿಣಿಯಾದ ದುರ್ಗಾದೇವಿಯು ಭಕ್ತರಕ್ಷಕಳಾಗಿ ಇಷ್ಟಾರ್ಥಗಳನ್ನು ಕೊಡುವ ಮಹಾದೇವಿಯಾದಕಾರಣ ಲೋಕದಲ್ಲಿ ಇವಳನ್ನು ಸರ್ವರೂ ಪೂಜಿಸುತ್ತಿರುವರೆಂದು ದೇವತೆಗಳು ಆನಂದಭರಿತರಾಗಿ ಅವಳನ್ನು ಹೊಗಳಿ ಆದರಿಸಿದರು.

## ಕಂಸನು ಮಕ್ಕಳನ್ನೆಲ್ಲ ಕೊಲ್ಲುವಂತೆ ಏರ್ಪಡಿಸಿದುದು.

ಆ ಬಳಿಕ ಕಂಸನು ದುರ್ಗಾದೇವಿಯು ತನ್ನ ಕೈಗೆ ಸಿಕ್ಕದೆ ಮಾಯವಾದುದಕ್ಕೂ ತನ್ನನ್ನು ಕೊಲ್ಲುವ ಹಗೆಯು ಅನ್ಯತ್ರ ಹುಟ್ಟಿ ಬೆಳೆಯುತ್ತಿರುವನೆಂಬ ವಾರ್ತೆಗೂ ಬಹಳವಾಗಿ ಹೆದರಿ ಹಮ್ಮೈಸುತ್ತ ಖಿನ್ನನಾಗಿ ದೈವಶಕ್ತಿಯಿಂದ ತನ್ನನ್ನು ಅತಿಕ್ರಮಿಸಿ ಹೋಗಿರುವ ದುರ್ಗಿಯ ವಾಕ್ಯವು ಎಂದಿಗೂ ಸುಳ್ಳಾಗದು ಈಗ ನಾನೇನುಮಾಡಲಿ ! ನನ್ನ ಹಗೆ ಎಲ್ಲಿರುವನೋ ತಿಳಿಯದು ಅವನನ್ನು ಹುಡುಕುವ ಉಪಾಯವೂ ತೋರುವುದಿಲ್ಲ ಆದಕಾರಣ ಈಗ ಹುಟ್ಟಿಬೆಳೆಯುತ್ತಿರುವ ಮಕ್ಕಳನ್ನೆಲ್ಲ ಒಟ್ಟಿಗೆ ಕೊಲ್ಲಿಸಿಬಿಟ್ಟರೆ ಅದರಲ್ಲಿ ನನ್ನ ಶತ್ರುವೂ ನಾಶವಾಗುವನು ತನಗೆ ಸುಖವೂ ಆಗುವುದೆಂದು ಯೋಚಿಸಿ ತನಗೆ ಆಪ್ತರಾಗಿ ಮಹಾಕ್ರೂರರೂ ನಿಷ್ಕರುಣಿಗಳೂ ಆಗಿರುವ ತೃಣಾವರ್ತ, ಪೂತನಿ, ಶಕಟ, ಧೇನುಕ, ಬಕ, ಕೇಸರಿ ಮೊದಲಾದ ರಾಕ್ಷಸರನ್ನು ಕರೆಸಿ ಅವರೊಡನೆ ತನ್ನ ಅಭಿಪ್ರಾಯವನ್ನು ಹೇಳಿ ನೀವು ಎಷ್ಟುಕಷ್ಟವಾದರೂ ಬಿಡದೆ ನನ್ನ ಹಗೆಯನ್ನು ಕೊಂದು ನನ್ನನ್ನು ಉದ್ಧರಿಸಬೇಕೆಂದು ಹೇಳಿ ಅವರನ್ನು ಹೊಗಳಿ ಪ್ರೇರೇಪಣೆಮಾಡಿ ಕಳುಹಿಸಿಕೊಟ್ಟನು.

## ನಂದಗೋಪನು ಶ್ರೀಕೃಷ್ಣನಿಗೆ ಜಾತಕರ್ಮವನ್ನು ಮಾಡಿದುದು.

ಬೆಳಗಾಗುತ್ತಲೆ ನಂದಗೋಕುಲದಲ್ಲಿ ಯಶೋದೆಯು ದಿವ್ಯಸುಂದರವಾದ ಗಂಡುಮಗುವನ್ನು ಹೆತ್ತಳೆಂಬ ಸುದ್ಧಿಯು ಎಲ್ಲೆಲ್ಲಿಯೂ ಹರಡಿಕೊಂಡಿತು ಜನಗಳೆಲ್ಲ ಪಟ್ಟಣವನ್ನು ಸುಂದರವಾಗಿ ಅಲಂಕರಿಸಿ ಸಂತೋಷದಿಂದ ಉತ್ಸವಗಳನ್ನು ಮಾಡತೊಡಗಿದರು. ನಂದಗೋಪನು ಬಂದು ಮಗುವಿನ ಮುಖವನ್ನು ನೋಡಿ ಆನಂದಭರಿತನಾಗಿ ಇಂಥ ತೇಜೋಮಯವಾದ ಪುತ್ರನು ಸುಂದರಾಕಾರದಿಂದ ತನ್ನ ಮನೆಯಲ್ಲಿ ಹುಟ್ಟಿದುದರಿಂದ ತನ್ನ ಕುಲವೆ ಪವಿತ್ರವಾಯಿತೆಂದು ತಾನು ಶಾಸ್ತ್ರೋಕ್ತವಾಗಿ ಆ ಮಗುವಿಗೆ ಮಾಡಬೇಕಾದ ಜಾತಕರ್ಮಗಳನ್ನು ಮಾಡಿ ಬಗೆಬಗೆಯಾದ ದಾನಧರ್ಮಗಳಿಂದ ಬಡಬಗ್ಗರನ್ನೂ ದೇವಬ್ರಾಹ್ಮಣರನ್ನು ತೃಪ್ತಿಗೊಳಿಸಿ ನಿರ್ವಿಘ್ನತೆಯಿಂದ ಸುಖಸಂತೋಷಭರಿತನಾಗಿ ನಾಮಕರಣವನ್ನು ಮಾಡಿ ಆನಂದಭರಿತನಾಗಿ ಕಾಲವನ್ನು ಕಳೆಯುತ್ತಾ ಸಾಧು ಸತ್ಪುರುಷರನ್ನು ಸೇವಿಸುತ್ತ ತನ್ನ ಮಗನಿಗೆ ಸಕಲ ಶ್ರೇಯಸ್ಸೂ ಉಂಟಾಗಲಿ ಎಂದು ದೇವರನ್ನು ಪ್ರಾರ್ಥಿಸುತ್ತಿದ್ದನು.

## ಕೃಷ್ಣನು ಪೂತನಿಯನ್ನು ಸಂಹರಿಸಿದುದು.

ಹೀಗಿರುವಲ್ಲಿ ಕಂಸಾಸುರನಿಂದ ಪ್ರೇರಿತಳಾದ ಪೂತನಿಯೆಂಬ ಕರಾಳರಾಕ್ಷಸಿಯು ನಂದಗೋಪನಿಗೆ ಪುತ್ರೋತ್ಸವವಾಗಿ ನಾಮಕರಣಾದಿಗಳು ನಡೆದ ಸಂಗತಿಯನ್ನು ಕೇಳಿ ತನ್ನ ವೇಷ





ವನ್ನು ಮರೆಸಿಕೊಂಡು ದಿವ್ಯಸುಂದರಿಯಾದ ಹೆಂಗಸಿನಂತೆ ವೇಷಹಾಕಿಕೊಂಡು ದಾದಿಯಂತೆ ಕೆಲಸ ಮಾಡುವ ನೆವದಿಂದ ನಂದಗೋಕುಲವನ್ನು ಹೊಕ್ಕು ಯಶೋದೆಯ ಮನೆಯಲ್ಲಿರುತ್ತೆ



ತೊಟ್ಟಲಲ್ಲಿಮಲಗಿ ತನ್ನ ಬಾಲಲೀಲೆಯನ್ನು ತೋರಿಸುತ್ತಿರುವ ಶ್ರೀಕೃಷ್ಣಮೂರ್ತಿಗೆ ವಿಷಭರಿತವಾದ ತನ್ನ ಮೊಲೆಯನ್ನೂಡಿ ಕೊಲ್ಲಬೇಕೆಂದು ಯೋಚಿಸಿ ಆ ಮಗುವನ್ನೆತ್ತಿ ತೊಡೆಯಮೇಲೆ ಮಲಗಿಸಿಕೊಂಡು ಚೆನ್ನಾಗಿ ದೃಷ್ಟಿಸಿನೋಡಿ ಭಯಪಟ್ಟು ಹೆದರಿದರೂ ಹಿಂಜರಿಯದೆ ಮೊಲೆಯನ್ನು ಕೊಟ್ಟು ಹಾಲುಕುಡಿಸುತ್ತಿದ್ದಳು. ಆಗ ಸರ್ವ ಚೈತನ್ಯಸ್ವರೂಪನೂ ಸರ್ವಾಂತರ್ಯಾ

ಮಿಯೂ ಆದ ಭಗವಂತನು ಈ ಪೂತನಿಯ ಚರ್ಯೆಯನ್ನು ತಿಳಿದವನಾಗಿ ಇವಳಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ಯೋಚಿಸಿ ಹಾಲನ್ನು ಕುಡಿಯುವುದಕ್ಕೆ ಬದಲಾಗಿ ಅವಳ ಪ್ರಾಣವನ್ನೇ ಹೀರಿಬಿಟ್ಟನು. ಆಗ ಭುವನ ಬ್ರಹ್ಮಾಂಡಗಳನ್ನೆ ತನ್ನುದರದಲ್ಲಿಟ್ಟುಕೊಂಡಿರುವ ಆ ಬಾಲಕೃಷ್ಣ ಮೂರ್ತಿಯ ಪ್ರಭಾವದಿಂದ ಅವಳಿಗೆ ತ್ರಾಣಕುಗ್ಗಿ ಪ್ರಾಣಾಂತ್ಯವುಂಟಾಗಿ ಸಿಡಿಲು ಬಡಿದವಳಂತೆ ಹಾ! ಎಂದು ಕೂಗುತ್ತ ನೆಲಕ್ಕುರುಳಿ ಪ್ರಾಣವನ್ನು ಬಿಟ್ಟಳು. ಆ ಪೂತನಿಯ ಎದೆಯ ಮೇಲೆ ಶ್ರೀಕೃಷ್ಣನು ಆಟವಾಡುತ್ತಿರಲು ನಂದಗೋಪಾದಿಗಳು ಭಯಪಟ್ಟು ಮಗುವನ್ನೆತ್ತಿಕೊಂಡು ರಕ್ಷೆ, ಯಂತ್ರ ಮೊದಲಾದುವನ್ನು ಮಾಡಿಸಿ ಎಚ್ಚರಿಕೆಯಿಂದ ಸಾಕುತ್ತಿದ್ದರು. ಬಳಿಕ ಪೂತನಿಯ ಶವವನ್ನು ಸುಟ್ಟು ಬೂದಿಮಾಡಲು ಆಗ ಹೊರಟ ಹೊಗೆಯ ಮೂಲಕ ಅವಳ ದೇಹದಿಂದ ಸುಗಂಧ ಸೌರಭ್ಯಗಳು ಹೊರಹೊರಟವು. ದ್ವೇಷದಿಂದ ಭಗವಂತನನ್ನು ಎತ್ತಿಕೊಂಡು ಹಾಲುಕೊಟ್ಟರೂ ಅವಳಿಗೆ ಯಶೋದೆಯಂತೆ ಶುಭಸದ್ಗತಿಗಳಾದವು ಎಂಬಲ್ಲಿ ಭಕ್ತಿಯಿಂದ ಶ್ರೀಕೃಷ್ಣನನ್ನು ಸೇವಿಸಿ ಕ್ಷೀರಾರ್ಪಣೆ ಮಾಡತಕ್ಕವರಿಗೆ ಯಾವ ಫಲವುಂಟಾಗುವುದೋ ಕಾಣೆ ಎಂದು ಜನರು ಆಡಿಕೊಳ್ಳುತ್ತಿದ್ದರು. ಈ ರೀತಿಯಲ್ಲಿ ಕಂಸನಿಂದ ಉಂಟಾದ ಪ್ರಥಮ ಕಂಟಕವು ಕಳೆದು ಶ್ರೀಕೃಷ್ಣನು ದಿವ್ಯಲೀಲೆಯಿಂದ ನಂದಗೋಕುಲದಲ್ಲಿ ಬೆಳೆಯುತ್ತಿದ್ದನು. ನಂದಗೋಪ ಯಶೋದೆಯರಿಬ್ಬರೂ ಶ್ರೀಮನ್ನಾರಾಯಣನ ಅನುಗ್ರಹದಿಂದ ನಮ್ಮ ಕೃಷ್ಣನು ನಿಷ್ಕಂಟಕನಾಗಿ ಬಾಳಲಿ! ಎಂದು ಹರಸುತ್ತಿದ್ದರು.

## ಶ್ರೀಕೃಷ್ಣನು ಶಕಟಾಸುರನನ್ನು ಕೊಂದುದು.

ಒಂದು ದಿನ ಯಶೋದೆಯು ಮಗುವಿನ ಜನ್ಮನಕ್ಷತ್ರವಾದ ರೋಹಿಣಿ ನಕ್ಷತ್ರದ ದಿನದಲ್ಲಿ ಕೃಷ್ಣನಿಗೆ ನೀರೆರೆದು ನೆಲದಮೇಲೆ ಮಲಗಿಸದೆ ತೊಟ್ಟಿಲಲ್ಲಿಟ್ಟು ತೂಗಿ ಮಗುವು ಕಣ್ಣುಮುಚ್ಚಿಕೊಂಡು ಆಡುತ್ತಿದ್ದಾಗ ತಾನು ಮನೆಗೆಲಸವನ್ನು ಮಾಡುವುದಕ್ಕೆ ಹೊರಟುಹೋದಳು. ಮಗುವು ತೊಟ್ಟಿಲಲ್ಲಿ ಸುಖವಾಗಿ ಆಡುತ್ತ ಮಲಗಿದ್ದಿತು. ಈ ಸಮಯವನ್ನು ಕಾದುಕೊಂಡಿದ್ದ



ಕಂಸನಿಂದ ಪ್ರೇರಿತನಾಗಿ ಅನೇಕ ಶಿಶುಗಳನ್ನು ಕೊಂದು ನಂದ[illegible]
ಸಂಹರಿಸುವುದಕ್ಕಾಗಿ ಮೊದಲು ನಂದಗೋಪನ ಮನೆಗೆ ಬಂದು ಯಾರ[illegible]
ಮಗುವು ಒಂದೇ ಇರುವುದನ್ನು ತಿಳಿದು ಶಕಟ ರೂಪನಾದ್ದ ರಾಕ್ಷಸನು ಬಂದಿಳ್ದು

ಹಾಗೆ ಉರುಳುತ್ತ ಬಂದು ತೊಟ್ಟಿಲಮೇಲೆ ಹೊರಳಿದನು. ಆಗ ಶ್ರೀಕೃಷ್ಣನು ತನ್ನ ಲೀಲಾ ಮಾಯೆಯಿಂದ ಇದೆಲ್ಲವನ್ನು ತಿಳಿದವನಾಗಿ ಎಡಗಾಲಿನಿಂದೊದೆದು ಆ ಶಕಟಾಸುರನನ್ನು ನೂಕಿದನು. ಕೂಡಲೆ ಶಕಟನು ಬಂಡಿಯ ಆಕಾರವನ್ನು ತೊರೆದು ನಿಜರೂಪದಿಂದ ರಕ್ತವನ್ನು ಕಾರುತ್ತ ನೆಲಕ್ಕೆ ಬಿದ್ದು ಸತ್ತುಹೋದನು. ಅವನು ಸಾಯುವಾಗ ಕೂಗಿಕೊಂಡ ಶಬ್ದವನ್ನು ಕೇಳಿ ಮನೆಯವರೂ ನೆರೆಹೊರೆಯವರೂ ಹೆದರಿ ಓಡಿಬಂದು ಆಶ್ಚರ್ಯವನ್ನು ಕಂಡು ಮಗುವಿಗೆ ರಕ್ಷೆಯನ್ನಿಟ್ಟು ಬೇರೆಕಡೆ ಮಲಗಿಸಿ ಸತ್ತುಬಿದ್ದಿರುವ ರಾಕ್ಷಸನ ಹೆಣವನ್ನು ಊರಹೊರಕ್ಕೆ ಸರಗಿಸಿ ಅರಣ್ಯದಲ್ಲಿ ಸುಟ್ಟು ಬೂದಿಮಾಡಿದರು. ಹೀಗೆ ಶ್ರೀಕೃಷ್ಣನಿಗೆ ಕಂಸಾಸುರನಿಂದ ಒದಗಿದ ಎರಡನೆಯ ಕಂಟಕವು ಕಳೆಯಲು ದೇವತೆಗಳು ಆಶ್ಚರ್ಯಚಕಿತರಾಗಿ ಆನಂದಿಸುತ್ತ ಪುರುಷೋತ್ತಮನನ್ನು ಕೊಂಡಾಡಿ ಹೊಗಳುತ್ತಿದ್ದರು. ನಂದಗೋಪ ಯಶೋದೆಯರಿಬ್ಬರೂ ಮಗುವನ್ನು ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತ ಭಗವಂತನೆ ನೀನೇ ಈ ಮಗುವಿಗೆ ದಿಕ್ಕು ಎಂದು ಶ್ರೀಮನ್ನಾರಾಯಣನನ್ನು ಸದಾ ಸ್ಮರಿಸುತ್ತಿದ್ದರು.

## ತೃಣಾವರ್ತನು ಕೃಷ್ಣನನ್ನು ಹಾರಿಸಿಕೊಂಡು ಹೋದುದು.

ಬಳಿಕ ಮೂರನೆಯಸಾರಿ ತೃಣಾವರ್ತನೆಂಬ ಘೋರರಾಕ್ಷಸನು ಕಂಸನಿಂದ ಪ್ರೇರಿತನಾಗಿ ನಂದಗೋಕುಲಕ್ಕೆ ಬಂದು ಯಶೋದೆಯು ತೊಡೆಯಮೇಲೆ ಆಡುತ್ತಿರುವ ಮಗುವನ್ನು ನೋಡಿ ಅದರ ತೇಜಸ್ಸಿಗೂ ಕಾಂತಿಗೂ ಹೆದರಿ ಈ ಮಗುವನ್ನು ಕೈಯಲ್ಲಿ ಮುಟ್ಟುವುದಕ್ಕೆ ಸಾಧ್ಯವಿಲ್ಲ. ಸಮಯವನ್ನು ಕಾದುಕೊಂಡಿದ್ದು ಆಕಾಶಕ್ಕೆ ಹಾರಿಸಿ ಕೆಡವಿ ಕೊಲ್ಲಬೇಕೆಂದು ಯೋಚಿಸುತ್ತಿದ್ದನು. ಆಗ ಯಶೋದೆಯು ಮಗುವಿಗೆ ಹಾಲುಕೊಟ್ಟು ತೊಟ್ಟಿಲಲ್ಲಿ ಮಲಗಿಸಿ ಮನೆಗೆಲಸವನ್ನು ಮಾಡುವುದಕ್ಕಾಗಿ ಮರೆಯಾಗಿ ಹೋದಳು. ಇದೇ ತನಗೆ ತಕ್ಕಸಮಯವೆಂದು ತೃಣಾವರ್ತನು ಸುಳಿಗಾಳಿಯಾಗಿ ತಿರುಗುತ್ತ ಭೂಮಿಯಿಂದ ಆಕಾಶಕ್ಕೆ ಊರೆಕೊಟ್ಟು ದೊಡ್ಡ ಕಂಬದಹಾಗೆ ಸುತ್ತಿಸುತ್ತಿ ಸುಂಟರಗಾಳಿಯಾಗಿ ಆ ತೊಟ್ಟಿಲನ್ನೆ ಆಕಾಶಕ್ಕೆ ಹಾರಿಸಿಕೊಂಡುಹೋದನು.





ಇದೆಲ್ಲವನ್ನು ಅಂತರ್ಯಾಮಿಯಾಗಿ ದೃಷ್ಟಿಸಿ ನೋಡುತ್ತಿದ್ದ ಕೃಷ್ಣನು ಅಂತರಿಕ್ಷದಲ್ಲಿ ಆ ರಾಕ್ಷಸನನ್ನು ಆಕರ್ಷಿಸಿ ಅವನ ಕುತ್ತಿಗೆಯನ್ನು ಮುರಿದು ಪ್ರಾಣವನ್ನು ಹಿಂಡಿ ತಾನು ತನ್ನ ತೊಟ್ಟಲು ಸಹಿತವಾಗಿ ಮೊದಲಿದ್ದ ಸ್ಥಳಕ್ಕೆ ಬಂದು ಸೇರಿದನು. ಹೀಗೆ ಕೃಷ್ಣನ ಮುಷ್ಟಿ ಘಾತದಿಂದ ರಾಕ್ಷಸನು ಸಾಯುವಾಗ ಹೋ! ಅಯ್ಯೋ! ಎಂದು ಅರಚುತ್ತ ದೊಪ್ಪನೆ ನೆಲಕ್ಕೆ ಬಿದ್ದನು. ಆ ಶಬ್ದವನ್ನು ಕೇಳಿ ಸುತ್ತುಮುತ್ತಲಿನ ಜನಗಳು ಓಡಿಬಂದು ಸತ್ತುಬಿದ್ದಿದ್ದ ತೃಣಾವರ್ತನ ಹೆಣವನ್ನು ದಟ್ಟವಾದ ಕಾಡಿನಲ್ಲಿ ಹೂಳಿಸಿ ಆಶ್ಚರ್ಯಪಡುತ್ತ ನಂದಗೋಪನಿಗೆ ಮಗನು ಹುಟ್ಟಿದನೋ ಲೋಕದಲ್ಲಿ ಮಹದಾಶ್ಚರ್ಯಗಳು ನಡೆಯುವಂತಾಯಿತು ಎಂದು

ಆಡಿಕೊಳ್ಳುತ್ತಿದ್ದರು. ಈರೀತಿ ಶ್ರೀಕೃಷ್ಣನು ಬಾಲಲೀಲೆಯಿಂದ ತನ್ನ ಮೂರನೆಯ ಕಂಟಕವನ್ನು ನಿವಾರಿಸಿಕೊಂಡು ಹರ್ಷದಿಂದ ಬೆಳೆಯುತ್ತಿದ್ದನು.

## ಶ್ರೀಕೃಷ್ಣನು ಯಶೋದೆಗೆ ವಿಶ್ವರೂಪ ತೋರಿಸಿದುದು.

ಒಂದಾನೊಂದುದಿನ ಯಶೋದೆಯು ಶ್ರೀಕೃಷ್ಣನನ್ನು ತೊಡೆಯಮೇಲೆ ಮಲಗಿಸಿಕೊಂಡು ಮಗುವಿಗೆ ಹಾಲನ್ನುಕೊಟ್ಟು ಹೋಗೋಣ ಎಂಬ ನೆವದಿಂದ ಮೊಲೆಯನ್ನು ಕೊಟ್ಟಳು. ಮಗು ಮೊದಲು ಹೂವಿನಂತೆ ಹಗುರವಾಗಿದ್ದದ್ದು ಮೊಲೆಯುಣ್ಣುವಾಗ ತುಂಬ ಭಾರವಾಗಿ ತಡೆಯಲಾರದಷ್ಟು ತೂಕ ಹೆಚ್ಚಿತು. ಅನಂತರದಲ್ಲಿ ಹೀಗಾಗುವುದಕ್ಕೆ ಕಾರಣವೇನು ? ಎಂದು ಚಿಂತಿಸುತ್ತ ಯಶೋದಾದೇವಿಯು ಭಯಪಟ್ಟು ಮಗುವಿಗೆ ಹೊದ್ದಿಸಿದ್ದ ಸೆರಗನ್ನು ತೆಗೆದು ನೋಡುವಲ್ಲಿ ಕೃಷ್ಣನ ಬಾಯಿಯಲ್ಲಿ ಬ್ರಹ್ಮಾಂಡರೂಪವಾದ ಒಂದು ದೊಡ್ಡ ಅಂಡವು ಕಾಣಿಸಿತು. ಅದನ್ನು ಕಂಡು ಪ್ರಪಂಚದಲ್ಲಿ ಕಾಣಬರುವ ಸಮಸ್ತ ವಸ್ತುಗಳು ಅಲ್ಲಿ ನಿಬಿಡವಾಗಿರಲು ಯಶೋದೆಯು ಆಶ್ಚರ್ಯಪಟ್ಟು ಈ ಮಗುವಿನ ಹೊಟ್ಟೆಯಲ್ಲಿ ಭುವನ ಬ್ರಹ್ಮಾಂಡಗಳು ತುಂಬಿರುವ ಹಾಗೆ ಕಾಣುತ್ತಿದೆ ಇವನು ವಿಶ್ವಂಭರಮೂರ್ತಿಯಾದ ಶ್ರೀಮನ್ನಾರಾಯಣನೆ ಹೊರತು ಸಾಮಾನ್ಯ ಶಿಶುವಲ್ಲವೆಂದು ತಿಳಿದು ಅದನ್ನು ತನ್ನ ಗಂಡನಿಗೆ ಹೇಳಬೇಕೆಂದು ಯೋಚಿಸಿ ಮಾಯಾಮೋಹಿತಳಾಗಿ ಮರವೆಯಿಂದ ಸುಮ್ಮನಾದಳು. ಅಡಿಗಡಿಗೆ ಮಗು ಹೆದರಿಕೊಂಡಿತೆಂದು ರಕ್ಷೆಗಳನ್ನು ಇಟ್ಟು ಯಂತ್ರಗಳನ್ನು ಕಟ್ಟಿ ತನ್ನನ್ನು ಪೀಡಿಸುತ್ತಿದ್ದ ತಾಯಿಗೆ ತನ್ನ ನಿಜವಾದ ಸ್ವರೂಪವನ್ನು ತೋರಿಸಿ ಜ್ಞಾನೋದಯವನ್ನುಂಟುಮಾಡಬೇಕೆಂದು ಭಗವಂತನು ಹಾಲು ಕುಡಿಯುವ ಕಾಲದಲ್ಲಿ ಈರೀತಿ ಯಶೋದೆಗೆ ವಿಶ್ವರೂಪವನ್ನು ತೋರಿಸಿ ಅದು ಇತರರಿಗೆ ತಿಳಿಯದಂತೆ ಇರುವುದಕ್ಕಾಗಿ ಅವಳಿಗೆ ಮಾಯಾವರಣವುಂಟಾಗುವಂತೆ ಮಾಡಿ ಅದ್ಭುತವಾದ ಲೀಲೆಯಿಂದ ಹೊಳೆಯುತ್ತಿದ್ದನು.



## ಗರ್ಗಋಷಿಯು ರಾಮಕೃಷ್ಣರಿಗೆ ನಾಮಕರಣ ಮಾಡಿದುದು.

ಹೀಗಿರುವಲ್ಲಿ ವಸುದೇವನು ತನ್ನ ಹಿರಿಯಹೆಂಡತಿಯಾದ ರೋಹಿಣಿದೇವಿಯು ನಂದಗೋಪನ ಮನೆಯಲ್ಲಿ ಹಡೆದ ಸಂಕರ್ಷಣಂಗೆ ನಾಮಕರಣ ಮಾಡಿಸಬೇಕೆಂಬ ಆಸೆಯಿಂದ ತನ್ನ ಕುಲಪುರೋಹಿತನಾದ ಗರ್ಗಮಹರ್ಷಿಯನ್ನು ನಂದಗೋಕುಲಕ್ಕೆ ಕಳುಹಿಸಿದನು. ಆಗ ವಸುದೇವನ ಅಪ್ಪಣೆಯಂತೆ ಗರ್ಗನು ನಂದಗೋಕುಲಕ್ಕೆ ಬಂದು ರೋಹಿಣೀದೇವಿಯ ಉದರದಲ್ಲಿ ಹುಟ್ಟಿದ ಸಂಕರ್ಷಣಂಗೆ ನಾಮಕರಣ ಜಾತಕರ್ಮಾದಿಗಳನ್ನು ಮಾಡಿ ಬರುವಂತೆ ನನ್ನನ್ನು ವಸುದೇವನು ಇಲ್ಲಿಗೆ ಕಳುಹಿಸಿರುವನೆಂದು ಹೇಳಲು, ನಂದಗೋಪ ಯಶೋದೆಯರು ಸಂಭ್ರಮ ಸಂತೋಷಗಳಿಂದ ಕೂಡಿ ಆಗಬಹುದು. ಹಾಗೆಯೆ ನಮ್ಮ ಮಗುವಿಗೂ ಅದೇ ಲಗ್ನದಲ್ಲಿ ನಾಮಕರಣ ಮಾಡಿಸಬೇಕೆಂದು ಪ್ರಾರ್ಥಿಸಲಾಗಿ ಸರ್ವಜ್ಞನಾದ ಗರ್ಗಮಹರ್ಷಿಯು ಜ್ಯೋತಿಶ್ಶಾಸ್ತ್ರ ಸಮ್ಮತಿಯಂತೆ ತತ್ಕಾಲ ಗ್ರಹಸಂಪತ್ತಿಯಿಂದ ಆ ಇಬ್ಬರು ಮಕ್ಕಳ ಭವಿಷ್ಯವನು

ತಿಳಿದವನಾಗಿ ಸಂತೋಷಪಡುತ್ತ ಕ್ಷತ್ರಿಯ ಕುಲೋಚಿತವಾಗಿ ಮಾಡಿಸಬೇಕಾದ ಕರ್ಮಗಳನ್ನು ಮಾಡಿಸಿ ಅನಂತರದಲ್ಲಿ ಸ್ಮಾರ್ತ ಧರ್ಮವನ್ನನುಸರಿಸಿ, ರೋಹಿಣೀದೇವಿಯ ಹೊಟ್ಟೆಯಲ್ಲಿ ಹುಟ್ಟಿದ್ದ ಗಂಡುಮಗುವಿಗೆ ಸಂಕರ್ಷಣ, ಬಲ, ರಾಮ ಎಂಬ ಮೂರು ಹೆಸರುಗಳನ್ನು ಕೊಟ್ಟು ಎರಡನೆಯವನಾದ ಯಶೋದೆಯ ಮಗನು ಶ್ರೀ ನಾರಾಯಣಾಂಶ ಸಂಭೂತನಾಗಿ ಕೃಷ್ಣಪಕ್ಷದ ಅಷ್ಟಮಿಯ ದಿನ ರಾತ್ರಿ ಹುಟ್ಟಿದ ಕಾರಣ ಕೃಷ್ಣನೆಂದೂ, ಸರ್ವಭೂತಗಳಲ್ಲಿ ಅಂತರ್ಹಿತನಾಗಿ ವಾಸಿಸುತ್ತ ವಸುದೇವನಿಗೆ ಮಗನಾಗಿ ಹುಟ್ಟಿದುದರಿಂದ ವಾಸುದೇವನೆಂದೂ, ಭಕ್ತರ ಕಷ್ಟ ನಷ್ಟಗಳನ್ನು ಪರಿಹರಿಸಿ ಲೋಕಕಂಟಕಗಳನ್ನು ನಿವಾರಿಸುವ ಧೀರನಾದ ಕಾರಣ ಹರಿಯೆಂದೂ ಮೂರು ಹೆಸರುಗಳನ್ನು ಇಟ್ಟು ನಾಮಕರಣಮಾಡಿ, ಹಸ್ತ ರೇಖಾದಿಗಳನ್ನು ಪರೀಕ್ಷಿಸಿ ಶುಭ ಲಕ್ಷಣಗಳನ್ನು ಕಂಡು ಈ ಮಕ್ಕಳಿಬ್ಬರೂ ದೇವಾಂಶ ಸಂಭೂತರಾದ ಕಾರಣ ನಂದಗೋಕುಲ ವನ್ನು ಅಭಿವೃದ್ಧಿಗೆ ತಂದು ಶ್ರೇಯಸ್ಸಂತಾನ ಸಹಿತರಾಗಿ ಲೋಕೋತ್ತರವಾದ ಖ್ಯಾತಿಯನ್ನು ಪಡೆಯುವರು. ಇವರಿಂದ ಮಾತಾಪಿತೃಗಳಿಗೂ, ಭುವನ ಬ್ರಹ್ಮಾಂಡಗಳಿಗೂ ಬಹು ಪ್ರಯೋ ಜನ ಉಂಟಾಗುವ ಕಾರಣ ಈ ಮಕ್ಕಳನ್ನು ದೇವರಂತೆ ತಿಳಿದು ಸಲಹುತ್ತಿರಿ ಎಂದು ಹೇಳಿ ಹೊರಟುಹೋದನು.



ಇದಾದಮೇಲೆ ಒಂದು ದಿನ ಯಶೋದೆಯು ಮಕ್ಕಳನ್ನು ಆಡುವುದಕ್ಕೆ ಬಿಟ್ಟು ತಾನು ಮನೆಗೆಲಸವನ್ನು ಮಾಡುತ್ತಿದ್ದಳು. ಧೂಳಾಟದಲ್ಲಿ [illegible]ರಾಗಿ ಆಡುತ್ತಿದ್ದಾಗ ಶ್ರೀಕೃಷ್ಣನು ವ್ಯಾಜಾಂತರದಿಂದ ವಿನೋದಕ್ಕಾಗಿ ಕೈಸಗೆ ಸಿಕ್ಕಿದ ಒಂದು ಕೆಮ್ಮಣ್ಣು ಉಂಡೆಯನ್ನು ತೆಗೆದು ಬಾಯಿಗೆ ಹಾಕಿಕೊಂಡನು. ಅದನ್ನು ಕಂಡು ಬಲರಾಮನು ಯಶೋದೆಯ ಬಳಿಗೆ ಓಡಿ ಬಂದು ಇವ್ವಾ! ಕೃಷ್ಣನು ಮಣ್ಣು ತಿಂದನು. ಬೇಗ ಬಾ! ಎಂದು ಕೂಗಿಕೊಂಡನು. ಆ ಧ್ವನಿ ಯನ್ನು ಕೇಳಿ ಯಶೋದೆಯು ಓಡಿಬಂದು ಕೃಷ್ಣನನ್ನು ಹಿಡಿದುಕೊಂಡು ಅಯ್ಯೋ! ಮಗುವೆ! ನಿನ್ನ ತುಂಟತನವನ್ನು ಹೇಗೆ ಸಹಿಸಲಿ! ಮಣ್ಣನ್ನು ತಿಂದು ಹೊಟ್ಟೆ ಊದಿಕೊಂಡರೆ ನಾನೇನು ಮಾಡಲಿ! ಬೇಗ ಬಾಯಿ ಬಿಡು ಮಣ್ಣನ್ನು ತೆಗೆದುಹಾಕುತ್ತೇನೆ ಎಂದು ಗದರಿಸಲು ಕೃಷ್ಣನು ಭಯಪಟ್ಟವನಂತೆ ನಟಿಸುತ್ತ ಬಾಯನ್ನು ತೆರೆಯಲು ಆತನ ಹೊಟ್ಟೆಯಲ್ಲಿ ಭುವನ ಬ್ರಹ್ಮಾಂ ಡಗಳು ಪ್ರಕಾಶಿಸುತ್ತಿರುವ ಆನಂದಕರವಾದ ಅದ್ಭುತ ಲೀಲೆಯು ಕಾಣಬರಲು ವಿಸ್ಮಿತಳಾದ ಯಶೋದೆಯು ಮಗುವನ್ನು ತಬ್ಬಿ ಮುದ್ದಾಡಿ ಸಂತೋಷಪಡುತ್ತ ತೊಡೆಯಮೇಲೆ ಮಲಗಿಸಿ ಕೊಂಡು ನಿದ್ರೆಮಾಡಿಸಿ ತೊಟ್ಟಿಲಲ್ಲಿ ಮಲಗಿದಮೇಲೆ ತನ್ನ ಕೆಲಸಕ್ಕೆ ಹೊರಟುಹೋದಳು.

ಹೀಗೆ ಬಾಲಲೀಲಾವಿನೋದವನ್ನು ಆಗಾಗ್ಗೆ ತೋರಿಸುತ್ತಿದ್ದ ಶ್ರೀ ಕೃಷ್ಣನು ಮುಂದೆ ಮತ್ತೊಂದು ವಿಚಿತ್ರವನ್ನು ತೋರಿಸಲು ಹೊಂಚುಹಾಕುತ್ತಿದ್ದನು.

## ನಳಕೂಬರ ಮಣಿಗ್ರೀವರ ಶಾಪವಿಮೋಚನೆ.

ಪೂರ್ವದಲ್ಲಿ ಯಾವುದೋ ಒಂದು ತಪ್ಪುಮಾಡಿ ನಾರದನನ್ನು ಕೆರಳಿಸಿ ಅವನಿಂದ ಶಾಪವನ್ನು ಪಡೆದ ಕುಬೇರನ ಮಕ್ಕಳಾದ ನಳಕೂಬರ ಮಣಿಗ್ರೀವರೆಂಬವರಿಬ್ಬರೂ ಅವಳಿಯ



ಮತ್ತೀಮರಗಳಾಗಿ ನಂದಗೋಕುಲದ ಹತ್ತಿರದಲ್ಲಿ ಹುಟ್ಟಿ ಬಹು ರಮ್ಯವಾಗಿ ಹೊಳೆಯುತ್ತಿದ್ದರು. ಆ ಮರಗಳು ಬಹು ಸುಂದರವಾಗಿಯೂ ಒಂದೇ ಕಡೆಯಲ್ಲಿ ಹುಟ್ಟಿ ಅವಳಿಯಾಗಿಯೂ, ಆಶ್ಚರ್ಯಕರವಾಗಿಯು ಇದ್ದ ಕಾರಣ ಆ ಊರಿನವರೆಲ್ಲರೂ ಆ ಮರಗಳನ್ನು ಬಹು ಪ್ರೀತಿಯಿಂದ ಸಾಕುತ್ತ ಅದರ ಬುಡದಲ್ಲಿ ಕುಳಿತು ಆಟವಾಡುತ್ತ ತಮ್ಮ ವಿನೋದಕ್ಕೆ ನೆಲೆಯಾಗಿ ಮಾಡಿಕೊಂಡಿದ್ದರು. ಹೀಗಿರುವಲ್ಲಿ ಒಂದು ದಿನ ಯಶೋದೆಯು ಮೊಸರನ್ನು ಕಡೆದು ಬೆಣ್ಣೆ ತೆಗೆಯುತ್ತಿದ್ದಾಗ ಶ್ರೀ ಕೃಷ್ಣನು ತನಗೆ ಹಾಲು ಕುಡಿಸು ಎಂದು ಪೀಡಿಸುತ್ತಿದ್ದನು. ಆ ಹಿಂಸೆ



ಯನ್ನು ತಾಳಲಾರದೆ ಯಶೋದೆಯು ಕಡೆಗೋಲಿನ ಹಗ್ಗದಿಂದ ಶ್ರೀಕೃಷ್ಣನನ್ನು ಒಂದು ಮರದ ಒರಳಿಗೆ ಕಟ್ಟಿಹಾಕಿ ತಾನು ತನ್ನ ಕೆಲಸವನ್ನು ಮಾಡುತ್ತಿದ್ದಳು. ಇದೆ ತಕ್ಕ ಸಮಯವೆಂದು ತಿಳಿದು ಕೃಷ್ಣನು ಅಂಬೆಗಾಲಿಡುತ್ತ ಆ ಮರದ ಒರಳನ್ನು ಎಳೆದುಕೊಂಡು ಊರಿನ ಹೊರಗಿರುವ ಮತ್ತೀಮರದ ಬಳಿಗೆ ಹೋಗಿ ಆ ಮರದ ಸಂದಿಯಲ್ಲಿ ನುಗ್ಗಿ ತನ್ನ ಕಾಲುಗಳಿಂದ ಆ ಮರವನ್ನು ಒದೆಯಲು ಒರಳು ಮರದ ಮಧ್ಯದಲ್ಲಿ ಸಿಕ್ಕಿಹೋಯಿತು. ಮರಗಳು ದೊಪ್ಪನೆ ಮಹಾರಭಸದಿಂದ ನೆಲಕ್ಕೆ ಬಿದ್ದುವು. ಕೃಷ್ಣನು ಅದರ ಮೇಲೆ ಲೀಲೆಯಿಂದ ಆಟವಾಡುತ್ತಿದ್ದನು. ಊರಿನವರಿಗೆ ಈ ವಿಚಾರ ತಿಳಿದು ಎಲ್ಲರೂ ಬಂದು ನೋಡಿ ಆಶ್ಚರ್ಯಪಡುತ್ತಿ

ರುವ ಸಮಯದಲ್ಲಿ ಶಾಪದಿಂದ ಮತ್ತೀಮರಗಳಾಗಿ ಹುಟ್ಟಿದ್ದ ನಳಕೂಬರ ಮಣಿಗ್ರೀವರು ತಮ್ಮ ನಿಜರೂಪವನ್ನು ತಾಳಿ ಶ್ರೀಕೃಷ್ಣನಿಗೆ ನಮಸ್ಕರಿಸಿ ಸಂತೋಷದಿಂದ ಹೊರಟುಹೋದರು. ಯಶೋದೆಯು ಆಶ್ಚರ್ಯಭರಿತಳಾಗಿ ತನ್ನ ಮಗನನ್ನು ಎತ್ತಿಕೊಂಡು ಮನೆಗೆ ಬಂದಳು.

## ಬೃಂದಾವನವಾಸ.

ಹೀಗೆ ತಮ್ಮ ಬಾಲಲೀಲೆಯಿಂದ ನಂದಗೋಕುಲವನ್ನು ಆನಂದಗೊಳಿಸುತ್ತ ಬೆಳೆಯುತ್ತಿದ್ದ ರಾಮಕೃಷ್ಣರು ಬಾಲ್ಯವನ್ನು ಕಳೆದು ಓಡಾಡುವ ಶಕ್ತಿಯನ್ನು ಹೊಂದಿ ಓರಗೆಯ ಮಕ್ಕಳೊಡನೆ ಉದ್ಯಾನವನ ಗೋವ್ರಜಗಳಿಗೆ ಹೋಗಿಬರುತ್ತ ಬೆಳೆಯುತ್ತಿದ್ದರು. ಈ ಸಂಗತಿಯು ಕಂಸನಿಗೆ ತಿಳಿದು ಅವನು ನಂದಗೋಕುಲದವರನ್ನು ಬಹಳವಾಗಿ ಪೀಡಿಸುತ್ತಿದ್ದಕಾರಣ ನಂದಗೋಪನು ಅವನಿಗೆ ಕಪ್ಪಕಾಣಿಕೆಗಳನ್ನು ಕೊಟ್ಟು ಬೇಜಾರಾಗಿ ಬಹು ಸಂಕಟದಿಂದ ತನ್ನ ಬಂಧುವಾದ ವಸುದೇವನೊಡನೆ ಯೋಚಿಸಿ ಗೊತ್ತುಮಾಡಿಕೊಂಡು ನಂದಗೋಕುಲವನ್ನೆ ಬಿಟ್ಟು ಯಮುನಾತೀರದಲ್ಲಿ ಬೃಂದಾವನಕ್ಷೇತ್ರದ ಬಳಿಯಲ್ಲಿ ಒಂದು ಗೋವ್ರಜವೆಂಬ ಗೊಲ್ಲರ ಹಟ್ಟಿಯನ್ನು ಮಾಡಿಕೊಂಡು ವಾಸಮಾಡತೊಡಗಿದನು. ಅಂದಿನಿಂದ ರಾಮಕೃಷ್ಣರು ನಿರ್ಭಯದಿಂದ ತನ್ನ ಜೊತೆಯ ಮಕ್ಕಳ ಸಂಗಡ ತಾವೂ ಹಸುಗಳನ್ನು ಹೊಡೆದುಕೊಂಡು ಮೇಯಿಸುವುದಕ್ಕಾಗಿ ಕಾಡಿಗೆ ಹೋಗಿಬರುತ್ತಿದ್ದರು.

## ವತ್ಸಾಸುರ ಬಕಾಸುರರ ವಧೆ.

ಬೃಂದಾವನದಲ್ಲಿ ವಾಸಮಾಡುತ್ತಿದ್ದಾಗ ರಾಮಕೃಷ್ಣರಿಬ್ಬರೂ ಒಟ್ಟಾಗಿ ತಮ್ಮ ಜೊತೆಯ ಹುಡುಗರೊಂದಿಗೆ ಯಮುನಾ ನದಿಯ ಪ್ರಾಂತ್ಯಕ್ಕೆ ಹೋಗಿ ಗೋವುಗಳನ್ನು ಮೇಯಿಸುತ್ತ



ವಿನೋದಾರ್ಥವಾಗಿ ಆಟವಾಡಿಕೊಂಡು ಸಂಗೀತವನ್ನು ಹಾಡಿ ಮನೋಹರವಾಗಿ ಕೊಳಲನ್ನು ಬಾರಿಸುತ್ತ ಲೀಲಾವಿನೋದಗಳಿಂದ ಕಾಲವನ್ನು ಕಳೆಯುತ್ತಿದ್ದರು. ಕಂಸನು ಈ ಗುಟ್ಟನ್ನು ತಿಳಿದು ರಾಮಕೃಷ್ಣರನ್ನು ಹೇಗಾದರೂ ಮಾಡಿ ಕೊಲ್ಲಿಸಬೇಕೆಂದು ತನಗೆ ಆಪ್ತನಾದ ಹಸುವಿನ ಕರುವಿನಂತೆ ವೇಷಹಾಕಿಕೊಂಡಿದ್ದ ವತ್ಸಾಸುರನನ್ನೂ, ಬಕಪಕ್ಷಿಯಂತೆ ತೋರುತ್ತಿದ್ದ ಬಕನೆಂಬ ರಾಕ್ಷಸನನ್ನೂ ಆ ಕಾಡಿಗೆ ಕಳುಹಿಸಿದನು ಅವರಲ್ಲಿ ಮೊದಲು ವತ್ಸಾಸುರನು ಕೃಷ್ಣನ ಜೊತೆಯಲ್ಲಿ ಆಡುತ್ತಿರುವ ಬಾಲಕರ ಗುಂಪನ್ನು ಹೊಕ್ಕು ಹಾವಳಿಮಾಡಿ ಅವರನ್ನು ಕೊಲ್ಲುವುದಕ್ಕೆ ಯತ್ನಿಸಲು ಕೃಷ್ಣನು ತನ್ನ ಮಾಯಾಶಕ್ತಿಯಿಂದ ಇದೆಲ್ಲವನ್ನೂ ಕಂಡು ಆ ವತ್ಸಾಸುರನನ್ನು ಹಿಡಿದು ಸೀಳಿಹಾಕಿ ಗೋಪಾಲಬಾಲಕರನ್ನು ಸಂರಕ್ಷಿಸಿ ತಾನೂ ಸುಖವಾಗಿದ್ದನು. ಇದಾದ ಮೇಲೆ ಮತ್ತೊಂದುದಿನ ಬಕನೆಂಬ ರಾಕ್ಷಸನು ಪಕ್ಷಿರೂಪದಿಂದ ಅಲ್ಲಿಗೆ ಬಂದು ಗೋವುಗಳನ್ನೂ

ಗೋಪಾಲಕರನ್ನೂ ತನ್ನ ಕೊಕ್ಕಿನಿಂದ ಕುಕ್ಕಿ ಕೊಲ್ಲುತ್ತಿರುವುದನ್ನು ಕಂಡು ಶ್ರೀಕೃಷ್ಣನು ಅವನ ಕೊಕ್ಕನ್ನು ಹಿಡಿದುಕೊಂಡು ಎರಡು ಭಾಗವಾಗಿ ಸೀಳಿಹಾಕಿ ಬಕಾಸುರನನ್ನು ಕೊಂದು ಗೋಪಾಲರನ್ನು ಕಾಪಾಡಿದನು. ಈ ಸಂಗತಿಯು ಎಲ್ಲೆಲ್ಲಿಯೂ ಹರಡಿಕೊಂಡು ಪ್ರಸಿದ್ಧವಾಯಿತು.



ಅಂದಿನಿಂದ ಗೋಪಾಲಬಾಲಕರು ಕೃಷ್ಣನ ಸಂಗಡಲೆ ಗೋವುಗಳನ್ನು ಮೇಯಿಸುವುದಕ್ಕೆ ಬೃಂದಾವನದ ಕಾಡಿಗೆ ಹೋಗುತ್ತ ನಿರ್ಭಯದಿಂದ ಬೆಳೆಯುತ್ತಿದ್ದರು.

## ಅಘಾಸುರನ ಸಂಹಾರ.

ಮತ್ತೊಂದು ದಿನ ರಾಮಕೃಷ್ಣರಿಬ್ಬರೂ ತಮ್ಮ ಪರಿವಾರದೊಡಗೂಡಿ ಯಮುನಾತೀರದಲ್ಲಿರುವ ಗೋವರ್ಧನಗಿರಿಯ ತಪ್ಪಲಿನಲ್ಲಿ ದನಕರುಗಳನ್ನು ಮೇಯಿಸುತ್ತ ಬಹು ಸಂತೋಷದಿಂದ ಕಾಲವನ್ನು ಕಳೆಯುತ್ತಿದ್ದರು. ಪಸುಗಳು ಹಸುರಾಗಿ ಬೆಳೆದಿರುವ ಹುಲ್ಲುಗಳನ್ನು ಹುಡುಕಿಕೊಂಡು ಬೆಟ್ಟದ ಬುಡದ ಕಡೆಗೆ ಹೋಗುತ್ತಾಬಂದವು. ಆ ಕಾಲದಲ್ಲಿ ಕಂಸನಿಂದ



ಪ್ರೇರಿತನಾದ ಅಘನೆಂಬ ರಾಕ್ಷಸನು ತನ್ನ ಪುರಾಕೃತ ಪಾಪರೂಪಕ್ಕೆ ತಕ್ಕ ಆಕಾರವಾಗಿ ದೊಡ್ಡದಾದ "ಅಜಗರ" ವೆಂಬ ಹೆಬ್ಬಾವಾಗಿ ಬಾಯಿ ತೆರೆದುಕೊಂಡು ಕೋಮಲವಾಗಿ ಬೆಳೆದಿರುವ ಹುಲ್ಲುಹಸಿರಿಯ ಮಧ್ಯದಲ್ಲಿ ಮಲಗಿದ್ದನು. ಅದನ್ನು ಕಂಡು ಗೋಪಾಲಕರು ಭ್ರಾಂತರಾಗಿ ಹಾವಿನ ಆಕಾರದಿಂದಿರುವ ಈಗುಹೆಯನ್ನು ನೋಡಬೇಕೆಂದು ಯೋಚಿಸಿ ಗವಿಯೆಂದು ತಿಳಿದು ಅಘಾಸುರನ ಬಾಯನ್ನು ಹೊಕ್ಕು ಹೊರಟುಹೋದರು. ರಾಮಕೃಷ್ಣರೂ ಅವರನ್ನು ಹಿಂಬಾಲಿಸಿ ತಾವೂ ಅಘನ ಬಾಯನ್ನು ಹೊಕ್ಕು ಸ್ವಲ್ಪದೂರ ಹೋಗಿ ಇದು ರಾಕ್ಷಸರ ಮಾಯವೆಂದು ತಿಳಿದು ತನ್ನ ಬಾಹುಬಲದಿಂದ ಅಘಾಸುರನ ಹೊಟ್ಟೆಯನ್ನು ಸೀಳಿ ಅವನನ್ನು ಕೊಂದು ತನ್ನ ಜೊತೆಯ ಗೋಪಾಲಕರನ್ನು ಉಳಿಸಿ ತಾನು ಸಂತೋಷಪಟ್ಟು ಸಾಯಂಕಾಲವಾಗಲು ಮನೆಗೆ ಬಂದನು. ಓರಗೆಯ ಹುಡುಗರು ಕೃಷ್ಣನು ಮಾಡಿದ ಆಶ್ಚರ್ಯವನ್ನು ಎಲ್ಲರಿಗೂ ವಿವರಿಸಿ ಹೇಳಲು ಊರಿನವರೆಲ್ಲರೂ ಆಶ್ಚರ್ಯಯುಕ್ತರಾಗಿ ಕೃಷ್ಣನನ್ನು ಹೊಗಳಿ ಸ್ತುತಿಸುತ್ತಿರಲು ಲೋಕಕಂಟಕನನ್ನು ಪರಿಹರಿಸಿ ನಮ್ಮನ್ನು ಕಾಪಾಡಿದ ಈ ಮಹಾಪ್ರಭುವನ್ನು ನಾವು ಭಕ್ತಿ

ಯಿಂದ ಪೂಜಿಸಬೇಕೆಂದು ಮಾತನಾಡಿಕೊಳ್ಳುತ್ತಿದ್ದರು. ಅದು ನಿಜವೆನ್ನುನಂತೆ ಆಕಾಶದಲ್ಲಿ ನೆರೆದಿದ್ದ ದೇವತೆಗಳು ರಾಮಕೃಷ್ಣರಮೇಲೆ ಪುಷ್ಪವೃಷ್ಟಿಯನ್ನು ಕರೆದು ದೇವದುಂದುಭಿಗಳನ್ನು ಬಾರಿಸಿದರು. ಇದರಿಂದ ಶ್ರೀಕೃಷ್ಣನ ಪ್ರಖ್ಯಾತಿಯು ಲೋಕದಲ್ಲೆಲ್ಲ ಹರಡಿಕೊಂಡಿತು. ಕಂಸನಿಗೆ ಪಾಪಾತ್ಮರ ಪರಾಕ್ರಮವು ಪ್ರತಿದಿನವೂ ಕುಗ್ಗಿ ನಶಿಸುತ್ತಿರುವಂತೆ ಆಯುಸ್ಸೂ ಕಡಿಮೆಯಾಗುತ್ತ ಬಂದಿತು. ರಾಕ್ಷಸರೆಲ್ಲರೂ ತಲ್ಲಣಿಸುತ್ತಿದ್ದರು.

## ಬ್ರಹ್ಮದೇವರ ಗರ್ವಭಂಗ.

ಬಳಿಕ ಒಂದಾನೊಂದು ಸಮಯದಲ್ಲಿ ರಾಮಕೃಷ್ಣರಿಬ್ಬರೂ ಶಿಖಿಪಿಂಛಾವತಂಸರಾಗಿ ಹೂಮಾಲೆಯನ್ನು ಹಾಕಿಕೊಂಡು ಕೊಳಲು ಮುಖವೀಣೆ ಮೊದಲಾದ ಶೃಂಗಾರವಾದ್ಯಗಳನ್ನು ಹಿಡಿದು ನಾದಮಾಡಿ ಊದುತ್ತ ರಾಗ ರಚನೆಯಿಂದ ಸಂತೋಷಯುಕ್ತರಾಗಿ ತಮ್ಮ ಜೊತೆಯ ಹುಡುಗರ ಸಂಗಡ ದನಕರುಗಳನ್ನು ಹೊಡೆದುಕೊಂಡು ಬೃಂದಾವನ ಪ್ರಾಂತ್ಯಕ್ಕೆ ಹೋಗಿ ಅಲ್ಲಿ ಯಮುನಾತೀರದ ಮರಳುದಿಣ್ಣೆಗಳಲ್ಲಿ ತಮಗೆ ತೋರಿದಂತೆ ಬಗೆಬಗೆಯ ಆಟಗಳನ್ನು ಆಡುತ್ತಿದ್ದು ಗೋವುಗಳನ್ನು ಮೇಯುವುದಕ್ಕೆ ಬಿಟ್ಟರು. ಆಗ ಹಸುಗಳು ಹಸುರಾಗಿ ಬೆಳೆದಿರುವ ಕೋಮಲವಾದ ಹುಲ್ಲುಗಳನ್ನು ಹುಡುಕಿಕೊಂಡು ಮುಂದೆ ಮುಂದೆ ಹೋಗುತ್ತ ಗೋವರ್ಧನಾದ್ರಿಯನ್ನು ಹೊಕ್ಕು ತಪ್ಪಲಲ್ಲಿ ಮೇಯುತ್ತಿದ್ದವು. ಅಷ್ಟುಹೊತ್ತಿಗೆ ಹಸಿವಾದಕಾರಣ ರಾಮಕೃಷ್ಣರೂ ಅವರ ಜೊತೆಯವರೂ ತಾವು ಬರುವಾಗ ಕಟ್ಟಿತಂದಿದ್ದ ಮೊಸರನ್ನದ ಬುತ್ತಿಯನ್ನು ಬಿಚ್ಚಿ ಎಲ್ಲರೂ ಸಾಲಾಗಿ ಕುಳಿತುಕೊಂಡು ಸಂತೋಷಕರವಾದ ಮಾತುಗಳನ್ನಾಡುತ್ತ ಪಚ್ಚಡಿ ಉಪ್ಪಿನಕಾಯಿ ಹಪ್ಪಳ ಮೊದಲಾದ ವ್ಯಂಜನಗಳೊಡನೆ ಆಬುತ್ತಿಯ ಅನ್ನವನ್ನು ತುತ್ತುತುತ್ತಾಗಿ ತೆಗೆದುಕೊಂಡು ತಿನ್ನುತ್ತ ಲೀಲಾವಿನೋದದಿಂದ ಊಟಮಾಡುತ್ತಿದ್ದರು. ಆಗ ಬ್ರಹ್ಮದೇವನು ಶ್ರೀಕೃಷ್ಣನ ಮಹಿಮೆಯನ್ನು ಪರೀಕ್ಷಿಸಿ ಪ್ರಸಿದ್ಧಿಗೊಳಿಸುವುದಕ್ಕೆ ಇದೇ ತಕ್ಕ ಸಮಯವೆಂದು ತಾನು ಗೋವರ್ಧನ ಪರ್ವತಕ್ಕೆ ಬಂದು ಬೃಂದಾವನ ಪ್ರಾಂತದಲ್ಲಿ ಮೇಯುತ್ತಿದ್ದ ಗೋವುಗಳನ್ನು ಆಕರ್ಷಿಸಿ ಗೋವರ್ಧನ ಪರ್ವತದಲ್ಲಿ ಮುಚ್ಚಿಟ್ಟನು. ಆಗ ತಿಂಡಿಯನ್ನು ತಿನ್ನುತ್ತ ಕೇಕೆ ಹಾಕಿ ನಗುತ್ತ ರಾಗವನ್ನು ಹಾಡಿಕೊಂಡು ಬುತ್ತಿಯನ್ನುಣ್ಣುತ್ತಿದ್ದ ಗೋಪಾಲಬಾಲಕರು ತಾವು ಹಿಡಿದಿದ್ದ ತುತ್ತನ್ನು ಹಾಗೆಯೇ ಬಿಟ್ಟು ದನಗಳನ್ನು ನೋಡುವುದಕ್ಕಾಗಿ ಹೊರಡುತ್ತಿದ್ದರು. ಅದನ್ನು ಕಂಡು ಶ್ರೀಕೃಷ್ಣನು ಅವರನ್ನು ಸಮಾಧಾನಮಾಡಿ ನೀವೆಲ್ಲರೂ ಇಲ್ಲೇ ಇರಿ ನಾನೂ ಬಲರಾಮನೂ ಹೋಗಿ ಗೋವುಗಳನ್ನು ಹುಡುಕಿ ಹೊಡೆದುಕೊಂಡು ಬರುತ್ತೇವೆ ಎಂದು ಹೇಳಿ ಪರ್ವತವನ್ನು ಹತ್ತಿದರು. ಕೂಡಲೆ ಬ್ರಹ್ಮದೇವನು ತನ್ನ ಮಾಯೆಯಿಂದ ಬುತ್ತಿಯನ್ನು ಉಣ್ಣುತ್ತಿದ್ದ ಆ ಗೋಪಾಲ ಬಾಲಕರನ್ನು ಸೆಳೆದುಕೊಂಡು ಹೋಗಿ ಗೋವುಗಳ ಹಾಗೆ ಇವರನ್ನು ಬಚ್ಚಿಟ್ಟು ಈಗ ಏನು ನಡೆಯುವುದೊ ನೋಡಬೇಕೆಂಬ ಕುತೂಹಲದಿಂದ ಆತುರನಾಗಿ ನೋಡುತ್ತಿದ್ದನು. ಗೋವುಗಳನ್ನು ಹುಡುಕುವುದಕ್ಕೆ ಹೋದ ರಾಮಕೃಷ್ಣರಿಗೆ ಗೋವುಗಳು ಸಿಕ್ಕದೆ ಹೋದವು ಅವರಿಬ್ಬರೂ ಹಿಂದಿರುಗಿ ಬಂದು ಯಮುನಾತೀರದಲ್ಲಿ ನೋಡುವಾಗ ಗೋಪಾಲಕರೊಬ್ಬರೂ ಇಲ್ಲದಿರಲು ಸರ್ವಜ್ಞನಾದ ಶ್ರೀಕೃಷ್ಣನು ತನ್ನ ಮಾಯಾಶಕ್ತಿಯಿಂದ ಬ್ರಹ್ಮದೇವನು ಮಾಡಿರುವ ಕುತಂತ್ರವನ್ನು ತಿಳಿದವನಾಗಿ ಹೇಗಾದರೂ ಮಾಡಿ ಬ್ರಹ್ಮದೇವನ ಗರ್ವವನ್ನು ಮುರಿಯಬೇಕೆಂದು ಯೋಚಿಸಿ ತನ್ನ ಶಕ್ತಿಯಿಂದ ಗೋವುಗಳನ್ನು ಗೋಪಾಲಕರನ್ನೂ ಪ್ರತ್ಯೇಕವಾಗಿ ನಿರ್ಮಾಣಮಾಡಿ ಅವರವರ ಮನೆಗೆ ಕಳುಹಿಸಲು ಎಂದಿನಂತೆ ಮನೆಯವರೆಲ್ಲ ತಮ್ಮ ದನಕರುಗಳಿಗೂ ಮಕ್ಕಳಿಗೂ ಯಾವ ವ್ಯತ್ಯಾಸವೂ ಇಲ್ಲದೆ ಮೊದಲಿನಂತೆ ಇದ್ದಕಾರಣ ನಿಜವೆಂದು ಊಹಿಸಿ ತಿಳಿದುಕೊಂಡು ಸುಮ್ಮನಾದರು. ಹೀಗೆ ಶ್ರೀಕೃಷ್ಣನು ತನ್ನ ಮಾಯಾಶಕ್ತಿಯಿಂದ

ಬ್ರಹ್ಮಸೃಷ್ಟಿಗೆ ಸಮಾನವಾದ ಮಾಯಾಸೃಷ್ಟಿಯನ್ನು ನಿರ್ಮಿಸಿ ಎರಡಕ್ಕೂ ವ್ಯತ್ಯಾಸವೇ ತೋರ ದಂತೆ ಕಲ್ಪಿಸಿದ ಕಲ್ಪನೆಗೆ ಚಕಿತನಾಗಿ ಬ್ರಹ್ಮನು ತನಗೆ ಏನು ಅಪಾಯವುಂಟಾಗುವುದೊ ಎಂದು ಮನಸ್ಸಿನಲ್ಲಿ ಯೋಚಿಸುತ್ತ ಒಂದು ವರ್ಷಕಾಲ ಆ ಗೋಪಾಲಕರಿಗೆ ಅನ್ನವಸ್ತ್ರಗಳನ್ನು ಗೋವುಗಳಿಗೆ ಮೇವು ನೀರನ್ನು ಒದಗಿಸುತ್ತ ಬಹು ಪ್ರಯಾಸಪಟ್ಟು ಬೇಸತ್ತು ತಾನು ಮಾಡಿದ ತಂತ್ರಕ್ಕೆ ತಾನೆ ನಾಚಿಕೆಪಟ್ಟುಕೊಂಡು ತಾನು ಬಚ್ಚಿಟ್ಟಿದ್ದ ಗೋವುಗಳಂತಹ ಗೋವುಗಳೂ ಗೋಪಾಲಕರಂತಹ ಬಾಲಕರೂ ಪ್ರತಿದಿನವೂ ಗೋವರ್ಧನಾದ್ರಿಯ ಬಳಿಗೆ ಮೇಯುವುದಕ್ಕೆ ಬರುತ್ತಿರುವುದನ್ನು ನೋಡಿ ಆಶ್ಚರ್ಯಪಟ್ಟವನಾಗಿ ಇನ್ನು ನನ್ನ ಯತ್ನವೇನೂ ನಡೆಯದು ಎಷ್ಟು ದಿನ ನಾನು ನನ್ನ ಕೆಲಸವನ್ನು ಬಿಟ್ಟು ಈ ದನಗಳನ್ನು ಹುಡುಗರನ್ನು ಕಾದುಕೊಂಡಿರಲಿ ಎಂದು ಚಿಂತಾಕ್ರಾಂತನಾಗಿ ಬಳಿಕ ಭಗ್ನಮನೋರಥನಾಗಿ ತನಗೆ ಜ್ಞಾನೋದಯವಾದಕಾರಣ ನಿಗಮಾ ಗಮಸ್ತುತಿಗಳಿಂದ ಶ್ರೀಕೃಷ್ಣನನ್ನು ಹೊಗಳಿ ಮೆಚ್ಚಿಸಿ ತನ್ನ ಅಪರಾಧವನ್ನು ಕ್ಷಮಿಸುವಂತೆ ಬೇಡಿ ಕೊಂಡನು. ಆಗ ಅವನ ಸ್ತುತಿಗೆ ಮೆಚ್ಚಿ ಶ್ರೀಕೃಷ್ಣನು ಪ್ರತ್ಯಕ್ಷವಾಗಲು ಸಚ್ಚಿದಾನಂದಮೂರ್ತಿ ಯಾದ ಪರಮಾತ್ಮನಿಗೆ ಬ್ರಹ್ಮದೇವನು ತಾನು ಗೋವರ್ಧನಾದ್ರಿಯಲ್ಲಿ ಬಚ್ಚಿಟ್ಟುಕೊಂಡಿದ್ದ ಗೋಧನ ಸಹಿತವಾಗಿ ಗೊಪಾಲಕರನ್ನು ಸಮರ್ಪಿಸಿ ಎಂದಿನಂತೆ ತನ್ನ ಸೃಷ್ಟಿಕಾರ್ಯದಲ್ಲಿ ತಾನು ನಿರತನಾದನು ಹೀಗೆ ಶ್ರೀಕೃಷ್ಣನು ತನ್ನ ಮಾಯಾಸೃಷ್ಟಿಯನ್ನು ತನ್ನಲ್ಲಿ ಅಡಗಿಸಿಕೊಂಡು ಬ್ರಹ್ಮ ನಿರ್ಮಿತವಾದ ಗೋವುಗಳನ್ನು ಗೋಪಾಲಕರನ್ನು ಮೊದಲು ಮೇಯುತ್ತಿದ್ದ ಸ್ಥಳದಲ್ಲಿ ಅಷ್ಟೆ ಹೊತ್ತಿಗೆ ಸರಿಯಾಗಿ ಕಂಡು ಎಲ್ಲರನ್ನು ಆದರಿಸಿ ಅವರವರ ಮನೆಗಳಿಗೆ ಕಳುಹಿಸಿದನು. ಈ ಸೂಕ್ಷ್ಮವೂ ಯಾರಿಗೂ ತಿಳಿಯಲಿಲ್ಲ ಆದರೆ ಬಲರಾಮನು ಮಾತ್ರ ಸ್ವಲ್ಪಮಟ್ಟಿಗೆ ಈ ಆಶ್ಚರ್ಯ ವನ್ನು ತಿಳಿದವನಾಗಿ ಯಾರಿಗೂ ಹೇಳದೆ ತನ್ನ ಮನಸ್ಸಿನಲ್ಲಿ ಆಶ್ಚರ್ಯಪಡುತ್ತ ಶ್ರೀಹರಿಯನ್ನು ಕೊಂಡಾಡಿ ಹೊಗಳುತ್ತಿದ್ದನು.

## ಮಹಾ ತಾಳವನ ಭಂಗ, ಧೇನುಕಾಸುರ ಸಂಹಾರ.

ಇನ್ನೊಂದು ಸಮಯದಲ್ಲಿ ಪ್ರಾಪ್ತವಯಸ್ಕರಾದ ರಾಮಕೃಷ್ಣರಿಬ್ಬರೂ ತಮ್ಮ ಓರಗೆಯ ಹುಡುಗರೊಂದಿಗೆ ಬೃಂದಾವನ ಪ್ರಾಂತ್ಯದ ಅರಣ್ಯಕ್ಕೆ ಹೋಗಿ ಹಸುಗಳನ್ನು ಮೇಯಿಸುತ್ತ ಮನೋಹರವಾದ ಯಮುನಾತೀರದ ಮರಳುದಿಣ್ಣೆಗಳಲ್ಲಿ ಬಗೆಬಗೆಯಾದ ಆಟಗಳನ್ನು ಆಡಲೆಳಸಿ, ಚಂಡು ಬುಗುರಿ ಚಿಣ್ಣಿಕೋಲು ಗುಡುಗಾಟ ಹಾರುವಿಕೆ ಮರಕೋತಿ ಮಲ್ಲಯುದ್ಧ ಪಕ್ಷಿಕ್ರೀಡೆ ಮೃಗಕ್ರೀಡೆ ಕಪಿಯುದ್ಧ ವಜ್ರಬಾಹು ವತ್ಸಪಾಲನ ಎಂಬ ತತ್ಕಾಲೋಚಿತವಾದ ಅನೇಕ ಆಟ ಗಳನ್ನು ಆಡಿ ಬಹಳವಾಗಿ ಆಯಾಸಗೊಂಡರು. ಆಗ ಒಬ್ಬ ಗೋಪಾಲನು ರಾಮಕೃಷ್ಣರನ್ನು ಕುರಿತು ಅಯ್ಯಾ! ಇಲ್ಲಿಗೆ ಸ್ವಲ್ಪ ದೂರದಲ್ಲಿ ಮಹಾತಾಳವನವೆಂಬ ಒಂದು ತಾಳೆಯ ತೋಪಿದೆ ಅಲ್ಲಿ ಪಕ್ವವಾಗಿ ಕುಳಿತು ಕೆಳಗೆ ಬಿದ್ದಿರುವ ತಾಳೆಯ ಹಣ್ಣುಗಳು ಬೇಕಾದಷ್ಟು ಉದಿರಿದೆ ಆ ಹಣ್ಣುಗಳನ್ನು ತಂದು ನಾವೆಲ್ಲರೂ ಒಟ್ಟಾಗಿ ತಿಂದರೆ ನಮ್ಮ ಆಯಾಸವು ಪರಿಹಾರವಾಗುವುದು. ಆದರೆ ಆ ತಾಳವನದಲ್ಲಿ ಭಯಂಕರವಾದ ಕತ್ತೆಗಳು ತುಂಬಿಕೊಂಡು ಜನಗಳು ಬಾರದಂತೆ ತಂಟೆಮಾಡುತ್ತಿವೆ ಏನುಮಾಡೋಣ ಎಂದು ಚಿಂತಿಸುತ್ತಿರಲು ಕೃಷ್ಣನು ಯಾವ ಮಾತನ್ನು ಆಡದೆ ಸುಮ್ಮನಿದ್ದನು. ಬಲರಾಮನು ಕೂಡಲೆ ಕೆಲವರನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಆ ತಾಳವನದ ಬಳಿಗೆ ಬಂದು ಹತ್ತಿರಕ್ಕೆ ಹೋಗಲು ಪ್ರಯತ್ನಪಟ್ಟನು. ಅಲ್ಲಿ ಶಾಪವಶದಿಂದ ಕತ್ತೆಯಾಗಿ ವಾಸಮಾಡುತ್ತಿದ್ದ ಧೇನುಕಾಸುರನೆಂಬ ರಾಕ್ಷಸನು ಬಲರಾಮನನ್ನು ಕಂಡು ಗಟ್ಟಿ ಯಾಗಿ ಕಿರಿಚುತ್ತ ಹತ್ತಿರಕ್ಕೆ ಬಂದು ಒದೆಯುವುದಕ್ಕೆ ಆರಂಭಿಸಿತು. ಆಗ ಬಲರಾಮನು ತನ್ನ ಬಾಹುಬಲದಿಂದ ಆ ಕತ್ತೆಯ ಕಾಲುಗಳನ್ನು ಹಿಡಿದು ಮೇಲಕ್ಕೆತ್ತಿ ಗರಗರನೆ ತಿರುಗಿಸಿ ನೆಲಕ್ಕೆ

ಅಪ್ಪಳಿಸಿ ಹೊಡೆದು ಕತ್ತೆಯನ್ನು ಕೊಂದನು. ಹೀಗೆ ಆ ಕತ್ತೆಯು ಸಾಯುವಾಗ ಅರಚಿಕೊಂಡ ರಭಸಕ್ಕೆ ತಾಳೆಯಮರಗಳು ನೆಲಕ್ಕೆ ಉರುಳಿಹೋದವು. ಬಳಿಕ ಬಲಭದ್ರನು ಹಾಗೆ ಬಿದ್ದು ಹೋದ ತಾಳೆಯಮರಗಳಿಂದಲೆ ಕತ್ತೆಗಳನ್ನು ಹೊಡೆದು ಓಡಿಸಿ ಎಲ್ಲರೂ ತಾಳೆಯ ಫಲಗಳನ್ನು ತಿಂದು ತೃಪ್ತರಾದರು. ಶಾಪವಿಮುಕ್ತನಾದ ಧೇನುಕನು ತನ್ನ ಸ್ವಸ್ಥಾನಕ್ಕೆ ತೆರಳಿದನು. ಇದನ್ನು ಕಂಡು ಆಶ್ಚರ್ಯಪಟ್ಟವರಾಗಿ ಆಕಾಶಮಾರ್ಗದಿಂದ ದೇವತೆಗಳು ಬಲರಾಮನ ಮೇಲೆ ಪುಷ್ಪವೃಷ್ಟಿಯನ್ನು ಕರೆದು ಸಂತೋಷದಿಂದ ದೇವದುಂದುಭಿಗಳನ್ನು ಬಾರಿಸಿದರು.

## ಕಾಳಿಂಗಮರ್ದನ ಮತ್ತು ಪ್ರಲಂಬ ಸಂಹಾರ.

ಬಳಿಕ ಒಂದಾನೊಂದು ಕಾಲದಲ್ಲಿ ರಮಣ್ವಕದ್ವೀಪ ವಾಸಿಯಾಗಿದ್ದ ಕಾಳೀಯನೆಂಬ ಸರ್ಪರಾಜನು ತನ್ನ ಪರಿವಾರ ಸಹಿತನಾಗಿ ಕಾಳಿಂದೀನದಿಯ ಮಡುವಿನಲ್ಲಿ ವಾಸಮಾಡುತ್ತ ಆ ಮಡುವಿಗೆ ನೀರು ಕುಡಿಯುವುದಕ್ಕಾಗಿ ಬರುತ್ತಿದ್ದ ದನಕರುಗಳನ್ನು ಗೋಪಾಲಕರನ್ನು ತನ್ನ ವಿಷದಿಂದ ಸಂಹರಿಸುತ್ತಿರುವುದನ್ನು ಕೇಳಿ ಧೀರನಾದ ಕೃಷ್ಣನು ನಿಶ್ಶಂಕೆಯಿಂದ ಆ ಮಡು ವಿಗೆ ಧುಮಿಕಿ ಎದುರಿಸಿದ ಕಾಳಿಂಗನನ್ನು ತುಳಿದು ಅವನ ವಿಷವನ್ನೆಲ್ಲಾ ನಾಶಮಾಡಿ ಸಮು ದ್ರಕ್ಕೆ ಓಡಿಸಿದನು. ಮತ್ತೊಂದು ಕಾಲದಲ್ಲಿ ಕಾಳ್ಗಿಚ್ಚು ಪ್ರಬಲಿಸಿ ಗೋವುಗಳನ್ನೂ ಗೋಪಾಲಕರನ್ನೂ ಆವರಿಸಿಕ್ಕೊಂಡು ಬರಲು ಶ್ರೀಕೃಷ್ಣನು ಅದನ್ನು ನುಂಗಿ ಎಲ್ಲರನ್ನೂ ಸಲಹಿದನು. ಅನಂತರದಲ್ಲಿ ಗ್ರೀಷ್ಮ ಋತುವಿನಲ್ಲಿ ಒಂದು ದಿನ ಪ್ರಲಂಬನೆಂಬ ರಾಕ್ಷ ಸನು ಗೋಪಾಲಬಾಲಕನಂತೆ ವೇಷವನ್ನು ಹಾಕಿಕೊಂಡು ರಾಮಕೃಷ್ಣರ ಬಳಿಗೆ ಬಂದು ವಿನೋ ದಾರ್ಥವಾಗಿ ಗುಡುಗಾಟವನ್ನು ಆಡುತ್ತಿದ್ದು ಸೋತುಹೋದ ಬಲರಾಮನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡು ಓಡಿಹೋಗುವುದಕ್ಕೆ ಪ್ರಯತ್ನಪಡಲು ಸಂಕರ್ಷಣನು ಅವನ ಚರ್ಯ ವನ್ನು ತಿಳಿದು ಇವನು ರಾಕ್ಷಸನೆ ಸರಿ! ಗೋಪಾಲಕನಲ್ಲ ಇವನನ್ನು ಕೊಂದರೆ ಪಾಪಸಂಘಟನೆ ಯಾಗಲಾರದು ಕಿಂಚಿತ್ಪುಣ್ಯವೇ ಲಭಿಸುವುದೆಂದು ಯೋಚಿಸಿ ತನ್ನ ಹಿಂಗಾಲುಗಳಿಂದ ಅವನ ಎದೆಯನ್ನು ಘಟ್ಟಿಸಿ ಹಸ್ತಗಳಿಂದ ಕೊರಳನ್ನು ಹಿಸುಕಿ ಬಾಹುಬಲದಿಂದ ಬಡಿದು ಪ್ರಲಂಬ ನನ್ನು ಕೊಂದು ನೆಲಕ್ಕುರುಳಿಸಿ ತಾನು "ಪ್ರಲಂಬಾರಿ" ಎಂಬ ಖ್ಯಾತಿಯನ್ನು ಪಡೆದನು.

## ಶ್ರೀಕೃಷ್ಣನು ಗೋವರ್ಧನವನ್ನೆತ್ತಿದುದು.

ಹೀಗೆ ನಂದಗೋಕುಲವನ್ನೂ ಬೃಂದಾವನವನ್ನು ತನ್ನ ಮಹಿಮೆಯಿಂದ ರಕ್ಷಿಸುತ್ತಿರುವ



ಶ್ರೀ ಕೃಷ್ಣನ ಪ್ರಾದುರ್ಭಾವನಲ್ಲಿ ಮಗ್ನ ರಾಗಿ ಆಶ್ಚರ್ಯ ಪಡುತ್ತಿದ್ದ ಗೊಲ್ಲರು ತಮ್ಮ ಹಳ್ಳಿಯಲ್ಲಿ ವರ್ಷಕ್ಕೆ ಒಂದುಸಾರಿ ಊರಹಬ್ಬವನ್ನು ಮಾಡಿ ಪರ್ಜನ್ಯನಿಗೆ ಬಲಿಗೊಟ್ಟು ಇಂದ್ರನನ್ನು ಪೂಜಿಸುತ್ತಿದ್ದ ಪದ್ಧತಿಯನ್ನು ಮರತೇಹೋದರು. ಇದ ರಿಂದ ಕುಪಿತನಾದ ಇಂದ್ರನು ತನಗೆ ಆಹುತಿಗಳನ್ನು ಕೊಡದೆ ತನ್ನನ್ನು ಪೂಜಿ ಸದಿರುವ ಈ ಗೋಪಾಲಕರ ಗರ್ವವನ್ನು ಅಣಗಿಸಬೇಕೆಂದು ಯೋಚಿಸಿ ಶ್ರೀಕೃ ಷ್ಣನ ಅಪಾರವಾದ ಮಹಿಮೆಯನ್ನರಿ ಯದೆ ಅಹೋರಾತ್ರಿಯಲ್ಲಿ ಬಿಡದೆ

ಸುರಿಯುತ್ತಿರುವ ಜಡಿಮಳೆಯನ್ನು ಕಲ್ಪಿಸಿ ಒಂದು ವಾರದ ವರೆಗೆ ಬೃಂದಾವನದ ಪ್ರಾಂತ್ಯದಲ್ಲಿ ಕುಂಭದ್ರೋಣವಾಗಿ ಮಳೆ ಸುರಿಯುವಂತೆ ಮಾಡಿದನು. ಇದರಿಂದ ಜಲಪ್ರಳಯವಾದಂತೆ ಆಗಿ ಲೋಕವೆ ನೀರಿನಲ್ಲಿ ಮುಳುಗಿ ಹೋಗುವ ಕಾಲ ಬಂದಿತು. ಆಗ ಶ್ರೀಕೃಷ್ಣನು ತನ್ನ ಬಾಲ ಲೀಲೆಯನ್ನು ತೋರಿಸಿ ಲೋಕವನ್ನು ಆನಂದಗೊಳಿಸಲೋಸುಗ ಗೋವರ್ಧನ ಪರ್ವತವನ್ನು ಮಿಾಟಿ ಮೇಲಕ್ಕೆತ್ತಿ ಕೊಡೆಯಹಾಗೆ ಹಿಡಿದುಕೊಂಡು ಆದರ ಕೆಳಭಾಗದಲ್ಲಿ ಗೋವುಗಳೂ, ಗೊಲ್ಲರೂ, ಗೋಪಾಲಬಾಲಕರೂ ವಾಸವಾಡುವಂತೆ ಏರ್ಪಡಿಸಿ ಎಲ್ಲರನ್ನೂ ಉಳಿಸಿದನು. ಆಗ ಭಯಗ್ರಸ್ತನಾದ ಇಂದ್ರನು ಕಾಮಧೇನು ಸಹಿತನಾಗಿ ಗೋವರ್ಧನಗಿರಿಗೆ ಬಂದು ಬಗೆಬಗೆಯಾದ ನಿಗಮ ವಾಕ್ಯಗಳಿಂದ ಗೋಪಾಲನನ್ನು ಹೊಗಳಿ ಕ್ಷೀರಾಬ್ಧಿ ಶಯನನಾದಕಾರಣ ಶ್ರೀಕೃಷ್ಣನಿಗೆ ಕ್ಷೀರಾಭಿಷೇಕವಂಗೈಸಿ ತನ್ನ ಸ್ಥಲಕ್ಕೆ ಹೊರಟುಹೋದನು. ಹೀಗಿರುವಲ್ಲಿ ಒಂದುದಿನ ನಂದಗೋಪನು ಇಂದ್ರನ ಮಾಯೆಯಿಂದ ಭ್ರಾಂತನಾಗಿ ಅರ್ಧರಾತ್ರಿ ಸಮಯದಲ್ಲಿ ಉಷಃಕಾಲವೆಂದು ತಿಳಿದು ಸ್ನಾನಮಾಡುವುದಕ್ಕಾಗಿ ವರುಣಲೋಕಕ್ಕೆ ಹೊರಟುಹೋಗಿ ಬರುವುದಕ್ಕೆ ಮಾರ್ಗವಿಲ್ಲದೆ ನರಳುತ್ತಿರಲು ಶ್ರೀಕೃಷ್ಣನು ತನ್ನ ಮಾಯಾಶಕ್ತಿಯನ್ನು ಪ್ರೇರಿಸಿ ತನ್ನಂತೆ ವೇಷಧಾರಿಯಾಗಿ ಮಾಡಿ ನಂದಗೋಪನನ್ನು ತನ್ನ ಮನೆಗೆ ಕರೆತರಿಸಿದನು ಆ ಆಶ್ಚರ್ಯವನ್ನು ಕೇಳಿ ನಂದಗೋಕುಲದವರೂ ಬೃಂದಾವನದವರೂ ಶ್ರೀಕೃಷ್ಣನನ್ನು ಹೊಗಳಿ ಹೊರಹೊಮ್ಮಿದ ಭಕ್ತಿಯಿಂದ ಪೂಜಿಸುತ್ತಿದ್ದರು.

## ಕೃಷ್ಣನು ಗೋಪಿಕಾಸ್ತ್ರೀಯರ ವಸ್ತ್ರಗಳನ್ನು ಅಪಹರಿಸಿದುದು.

ಪೂರ್ವಜನ್ಮದಲ್ಲಿ ಭಗವಂತನನ್ನು ಕುರಿತು ಮಹಾತಪಸ್ಸುಮಾಡಿ ಸಿದ್ಧಿಯಾಗದ ಕಾರಣ ಈ ಜನ್ಮದಲ್ಲಿ ಗೋಪಿಕಾಸ್ತ್ರೀಯರಾಗಿ ಹುಟ್ಟಿ ಶ್ರೀಕೃಷ್ಣನ ಸೇವೆಸತ್ಕಾರಗಳು ಎಂದಿಗೆ ಲಭಿಸುವವೊ ಎಂದು ಕಾದುಕೊಂಡಿದ್ದ ಗೊಲ್ಲರ ಹೆಂಗಸರು ಶ್ರೀಕೃಷ್ಣನ ರೂಪರೇಖಾಲಾವಣ್ಯಗಳಿಗೆ ಮೋಹಿತರಾಗಿ ಪರವಶರಾಗಿರುತ್ತಿರಲು ಒಂದುದಿನ ಶ್ರೀಕೃಷ್ಣನು ತಂಪಾದ ಬೆಳದಿಂಗಳು ಹೊತ್ತಿನಲ್ಲಿ ಮನೋಹರವಾಗಿ ವೇಣುಗಾನಮಾಡುತ್ತ ಸರೋವರದ ಬಳಿಯಲ್ಲಿರುವುದನ್ನು ತಿಳಿದು ಮೋಹಪರವಶರಾದ ಗೋಪಿಯರು ಜಲಕ್ರೀಡಾವ್ಯಾಜದಿಂದ ಆ ಸರೋವರದ ಒಳಗೆ ಹೋಗಿ ತಮ್ಮ ವಸ್ತ್ರಗಳನ್ನು ತೆಗೆದು ದಡದಮೇಲೆ ಇಟ್ಟು ನೀರಿಗಿಳಿದು ಸ್ವೇಚ್ಛಾವಿಹಾರಿಗಳಾಗಿ ಆಟವಾಡುತ್ತಿದ್ದರು. ಆಗ ಶ್ರೀಕೃಷ್ಣನು ಯಾರಿಗೂ ತಿಳಿಯದಂತೆ ಆ ವಸ್ತ್ರಗಳನ್ನು ಹತ್ತಿರದಲ್ಲಿದ್ದ ತೆಗೆದುಕೊಂಡು ಮರವನ್ನೇರಿ ಕುಳಿತು ಗೋಪಿಯರ ಮಾನಭಂಗವನ್ನು ಮಾಡಿ ಅವರಿಂದ ಸ್ತುತಿಸಲ್ಪಟ್ಟವನಾಗಿ ಅವರಭಕ್ತಿಗೆ ಮೆಚ್ಚಿ ಅವರೆಲ್ಲರಿಗೂ ಅಂಗಸೇವೆಯ ಸುಖವನ್ನು ಕೊಟ್ಟು ತಾನೂ ತೃಪ್ತನಾಗಿ ಗೋಪಿಯರನ್ನು ಆನಂದಪಡಿಸಿ ಗೋಪೀವಸ್ತ್ರಾಪಹಾರ ಲೀಲೆಯನ್ನು ಸಾರ್ಥಕವೆನ್ನುವಂತೆ ತೋರಿಸಿದನು. ಗೋಪಿಯರೂ ಧನ್ಯರಾದರು.



## ಉಪಲೀಲಾ ವಿನೋದಗಳು.

ಹೀಗೆ ತಮ್ಮ ಮಾನಭಂಗ ಮಾಡಿದಮೇಲೆ ತಮಗೆ ಪ್ರತ್ಯಕ್ಷನಾಗಿ ರತಿಕ್ರೀಡಾ ವಿಹಾರಾದಿಗಳಿಂದ ತಮ್ಮನ್ನು ತೃಪ್ತಿಪಡಿಸಿ ಮಾಯವಾದ ಶ್ರೀಕೃಷ್ಣನ ವಿರಹವೇದನೆಯನ್ನು ಸಹಿಸಲಾರದೆ ವನವಿಹಾರಾದಿಗಳಲ್ಲಿ ಸಂದು ಆ ಗೋಪಿಯರೆಲ್ಲರೂ ನಿಷ್ಠನಾದ ಯೋಗಿಯಂತೆ ಸದಾ ತಮ್ಮ ಹೃನ್ಮಂದಿರದಲ್ಲಿ ಶ್ರೀಕೃಷ್ಣನನ್ನು ಧ್ಯಾನಿಸುತ್ತಿದ್ದರು. ಸರ್ವಾಂತರ್ಯಾಮಿಯಾಗಿ ಸಚ್ಚಿದಾನಂದ ರೂಪನಾದ ಶ್ರೀಹರಿಯು ಆಗಾಗ್ಗೆ ಸ್ವಪ್ನಾವಸ್ಥೆಯಲ್ಲಿ ಅವರಿಗೆ ಪ್ರತ್ಯಕ್ಷನಾಗಿ ತನ್ನ ಭಕ್ತರನ್ನು ಇಷ್ಟಾರ್ಥದಾನಗಳಿಂದ ಪರಿಪೋಷಿಸುತ್ತಿದ್ದನು.

ಬಳಿಕ ಮತ್ತೊಂದು ಸಮಯದಲ್ಲಿ ಶ್ರೀಕೃಷ್ಣನು ಋಷಿಗಳ ಶಾಪವಶದಿಂದ ಸರ್ಪರೂಪದಿಂದ ಸಂಚರಿಸುತ್ತಿದ್ದ ಸುದರ್ಶನನೆಂಬ ಗಂಧರ್ವನನ್ನು ಕಂಡು ಅವನನ್ನು ಶಾಪವಿಮುಕ್ತನನ್ನಾಗಿ ಮಾಡಿ ಉದ್ಧರಿಸಿದನು. ಹಾಗೆ ಇನ್ನೊಂದು ಸಮಯದಲ್ಲಿ ಶಂಖಚೂಡನೆಂಬ ರಾಕ್ಷಸನನ್ನು ಕೊಂದು ಅವನ ಹಾವಳಿಯಿಂದ ನೊಂದು ಕುಂದಿದ್ದ ಜನಗಳನ್ನು ಸಂತೋಷಪಡಿಸಿ ಭಕ್ತವತ್ಸಲನೆಂಬ ತನ್ನ ಬಿರುದನ್ನು ಪ್ರಕಾಶಗೊಳಿಸಿದನು. ಹೀಗಾದಮೇಲೆ ಬೃಂದಾವನವನು ಹೊಕ್ಕು ತನ್ನ ಅಟ್ಟಹಾಸದಿಂದ ಅಲ್ಲಿರುವವರನ್ನು ಹಿಂಸಿಸುತ್ತಿದ್ದ ವೃಷಭಾಸುರನೆಂಬ ದೈತ್ಯನನ್ನು ಲೀಲಾಜಾಲದಿಂದ ಸಂಹರಿಸಿ ಬಲರಾಮ ಸಹಿತನಾಗಿ ಮಹಾ ಮಹಿಮೆಯನ್ನು ತೋರಿಸುತ್ತ ಋಷಿಪತ್ನಿಯರಿಂದ ಪೂಜಿತನಾಗಿ ಸಂತೋಷಪಟ್ಟು ಅವರ ಕೋರಿಕೆಗಳನ್ನು ನೆರವೇರಿಸಿಕೊಟ್ಟು ಅದ್ಭುತವಾದ ತನ್ನ ಲೀಲೆಗಳಿಂದ ಲೋಕವನ್ನು ಆಶ್ಚರ್ಯಗೊಳಿಸುತ್ತ ಪುಣ್ಯಕರವಾದ ತನ್ನ ಚರಿತ್ರೆಯಿಂದ ಸರ್ವರನ್ನೂ ಸುಖಸಂತೋಷಭಾಗಿಗಳಾಗುವಂತೆ ಮಾಡಿ ಸರ್ವಾತ್ಮಕನಾದಕಾರಣ ಸಕಲ ಚೈತನ್ಯಸ್ವರೂಪನಾಗಿ ಚರಾಚರ ಬ್ರಹ್ಮಾಂಡವನ್ನು ಆವರಿಸಿಕೊಂಡು ಜೀವಾತ್ಮಪ್ರಿಯನಾದ ಪರಮಾತ್ಮನು ಕೃಷ್ಣಾವತಾರದಲ್ಲಿ ತನ್ನ ಮಹಿಮೆಯನ್ನು ಪ್ರಕಟೀಕರಿಸುತ್ತಿದ್ದನು.

## ಮಧುರಾಪುರ ಪ್ರವೇಶ ಮತ್ತು ಕಂಸವಧೆ.

ಒಂದುದಿನ ಕಲಹಪ್ರಿಯನಾದ ನಾರದಋಷಿಯು ಭಗವಂತನ ಮಾಯಾಲೀಲೆಗೆ ಸಹಾಯವಾಗಿ ಲೋಕವ್ಯಾಪಾರವನ್ನು ನಡೆಸುವದರಲ್ಲಿ ಭಗವಂತನಿಗೆ ಸಹಾಯಮಾಡಿ ಧನ್ಯನಾಗಬೇಕೆಂದು ಯೋಚಿಸಿ ವೀಣಾಗಾನ ಮಾಡುತ್ತ ಕಂಸಾಸುರನ ಬಳಿಗೆ ಬಂದು ಅವನನ್ನು ಹೊಗಳಿ ಆಶೀರ್ವದಿಸುತ್ತ ಆತನ ಭಕ್ತಿಗೆ ಮೆಚ್ಚಿ ಎಲೈ ಕಂಸಾಸುರನೆ! ನಿನ್ನನ್ನು ಕೊಲ್ಲುವ ಧೀರನಾದ ನಾರಾಯಣನು ಶ್ರೀಕೃಷ್ಣನಾಗಿ ಹುಟ್ಟಿ ಆದಿಶೇಷನನ್ನು ಬಲರಾಮನಾಗಿ ಜನಿಸುವಂತೆ ಮಾಡಿ ಆತನೊಡನೆ ನಂದಗೋಕುಲದಲ್ಲಿ ಬೆಳೆಯುತ್ತಿದ್ದು ಈಗ ಬೃಂದಾವನದಲ್ಲಿ ವಾಸಮಾಡುತ್ತ ಪ್ರಾಪ್ತವಯಸ್ಕನಾಗಿ ಪ್ರಸಿದ್ಧಿಗೊಂಡಿರುವನು. ನನಗೆ ತಿಳಿದುದನ್ನು ನಾನು ನಿರ್ವಂಚನೆಯಾಗಿ ನಿನಗೆ ಹೇಳಿದೆ ಇನ್ನು ನಿನ್ನ ಅದೃಷ್ಟ ಎಂದು ಹೇಳಿ ಹೊರಟುಹೋದನು. ಆ ಬಳಿಕ ಕಂಸನು ತನಗೆ ಹಗೆಯಾದ ರಾಮಕೃಷ್ಣರನ್ನು ಹೇಗಾದರೂ ಮಾಡಿ ಮಧುರಾಪುರಿಗೆ ತರೆದುತಂದು ಅವರನ್ನು ಕೊಲ್ಲಿಸಬೇಕೆಂದು ಯೋಚಿಸಿ ಮೊದಲು ಅಕ್ರೂರನನ್ನು ಕಳುಹಿಸಿದನು. ಅವನಿಂದ ಏನೂ ಸಾಧ್ಯವಾಗದಿರಲು ಕಂಸನು ತನಗೆ ಆಪ್ತರಾದ ಕೇಶಿ ಎಂಬ ರಾಕ್ಷಸನನ್ನೂ ಸೋಮುಕನೆಂಬ ದೈತ್ಯನನ್ನು ಕಳುಹಿಸಲು ಶ್ರೀಕೃಷ್ಣನು ಅವರ ಇಂಗಿತವನ್ನು ತಿಳಿದವನಾಗಿ ಅವರಿಬ್ಬರನ್ನೂ ಸಂಹರಿಸಿ ಸುಖವಾಗಿದ್ದನು. ಅಷ್ಟರಲ್ಲಿ ಲೋಕಸಂಚಾರಿಯಾದ ನಾರದಮಹರ್ಷಿಯು ತನ್ನ ಕಾರ್ಯವನ್ನು ನೆರವೇರಿಸಬೇಕೆಂದು ಸಂಕಲ್ಪಮಾಡಿ ಶ್ರೀಕೃಷ್ಣನ ಬಳಿಗೆ ಬಂದು ಕಂಸಾಸುರನ ವಿಚಾರವನ್ನೆಲ್ಲ ಚೆನ್ನಾಗಿ ಹೇಳಿ ಪರಮಾತ್ಮನನ್ನು ಹೊಗಳಿ ಆತನ ಅಪ್ಪಣೆಯನ್ನು ಪಡೆದು

ಹೊರಟು ಹೋದನು. ಇಷ್ಟರಲ್ಲಿಯೆ ಮಧುರಾನಗರದಲ್ಲಿ ನಡೆಯುತ್ತಿದ್ದ ಬಿಲ್ಲು ಹಬ್ಬವು ಸಮೀಪವಾಯಿತು. ಅದನ್ನು ನೋಡಬೇಕೆಂಬ ಆಸೆಯಿಂದ ರಾಮಕೃಷ್ಣರಿಬ್ಬರೂ ನಂದಗೋಪಾದಿಗಳನ್ನು ಅವರ ಬಂಧುಮಿತ್ರರನ್ನೂ ಕರೆದುಕೊಂಡು ಉತ್ಸಾಹಯುಕ್ತರಾಗಿ ಮಧುರಾಪಟ್ಟಣಕ್ಕೆ ಬಂದು ಸೇರಿದರು.

ನಗರವನ್ನು ಪ್ರವೇಶಿಸುತ್ತಿರುವಾಗ ಮೊದಲು ರಜಕನನ್ನು ಕೊಂದು ಅವನ ಬಳಿಯಲ್ಲಿದ್ದ ರಾಜಯೋಗ್ಯವಾದ ಉಡುಪುಗಳನ್ನು ತೆಗದು ಧರಿಸಿಕೊಂಡು ಹೂವಾಡಿಗರೂಪದಿಂದಿದ್ದ ಸುಧಾಮನೆಂಬವನಿಂದ ಅಲಂಕರಿಸಲ್ಪಟ್ಟವನಾಗಿ ತ್ರಿವಕ್ರಗಳಿಂದ ಕುರೂಪಿಯಾಗಿ ಗ್ರಂಧಕರ್ತಿಯಾಗಿದ್ದ ಕುಬ್ಜೆಯೆಂಬವಳಿಗೆ ಅನುಗ್ರಹಮಾಡಿ ಅವಳ ವಿಕಾರರೂಪವನ್ನು ಹೋಗಲಾಡಿಸಿ ದಿವ್ಯ ಸುಂದರವಾದ ಸೌಂದರ್ಯವನ್ನು ಕೊಟ್ಟು ಅವಳ ಕೋರಿಕೆಯನ್ನು ನೆರವೇರಿಸಿದ ನಂತರ ದಾರಿಯಲ್ಲಿ ಸಿಕ್ಕಿದ ಕಂಸನ ಆಯುಧಶಾಲೆಗೆ ನುಗ್ಗಿ ಆಯುಧಗಳನ್ನು ಮುರಿದು ಹಾಳುಮಾಡಿ ಅಲ್ಲಿಂದ ಹೊರಟುಬರುತ್ತ ಮಲ್ಲರಂಗಶಾಲೆಯನ್ನು ಕಂಡು ಕುಪಿತನಾಗಿ ಬಾಗಿಲಲ್ಲಿ ಕಟ್ಟಿದ್ದ ಕುವಲಯಾಪೀಡ ಎಂಬ ದೊಡ್ಡ ಆನೆಯನ್ನೂ ಅದರ ಮಾವಟಿಗನನ್ನೂ ಸಂಹಾರಗೆಯ್ದು ಕಡೆಗೆ ತಮ್ಮನ್ನು ಎದುರಿಸಿ ನಿಂತ ಮಲ್ಲಯುದ್ಧ ವಿಶಾರದರಾದ ಚಾಣೂರಮಲ್ಲ ಮುಷ್ಟಿಕಾಸುರರೆಂಬ ರಾಕ್ಷಸರನ್ನು ಕೊಂದು ವೀರಾವೇಶದಿಂದ ಆರ್ಭಟಿಸುತ್ತಿರುವ ರಾಮಕೃಷ್ಣರ ರೀತಿಯನ್ನು ನೋಡುತ್ತ ಕಳ್ಳ ಮಂಚಿಗೆಯಮೇಲೆ ಹೊಂಚುಕಾಯುತ್ತಿದ್ದ ಕಂಸಾಸುರನ ಸುಳಿವನ್ನು ತಿಳಿದು ಶ್ರೀಕೃಷ್ಣನು ಚಕ್ಕನೆ ಆ ಮಂಚಿಗೆಯಮೇಲಕ್ಕೆ ಹಾರಿ ಕಂಸನನ್ನು ಜುಟ್ಟುಹಿಡಿದು ಎಳೆದು ತಂದು ಅರಮನೆಯ ಬಾಗಿಲಲ್ಲಿ ಹಾಕಿಕೊಂಡು ರಕ್ತವನ್ನು ಕಾರುವಂತೆ ಗುದ್ದಿ ಮರ್ದಿಸಿ ಕಡೆಗೆ ಕಂಸನನ್ನು ಕೊಂದು "ಕಂಸಾರಿ"ಎಂಬಬಿರುದನ್ನು ಸಂಪಾದಿಸಿ ತನ್ನ ಕೋಪವನ್ನು ತಾನೇ ಶಾಂತಿಮಾಡಿಕೊಂಡು ಸುತ್ತಮುತ್ತಲೂ ನೋಡುತ್ತಿದ್ದ ಪುರಜನ ಪರಿಜನರನ್ನು ಸಂತೈಸಿ ತನ್ನ ಅವತಾರವೃಕ್ಷವು ಫಲಿಸಿತೆಂದು ಆನಂದಭರಿತನಾಗಿರಲು ನಂದಗೋಪಾದಿಗಳು ಮಕ್ಕಳ ಪರಾಕ್ರಮಕ್ಕೆ ಹಿಗ್ಗಿ ಸಂತೋಷಪಡುತ್ತಿದ್ದರು. ಲೋಕಕಂಟಕನಾಗಿದ್ದ ದುಷ್ಟಕಂಸನ ಬಾಧೆಯು ತಪ್ಪಿತೆಂದು ಜನಗಳು ಕೃಷ್ಣನನ್ನು ಹೊಗಳುತ್ತಿರಲು ದೇವತೆಗಳು ಶುಭಸೂಚನಾರೂಪವಾದ ಪುಷ್ಪವೃಷ್ಟಿಯನ್ನು ಕರೆದು ದೇವದುಂದುಭಿಗಳನ್ನು ಬಾರಿಸಿ ಪರಮಾತ್ಮನಾದ ಶ್ರೀಹರಿಯನ್ನು ನಿಗಮವಾಕ್ಯಗಳಿಂದ ಸ್ತುತಿಸುತ್ತಿದ್ದರು.

## ಉಗ್ರಸೇನನ ಪಟ್ಟಾಭಿಷೇಕ.

ಈ ರೀತಿಯಲ್ಲಿ ಕಂಸನನ್ನು ಕೊಂದ ಬಳಿಕ ರಾಮಕೃಷ್ಣರಿಬ್ಬರೂ ವಸುದೇವ ದೇವಕಿಯರನ್ನು ಸೆರೆಮನೆಯಿಂದ ಕರೆತರಿಸಿ ಅರಮನೆಯನ್ನು ಸೇರಿಸಿ ಆಬಳಿಕ ವೃದ್ಧನಾಗಿ ಸತ್ಯವಂತನಾಗಿ ನ್ಯಾಯತತ್ಪರನಾಗಿದ್ದರೂ, ದುರುಳನಾದ ಕಂಸನಿಂದ ಸೆರೆಯಲ್ಲಿಡಲ್ಪಟ್ಟು ಕೊರಗುತ್ತಿದ್ದ ಉಗ್ರಸೇನರಾಯನೆಂಬ ಯಾದವರಾಜನನ್ನು ಸೆರೆಯಿಂದ ಬಿಡಿಸಿ ಕರೆದುತಂದು ಸಭಾಮಂದಿರದಲ್ಲಿರುವ ಸಿಂಹಾಸನದ ಮೇಲೆ ಕುಳ್ಳಿರಿಸಿ ಶಾಸ್ತ್ರೋಕ್ತವಾಗಿ ಆತನಿಗೆ ಪಟ್ಟವನ್ನು ಕಟ್ಟಿ ರಾಜ್ಯಪರಿಪಾಲನೆ ಮಾಡುವಂತೆ ಆತನಿಗೆ ಆಜ್ಞಾಪಿಸಿ ವಸುದೇವ ದೇವಕಿಯರನ್ನು ಅವನ ಬಳಿಯಲ್ಲಿಯೆ ಬಿಟ್ಟು ತಮ್ಮ ಅಮೋಘವಾದ ಉತ್ತರಲೀಲೆಗಳನ್ನು ಪ್ರತ್ಯಕ್ಷಗೊಳಿಸುವುದಕ್ಕಾಗಿ ರಾಮಕೃಷ್ಣರಿಬ್ಬರೂ ಇಂದ್ರನನ್ನು ಧ್ಯಾನಿಸಿ ಅವನ ಮೂಲಕ ಸುಧರ್ಮಸಭೆಯನ್ನು ಉಗ್ರಸೇನರಾಯನಿಗೆ ಸ್ಥಾಪಿಸಿಕೊಟ್ಟು ಲೋಕವಿಖ್ಯಾತರಾಗಿ ಪ್ರಕಾಶಿಸುತ್ತಿದ್ದರು.

## ಉಪನಯನ ಕಾಶೀಯಾತ್ರೆ ಮತ್ತು ವಿದ್ಯಾಭ್ಯಾಸ.

ಹೀಗೆ ಕೆಲವುಕಾಲ ಕಳೆದ ಬಳಿಕ ರಾಮಕೃಷ್ಣರಿಬ್ಬರಿಗೂ ಯಾದವವಂಶದಲ್ಲಿ ಹುಟ್ಟಿದವರಿಗೆ ಮಾಡುವ ಕ್ಷತ್ರಿಯೋಚಿತವಾದ ಉಪನಯನ ಸಂಸ್ಕಾರವನ್ನು ನಂದಗೋಪಾದಿಗಳು ಬಹು ಸಂಭ್ರಮದಿಂದ ಮಾಡಿಸಿದರು. ಆ ಬಳಿಕ ರಾಮಕೃಷ್ಣರು ನಿರ್ಭಯದಿಂದ ಮಹಾಯಾತ್ರೆಯನ್ನು ಮಾಡಬೇಕೆಂದು ಯೋಚಿಸಿ ಪ್ರಯಾಣೋನ್ಮುಖರಾಗಿ ಕಾಶೀಕ್ಷೇತ್ರವನ್ನು ಸೇರಿ ಅಲ್ಲಿ ಆಗಿನ ಕಾಲದಲ್ಲಿ ಸುಪ್ರಸಿದ್ಧ ಪಂಡಿತನಾಗಿ ಮಹಾಮಹೋಪಾಧ್ಯಾಯ ಪದವಿಯಲ್ಲಿದ್ದ "ಸಾಂದೀಪನಾಚಾರ್ಯ" ರೆಂಬ ಗುರುವಿನ ಮನೆಯನ್ನುಸೇರಿ ಗುರುಕುಲವಾಸಮಾಡುತ್ತ ಆತನಿಂದ ಸಕಲ ಶಾಸ್ತ್ರ ವೇದವೇದಾಂತಗಳನ್ನು ಸಂಪೂರ್ಣವಾಗಿ ತಿಳಿದು ಗುರುವಿನಿಂದ ಮಾನ್ಯರಾಗಿ ತಮ್ಮ ವಿದ್ಯಾಭ್ಯಾಸವು ನೆರವೇರಿದಮೇಲೆ ತಾವು ಕೊಡಬೇಕಾದ ಗುರುದಕ್ಷಿಣೆಗಾಗಿ ಸತ್ತು ಹೋಗಿದ್ದ ಗುರುಪುತ್ರನನ್ನು ಬದುಕಿಸಿಕೊಟ್ಟು ಗುರು ಸೇವೆಯನ್ನು ಮಾಡಿ ಧನ್ಯರಾದರು ಈ ಸಂಗತಿಯು ಒಬ್ಬರಿಂದೊಬ್ಬರಿಗೆ ತಿಳಿದು ಲೋಕವು ರಾಮಕೃಷ್ಣರ ಮಹಿಮೆಯನ್ನು ಹೊಗಳುತ್ತಿದ್ದಿತು. ಬಹುಕಾಲದಿಂದ ವಿರಹವೇದನೆಯನ್ನು ಸಹಿಸಲಾರದೆ ತನ್ನನ್ನೇ ಧ್ಯಾನಿಸುತ್ತಾ ಕಂದಿಕುಂದಿ ಕೊರಗುತ್ತಿರುವ ಗೋಪಿಕಾಸ್ತ್ರೀಯರನ್ನು ಸಮಾಧಾನ ಮಾಡಲೋಸುಗ ತನ್ನ ಭಕ್ತನಾದ ಉದ್ಧವನೆಂಬವನನ್ನು ನಂದಗೋಕುಲಕ್ಕೆ ಕಳುಹಿಸಿ ಅವನ ಮೂಲಕ ತಾನು ಶೀಘ್ರದಲ್ಲಿ ಬಂದು ನಿಮ್ಮನ್ನು ಸಂತೈಸುತ್ತೇನೆಂಬ ಅಭಯವನ್ನು ಕೊಟ್ಟು ಭಕ್ತರಕ್ಷಣತತ್ಪರನೆಂಬ ಬಿರುದನ್ನು ಸಾರ್ಥಕಗೊಳಿಸುತ್ತಿದ್ದನು.

## ಜರಾಸಂಧನೊಡನೆ ಯುದ್ಧ, ದ್ವಾರಕೆಯ ನಿರ್ಮಾಣ.

ಕಂಸನು ಸತ್ತಮೇಲೆ ಅವನ ಹೆಂಡತಿಯರಾದ ಅಸ್ತಿ ಪ್ರಾಸ್ತಿ ಎಂಬುವರಿಬ್ಬರೂ ವೈಧವ್ಯವನ್ನು ಸಹಿಸಲಾರದೆ ತಮ್ಮ ತಂದೆಯಾದ ಜರಾಸಂಧನ ಬಳಿಗೆ ಹೋಗಿ ರಾಮಕೃಷ್ಣರಿಂದ ತಮಗೆ ಉಂಟಾದ ವೈಧವ್ಯದ ಸಂಗತಿಯನ್ನು ವಿಸ್ತರಿಸಿ ಹೇಳಿ ಗೋಳಾಡಿಕೊಂಡರು. ಆಗಜರಾ





ಸಂಧನಿಗೆ ರಾಮಕೃಷ್ಣರಮೇಲೆ ಕೋಪ ಬಂದು ಅವರನ್ನು ಯುದ್ಧದಲ್ಲಿ ಸಂಹರಿಸುವೆನೆಂದು ತನ್ನ ಮಕ್ಕಳಿಗೆ ಹೇಳಿ ಸಮಾಧಾನಪಡಿಸಿ ತಾನು ತನ್ನ ಸೈನ್ಯವನ್ನು ಸಿದ್ಧಪಡಿಸಿಕೊಂಡು ಮಗಧ ರಾಜ್ಯದಿಂದ ಹೊರಟು ಮಧುರಾಪುರಿಯನ್ನು ಮುತ್ತಿ ರಾಮಕೃಷ್ಣರ ಮೇಲೆ ಯುದ್ಧಕ್ಕೆ ನಿಂತನು. ಇಪ್ಪತ್ತೊಂದು ಅಕ್ಷೋಹಿಣಿ ಸೇನೆಯಿಂದೊಡಗೂಡಿದ ಜರಾಸಂಧನನ್ನು ರಾಮಕೃಷ್ಣರಿಬ್ಬರೂ ಎದುರಿಸಿ ಯುದ್ಧ ಮಾಡುತ್ತ ತಮಗೆ ಬೇಕಾದ ಆಯುಧ ಸಾಮಗ್ರಿಗಳನ್ನು ವೈಕುಂಠದಿಂದ ತರಿಸಿಕೊಂಡು ಸಾಹಸತತ್ಪರರಾಗಿ ಸೋತುಹೋದವರಂತೆ ನಟಿಸುತ್ತಾ ಸ್ವಲ್ಪಸ್ವಲ್ಪವಾಗಿ ಜರಾಸಂಧನ ಸೇನೆಯನ್ನು ಕೊಲ್ಲುತ್ತ ಬಂದು ಬಳಿಕ ತಮ್ಮ ವೈರಿಯು ತಮಗಿಂತಲೂ ಬಲಶಾಲಿಯಾದುದರಿಂದ ಅವನ ಕೈಗೆ ಸಿಕ್ಕಬಾರದೆಂದು ತಿಳಿದು ಸಮುದ್ರಮಧ್ಯದಲ್ಲಿ ಜಲದುರ್ಗಮಯವಾದ

ದ್ವಾರಕೆಯನ್ನು ನಿರ್ಮಿಸಿ ಅಲ್ಲಿಗೆ ಯಾದವರರಸನಾದ ಉಗ್ರಸೇನನನ್ನು ಅವನ ಪರಿವಾರದವರನ್ನು ಕಳುಹಿಸಿ ಮಧುರಾಪುರಿಯಲ್ಲಿ ತಾವಿಬ್ಬರೇ ಇದ್ದುಕೊಂಡು ರಾಮಕೃಷ್ಣರಿಬ್ಬರೆ ಬಹು ಧೈರ್ಯದಿಂದ ಯುದ್ಧಮಾಡುತ್ತ ದ್ವಾರಕೆಯನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡಿದ್ದರು. ಆಗಾಗ್ಗೆ ತಮ್ಮ ಮೇಲೆ ಕೈಮಾಡಲು ಬರುತ್ತಿದ್ದ ಜರಾಸಂಧನ ಸೈನ್ಯವನ್ನು ನಿರ್ಮೂಲಮಾಡಿ, ಕಡೆಗೆ ಒಂದುದಿನ ಜರಾಸಂಧನಿಗೆ ತನ್ನ ಮಹಿಮೆಯನ್ನು ತೋರಿಸಬೇಕೆಂದು ಶಂಖಚಕ್ರಗದಾಹಸ್ತನಾಗಿ ಪದ್ಮಮಾಲಾಲಂಕೃತನಾಗಿ ದರ್ಶನವನ್ನು ಕೊಟ್ಟು ತಮ್ಮನ್ನು ಪ್ರತಿಭಟಿಸಿದ ಜರಾಸಂಧನನ್ನು ಬಲರಾಮನು ಸಂಹರಿಸುತ್ತಿದ್ದರೂ ಮುಂದೆ ಭೀಮಸೇನನಿಂದ ಇವನ ಸಂಹಾರವಾಗಬೇಕು, ಈಗ ನೀನು ಕೈಮಾಡಬೇಡ ಸುಮ್ಮನಿರು ಎಂದು ತಡೆದು ನಿಲ್ಲಿಸಿದನು. ಹೀಗೆ ಹದಿನೇಳುಸಲ ಜರಾಸಂಧನಿಗೆ ಸೋತಂತೆ ನಟಿಸುತ್ತಿದ್ದು ಹದಿನೆಂಟನೆಯಸಾರಿ ಹೆದರಿ ಹಿಮ್ಮೆಟ್ಟಿ ಪರ್ವತವನ್ನು ಸೇರಿಕೊಂಡು ಗುಹೆಗೆ ಹೊತ್ತಿಸಿದ ಬೆಂಕಿಯನ್ನು ನಿರ್ಮೂಲಮಾಡಿಕೊಂಡು ಹೊರಕ್ಕೆ ಬಂದು ದ್ವಾರಕಾಪಟ್ಟಣವನ್ನು ಸೇರಿ ಜರಾಸಂಧನ ಸ್ನೇಹಿತನಾದ ಕಾಲಯವನನೆಂಬ ತುರುಷ್ಕನು ತಮ್ಮನ್ನು ಎದುರಿಸುವುದಕ್ಕೆ ಬಂದಾಗ ಅವನನ್ನು ಕೊಲ್ಲುವುದಕ್ಕಾಗಿ ಬೆಟ್ಟದ ಗುಹೆಯಲ್ಲಿ ಅಡಗಿಕೊಂಡಿದ್ದ ಮುಚುಕುಂದರಾಯನೆಂಬ ರಾಜರ್ಷಿಯನ್ನು ಕೆರಳಿಸಿ ಆತನ ದೃಷ್ಟಿಜ್ವಾಲೆಯಿಂದ ತುರುಷ್ಕನು ಸಾಯುವಂತೆ ಮಾಡಿ, ಮಧುರಾನಗರವಾಸಿಗಳಾದ ಯಾದವರು ಬಹಳ ಶ್ರೇಯಸ್ಕರಾಗಿ ಬಾಳುವಂತೆ ಏರ್ಪಡಿಸಿ ಮಾನುಷ್ಯಲೀಲಾವಿನೋದನಾದ ನಾರಾಯಣನು ಸ್ವೇಚ್ಛಾವಿಹಾರದಿಂದ ಮಾನುಷಲೀಲೆಯನ್ನು ತಳೆದುದಕ್ಕೆ ಇದು ಸಾರ್ಥಕವೆನ್ನುವಂತೆ ಬಹು ಸಂಭ್ರಮದಿಂದ ದ್ವಾರಕೆಯಲ್ಲಿ ರಾಜ್ಯಭಾರಮಾಡುತ್ತಿದ್ದರು.

## ಶ್ರೀಕೃಷ್ಣ ರುಕ್ಮಿಣಿಯರ ಕಲ್ಯಾಣ.

ವಿದರ್ಭರಾಜ್ಯಕ್ಕೆ ದೊರೆಯಾದ ಭೀಷ್ಮರಾಜನು ಪ್ರಾರ್ಥಿಸುತ್ತಿದ್ದಂತೆ ಜಗಜ್ಜನನಿಯಾದ ಆದಿಲಕ್ಷ್ಮಿಯು ಆತನ ಹೆಂಡತಿಯ ಗರ್ಭದಲ್ಲಿ ಅವತರಿಸಿ ರುಕ್ಮಿಣಿ ಎಂಬ ಹೆಸರಿನಿಂದ ಪ್ರಖ್ಯಾತಳಾಗಿ ಬೆಳೆಯುತ್ತಿದ್ದಳು. ಇವಳಲ್ಲದೆ ಭೀಷ್ಮಕನೃಪಾಲನಿಗೆ ರುಕ್ಮನೆಂಬ ಒಬ್ಬ ಗಂಡು ಮಗನೂ ಇದ್ದನು. ಸ್ವಭಾವ ಸಹಜವಾಗಿ ತನ್ನ ಅವತಾರಕ್ಕೆ ತಕ್ಕಂತೆ ಶ್ರೀಮನ್ನಾರಾಯಣಾಂಶ ಸಂಭೂತನಾದ ಶ್ರೀಕೃಷ್ಣನೆ ತನಗೆ ಗಂಡನಾಗಬೇಕೆಂದು ರುಕ್ಮಿಣಿಯು ಹಾರೈಸುತ್ತಿದ್ದಳು. ಅದಕ್ಕೆ ಸರಿಯಾಗಿ ದೇವರ್ಷಿಯಾದ ನಾರದನು ಆಗಾಗ್ಗೆ ರುಕ್ಮಿಣೀದೇವಿಯಬಳಿಗೆ



ಬಂದು ಶ್ರೀಕೃಷ್ಣನ ಗುಣಶೀಲಗಳನ್ನು ವರ್ಣಿಸಿ ಹೇಳುತ್ತಿದ್ದನು. ಇದರಿಂದ ರುಕ್ಮಿಣಿಗೆ ಶ್ರೀಕೃಷ್ಣನಲ್ಲೆ ಮನಸ್ಸು ನಾಟಿಹೋಯಿತು. ಹೀಗಿರುವಲ್ಲಿ ಪ್ರಾಪ್ತವಯಸ್ಕಳಾದ ತನ್ನ ತಂಗಿಯನ್ನು ತನಗೆ ಸ್ನೇಹಿತನಾದ ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಬೇಕೆಂದು ರುಕ್ಮನು ನಿಶ್ಚಯಿಸಿದನು. ಈ ವಿಚಾರವನ್ನು ತಿಳಿದು ರುಕ್ಮಿಣಿಯು ಬ್ರಾಹ್ಮಣರ ಮೂಲಕ ತನ್ನ ಮನೋಭೀಷ್ಟವನ್ನು ಶ್ರೀಕೃಷ್ಣನಿಗೆ ಹೇಳಿ ಕಳುಹಿಸಿ ಭಕ್ತವತ್ಸಲನಾದ ನೀನು ಬಂದು ನನ್ನನ್ನು ಉದ್ಧಾರಮಾಡಬೇಕೆಂದು ಬೇಡಿಕೊಂಡಳು. ಅದನ್ನು ಕೇಳಿ ಶ್ರೀಕೃಷ್ಣನು ಮರುಕಗೊಂಡು ರುಕ್ಮಿಣಿ

ಯನ್ನು ಮದುವೆಯಾಗಬೇಕೆಂದು ಸಮಯವನ್ನು ಹೊಂಚುಕಾಯುತ್ತಿದ್ದನು. ಹೀಗಿರುವಲ್ಲಿ ಕುಂಡಿನೀ ನಗರದಲ್ಲಿ ರುಕ್ಮಿಣೀ ಕಲ್ಯಾಣಕ್ಕಾಗಿ ಸರ್ವರು ಬಂದು ಸೇರುತ್ತಿದ್ದರು. ಶಿಶುಪಾಲನು ಸಂಭ್ರಮಯುಕ್ತನಾಗಿ ತನ್ನ ಸ್ನೇಹಿತನಾದ ಜರಾಸಂಧನೊಡನೆ ಭೀಷ್ಮಕನ ಪಟ್ಟಣಕ್ಕೆ ಬಂದು ಸೇರಿದನು. ಕುಲಕ್ರಮಾಗತವಾಗಿ ಬಂದ ಪದ್ಧತಿಯಂತೆ ತನ್ನ ವಿವಾಹದ ಅಂಗವಾಗಿ ರುಕ್ಮಿಣಿಯು ಗೌರಿಪೂಜೆಯನ್ನು ಮಾಡುವುದಕ್ಕೆ ಪಟ್ಟಣದ ಬಹಿರುದ್ಯಾನಕ್ಕೆ ಹೋಗಿ ಗೌರಿಪೂಜೆಯನ್ನು ಮುಗಿಸಿಕೊಂಡು ಹಿಂದಿರುಗಿ ಪಟ್ಟಣಕ್ಕೆ ಬರುತ್ತಿರುವಾಗ ಹೊಂಚುಕಾದಿದ್ದ ಕೃಷ್ಣನು ಅವಳನ್ನು ಎತ್ತಿಕೊಂಡು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು ಹೊರಟುಹೋದನು. ಬಲರಾಮಾದಿಗಳು ತಮಗೆ ಎದುರಾಗಿ ಬಂದವರನ್ನು ಸೋಲಿಸಿ ಹೊಡೆದೋಡಿಸಿದರು. ರುಕ್ಮನು ಪರಾಕ್ರಮದಿಂದ ಕಾದುವದಕ್ಕೆ ನಿಲ್ಲಲು ಶ್ರೀಕೃಷ್ಣನು ಅವನ ಗಡ್ಡಮೀಸೆಗಳನ್ನು ಬಿಲ್ಲಿನ ಗರಿಗಳಿಂದ ಬೋಳಿಸಿ ಅವಮಾನ ಮಾಡಿದಕಾರಣ ಅವನು ನಾಚಿಕೆಪಟ್ಟು ತನ್ನ ಪಟ್ಟಣಕ್ಕೆಹೋಗದೆ ವನದಲ್ಲಿಯೆ ನಿಂತುಬಿಟ್ಟನು. ಬಳಿಕ ಶ್ರೀಕೃಷ್ಣನು ನಿರಾತಂಕವಾಗಿ ದ್ವಾರಕೆಯನ್ನು ಸೇರಿ ಅಲ್ಲಿ ಶಾಸ್ತ್ರೋಕ್ತಪ್ರಕಾರದಿಂದ ರುಕ್ಮಿಣಿಯನ್ನು ಮದುವೆಯಾಗಿ ಪಾಣಿಗ್ರಹಣ ಮಾಡಿದನು. ಆದಕಾರಣ ರುಕ್ಮಿಣೀದೇವಿಯೆ ಶ್ರೀಕೃಷ್ಣನಿಗೆ ಪಟ್ಟಮಹಿಷಿಯಾಗಿ ಹಿರಿಯ ಹೆಂಡತಿಯಾದಳು.

## ಮನ್ಮಥನು ಮರಳಿ ಹುಟ್ಟಿದುದು.

ಪೂರ್ವದಲ್ಲಿ ದೇವಿಯನ್ನು ಕುರಿತು ತಪಸ್ಸುಮಾಡುತ್ತಿದ್ದ ದಕ್ಷಿಣಾಮೂರ್ತಿಯಾದ ಪರಮೇಶ್ವರನನ್ನು ಕೆರಳಿಸಿ ಅವನ ಫಾಲನೇತ್ರಜ್ವಾಲೆಯಿಂದ ಉರಿದುಹೋಗಿದ್ದ ವಿಷ್ಣುಪುತ್ರನಾದ ಮನ್ಮಥನು ಪುನಃ ಈಶ್ವರಪ್ರಸಾದದಿಂದ ರುಕ್ಮಿಣೀದೇವಿಯ ಹೊಟ್ಟೆಯಲ್ಲಿ ಹುಟ್ಟಿದನು. ಇದನ್ನು ತಿಳಿದು ಶಂಬರನೆಂಬ ರಾಕ್ಷಸನು ಮಾಯಾವಿಯಾಗಿ ಬಂದು ಆ ಮನ್ಮಥನು ಶಿಶುರೂಪದಿಂದಿರುವಾಗಲೆ ಅಪಹರಿಸಿಕೊಂಡು ಹೋಗುತ್ತಿದ್ದನು. ಆಗ ಸರ್ವಚೈತನ್ಯಸ್ವರೂಪನಾದ ವಿಷ್ಣುವಿನ ಮಾಯೆಯಿಂದ ಆ ಶಿಶುವು ಸಮುದ್ರಕ್ಕೆ ಬೀಳಲು ಒಂದು ಮೀನು ಆ ಮಗುವನ್ನು ನುಂಗಿತು. ಮನ್ಮಥನು ಉರಿದುಹೋದಮೇಲೆ ಅವನ ಹೆಂಡತಿಯಾದ ರತೀದೇವಿಯು ಮಾಯಾವತಿ ಎಂಬ ಹೆಸರಿನಿಂದ ಶಂಬರಾಸುರನ ಮನೆಯಲ್ಲಿ ಪರಿಚಾರಕಳಾಗಿದ್ದಳು. ಬೆಸ್ತನೊಬ್ಬನು ಮಗುವನ್ನು ನುಂಗಿದ ಮೀನನ್ನು ಹಿಡಿದುತಂದು ಶಂಬರಾಸುರನಿಗೊಪ್ಪಿಸಿದನು. ಅದನ್ನು ಅವನು ಪಾಕಶಾಲೆಗೆ ಕಳುಹಿಸಿದಾಗ ಮಾಯಾವತಿಯು ಆ ಮೀನನ್ನು ಕೊಯ್ದು ನೋಡುವಲ್ಲಿ ಒಳಗಡೆ ದಿವ್ಯಸುಂದರವಾದ ಮಗುವು ಕಂಡುಬಂದಿತು. ಅದನ್ನು ಕಂಡು ಆಶ್ಚರ್ಯಭರಿತಳಾಗಿ ಮಾಯಾವತಿಯು ಚಿಂತಿಸುತ್ತಿರುವಾಗ ನಾರದರು ಅಲ್ಲಿಗೆ ಬಂದು ಅಮ್ಮಾ! ಇದು ಸಾಧಾರಣ ಮಗುವಲ್ಲ ರುಕ್ಮಿಣೀದೇವಿಯ ಹೊಟ್ಟೆಯಲ್ಲಿದ್ದ ನಿನ್ನ ಗಂಡನಾದ ಮನ್ಮಥನೇ ಇವನು, ಇವನನ್ನು ಕಾಪಾಡಿಕೊ ! ಎಂದು ಹೇಳಿ ಹೊರಟುಹೋದನು. ಅಂದಿನಿಂದ ಮಾಯಾವತಿಯು ಸಂತೋಷಯುಕ್ತಳಾಗಿ ಯಾರಿಗೂ ತಿಳಿಯದಂತೆ ಆ ಮಗುವನ್ನು ಸಾಕುತ್ತಿದ್ದು ಪ್ರಾಯಸಮರ್ಥನಾದಮೇಲೆ ಅವನಿಗೆ ಮಾಯಾವಿದ್ಯೆಗಳನ್ನು ಕಲಿಸಿಕೊಟ್ಟು ಸಕಲ ತತ್ವಗಳನ್ನೂ ತಿಳಿಸಿದಳು. ಬಳಿಕ ಮನ್ಮಥನು ಯುದ್ಧಮುಖದಲ್ಲಿ ಶಂಬರನನ್ನು ಕೊಂದು ತನ್ನ ಹೆಂಡತಿಯಾದ ಮಾಯಾವತಿಯನ್ನು ಕರೆದುಕೊಂಡು ದ್ವಾರಕೆಗೆ ಬಂದು ರುಕ್ಮಿಣಿಯ ಸನ್ನಿಧಾನವನ್ನು ಸೇರಿದನು. ಇವನೆ ಶ್ರೀಕೃಷ್ಣನ ಜ್ಯೇಷ್ಠಪುತ್ರನಾದ ಪ್ರದ್ಯುಮ್ನನು. ಇವನಿಗೆ ರುಕ್ಮಿಣಿಯ ತಮ್ಮನಾದ ರುಕ್ಮಿಯ ಮಗಳನ್ನು ಕೊಟ್ಟು ಮದುವೆಮಾಡಿದರು. ಬಳಿಕ ಅವಳ ಗರ್ಭದಲ್ಲಿ ಅನಿರುದ್ಧನು ಜನಿಸಿದನು. ಈ ರೀತಿಯಲ್ಲಿ ಭೂಲೋಕದ ಉದ್ಧಾರಕ್ಕಾಗಿ ಧರ್ಮಸಂಸ್ಥಾಪನೆಯ ನೆವದಿಂದ ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕು ಜನರು ವ್ಯೂಹಾಧರರಾಗಿ ಅವತರಿಸಿದರು. ರುಕ್ಮಿಣಿ

ಕಲ್ಯಾಣಕ್ಕಿಂತ ಮೊದಲೆ ಬಲರಾಮನಿಗೆ ಬ್ರಹ್ಮನಿಂದ ಪ್ರೇರಿತನಾದ ರೇವತರಾಯನು ತನ್ನ ಮಗಳಾದ ರೇವತಿಯನ್ನು ಕೊಟ್ಟು ಮದುವೆಮಾಡಿದ್ದನು. ರೇವತಿಯು ಬಹಳ ಉದ್ದವಾಗಿದ್ದ ಕಾರಣ ಬಲರಾಮನು ತನ್ನ ಹಲಾಯುಧದಿಂದ ಅವಳನ್ನು ಬಗ್ಗಿಸಿಕೊಂಡು ಸಂಸಾರ ಮಾಡುತ್ತಿದ್ದನು. ಹೀಗೆ ಯಾದವವಂಶದ ಮೂಲಪುರುಷರಲ್ಲಿ ಪ್ರಮುಖರಾದ ಈ ದ್ವಾರಕಾವಾಸಿಗಳ ಸಂಸಾರ ಸಂತಾನವು ವಿಜೃಂಭಣೆಯಿಂದ ಸರ್ವತೋಮುಖವಾದ ಶಾಂತಿ ಸಂತೋಷಗಳಿಂದ ನಡೆದುಬರುತ್ತಿತ್ತು. ಹೀಗಿರುವಲ್ಲಿ ಒಂದುದಿನ ಮತ್ತೊಂದು ಆಶ್ಚರ್ಯವು ಸಂಘಟನೆಯಾಯಿತು.

## ಸತ್ರಾಜಿತನ ಕಥೆ ಸ್ಯಮಂತಕರತ್ನ ಮಹಿಮೆ.

ಹೀಗಿರುವಲ್ಲಿ ಯಾದವರ ಬಂಧುವಾದ ಸತ್ರಾಜಿತನೆಂಬುವನು ತನ್ನ ದಾರಿದ್ರ್ಯವನ್ನು ಹೋಗಲಾಡಿಸಿಕೊಳ್ಳಬೇಕೆಂದು ಗ್ರಹರಾಜನಾದ ಸೂರ್ಯಭಗವಂತನನ್ನು ಪ್ರಾರ್ಥಿಸಿ ಬಹುಕಾಲ ತಪಸ್ಸುಮಾಡಿ ದೇಹವನ್ನು ದಂಡಿಸುತ್ತಿದ್ದನು. ನಿಷ್ಕಪಟವಾದ ಆತನ ಭಕ್ತಿಗೆ ಮೆಚ್ಚಿ ಸೂರ್ಯನು ಪ್ರತ್ಯಕ್ಷನಾಗಿ ಪ್ರತಿದಿನವೂ ಎಂಟುಭಾರದಷ್ಟು ಚಿನ್ನವನ್ನು ಕೊಡುವಂಥ ಮಹಿಮೆಯುಳ್ಳ "ಸ್ಯಮಂತಕ ರತ್ನ" ಮಣಿಯನ್ನು ಅವನಿಗೆ ಕೊಟ್ಟು ಇದನ್ನು ಪೂಜಿಸುತ್ತಿದ್ದರೆ ನಿನ್ನ ಇಷ್ಟಾರ್ಥವು ನೆರವೇರುವುದೆಂದು ಹೇಳಿ ಅಂತರ್ಧಾನನಾದನು. ಬಳಿಕ ಸಂತೋಷಯುಕ್ತನಾದ ಸತ್ರಾಜಿತನು ಆ ಸ್ಯಮಂತಕಮಣಿಯನ್ನು ಕೊರಳಿಗೆ ಹಾಕಿಕೊಂಡು ಕೋಟಿಸೂರ್ಯ ಪ್ರಕಾಶನಾಗಿ ದ್ವಾರಕೆಗೆ ಬಂದನು ಅವನ್ನು ಕಂಡು ಕೃಷ್ಣನು ಅಯ್ಯಾ! ನೀನು ಬಡವ ನಿನಗೆ ರತ್ನವನ್ನು ಉಳಿಸಿಕೊಳ್ಳುವ ಶಕ್ತಿ ಸಾಲದು ಆದಕಾರಣ ಈ ರತ್ನವನ್ನು ನಮ್ಮ ದೊರೆಯಾದ ಉಗ್ರಸೇನರಾಯನಿಗೆ ಕೊಡು ಎಂದು ಹೇಳಲು ಸತ್ರಾಜಿತನು ಅದಕ್ಕೊಪ್ಪದಿದ್ದಕಾರಣ ಶ್ರೀ ಕೃಷ್ಣನು ಸುಮ್ಮನಾದನು.

## ಜಾಂಬವಂತನು ಸಿಂಹವನ್ನು ಕೊಂದು ರತ್ನವನ್ನು ತಂದುದು.



ಹೀಗಾದ ಕೆಲವು ದಿನಗಳಮೇಲೆ ಸತ್ರಾಜಿತನ ತಮ್ಮನಾದ ಪ್ರಸೇನನೆಂಬವನು ಆ ಸ್ಯಮಂತಕರತ್ನವನ್ನು ತನ್ನ ಕೊರಳಿನಲ್ಲಿ ಹಾಕಿಕೊಂಡು ಕುದುರೆಯನ್ನೇರಿ ಬೇಟೆಗಾಗಿ ಅರಣ್ಯಕ್ಕೆಹೋದನು. ಅಲ್ಲಿ ಒಂದು ಸಿಂಹವು ಪ್ರಸೇನನನ್ನು ಕೊಂದು ಆ ರತ್ನವನ್ನು ಅಪಹರಿಸಿತು. ಬಳಿಕ ಶ್ರೀ[illegible] ಬ್ರ[illegible]ನಾಗಿ ಅವತರಿಸಿ ರಾಮಭಕ್ತನಾಗಿದ್ದ ಜಾಂಬವಂತನೆಂಬ ಭಲ್ಲೂಕರಾಯನು ಆ ಸಿಂಹವನ್ನು ಕೊಂದು ರತ್ನವನ್ನು ತೆಗೆದುಕೊಂಡು ಹೋಗಿ ತನ್ನ ಮಗಳಾದ ಜಾಂಬವತಿಗೆ ಕೊಟ್ಟನು.

## ಸ್ಯಮಂತಕರತ್ನ ಲಾಭ, ಜಾಂಬವತಿಯ ವಿವಾಹ.

ಇತ್ತ ಸತ್ರಾಜಿತನು ಸ್ಯಮಂತಕರತ್ನದ ಮೇಲಣ ಆಸೆಯಿಂದ ಶ್ರೀಕೃಷ್ಣನು ಪ್ರಸೇನನನ್ನು ಕೊಂದು ಮಣಿಯನ್ನು ಅಪಹರಿಸಿದನೆಂಬ ದೂರನ್ನು ಹೊರಿಸಿದನು. ಜನರು ನಿಜವೆಂದು ತಿಳಿದು ಬಗೆಬಗೆಯಾಗಿ ತಮ್ಮ ಮನಸ್ಸಿಗೆ ಬಂದಹಾಗೆ ಆಡಿಕೊಳ್ಳುತ್ತಿದ್ದರು. ನಿಷ್ಕಾರಣವಾಗಿ ತನಗೆ ಬಂದ ಅಪವಾದವನ್ನು ಪರಿಹರಿಸಿಕೊಳ್ಳಬೇಕೆಂದು ಶ್ರೀಕೃಷ್ಣನು ಪ್ರಯತ್ನಮಾಡಿ ಅರ

ಣ್ಯಕ್ಕೆ ಹೋಗಿ ಸತ್ತುಬಿದ್ದಿರುವ ಕುದುರೆಯನ್ನೂ ಪ್ರಸೇನನನ್ನೂ ಕಂಡು ಆ ಸ್ಥಳವನ್ನು ಪರೀಕ್ಷಿಸಿ ಅಲ್ಲಿ ಸಿಂಹದ ಹೆಜ್ಜೆಯಿದ್ದು ಸ್ವಲ್ಪದೂರದಲ್ಲೇ ಆ ಸಿಂಹವೂ ಸತ್ತುಬಿದ್ದಿರಲು ಆಶ್ಚರ್ಯಯುಕ್ತನಾಗಿ ಅಲ್ಲಿಂದ ಜಾಡೆಯನ್ನು ಹಿಡಿದು ಹುಡುಕುತ್ತ ಕರಡಿಯ ಹೆಜ್ಜೆಯನ್ನೂ ಕಂಡವನಾಗಿ ಅದೇ ಮಾರ್ಗದಲ್ಲಿ ಹೊರಟು ಎದುರಾಗಿ ಸಿಕ್ಕಿದ ಗುಹೆಯನ್ನು ಪ್ರವೇಶಿಸಿ ಜಾಂಬವತಿಯು ರತ್ನವನ್ನು ಹಿಡಿದುಕೊಂಡಿರುವುದನ್ನು ಕಂಡು ಧೈರ್ಯವನ್ನು ತಂದುಕೊಂಡು ನನ್ನ ಅಪವಾದ ಇಂದಿಗೆ



ಕಳೆಯಿತೆಂದು ಸಂತೋಷಭರಿತನಾಗಿ ಜಾಂಬವತಿಯ ತಂದೆಯಾದ ಜಾಂಬವಂತನೊಡನೆ ಇಪತ್ತೆಂಟುದಿನ ಮುಷ್ಟಿಯುದ್ಧವನ್ನು ಮಾಡಿ ಅವನನ್ನು ಸೋಲಿಸಿ ಅವನಿಗೆ ರಾಮಾವತಾರ ಸ್ವರೂಪವನ್ನು ತೋರಿಸಿ ಪ್ರಸನ್ನನಾಗಿ ಆತನಿಂದ ಸನ್ಮಾನಿಸಲ್ಪಟ್ಟು ರತ್ನವನ್ನು ತೆಗೆದುಕೊಂಡು ಹೊರಡುವಾಗ ಭಕ್ತಿಯುಕ್ತನಾದ ಜಾಂಬವಂತನು ತನ್ನ ಮಗಳಾದ ಜಾಂಬವತಿಯನ್ನು ಶ್ರೀಕೃಷ್ಣನಿಗೆ ಕೊಟ್ಟು ಮದುವೆಮಾಡಲು ರತ್ನಸಹಿತನಾಗಿ ಶ್ರೀಕೃಷ್ಣನು ಜಾಂಬವತಿಯೊಡನೆ ದ್ವಾರಕೆಗೆ ಬಂದನು.

## ಸತ್ಯಭಾಮೆಯ ಮದುವೆ.

ದ್ವಾರಕಿಗೆ ಬಂದಮೇಲೆ ಶ್ರೀಕೃಷ್ಣನು ಸತ್ರಾಜಿತುವನ್ನು ಕರೆಯಿಸಿ ಅರಣ್ಯದಲ್ಲಿ ನಡೆದ ಸಂಗತಿಯನ್ನು ಜಾಂಬವತಿಯಮೂಲಕ ಸತ್ರಾಜಿತುವಿಗೆ ಹೇಳಿಸಲಾಗಿ ಆತನು ಅನ್ಯಾಯವಾಗಿ ಕೃಷ್ಣನನ್ನು ಅಪವಾದಕ್ಕೆ ಗುರಿಮಾಡಿದೆನಲ್ಲಾ ಎಂದು ವ್ಯಸನಪಟ್ಟು ತಾನು ಮಾಡಿದ ಅಪರಾಧಕ್ಕಾಗಿ ತನ್ನ ಮಗಳಾದ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ಕೊಟ್ಟು ಮದುವೆಮಾಡಿ ಸ್ಯಮಂತಕ ರತ್ನವನ್ನು ಅವನಿಗೆ ಸಮರ್ಪಿಸಿದನು. ಆಗ ಶ್ರೀಹರಿಯು ಸತ್ಯಭಾಮೆಯನ್ನು ಪತ್ನಿಯಾಗಿ ವರಿಸಿ ಸ್ಯಮಂತಕರತ್ನವನ್ನು ಅವಳ ಮನೆಯಲ್ಲಿಯೆ ಇರಿಸಿ, ಪ್ರತಿದಿನವೂ ಆ ರತ್ನದಿಂದ ಬರುತ್ತಿದ್ದ ಎಂಟು ಭಾರದ ಚಿನ್ನವನ್ನು ಮಾತ್ರ ಸತ್ರಾಜಿತನ ಮನೆಗೆ ಕಳುಹಿಸುತ್ತ ತಾನು ನಿರ್ಲಿಪ್ತನಾಗಿ ಜಾಂಬವತಿ ಸತ್ಯಭಾಮೆಯರೊಡನೆ ಸುಖಿಸುತ್ತ ಆನಂದಮಯನಾಗಿದ್ದನು.

## ಪಾರಿಜಾತ ಹರಣ ಕೃಷ್ಣನನ್ನು ಸತ್ಯಭಾಮೆ ದಾನಮಾಡಿದುದು.

ಒಂದಾನೊಂದು ಕಾಲದಲ್ಲಿ ತ್ರಿಲೋಕ ಸಂಚಾರಿಯಾದ ನಾರದನು ಸ್ವರ್ಗಲೋಕಕ್ಕೆ ಹೋಗಿ ಇಂದ್ರನಿಂದ ಸನ್ಮಾನಿತನಾಗಿ ಕಲ್ಪವೃಕ್ಷದ ಸಮೀಪದಲ್ಲಿ ಸುಗಂಧ ಪರಿಮಳಯುಕ್ತವಾಗಿ ಅರಳಿದ ಪಾರಿಜಾತ ಪುಷ್ಪವನ್ನು ತೆಗೆದುಕೊಂಡು ನಾರಾಯಣ ಧ್ಯಾನಮಾಡುತ್ತ ದ್ವಾರಕೆಗೆ ಬಂದು ಶ್ರೀ ಕೃಷ್ಣನನ್ನು ಕಂಡು ಆತನ ಸತ್ಕಾರವನ್ನು ಕೈಗೊಂಡವನಾಗಿ ಆನಂದಪರವಶನಾಗಿ ತಾನು ತಂದಿದ್ದ ಪಾರಿಜಾತ ಪುಷ್ಪವನ್ನು ಶ್ರೀಕೃಷ್ಣನಿಗೆ ಕೊಟ್ಟನು. ನಾರದನ ಭಕ್ತಿ

ಯನ್ನು ಪರೀಕ್ಷಿಸಬೇಕೆಂದು ಶ್ರೀಹರಿಯು ಅದನ್ನು ತನ್ನ ಪಟ್ಟಮಹಿಷಿಯಾದ ರುಕ್ಮಿಣಿಗೆ ಕೊಡಲು ಹತ್ತಿರದಲ್ಲಿದ್ದ ಸತ್ಯಭಾಮೆಯು ಅದನ್ನು ಕಂಡು ಸಹಿಸಲಾರದೆ ಶ್ರೀಕೃಷ್ಣನನ್ನು ಪೀಡಿಸುತ್ತಿರುವಾಗ ಶ್ರೀ ಕೃಷ್ಣಮೂರ್ತಿಯು ಕುಳಿತಿದ್ದ ಕಡೆಯಲ್ಲಿಯೇ ಪಾರಿಜಾತ ವೃಕ್ಷವನ್ನು ತರಿಸಿ ಸತಭಾಮೆಗೆ ಕೊಟ್ಟು ಅವಳು ತೃಪ್ತಳಾದ ಬಳಿಕ ಆ ವೃಕ್ಷವನ್ನು ಸತ್ಯಭಾಮೆಯ ಶೃಂಗಾರವನದಲ್ಲಿ ನೆಡಿಸಿ ಸಲಹುತ್ತಿದ್ದನು. ಬಳಿಕ ಲೋಕಕಂಟಕರಾಗಿದ್ದ ಮುರಾಸುರ ನರಕಾಸುರರನ್ನು ತನ್ನ ಮಾಯಾಲೀಲೆಯಿಂದ ಕೊಂದು ಅವರ ಅಂತಃಪುರದಲ್ಲಿ ಸೆರೆಯಾಗಿದ್ದ ಹದಿನಾರುಸಾವಿರ ರಾಜಪತ್ನಿಯರ ಸೆರೆಯನ್ನು ಬಿಡಿಸಿ ಕರೆತಂದು ತನ್ನ ಪೋಷಣೆಯಲ್ಲಿಟ್ಟುಕೊಂಡು ಸ್ವಾಮಿಯಾದ ಶ್ರೀಕೃಷ್ಣನು ಸತ್ಯಭಾಮೆಯ ಗರ್ವವನ್ನು ಭಂಗಪಡಿಸಬೇಕೆಂಬ ನೆವದಿಂದ ನಾರದನನ್ನು ಅವಳ ಬಳಿಗೆ ಕಳುಹಿಸಿ ಶ್ರೀಕೃಷ್ಣನನ್ನು ದಾನವಾಗಿ ಕೊಡು ಎಂದು ಕೇಳಿಸಿದನು. ದೂರಾಲೋಚನೆಯಿಲ್ಲದೆ ದುರಹಂಕಾರ ಪೂರ್ಣಳಾದ ಸತ್ಯಭಾಮೆಯು ಕೂಡಲೆ ನಾರದರಿಗೆ ಶ್ರೀಕೃಷ್ಣನನ್ನು ದಾನಮಾಡಿಬಿಟ್ಟಳು. ಬಳಿಕ ಶ್ರೀಕೃಷ್ಣನು ನಾರದರ ವಶವಾದಮೇಲೆ ಬಹುಕಾಲವಾದರೂ ಶ್ರೀಕೃಷ್ಣನ ಸಂದರ್ಶನವಿಲ್ಲದೆ ವಿರಹವೇದನೆಯನ್ನು ಅನುಭವಿಸುತ್ತ ತನ್ನ ಓರೆಗಿತ್ತಿಯಾದ ರುಕ್ಮಿಣಿ ಮೊದಲಾದವರು ಗಂಡನನ್ನು ದಾನಮಾಡಿದ ಭಂಡತನಕ್ಕೆ ಗುರಿಯಾದಳು ಎಂದು ಬಗೆಬಗೆಯಾಗಿ ನಿಂದಿಸುತ್ತಿರುವುದನ್ನು ಸಹಿಸಲಾರದೆ ಸತ್ಯಭಾಮೆಯು ತನ್ನ ತಪ್ಪಿಗೆ ತಾನೆ ಮರುಗಿ ನಾರದನನ್ನು ಸ್ತುತಿಸಿ ಶ್ರೀಕೃಷ್ಣನನ್ನು ಹಿಂದಿರುಗಿ ನನಗೆ ಕೊಡಬೇಕೆಂದು ಬೇಡಿಕೊಂಡಳು. ಆಗ ನಾರದನು ತಾಯಿ! ನಿನ್ನ ಕೋರಿಕೆಯಂತೆಯೆ ಆಗಲಿ, ಆದರೆ ಶ್ರೀಕೃಷ್ಣನ ತೂಕಕ್ಕೆ ಸರಿಯಾದಷ್ಟು ಚಿನ್ನವನ್ನು ನನಗೆ ತೂಕಮಾಡಿಕೊಟ್ಟರೆ ನಾನು ನಿನ್ನ ಗಂಡನನ್ನು ನಿನಗೆ ಕೊಡುತ್ತೇನೆಂದು ಹೇಳಿದನು. ಕೂಡಲೆ ತಕ್ಕಡಿಯನ್ನು ತರಿಸಿ ಒಂದುಕಡೆ ಕೃಷ್ಣನನ್ನು ಕುಳ್ಳಿರಿಸಿ ಇನ್ನೊಂದುಕಡೆ ತಾನು ಸಹಿತವಾಗಿ ತನ್ನ ಆಭರಣಗಳನ್ನೆಲ್ಲ ಹಾಕಿ ತೂಗಿದರೂ ಅದೆಲ್ಲ ಕೃಷ್ಣನ ತೂಕಕ್ಕೆ ಸರಿಬಾರದೆಹೋಯಿತು. ಆಗ ಪಟ್ಟಮಹಿಷಿಯಾದ ಆದಿಲಕ್ಷ್ಮಿಯ ಸ್ವರೂಪದಿಂದ ಅವತರಿಸಿದ ರುಕ್ಮಿಣಿದೇವಿಯು ಅಲ್ಲಿಗೆ ಬಂದು ಒಂದು ತುಲಸೀದಳವನ್ನು ಅದರಮೇಲಿರಿಸಿ ತೂಕಕ್ಕೆ ಸರಿಹೋಗುವಂತೆ ಮಾಡಿ ಶ್ರೀಕೃಷ್ಣನನ್ನು ಬಿಡಿಸಿಕೊಂಡಳು. ಆಗ ಸತ್ಯಭಾಮೆಗೆ ಬಹಳ ನಾಚಿಕೆಯುಂಟಾಗಿ ಅವಳ ಗರ್ವವು ಭಂಗವಾಯಿತು.

## ಅಷ್ಟಮಹಿಷಿಯರ ಲಾಭ ಮತ್ತು ಶಿಷ್ಟಲೀಲೆಗಳು.





ಮೊದಲೆ ಹೇಳಿದಂತೆ ಶ್ರೀಕೃಷ್ಣನು ರುಕ್ಮಿಣಿಯನ್ನು ಮದುವೆಯಾದ ಬಳಿಕ ಸತ್ರಾಜಿತನ ಮಗಳಾದ ಸತ್ಯಭಾಮೆಯೂ, ಜಾಂಬವಂತನ ಮಗಳಾದ ಜಾಂಬವತಿಯೂ ದೈವಿವಿವಾಹರೂಪದಿಂದ ಶ್ರೀಕೃಷ್ಣನನ್ನು ವರಿಸಿ ಮದುವೆಯಾದರು ಆ ಬಳಿಕ ಶ್ರೀಹರಿಯು ಸ್ವಯಂವರ ಕಾಲ

ಲದಲ್ಲಿ ತನ್ನ ಗುಣಶೀಲ ಸಾಮರ್ಥ್ಯದಿಂದ ಗೆದ್ದು ಸುಕೇಶಿ, ಸುಮಿತ್ರೆ, ಲಕ್ಷಣೆ, ಮಿತ್ರವಿಂದೆ, ಪದ್ಮಿನಿ ಎಂಬ ಐದುಮಂದಿಯರನ್ನು ಮದುವೆಯಾಗಿ ಅಷ್ಟಮಹಿಷಿಯರೊಡನೆ ಪಟ್ಟಭದ್ರನಾಗಿ ದ್ವಾರಕೆಯಲ್ಲಿರುತ್ತಿದ್ದನು. ಬಳಿಕ ದ್ವಾರಕೆಯಲ್ಲಿದ್ದ ಅಕ್ರೂರನೆಂಬುವನು ಸ್ಯಮಂತಕರತ್ನವನ್ನು ಅಪಹರಿಸಲೋಸುಗ ಸತ್ರಾಜಿತನನ್ನು ಕೊಲ್ಲಿಸಿ ಆ ರತ್ನವನ್ನು ಉದ್ಧವನ ಬಳಿಯಲ್ಲಿಟ್ಟು ತಾನು ಕಾಶೀಕ್ಷೇತ್ರಕ್ಕೆಹೋಗಿ ಯಜ್ಞಯಾಗಾದಿಗಳನ್ನು ಮಾಡುತ್ತ ದಾನಶೀಲನಾಗಿ ಕೇಳಿದವರಿಗೆ ಬೇಕಾದದ್ದನ್ನು ಕೊಡುತ್ತ ದಾನಶೌಂಡನೆಂಬ ಖ್ಯಾತಿಯನ್ನು ಪಡೆದನು. ಅಕ್ರೂರನಿಲ್ಲದಕಾರಣ ದ್ವಾರಕೆಯಲ್ಲಿ ಅನಾವೃಷ್ಟಿಯುಂಟಾಗಿ ಜನಗಳು ತಲ್ಲಣಿಸುತ್ತಿದ್ದರು. ಹೀಗಿರುವಾಗ ರತ್ನದ ಆಸೆಗಾಗಿ ಕೃಷ್ಣನೇ ಸತ್ರಾಜಿತನನ್ನು ಕೊಲ್ಲಿಸಿರಬಹುದೆಂಬ ಅನುಮಾನವು ಬಲರಾಮನಿಗೆ ಉಂಟಾಯಿತು. ಅದನ್ನು ಪರಿಹರಿಸುವುದಕ್ಕಾಗಿ ಶ್ರೀಕೃಷ್ಣನು ಕಾಶಿಯಲ್ಲಿದ್ದ ಅಕ್ರೂರನನ್ನು ದ್ವಾರಕೆಗೆ ಕರೆಯಿಸಿ ಉದ್ಧವನ ಬಳಿಯಲ್ಲಿಟ್ಟಿದ್ದರೆ ರತ್ನವನ್ನು ತರಿಸಿ ಕೊಡಿಸಿ ತನಗೆ ಬಂದಿದ್ದ ಅಪವಾದವನ್ನು ನೀಗಿಕೊಂಡನು. ಅಲ್ಲದೆ ಶುಕ್ಲಪಕ್ಷದ ಚತುರ್ಥೀ ಚಂದ್ರನನ್ನು ತಾನು ನೋಡಿದ್ದಕಾರಣ ಹೀಗೆ ತನಗೆ ನಿಷ್ಕಾರಣವಾಗಿ ಅಪವಾದ ಉಂಟಾಯಿತೆಂದು ತಿಳಿದು ಶ್ರೀಕೃಷ್ಣನು ಸಿದ್ಧಿವಿನಾಯಕ ವ್ರತವನ್ನು ಮಾಡಿ ಅದನ್ನು ಪರಿಹರಿಸಿಕೊಂಡನು ಅನಿರುದ್ಧನಿಗೆ ರುಕ್ಮರಾಯನ ಪೌತ್ರಿಗಳನ್ನು ಕೊಟ್ಟು ಮದುವೆಯಾಗುತ್ತಿದ್ದಾಗ ಬಲರಾಮನು ಪಗಡೆಯಾಟವನ್ನಾಡುತ್ತ ಮಾತು ಹೆಚ್ಚಿ ತನ್ನೊಡನೆ ಆಟವಾಡುತ್ತಿದ್ದ ರುಕ್ಮನನ್ನು ದಾಳದಿಂದ ಹೊಡೆದು ಕೊಂದನು. ಇವನ್ನು ಕಂಡು ಕೃಷ್ಣರುಕ್ಮಿಣಿಯರಿಗೆ ಅಸಮಾಧಾನವಾಗಲು ಬಲರಾಮನು ದ್ವಾರಕೆಗೆ ಬರದೆ ಮಿಥಿಲಾಪುರವನ್ನು ಹೊಕ್ಕು ಜನಕನ ಆಸ್ಥಾನದಲ್ಲಿರುತ್ತಿದ್ದನು. ಆ ಕಾಲದಲ್ಲಿ ಭೀಮನೂ, ದುರ್ಯೋಧನನೂ ಗದಾಯುದ್ಧವನ್ನು ಬಲರಾಮನಿಂದ ಕಲಿತುಕೊಂಡರು. ಅನಂತರ ಬಲರಾಮನು ನಂದಗೋಕುಲಕ್ಕೆ ಬಂದು ಗೊಲ್ಲತಿಯರೊಡನೆ ಲೀಲೆಯಿಂದಿದ್ದು ಕಾರಣಾಂತರದಿಂದ ತನ್ನನ್ನು ಎದುರಿಸಿದ ದ್ವಿವಿಧನೆಂಬ ವಾನರನನ್ನು ಸಂಹರಿಸಿ ನೈಮಿಶಾರಣ್ಯವನ್ನು ಹೊಕ್ಕು ತನ್ನನ್ನು ಕಂಡರೂ ಗೌರವಿಸದೆ ಗರ್ವದಿಂದಿದ್ದ ಸೂತಪುರಾಣಿಕನನ್ನು ಸಂಹರಿಸಿ ಆ ಪಾಪವನ್ನು ಪರಿಹರಿಸಲೋಸುಗ ತೀರ್ಥಯಾತ್ರೆಗಳನ್ನು ಮಾಡುತ್ತ ತನ್ನ ಆಜ್ಞಾನುಸಾರ ನಡೆಯಲಿಲ್ಲವೆಂಬ ವ್ಯಾಜ್ಯದಿಂದ ಕಾಳಿಂದಿಯನ್ನು ಭೇದಿಸಿ ಅನಂತ ಯಜ್ಞ ಯಾಗಾದಿಗಳನ್ನು ಮಾಡುತ್ತ ಕಾಲಹರಣಮಾಡುತ್ತಿದ್ದನು.

## ಶ್ರೀಕೃಷ್ಣನು ಪಾಂಡವ ಪಕ್ಷಪಾತಿಯಾದುದು.

ಭರತಖಂಡದ ಮುಖ್ಯಪಟ್ಟಣಗಳಲ್ಲಿ ಪ್ರಸಿದ್ಧವಾದ ಹಸ್ತಿನಾಪುರದಲ್ಲಿ ಚಂದ್ರವಂಶದ ದೊರೆಯಾದ ಪಾಂಡುರಾಯನು ತನ್ನ ಹೆಂಡತಿಯರಾದ ಕುಂತೀದೇವಿ ಮಾದ್ರೀದೇವಿಯರೊಡನೆ ಆಳುತ್ತಿದ್ದನಷ್ಟೆ. ಆತನ ಹಿರಿಯಹೆಂಡತಿಯಾದ ಕುಂತಿಯಗರ್ಭದಲ್ಲಿ ಧರ್ಮರಾಯನ ಅಂಶದಿಂದ ಯುಧಿಷ್ಠಿರನೂ, ವಾಯ್ವಂಶದಿಂದ ಭೀಮನೂ, ಇಂದ್ರಾಂಶದಿಂದ ಅರ್ಜುನನೂ ಹುಟ್ಟಲಾಗಿ ಎರಡನೆಯವಳಾದ ಮಾದ್ರೀದೇವಿಯ ಗರ್ಭದಲ್ಲಿ ಅಶ್ವಿನೀದೇವತೆಗಳ ವರಪ್ರಸಾದದಿಂದ ನಕುಲ ಸಹದೇವರೂ ಜನಿಸಿದರು, ಆದಕಾರಣ ಇವರೈವರಿಗೂ ಪಾಂಡವರೆಂದು ಹೆಸರಾಯಿತು. ಇತ್ತ ಪಾಂಡುರಾಯನ ತಮ್ಮನಾದ ಧೃತರಾಷ್ಟ್ರನ ಹೆಂಡತಿಯಾದ ಗಾಂಧಾರಿಯ ಬಸರಿನಲ್ಲಿ ಕಲ್ಯಂಶಸಂಭೂತರಾದ ದುರ್ಯೋಧನ, ದುಶ್ಶಾಸನ, ದುಶ್ಶತ, ದುರ್ಮದ, ದುರ್ವಿನೀತ ಮೊದಲಾದ ನೂರುಮಂದಿ ಮಕ್ಕಳು ದೂರ್ವಾಸರ ವರದಿಂದ ಹುಟ್ಟಿದವರಾಗಿ ಧರ್ಮಾತ್ಮರಾದ ಪಾಂಡವರಿಗೆ ಇಲ್ಲಸಲ್ಲದ ತೊಂದರೆಗಳನ್ನು ಕೊಡುತ್ತ ಅವರನ್ನು ಹಿಂಸಿಸುತ್ತಿದ್ದ ಕಾರಣ ಶ್ರೀಕೃಷ್ಣನು ತನ್ನ ಸೋದರತ್ತೆಯ ಮಕ್ಕಳಾದ ಪಾಂಡವರ ಪಕ್ಷವನ್ನು ವಹಿಸಿ ಅವರ ಕಷ್ಟಸುಖವನ್ನು ವಿಚಾರಿಸುವುದಕ್ಕಾಗಿ ಇಂದ್ರಪ್ರಸ್ಥದಲ್ಲಿ ಪಾಂಡವರ ಬಳಿಗೆ ಹೋಗಿ ಹಿಂತಿರುಗಿ ಬರುವಾಗ

ಅರ್ಜುನನೊಡನೆ ಹೊರಟುಬರುತ್ತ ಸೂರ್ಯನ ಮಗಳಾದ ಕಾಳಿಂದೀದೇವಿಯನ್ನು ಮದುವೆಯಾಗಿ ಅಗ್ನಿಯಿಂದ ಕೊಡಲ್ಪಟ್ಟ ದಿವ್ಯಾಸ್ತ್ರಗಳನ್ನು ಪಡೆದು ಅರ್ಜುನನ ಮೂಲಕ ಇಂದ್ರನ ಖಾಂಡವವನವನ್ನು ದಹಿಸಿ ಇಂದ್ರನನ್ನು ಸೋಲಿಸಿ ಬಳಿಕ ಸುಖದಿಂದ ದ್ವಾರಕೆಗೆ ಬಂದು ಸೇರಿದನು.

## ಶ್ರೀಕೃಷ್ಣನ ಸಂತಾನ ಪರಂಪರೆಗಳು.

ಮೊದಲೆ ಹೇಳಿದಂತೆ ಶ್ರೀಕೃಷ್ಣನು ರುಕ್ಮಿಣಿ, ಸತ್ಯಭಾಮೆ, ಜಾಂಬವತಿ, ಸುಕೇಶಿ, ಸುಮಿತ್ರೆ ಲಕ್ಷಣೆ, ಮಿತ್ರವಿಂದೆ, ಪದ್ಮಿನಿ ಎಂಬ ಅಷ್ಟಮಹಿಷಿಯರನ್ನು ವಿವಾಹವಾಗಿ ಸಂಸಾರಮಾಡುತ್ತಿರಲು ಅವರಲ್ಲಿ ಪ್ರತಿಯೊಬ್ಬಳಿಗೂ ಹತ್ತು ಜನ ಪುತ್ರರೂ, ಒಬ್ಬ ಮಗಳೂ ಹುಟ್ಟಿದರು ಹೀಗೆ ಪಟ್ಟಮಹಿಷಿಯರಲ್ಲಿ ಎಂಭತ್ತು ಜನ ಗಂಡುಮಕ್ಕಳೂ ಎಂಟುಜನ ಹೆಣ್ಣುಮಕ್ಕಳೂ ಜನಿಸಲಾಗಿ ಅವರ ಜೊತೆಗೆ ಇವರ ಪುತ್ರರು ಪೌತ್ರರು ದೌಹಿತ್ರರು ಮೊದಲಾಗಿ ಸಂತಾನವು ಅಧಿಕವಾಗಿ ಬೆಳೆಯುತ್ತಿದ್ದಿತು. ಹೀಗಿರುವಲ್ಲಿ ತಾನು ಪ್ರೀತಿಯಿಂದ ಸಲಹುತ್ತಿದ್ದ ಷೋಡಶ ಸಹಸ್ರ ಸ್ತ್ರೀಯರಿಗೂ ಪುತ್ರಪೌತ್ರಾದಿ ಸಂತಾನವುಂಟಾಗಿ ಗಣನೆಗೆ ಅವಕಾಶವಿಲ್ಲದಂತೆ ಯಾದವ ವಂಶವು ಅಪರಿಮಿತವಾಗಿ ಬೆಳೆಯಿತು. ಹುಟ್ಟಿದ ಮಕ್ಕಳಿಗೆ ಪಾಠಹೇಳಿಕೊಡುವ ಉಪಾಧ್ಯಾಯರ ಸಂಖ್ಯೆಗೆ ಮಿತಿಯೆ ಇಲ್ಲವಾಯಿತು. ಸೌಭರಿಮುನಿಯ ಸಂತಾನದಂತೆ ಯಾದವ ವಂಶವು ದಿನದಿನಕ್ಕೆ ಅಭಿವೃದ್ಧಿಗೆ ಬರುತ್ತಿದ್ದಿತು. ಈ ಯಾದವಸೇನೆಗೆ ಮುಖ್ಯಾಧಿಕಾರಿಯಾದ ವೀರಗೋಪಾಲನ ಸೈನ್ಯ ಕೋಟಾನುಕೋಟಿಯಾಗಿ ಸರ್ವತೋಮುಖವಾದ ಜಯವನ್ನು ಪಡೆದಿತು. ಬಳಿಕ ಶ್ರೀಕೃಷ್ಣನು "ಪಂಚಜನ" ನೆಂಬ ರಾಕ್ಷಸನನ್ನು ಸಂಹಾರಮಾಡಿ ಅವನ ಬಳಿಯಲ್ಲಿದ್ದ ಪಾಂಚಜನ್ಯನೆಂಬ ಶಂಖವನ್ನು ತಾನು ಧರಿಸಿ ಪ್ರಸಿದ್ಧನಾದನು. ಬಲರಾಮನು ನೀಲಾಂಬರವನ್ನು ಉಟ್ಟು ಹಲಮುಸಲಗಳನ್ನು ಆಯುಧವಾಗಿ ಧರಿಸಿದನು. ಪೀತಾಂಬರಧಾರಿಯಾದ ಶ್ರೀಹರಿಯು ತನ್ನ ಶಕ್ತಿಗೆ ತಕ್ಕಂತೆ ಶಂಖ, ಚಕ್ರ, ಗದೆ, ಶಾರ್ಙ್ಗ, ನಂದಕಗಳೆಂಬ ಪಂಚಾಯುಧಗಳನ್ನು ಧರಿಸಿ ಗರುಡಧ್ವಜನಾಗಿ ಗರುಡವಾಹನನೆಂಬ ಪ್ರಖ್ಯಾತಿಯನ್ನು ಪಡೆದುಕೊಂಡನು.

## ದೂರ್ವಾಸವಾಕ್ಯ ಅವತಾರ ಸಮಾಪ್ತಿಗೆ ಕಾರಣ.

ಬಳಿಕ ದೇವಕೀದೇವಿಯು ತನ್ನ ಗರ್ಭದಲ್ಲಿ ಹುಟ್ಟಿ ಕಂಸನಿಂದ ಕೊಲ್ಲಲ್ಪಟ್ಟ ಆರುಮಕ್ಕಳನ್ನೂ ನೆನೆದುಕೊಂಡು ಆ ಮಕ್ಕಳನ್ನು ನೋಡಬೇಕೆಂದು ಚಿಂತಿಸುತ್ತಿರಲು, ಶ್ರೀಕೃಷ್ಣನು ತನ್ನ ಮಾಯಾಶಕ್ತಿಯನ್ನು ಕಳುಹಿಸಿ ಸ್ವರ್ಗಲೋಕದಲ್ಲಿದ್ದ ಆ ಮಕ್ಕಳನ್ನು ತಂದು ತೋರಿಸಿ ದೇವಕೀದೇವಿಯ ಇಷ್ಟಾರ್ಥವನ್ನು ಪೂರೈಸಿದನು. ಮತ್ತೊಂದು ಸಮಯದಲ್ಲಿ ಅರ್ಜುನನು ಮರಣಕ್ಕೆ ಗುರಿಯಾಗ ಬ್ರಾಹ್ಮಣಕುಮಾರನನ್ನು ಬದುಕಿಸಲಾರದೆ ತನ್ನ ಪ್ರತಿಜ್ಞೆಯಂತೆ ಅಗ್ನಿಪ್ರವೇಶ ಮಾಡಲು ಸಿದ್ಧನಾದಾಗ ಶ್ರೀಕೃಷ್ಣನು ಆ ಬ್ರಾಹ್ಮಣಕುಮಾರನನ್ನು ಬದುಕಿಸಿ ಅರ್ಜುನನ ಪ್ರಾಣವನ್ನು ಉಳಿಸಿದನು. ಕಾರಣಾಂತರದಿಂದ ಕಲಹಕ್ಕೆ ಮೂಲವಾಗಿ ಗಯನೆಂಬ ಗಂಧರ್ವನನ್ನು ಸಂಹಾರಮಾಡುವೆನೆಂದು ಶ್ರೀಕೃಷ್ಣನು ಪ್ರತಿಜ್ಞೆಮಾಡಿದನು. ಅದನ್ನು ತಿಳಿದು ಗಯನು ತನ್ನ ಪ್ರಾಣರಕ್ಷಣಾರ್ಥವಾಗಿ ಅರ್ಜುನನನ್ನು ಮರೆಹೊಕ್ಕು ತನಗೆ ಪ್ರಾಣದಾನಮಾಡಿ ಕಾಪಾಡಬೇಕೆಂದು ಬೇಡಿಕೊಂಡನು. ಆಗ ಅರ್ಜುನನು ಗಯನನ್ನು ಮರೆಯಾಕಿಕೊಂಡು ಕೃಷ್ಣನಮೇಲೆ ಯುದ್ಧಕ್ಕೆ ನಿಂತರೂ ಅರ್ಜುನನಿಗೆ ತಿಳಿಯದಂತೆ ಗಯನನ್ನು ಸಂಹರಿಸಿ ಆ ಬಳಿಕ ಅರ್ಜುನನ ಪ್ರಾರ್ಥನೆಯಂತೆ ಅವನ ಪ್ರಾಣವನ್ನುಳಿಸಿ ಉಭಯರ ಪ್ರತಿಜ್ಞೆಗಳಿಗೂ ಭಂಗ ಬಾರದಂತೆ ಕಾಪಾಡಿದನು. ಮತ್ತೊಂದು ಸಮಯದಲ್ಲಿ ದೂರ್ವಾಸಮಹರ್ಷಿಯು ಬಂದು ಶ್ರೀಕೃಷ್ಣನಿಂದ ಸತ್ಕೃತನಾಗಿ ಕೆಲವುಕಾಲ ಸರಸಾಲಾಪದಲ್ಲಿದ್ದು ತನ್ನ ಭಕ್ತಿಭಾವದಿಂದ ಶ್ರೀ

ಕೃಷ್ಣನಿಗೆ ಕ್ಷೀರಾಭ್ಯಂಗನವನ್ನು ಮಾಡಿಸಿದನು. ಆಗ ಆ ಕ್ಷೀರವು ಶ್ರೀಕೃಷ್ಣನ ಅಂಗಾಲಿಗೆ ಸೋಕದೆ ಹೋಗಲು ಅದನ್ನು ಕಂಡು ದೂರ್ವಾಸ ಮಹಾಮುನಿಯು ಶ್ರೀಕೃಷ್ಣನನ್ನು ಕುರಿತು ನಿನಗೆ ನಾನು ಕ್ಷೀರಾಭಿಷೇಕಮಾಡಿದಾಗ ಯಾವಸ್ಥಳಕ್ಕೆ ಕ್ಷೀರವು ಸೋಕಲಿಲ್ಲವೋ ಆ ಸ್ಥಳದಲ್ಲಿ ಪೆಟ್ಟುಬಿದ್ದು ನಿನ್ನ ಈ ಕೃಷ್ಣಾವತಾರವು ಪೂರೈಸುವುದೆಂದು ಹೇಳಿ ಹೊರಟುಹೋದನು.

## ಶ್ರೀಕಷ್ಣನಿಗೆ ಷೋಡಶ ಸಹಸ್ರ ಸ್ತ್ರೀ ಭೋಗವಾದುದು.

ಬಳಿಕ ಶ್ರೀಕೃಷ್ಣನು ವೇಷಧಾರಿಯಾಗಿ ಯಾದವರನ್ನು ಹಗೆಗಟ್ಟಿಕೊಂಡು ಹಿಂಸಿಸುತ್ತ ಸ್ತ್ರೀಯರನ್ನು ಅವಮಾನ ಮಾಡುತ್ತಿದ್ದ ಪೌಂಡ್ರಕ ವಾಸುದೇವನೆಂಬವನನ್ನೂ ಕೃಷ್ಣನು ತನ್ನ ಬಾಹುಬಲದಿಂದ ಸಂಹರಿಸಿ ಯಾದವರನ್ನು ಕಾಪಾಡಿ ಸ್ತ್ರೀಯರಿಗೆ ಸುಖವನ್ನುಂಟುಮಾಡಿದನು. ಆ ಬಳಿಕ ತನ್ನ ಮೇಲೆ ಇಲ್ಲಸಲ್ಲದ ಕಾರಣವನ್ನು ಹೂಡಿ ಸೌರವಿಮಾನವನ್ನೇರಿ ಯುದ್ಧಕ್ಕೆ ಬಂದ ಸಾಲ್ವನೆಂಬ ರಾಕ್ಷಸನನ್ನು ಲೀಲಾಜಾಲದಿಂದ ಕೊಂದು ಕೀರ್ತಿವಂತನಾದನು. ಬಳಿಕ ತನ್ನಲ್ಲಿ ಹಗೆ ಸಾಧಿಸುತ್ತ ಹೇಗಾದರೂ ಇವನನ್ನು ಕೊಲ್ಲಬೇಕೆಂದು ಯೋಚಿಸುತ್ತಿದ್ದ ಹಂಸಡಿಬಿಕರೆಂಬವರನ್ನು ಅವರ ಮರ್ಮವನ್ನು ತಿಳಿದು ಮಹಾಧೈರ್ಯದಿಂದ ಎದುರಿಸಿ ಯುದ್ಧದಲ್ಲಿ ಕೊಂದನು. ಹೀಗೆ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡುತ್ತ ದಿವ್ಯಸುಂದರನಾಗಿ ಲಾವಣ್ಯಮಯವಾದ ತನ್ನ ಅಂಗಾವಯುವಗಳಿಂದ ಲೋಕವನ್ನೆ ಮೋಹಿಸುತ್ತಿದ್ದ ಶ್ರೀಕೃಷ್ಣಮೂರ್ತಿಯ ಮಹಾಮಹಿಮೆಗೆ ಬೆರಗಾಗಿ ತಮ್ಮಿಷ್ಟಕ್ಕೆ ತಾವೇ ಬಂದು ಶ್ರೀಹರಿಯನ್ನು ಪೀಡಿಸುತ್ತಿದ್ದ ಷೋಡಶ ಸಹಸ್ರ ಸ್ತ್ರೀಯರನ್ನು ಆದರಿಸಿ ಅವರ ಕೋರಿಕೆಗಳನ್ನು ನೆರವೇರಿಸುತ್ತ ಅವರೊಡನೆ ಕೂಡಿ ಸುಖಿಸುತ್ತಿದ್ದರೂ ಬಾಲಬ್ರಹ್ಮಚಾರಿ ಎಂಬ ಪ್ರಖ್ಯಾತಿಯನ್ನು ಪಡೆದು ನಿರ್ಲಿಪ್ತನಾದ ಶ್ರೀಕೃಷ್ಣನು ಸರ್ವತಂತ್ರ ಸ್ವತಂತ್ರನಾದರೂ ಪರತಂತ್ರನಂತೆ ನಟಿಸುತ್ತ ತನ್ನ ಅವತಾರಕ್ಕೆ ಕಾರಣವಾದ ಮನುಷ್ಯಲೀಲೆಗೆ ತಕ್ಕಂತೆ ಸರ್ವಜ್ಞನಾದರೂ ಕಿಂಚಿಜ್ಞನಂತೆ ವೇಷಹಾಕಿಕೊಂಡು ಕಪಟನಾಟಕ ಸೂತ್ರಧಾರಿಯೆಂಬ ಬಿರುದಿಗೆಸಂದು ತನ್ನ ಇಷ್ಟಾನುಸಾರ ಲೋಕೋದ್ಧಾರಕ್ಕಾಗಿ ಆಯಾಕಾಲದಲ್ಲಿ ಮಾಡಬೇಕಾದ ಕೆಲಸವನ್ನು ತಪ್ಪದೆ ಮಾಡುತ್ತಿದ್ದನು.

## ಜಾಂಬವತಿಯು ಮಗನಾದ ಸಾಂಬನ ಜನನ ಮತ್ತು ವಿವಾಹ.

ತನ್ನ ಹೆಂಡತಿಯಾದ ಜಾಂಬವತಿಯ ಪ್ರಾರ್ಥನೆಯಂತೆ ತಾನು ಪರಮೇಶ್ವರನನ್ನು ಕುರಿತು ತಪಸ್ಸುಮಾಡಿ ಪ್ರತ್ಯಕ್ಷನಾದ ಶ್ರೀರುದ್ರನಿಂದ ನಿನ್ನ ಅಂಶಸಂಭೂತನಾದ ಒಬ್ಬ ಪುತ್ರನನ್ನು ಕರುಣಿಸಬೇಕೆಂದು ಕೇಳಿಕೊಂಡು ಆ ಶಿವನ ವರಪ್ರಸಾದದಿಂದ ಜಾಂಬವತಿಯಲ್ಲಿ ರುದ್ರಾಂಶಸಂಭೂತನಾದ ಒಬ್ಬ ಮಗನನ್ನು ಪಡೆದು ಅವನಿಗೆ ಸಾಂಬನೆಂದು ಹೆಸರಿಟ್ಟು ಪೋಷಿಸುತ್ತಿದ್ದು ಲಯಕರ್ತನಾದ ಶ್ರೀರುದ್ರನ ಅಂಶದಿಂದ ಹುಟ್ಟಿರುವ ಈ ಮಗನಿಂದಲೆ ಯಾದವ ಕುಲವು ನಾಶವಾಗುವುದೆಂದು ನಿಶ್ಚಯಿಸಿ ಸುಮ್ಮನಿದ್ದನು. ಬಳಿಕ ಪ್ರಾಪ್ತವಯಸ್ಕನಾದ ಮೇಲೆ ಸಾಂಬನು ವಿಷಯಲಂಪಟನಾಗಿ ವಿಲಾಸದಿಂದ ಮೆರೆಯುತ್ತ ದುರ್ಯೋಧನನ ಮಗಳಾದ ಲಕ್ಷ್ಮಣೆಯನ್ನು ಮೋಹಿಸಿ ಅವಳ ಸೌಂದರ್ಯಕ್ಕೆ ಬೆರಗಾಗಿ ಅವಳನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದನು. ಈ ವಿಚಾರವು ದುರ್ಯೋಧನನಿಗೆ ತಿಳಿದಮೇಲೆ ಆತನು ಕೋಪಾಕ್ರಾಂತನಾಗಿ ಯುದ್ಧಕ್ಕೆ ಬಂದು ಯಾದವರನ್ನು ಎದುರಿಸಿ ಸಾಂಬಸಹಿತವಾಗಿ ತನ್ನ ಮಗಳನ್ನು ಕರೆದುಕೊಂಡು ಹೋದನು. ಹೀಗೆ ಸಾಂಬನು ಸೆರೆಸಿಕ್ಕಿದುದನ್ನು ತಿಳಿದು ದುರ್ಯೋಧನನ ವಿದ್ಯಾಗುರುವಾದ ಬಲರಾಮನು ಆತನ ಬಳಿಗೆ ಹೋಗಿ ಬಹಳವಾಗಿ ಸಮಾಧಾನ ಹೇಳಿದನು. ಆದರೇನು ಗರ್ವನಿರ್ಭರನಾದ ದುರ್ಯೋಧನನು ಶಕುನಿ, ಕರ್ಣ, ದುಶ್ಶಾಸನ ಮುಂತಾದ ದುರ್ಮಂತ್ರಿಗಳ ಮಾತನ್ನು ಕೇಳಿ ಬಲರಾಮನ ವಾಕ್ಯವನ್ನು ತಿರಸ್ಕರಿಸಿದನು. ಅದನ್ನು ಕಂಡು

ಬಲರಾಮನು ಬಹಳವಾಗಿ ಕೋಪಗೊಂಡು ಹಸ್ತಿನಾಪುರವನ್ನೆ ಗಂಗೆಯಲ್ಲಿ ಮುಳುಗಿಸಿಬಿಡುತ್ತೇನೆಂದು ಸಂಕಲ್ಪಿಸಿ ತನ್ನ ಹಲಾಯುಧದಿಂದ ಆ ಪಟ್ಟಣವನ್ನು ಪುಡಿಪುಡಿಮಾಡಿ ನದಿಗೆ ಹಾಕುತ್ತಿರಲು ಭೀತಿಗ್ರಸ್ತನಾದ ದುರ್ಯೋಧನನು ಕಡೆಗೆ ಬಲರಾಮುನನ್ನು ಶರಣು ಹೊಕ್ಕು ಬೇಡಿಕೊಂಡು ಅವನನ್ನು ಸತ್ಕರಿಸಿ ಆತನ ಇಷ್ಟಾರ್ಥದಂತೆ ನಡೆಯುವುದಕ್ಕೆ ಸಮ್ಮತಿಸಿದನು. ಬಲರಾಮನು ಸಾಂಬನಿಗೆ ಲಕ್ಷ್ಮಣೆಯನ್ನು ಕೊಟ್ಟು ಮದುವೆಮಾಡಿಸಿ ದ್ವಾರಕೆಗೆ ಕರೆದುಕೊಂಡು ಬಂದು ಸುಖವಾಗಿದ್ದನು.

## ಅಕ್ಷಯ ವಸ್ತ್ರದಾನ. ಅಕ್ಷಯ ಪಾತ್ರೆಯ ಮಹಿಮೆ.

ಗರ್ವಿಷ್ಠರಾದ ಕೌರವರು ದುರ್ಯೋಧನನನ್ನು ಮುಂದು ಮಾಡಿಕೊಂಡು ಪಾಂಡವರಿಗೆ ಕೊಡಬೇಕಾದ ರಾಜ್ಯವನ್ನೆ ತಾವು ಉಳಿಸಿಕೊಂಡು ವ್ಯಾಜಾಂತರದಿಂದ ಪಾಂಡವರನ್ನು ಕಾಡಿಗ



ಟ್ಟಬೇಕೆಂದು ಯೋಚಿಸಿ ಶಕುನಿಯ ಮೂಲಕ ಕಪಟ ದ್ಯೂತವನ್ನು ಹೂಡಿ ಅದರಲ್ಲಿ ಧರ್ಮರಾಯನು ರಾಜ್ಯಕೋಶಗಳನ್ನು ಸೋಲುವಂತೆ ಮಾಡಿ ಕಡೆಗೆ ದ್ರೌಪದಿಯನ್ನು ಪಗಡೆಯಾಟಕ್ಕೆ ಪಣವಾಗಿ ಕಟ್ಟಿಸಿ ಅವಳನ್ನು ಗೆದ್ದುಕೊಂಡರು. ಧರ್ಮರಾಯನು ಸೋತಮೇಲೆ ಜೂಜಿನಿಂದ ತಮ್ಮ ವಶಳಾದ ದ್ರೌಪದಿಯನ್ನು ಸಭೆಗೆ ಕರೆದು ತಂದು ದುಷ್ಟನಾದ ದುಶ್ಶಾಸನನ ಮೂಲಕ ಮಾನಭಂಗವನ್ನು ಮಾಡಲೆಳಸಿ ಉಟ್ಟಿದ್ದ ಸೀರೆಯನ್ನು ಸೆಳೆಯುತ್ತಿರುವಾಗ ಶ್ರೀಹರಿ, ಅನಾಥ ರಕ್ಷಕ ಕಾಪಾಡು ಎಂದು ಮೊರೆಯಿಟ್ಟ ದ್ರೌಪದಿಯ ಆರ್ತಸ್ವರವನ್ನು ಲಾಲಿಸಿ ಕರುಣಾಳುವಾದ ಶ್ರೀಕೃಷ್ಣನು ಅವಳಿಗೆ ಅಕ್ಷಯವಸ್ತ್ರ ದಾನಮಾಡಿದನು. ಎಷ್ಟು ಸೆಳೆದರೂ ಸೀರೆಗೆ ಪಾರವೇ ಇಲ್ಲದಿರುವುದನ್ನು ಕಂಡು ದುರ್ಯೋಧನ ದುಶ್ಶಾಸನಾದಿಗಳು ಆಶ್ಚರ್ಯಭರಿತರಾದರು. ಸಭಿಕರು ಅನಾಥರಕ್ಷಕ, ಆಪದ್ಬಾಂಧವ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಅಚ್ಯುತ, ಅನಂತ ಗೋವಿಂದ ನಿನ್ನ ಮಹಿಮೆಯಿಂದ ದ್ರೌಪದಿಯ ಮಾನಸಂರಕ್ಷಣೆಯಾಯಿತೆಂದು ಶ್ರೀಹರಿಯನ್ನು ಹೊಗಳುತ್ತಿದ್ದರು.

ಬಳಿಕ ಪಾಂಡವರು ಅರಣ್ಯದಲ್ಲಿ ವಾಸಮಾಡುತ್ತ ಅನ್ನಪಾನಾದಿಗಳಿಗೆ ಮಾರ್ಗವಿಲ್ಲದೆ ತೊಂದರೆಪಡುತ್ತಿರುವ ಸಮಯದಲ್ಲಿ ಧರ್ಮಾತ್ಮನಾದ ಧರ್ಮರಾಯನ ಧರ್ಮಕ್ಕೆ ಲೋಪವನ್ನುಂಟುಮಾಡಿ ಅವನನ್ನು ಸಂಕಟಪಡಿಸಬೇಕೆಂದು ಕಪಟಯುಕ್ತಿಯನ್ನು ನೆನೆದು ಕೌರವರು ದೂರ್ವಾಸ ಮಹಾಮುನಿಯನ್ನು ಪ್ರಾರ್ಥಿಸಿ ತಮ್ಮ ಶಿಷ್ಯರೊಂದಿಗೆ ಧರ್ಮರಾಯನ ಬಳಿಗೆ ಹೋಗಿ ಅವನ ಆತಿಥ್ಯವನ್ನು ಸ್ವೀಕರಿಸಿ ಬರಬೇಕೆಂದು ಪ್ರಾರ್ಥಿಸಿದರು. ತನ್ನ ಅಂಶದಿಂದ ಹುಟ್ಟಿದ ಮಕ್ಕಳ ಪ್ರಾರ್ಥನೆಯನ್ನು ನೆರವೇರಿಸಲು ಆತುರನಾಗಿ ದೂರ್ವಾಸಮುನಿಯು ದೂರಾ

ಲೋಚನೆಯಿಲ್ಲದೆ ಕಾಲವಲ್ಲದ ಅಕಾಲದಲ್ಲಿ ತನ್ನ ಶಿಷ್ಯರಾದ ಎಂಭತ್ತುಸಾವಿರ ಜನರೊಡನೆ ಧರ್ಮರಾಯನು ಅರಣ್ಯದಲ್ಲಿ ವಾಸಮಾಡುತ್ತಿದ್ದ ಪರ್ಣಶಾಲೆಗೆ ಬಂದು ಆತನಿಂದ ಸತ್ಕೃತನಾಗಿ ಕುಳಿತುಕೊಂಡು ಅಯ್ಯಾ! ನಮಗೆ ತುಂಬ ಹಸಿವಾಗುತ್ತಿದೆ, ಊಟಕ್ಕೆ ಬಡಿಸು, ಊಟವಾದ ಮೇಲೆ ಉಳಿದ ವಿಚಾರಗಳನ್ನು ನೋಡಿಕೊಳ್ಳೋಣ! ಎಂದು ಹೇಳಲು, ಧರ್ಮರಾಯನು ಅವರೆಲ್ಲರನ್ನು ಸ್ನಾನಮಾಡಿಕೊಂಡು ಬರುವಂತೆ ನದಿಗೆ ಕಳುಹಿಸಿ ಈ ಸಂಗತಿಯನ್ನು ದ್ರೌಪದಿಗೆ ಹೇಳಿದನು ವಿವೇಕಶಾಲಿಯಾಗಿದ್ದ ದ್ರೌಪದಿಯು ಮೊದಲೆ ಊಟವಾಗಿದ್ದಕಾರಣ ಪಾತ್ರೆಗಳನ್ನೆಲ್ಲ ತೊಳೆದಿಟ್ಟಿದ್ದಳು. ದೂರ್ವಾಸರಿಗೆ ಊಟಕ್ಕೆ ಬಡಿಸಲು ಅನ್ನವೇ ಇಲ್ಲವಾಗಿರಲು ಅದೇ ಪಾತ್ರೆಯನ್ನು ಸರಿಯಾಗಿ ಇಟ್ಟು ಶ್ರೀಕೃಷ್ಣನನ್ನು ಧ್ಯಾನಿಸುತ್ತ ಆಪದ್ಬಾಂಧವನಾದ ನೀನೆ ಈ ಕಾಲದಲ್ಲಿ ಈ ಋಷಿಮಂಡಲಿಯನ್ನು ಸಂತೈಸಬೇಕೆಂದು ಪ್ರಾರ್ಥಿಸಲು ಶ್ರೀಕೃಷ್ಣನು ಅದೃಶ್ಯನಾಗಿದ್ದುಕೊಂಡು ಆಕಾಶವಾಣಿಯ ಮೂಲಕ ದ್ರೌಪದಿಗೆ ಅಕ್ಷಯಪಾತ್ರೆಯನ್ನು ಕೊಡಿಸಿದನು. ಕೂಡಲೆ ಸ್ನಾನಾದಿಗಳನ್ನು ತೀರಿಸಿಕೊಂಡು ಬಂದ ದೂರ್ವಾಸಾದಿಗಳಿಗೆ ದ್ರೌಪದಿಯು ತೃಪ್ತಿಯಾಗಿ ಊಟಕ್ಕೆ ಬಡಿಸಿ ಯಾವ ಕೊರತೆಯೂ ಇಲ್ಲದಂತೆ ಅವರನ್ನು ಆದರಿಸಿ ಕಳುಹಿಸಿದಳು. ಈ ವಿಚಾರವನ್ನು ದೂರ್ವಾಸರ ಮೂಲಕ ಕೇಳಿ ತಿಳಿದುಕೊಂಡು ದುರ್ಯೋಧನ ಮೊದಲಾದವರು ನಾಚಿಕೆಪಟ್ಟು ಸುಮ್ಮನಾದರು.

## ಅಭಿಮನ್ಯು ಮತ್ತು ಉತ್ತರೆಯರ ವಿವಾಹ.

ಹನ್ನೆರಡು ವರ್ಷಕಾಲ ಅರಣ್ಯವಾಸವನ್ನು ಪೂರೈಸಿದ ಮೇಲೆ ಒಂದು ವರ್ಷ ಯಾರಿಗೂ ತಿಳಿಯದಂತೆ ಪಾಂಡವರು ಅಜ್ಞಾತವಾಸ ಮಾಡಬೇಕೆಂದು ಮೊದಲೆ ಗೊತ್ತಾಗಿದ್ದಂತೆ ಧರ್ಮರಾಯಾದಿಗಳು ವೇಷವನ್ನು ಮರೆಸಿಕೊಂಡು ಬ್ರಾಹ್ಮಣರಂತೆ ವಿರಾಟನ ಪಟ್ಟಣದಲ್ಲಿ ಸೇವಕರಾಗಿದ್ದರು ಆತನ ಊಳಿಗದಲ್ಲಿರುವ ಅರ್ಜುನನು ಶಾಪವಶದಿಂದ ಸ್ತ್ರೀರೂಪವನ್ನು ಧರಿಸಿ ಬೃಹನ್ನಳೆಯೆಂಬ ಹೆಸರಿನಿಂದ ವಿರಾಟನ ಅಂತಃಪುರದಲ್ಲಿ ಸ್ತ್ರೀಯರಿಗೆ ಅಲಂಕಾರ ವಿದ್ಯಾಭ್ಯಾಸಾದಿಗಳನ್ನು ಮಾಡಿಸುತ್ತಿದ್ದು ಗೋಗ್ರಹಣ ಕಾಲದಲ್ಲಿ ತನ್ನ ಪರಾಕ್ರಮವನ್ನು ತೋರಿಸಿ, ಪ್ರಬಲವೈರಿಯಾದ ಕೀಚಕನನ್ನು ಭೀಮನಿಂದ ಕೊಲ್ಲಿಸಿ ಪಾಂಡವರು ತಮ್ಮ ಪರಾಕ್ರಮದಿಂದ ಪ್ರತ್ಯಕ್ಷರಾದ ಮೇಲೆ ವಿರಾಟನು ತನ್ನ ಮಗಳಾದ ಉತ್ತರೆಯನ್ನು ಶೂರನಾದ ಅರ್ಜುನನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದನು. ಇದನ್ನು ತಿಳಿದು ಅರ್ಜುನನು ತನ್ನ ಶಿಷ್ಯಳಾದ ಉತ್ತರೆಯನ್ನು ಮದುವೆಯಾಗುವುದಕ್ಕೆ ಒಪ್ಪದಿರಲು ಶ್ರೀಕೃಷ್ಣನು ಸಂಧಾನಮಾಡಿ ವಿರಾಟರಾಯನ ಆಶಯದಂತೆ ಸುಭದ್ರೆಯ ಗರ್ಭದಲ್ಲಿ ಜನಿಸಿದ್ದ ಅರ್ಜುನನ ಮಗನಾದ ಅಭಿಮನ್ಯುವಿಗೆ ವಿರಾಟ ಪುತ್ರಿಯಾದ ಉತ್ತರೆಯನ್ನು ಕೊಟ್ಟು ವಿವಾಹಮಾಡಿಸಲು ಉಭಯತ್ರರೂ ಸಂತೋಷದಿಂದ ವಂದಿಸಿ ಸತ್ಕರಿಸಲಾಗಿ ಅವರ ಸತ್ಕಾರವನ್ನು ಕೈಗೊಂಡು ಜಯಪ್ರದನಾಗಿ ತನ್ನ ಮಾನುಷಲೀಲೆಗೆ ಇದು ಸಾರ್ಥಕವೆನ್ನುವಂತೆ ಪಾಂಡವಪಕ್ಷಪಾತಿಯಾಗಿ ಅವರ ವಂಶೋದ್ಧಾರಕ್ಕೆ ಕಾರಣವಾದ ಈ ವಿವಾಹವನ್ನು ಮಾಡಿಸಿ ತನ್ನ ಮಹಿಮೆಯನ್ನು ಪ್ರಕಾಶಗೊಳಿಸಿದನು. ಈ ಉತ್ತರೆಯ ಗರ್ಭದಲ್ಲಿ ಜನಿಸಿದ ಅಭಿಮನ್ಯುವಿನ ಮಗನೇ ಪರೀಕ್ಷಿದ್ರಾಜನೆಂದು ಪ್ರಖ್ಯಾತಿಯನ್ನು ಪಡೆದನು.

## ಜರಾಸಂಧ ಶಿಶುಪಾಲ ದಂತವಕ್ತ್ರರ ವಧೆ.

ತನಗೆ ಶತ್ರುವಾದ ಜರಾಸಂಧನು ಮೊದಲಿನಿಂದ ಶ್ರೀಹರಿಯನ್ನು ಕೊಲ್ಲಿಸಬೇಕೆಂದು ಯತ್ನಿಸಿ ಬಲರಾಮ ಕೃಷ್ಣರನ್ನು ಕೆಣಕಿ ಯುದ್ಧ ಮಾಡುತ್ತಿದ್ದಾಗ ಬಲರಾಮನು ಕೋಪಗೊಂಡು ತನ್ನ ಹಲಾಯುಧದಿಂದ ಜರಾಸಂಧನನ್ನು ಕೊಲ್ಲುವುದಕ್ಕೆ ಯತ್ನಿಸಿದಾಗ ತಾನಾಗಿ ತಡೆದು ನಿಲ್ಲಿಸಿದ ಶ್ರೀಕೃಷ್ಣನು ಧರ್ಮರಾಯನು ರಾಜಸೂಯ ಯಾಗಮಾಡುವ ವ್ಯಾಜದಿಂದ

ದಿಗ್ವಿಜಯಕ್ಕಾಗಿ ಹೊರಟಾಗ ಶೂರನಾದ ಭೀಮಸೇನನನ್ನು ಜರಾಸಂಧನಮೇಲೆ ಯುದ್ಧಕ್ಕೆ ಬಿಟ್ಟು ತಂತ್ರವನ್ನರಿತು ಸಂಜ್ಞೆಮಾಡಿ ಸೀಳಿಹಾಕುತ್ತಿದ್ದರೂ ಕೂಡಿಕೊಳ್ಳುತ್ತಿದ್ದ ಜರಾಸಂಧನ ದೇಹದ ಹೋಳುಗಳನ್ನು ಬೇರೆಬೇರೆ ಮಾಡಿಸಿ ಜರಾಸಂಧನನ್ನು ಸಂಹರಿಸಿ ಪಾಂಡವರಿಗೆ ದಿಗ್ವಿಜಯವಾಗುವಂತೆ ಮಾಡಿದನು. ಬಳಿಕ ಜರಾಸಂಧನ ಮಗನಿಗೆ ರಾಜ್ಯಾಭಿಷೇಕಮಾಡಿಸಿ ದೊರೆತನವನ್ನು ಕೊಟ್ಟು ಸೆರೆಸಿಕ್ಕಿ ನರಳುತ್ತಿದ್ದ ಬಹುಮಂದಿ ರಾಜರನ್ನು ಸೆರೆಬಿಡಿಸಿ ಕಾಪಾಡಿದನು. ದಾಯಾದಿಗಳಾದ ಕೌರವರಿಗೂ ಪಾಂಡವರಿಗೂ ರಾಜ್ಯಕ್ಕಾಗಿ ವಿವಾದಹುಟ್ಟಿ ಯುದ್ಧಕ್ಕೆ ಪ್ರಯತ್ನಿಸುತ್ತಿದ್ದಾಗ ಸಂಧಾನಶೀಲನಾಗಿ ತಾನು ಪಾಂಡವರ ಕಡೆಯ ರಾಯ



ಭಾರಿಯಾಗಿ ಕೌರವರ ಆಸ್ಥಾನಕ್ಕೆ ಹೋಗಿ ದುರ್ಯೋಧನನ ಗರ್ವವನ್ನು ಕಂಡು ಉದಾಶೀನತೆಯನ್ನು ಪರಿಹರಿಸಬೇಕೆಂದು ಅರಮನೆಯಲ್ಲಿ ನಿಲ್ಲದೆ ತನ್ನ ಭಕ್ತನಾದ ವಿದುರನ ಮನೆಗೆಹೋಗಿ ಆತನ ಸೇವೆಯನ್ನು ಕೈಗೊಂಡು ಅವನು ಕುಡಿಯುವುದಕ್ಕೆ ಕೊಟ್ಟ ಒಂದು ಬಟ್ಟಲು ಹಾಲನ್ನು ತಾನು ತೃಪ್ತಿಯಾಗಿ ಕುಡಿದು ಕಾಲುವೆಯಾಗಿ ಹರಿಸಿ, ಲೋಕಪ್ರಸಿದ್ಧನಾಗಿ ಭಕ್ತವತ್ಸಲನೆಂದು ಹೊಗಳಿಕೊಳ್ಳುತ್ತ ಕೌರವನ ಆಸ್ಥಾನವನ್ನು ಪ್ರವೇಶಿಸಿ ಅಲ್ಲಿ ತನ್ನನ್ನು ಕಟ್ಟಿಹಾಕಬೇಕೆಂದು ಪ್ರಯತ್ನಪಟ್ಟಾಗ ದುರ್ಯೋಧನನ ಮನೆಯಲ್ಲೆಲ್ಲ ಎಲ್ಲಿ ನೋಡಿದರೂ ಶ್ರೀಕೃಷ್ಣನೆ ಇರುವಂತೆ ಮಾಡಿ ಅವರನ್ನು ನಿಗ್ರಹಿಸಿ ದುರ್ಯೋಧನಾದಿಗಳಲ್ಲಿ ತನ್ನ ವಿಶ್ವರೂಪವನ್ನು ತೋರಿಸಿ ಹಿಂದಿರಿಗಿ ಪಾಂಡವರ ಬಳಿಗೆ ಬಂದನು.

ಧರ್ಮರಾಯನು ತಾನು ಮಾಡಿದ ರಾಜಸೂಯಯಾಗದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿ ಅಗ್ರತಾಂಬೂಲವನ್ನು ಕೊಡಬೇಕೆಂದು ನಿಶ್ಚಯಿಸಿದಾಗ ಸಹಿಸಲಾರದೆ ತನಗೆ ಅಗ್ರಪೂಜೆಯಾಗಬೇಕೆಂದು ಶ್ರೀಹರಿಯನ್ನು ಬಗೆಬಗೆಯಾಗಿ ಹಳಿಯುತ್ತ ಜಗಳಕ್ಕೆ ನಿಂತ ಶಿಶುಪಾಲನೆಂಬ ರಾಜನನ್ನು ತನ್ನ ಚಕ್ರಾಯುಧದಿಂದ ಕೊಂದು ತಾನೆ ಅಗ್ರಪೂಜೆಯನ್ನು ಸ್ವೀಕರಿಸಿ ಧರ್ಮರಾಯನ ಪ್ರತಿಜ್ಞೆಯನ್ನು ನೆರವೇರಿಸಿದನು. ಲೋಕಕಂಟಕರಾಗಿ ಆಗಾಗ್ಗೆ ಜನರನ್ನು ಹಿಂಸಿಸುತ್ತ ದುಷ್ಟವರ್ತನೆಯಿಂದ ದುರುಳರಾಗಿ ಶಿಷ್ಟಾಚಾರ ತತ್ಪರರನ್ನು ಪೀಡಿಸುತ್ತಿದ್ದ ದಂತವಕ್ತ್ರ ವಿಡೂರಥಾದಿಗಳನ್ನು ಸಂಹರಿಸಿ ಲೋಕಕ್ಕೆ ಶಾಂತಿಯನ್ನೂ ಸುಖವನ್ನೂ ಉಂಟುಮಾಡಿದನು. ಇದೂ ಅಲ್ಲದೆ ತನ್ನ ಭಕ್ತರಾದ ನಾರದಾದಿ ಮಹರ್ಷಿಗಳಿಗೆ ಬಗೆಬಗೆಯಾದ ವಿಚಿತ್ರ ಲೀಲೆಗಳನ್ನು ತೋರಿಸುತ್ತ ಗೋಬ್ರಾಹ್ಮಣ ಸಂರಕ್ಷಕನಾಗಿ ಪರಬ್ರಹ್ಮನೆನಿಸಿಕೊಂಡನು. ತನ್ನವರಾದ ಯಾದವರು ಕುಹಕಬುದ್ಧಿಯಿಂದ ಕರೆದುಕೊಂಡು ಹೋಗಿ ತೋರಿಸಿದ ಹಾಳುಭಾವಿಯಲ್ಲಿ ಓತಿಯರೂಪದಿಂದ ವಾಸಿಸುತ್ತಿದ್ದ ಶಾಪಗ್ರಸ್ತನಾದ ರಾಜನನ್ನು ಮುಟ್ಟಿ ಅವನ ಶಾಪವನ್ನು ಪರಿಹರಿಸಿ ಬ್ರಹ್ಮಸ್ವಾಪಹರಣದಿಂದುಂಟಾಗುವ ಪಾಪದ ಫಲವನ್ನು ಲೋಕದಲ್ಲಿ ಪ್ರಸಿದ್ಧಪಡಿಸಿದನು.

## ಕೃಷ್ಣಾವತಾರ ಕಾಲ ಮತ್ತು ಮಹಿಮೆ.

ಶ್ರೀಕೃಷ್ಣನು ತನ್ನ ಅವತಾರಪರಿಮಿತವಾದ ನೂರಿಪ್ಪತ್ತು ವರ್ಷ ಕಾಲದಲ್ಲಿ ಒಂದು ಶತಮಾನವು ಕಳೆದುಹೋಗುವುದರೊಳಗಾಗಿ ಮರಳಿ ಕೌರವ ಪಾಂಡವರಿಗೆ ಸಂಧಾನಹೀನನಾಗಿ ಯುದ್ಧ ಪ್ರಾಪ್ತವಾದ ಕಾಲದಲ್ಲಿ ತನ್ನ ಮೈದುನನಾದ ಅರ್ಜುನನು ಯುದ್ಧದಲ್ಲಿ ಗುರು ಹಿರಿಯರನ್ನೂ ಬಂಧುಮಿತ್ರರನ್ನೂ ಕೊಲ್ಲಲಾರೆನೆಂದು ಚಿಂತಾಕ್ರಾಂತನಾದ ಸಮಯದಲ್ಲಿ ಅವನಿಗೆ ಸರ್ವೋಪನಿಷತ್ಸಾರಭೂತವಾದ ಗೀತಾಮೃತವನ್ನು ಪಾನಮಾಡಿಸಿ ಅಹಂಕಾರ ಮಮಕಾರಗಳನ್ನು ಬಿಟ್ಟು ಸರ್ವಚೈತನ್ಯ ಸ್ವರೂಪನಾದ ಭಗವಂತನಮೇಲೆ ಭಾರವನ್ನು ವಹಿಸಿ ಪ್ರಕೃತೋಚಿತವಾದ ಕಾರ್ಯವನ್ನು ಮಾಡಿ ಮುಕ್ತನಾಗುವಂತೆ ವೇದಾಂತ ರಹಸ್ಯವನ್ನು ಅವನಿಗೆ ಬೋಧಿಸಿ ತಾನೇ ಅರ್ಜುನನ ಸಾರಥಿಯಾಗಿ ನಿಂತು ಯುದ್ಧಪ್ರಸಕ್ತಿಯಿಂದ ಉಭಯ ಸೇನೆಯಲ್ಲಿಯೂ ಕೂಡಿದ್ದ ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಸಂಹಾರಮಾಡಿಸಿ ಶೂರಾಗ್ರೇಸರರಾದ ಭೀಷ್ಮ, ದ್ರೋಣ, ಕರ್ಣ, ಜಯದ್ರಥ, ದುರ್ಯೋಧನ, ದುಶ್ಶಾಸನಾದಿಗಳನ್ನು ಕೊಲ್ಲಿಸಿ ಭೂಭಾರವನ್ನು ಇಳಿಸಿದನು. ಇದೂ ಅಲ್ಲದೆ ಬಾಣಾಸುರನ ಮಗಳಾದ ಉಷಾದೇವಿಯನ್ನು ಅನಿರುದ್ಧನು ಮೋಹಿಸಿ ಮದುವೆಯಾಗುವಾಗ ಶಿವಭಕ್ತನಾದ ಬಾಣಾಸುರನು ವಿಷ್ಣುಪೌತ್ರನಾದ ಅನಿರುದ್ಧನಿಗೆ ತನ್ನ ಮಗಳನ್ನು ಕೊಡಲೊಪ್ಪದೆ ಯುದ್ಧಕ್ಕೆಬರಲು ಬಾಣಾಸುರನ ಸಾವಿರ ತೋಳುಗಳನ್ನು ತನ್ನ ಚಕ್ರಾಯುಧದಿಂದ ತರಿದುಹಾಕಿ ಈಶ್ವರನಿಂದ ಸ್ತುತಿಸಲ್ಪಟ್ಟು ಪರಮೇಶ್ವರನ ಅನುಗ್ರಹಕ್ಕಾಗಿ ಬಾಣಾಸುರನ ಪ್ರಾಣವನ್ನುಳಿಸಿ ಉಷೆಯನ್ನು ಅನಿರುದ್ಧನಿಗೆ ಮದುವೆಮಾಡಿಸಿ ದೈವಸಂಕಲ್ಪವನ್ನು ನೆರವೇರಿಸಿದನು. ಪಾಂಡವಾಗ್ರಣಿಯಾದ ಧರ್ಮರಾಯನಿಗೆ ಭೀಷ್ಮಾಚಾರ್ಯರಿಂದ ಧರ್ಮೋಪದೇಶ ಮಾಡಿಸಿ ಭೀಷ್ಮರಿಗೆ ಮುಕ್ತಿಸಾಮ್ರಾಜ್ಯವನ್ನು ಕೊಟ್ಟು ಹಸ್ತಿನಾವತಿಯಲ್ಲಿ ಧರ್ಮರಾಯನಿಗೆ ಪಟ್ಟಾಭಿಷೇಕಮಾಡಿಸಿ ಭಾರತಯುದ್ಧದಲ್ಲಿ ಆದ ಗೋತ್ರವಧೆಯ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಧರ್ಮರಾಯನಿಂದ ಅಶ್ವಮೇಧ ಯಾಗವನ್ನು ಮಾಡಿಸಿ ಬಗೆಬಗೆಯಾದ ಅನೇಕವಿಧಗಳಿಂದ ಭೂಭಾರವನ್ನು ತಗ್ಗಿಸಿ ಗೋಪಾಲಕನೆಂಬ ಬಿರುದು ತನಗೆ ಅನ್ವರ್ಥವಾಗುವಂತೆ ನೂರಿಪ್ಪತ್ತು ವರ್ಷಕಾಲ ದ್ವಾರಕೆಯಲ್ಲಿ ಲೋಲನಾಗಿ ನಿತ್ಯಸುಖದಿಂದ ಭಕ್ತಸಂತತಿಯನ್ನು ಪೋಷಿಸುತ್ತ ತನ್ನ ಅವತಾರ ಪರಿಸಮಾಪ್ತಿಗೆ ಸಮಯವನ್ನು ಹುಡುಕುತ್ತಿದ್ದನು.

## ಗರ್ಗಮುನಿಯ ಶಾಪ, ಯಾದವನಾಶಕ್ಕೆ ಕಾರಣ.

ಯದುಕುಲಕ್ಕೆ ಪುರೋಹಿತನಾದ ಗರ್ಗಋಷಿಯು ನಿತ್ಯಾನುಷ್ಠಾನ ತತ್ಪರನಾಗಿ ತನ್ನ ಪ್ರಭಾವ ಪ್ರತಿಭೆಯಿಂದ ಜ್ಯೋತಿಷಶಾಸ್ತ್ರ ಸಂಹಿತೆಗಳಿಗೆ ಟೀಕೆಯನ್ನು ಬರೆದು ತ್ರಿಕಾಲಜ್ಞಾನಿಯೆಂಬ ಬಿರುದನ್ನು ವಹಿಸಿ ಪ್ರಕಾಶಿಸುತ್ತಿದ್ದನು. ಇವನ ಕೀರ್ತಿಯು ಜಗದ್ವಿಖ್ಯಾತವಾಗಿ ಹರಡಿತು. ಆ ಕಾಲದಲ್ಲಿ ಯೌವನವಿಲಾಸಗಳಿಂದ ಕೂಡಿ ಸ್ತ್ರೀಲೋಲನಾಗಿ ದೂರಾಲೋಚನೆಯಿಲ್ಲದೆ ವಿಷಯಲಂಪಟನಾಗಿ ಶ್ರೀಕೃಷ್ಣನ ಮಗನಾಗಿ ಜಾಂಬವತಿಯ ಗರ್ಭದಲ್ಲಿ ರುದ್ರಾಂಶದಿಂದ ಹುಟ್ಟಿದ ಸಾಂಬನು ಒಂದು ದಿನ ತಾನು ಸ್ತ್ರೀವೇಷವನ್ನು ಧರಿಸಿಕೊಂಡು ತನ್ನ ಸಹಪಾಠಿಗಳ ಜೊತೆಯಲ್ಲಿ ಹೊರಟು ಸರೋವರದ ದಡದಲ್ಲಿ ತಪಸ್ಸುಮಾಡುತ್ತ ಕುಳಿತಿದ್ದ ಗರ್ಗಋಷಿಯ ಬಳಿಗೆ ಬಂದು ಆತನನ್ನು ಕಂಡು ನಮಸ್ಕರಿಸಿ ಸ್ವಾಮಿ! ಗರ್ಭಿಣಿಯಾಗಿರುವ ಈ ಹೆಂಗಸು ಎಂಥ ಮಗುವನ್ನು ಹೆರುವಳೋ ಹೇಳಬೇಕೆಂದು ಹಾಸ್ಯಮಾಡಿ ನಗುತ್ತ ಪ್ರಶ್ನೆ ಮಾಡಲು ತ್ರಿಕಾಲಜ್ಞಾನಿಯಾದ ಗರ್ಗಮುನಿಗೆ ಕೋಪಬಂದು, ಅಯ್ಯಾ! ನಿಮ್ಮ ಇಷ್ಟಾರ್ಥದಂತೆ ಈ ಹೆಂಗಸಿನ ಹೊಟ್ಟೆಯಲ್ಲಿ ಕುಲನಾಶಕವಾದ ಒಂದು ಮುಸಲವು ಹುಟ್ಟುವುದು ಎಂದು

ಹೇಳಿ ಸುಮ್ಮನಾಗಲು ಅದರಂತೆ ಒಂದು ಉಕ್ಕಿನ ಒನಕೆಯು ಅವನ ಗರ್ಭದಿಂದ ಹೊರ ಬಿದ್ದಿತು. ಈ ವಿಚಾರವನ್ನು ತಿಳಿದು ರಾಜನಾದ ಉಗ್ರಸೇನರಾಜನು ತನ್ನವರಿಗೆ ತಕ್ಕ ವಿವೇಕ ವನ್ನು ಹೇಳಿ ನೀವು ಮಾಡಿದ ಅಪರಾಧಕ್ಕೆ ಕುಲನಾಶವಾಗುವ ಫಲವು ಪ್ರಾಪ್ತವಾಯಿತು. ಇನ್ನು ಮಾಡತಕ್ಕದ್ದೇನು ಹೇಗಾದರೂ ಮಾಡಿ ಈ ಮುಸಲವನ್ನು ಅರೆದು ನೀರಾಗಿಮಾಡಿ ಸಮುದ್ರಕ್ಕೆ ಹಾಕಿಬಿಡಿ ಎಂಧು ಹೇಳಲು ಅವರು ಹಾಗೆಯೆ ಮಾಡಿದರು. ಆಗ ಆ ಮುಸಲದ ಧೂಳು ಸಮುದ್ರದಲ್ಲಿ ಹುಟ್ಟಿ ಜೊಂಡುಹುಲ್ಲಿನಂತೆ ಬೆಳೆದುನಿಂತಿತು. ಉಳಿದ ಶೇಷವನ್ನು ಒಂದು ಮೀನು ನುಂಗಿಬಿಟ್ಟಿತು. ಆ ಮೀನನ್ನು ಒಬ್ಬ ಬೇಡನು ಹಿಡಿದು ಸೀಳಿದಾಗ ಅದರ ಹೊಟ್ಟೆಯಲ್ಲಿದ್ದ ಆ ಮುಸಲ ಶೇಷವನ್ನು ಅವನು ಬಾಣವಾಗಿಟ್ಟುಕೊಂಡು ಹಿಂದೆ ರಾಮಾವ ತಾರದಲ್ಲಿ ವಾಲಿಯಾಗಿದ್ದ ತನ್ನನ್ನು ಮರೆಮಾಚಿ ಕೊಂದ ಅಪರಾಧಕ್ಕೆ ಪ್ರತಿಯಾಗಿ ಈಗ ತಾನು ಬೇಡನಾಗಿ ಹುಟ್ಟಿ ಈ ಮುಸಲ ಶೇಷವನ್ನು ತನ್ನಲ್ಲಿಟ್ಟುಕೊಂಡು ಶ್ರೀಕೃಷ್ಣನನ್ನು ಕೊಲ್ಲುವುದಕ್ಕೆ ಸಮಯವನ್ನು ಕಾಯುತ್ತಿದ್ದನು ಸತ್ಯಾತ್ಮನಾದ ಗರ್ಗಮುನಿಯನ್ನು ಅಹಂಕಾರಭರಿತವಾದ ಗರ್ವದಿಂದ ಹಾಸ್ಯಮಾಡಿದ ಫಲಕ್ಕೆ ನಿದರ್ಶನವಾಗಿ ಸ್ತ್ರೀವೇಷವನ್ನು ಧರಿಸಿದ್ದ ಗಂಡಸಿನ ಗರ್ಭದಿಂದ ಅವತರಿಸಿದ ಉಕ್ಕಿನ ತುಂಡು ಯಾದವರ ಕುಲವನ್ನೆ ನಾಶಮಾಡಿತು ಎನ್ನುವಾಗ ಸಾಮಾನ್ಯರಾದ ಜನರು ಸತ್ಪುರುಷರನ್ನು ಹಾಸ್ಯಮಾಡಿದರೆ ಯಾವ ಫಲವುಂಟಾಗುವುದೊ ಕಾಣೆವು ಎಂದು ದೇವತೆಗಳು ಚಿಂತಿಸುತ್ತಿದ್ದರು.

## ಶ್ರೀಕೃಷ್ಣನ ಅವತಾರ ಪರಿಸಮಾಪ್ತಿ.

ಹೀಗೆ ನಡೆದ ಸಂಗತಿಯನ್ನೆಲ್ಲ ತಿಳಿದು ಸೃಷ್ಟಿಕರ್ತನಾದ ಬ್ರಹ್ಮನು ಶ್ರೀಕೃಷ್ಣನಬಳಿಗೆ ಬಂದು ರಹಸ್ಯದಲ್ಲಿ ಇನ್ನು ಎಂಟುದಿನದಲ್ಲಿ ಅವತಾರ ಪರಿಸಮಾಪ್ತಿಯಾಗಬೇಕೆಂದು ಬಿನ್ನೈಸಲು ಶ್ರೀಕೃಷ್ಣನು ಅವತಾರ ರಹಸ್ಯವನ್ನು ತಿಳಿದು ಉದ್ಧವನನ್ನು ಕರೆದು ಅವನಿಗೆ ತತ್ತ್ವೋಪದೇಶ ಮಾಡಿ ಅವನನ್ನು ಉದ್ಧರಿಸಿದ ಬಳಿಕ ಬಲರಾಮನನ್ನು ಕರೆದು ಆತನಿಗೆ ಬ್ರಹ್ಮನು ತನ್ನೊಡನೆ ಹೇಳಿದ ವಿಚಾರವನ್ನು ರಹಸ್ಯವಾಗಿ ತಿಳಿಸಲು ಶೇಷಾಂಶಸಂಭೂತನಾದ ಸಂಕರ್ಷಣನು ಯೋಗಾರೂಢನಾಗಿ ಕುಳಿತು ಪ್ರಾಣಾಯಾಮತತ್ಪರನಾಗಿ ಸರ್ವಚೈತನ್ಯಸ್ವರೂಪದಿಂದ ಭೂಮಿ ಯನ್ನು ಸೀಳಿಕೊಂಡು ಪಾತಾಳಲೋಕವನ್ನು ಸೇರಿದನು. ಹೀಗೆ ಸಂಕರ್ಷಣನಾದ ಬಲ ರಾಮನು ತನ್ನ ಅವತಾರವನ್ನು ಪೂರೈಸಿಕೊಂಡ ವಾರ್ತೆಯು ಹರಡಿಕೊಳ್ಳಲು ಗರ್ಗನು ಇನ್ನು ಏಳು ದಿನಗಳಲ್ಲಿ ದ್ವಾರಕೆಯು ಜಲಪ್ರಳಯವಾಗಿ ಸಮುದ್ರದಲ್ಲಿ ಮುಳುಗಿಹೋಗುವುದೆಂದು ಹೇಳಿದನು. ಬಳಿಕ ಯಜಮಾನರಿಲ್ಲದೆ ಸ್ವೇಚ್ಛಾವಿಹಾರಿಗಳಾಗಿ ತಿರುಗುತ್ತಿದ್ದ ಯಾದವರು ಸ್ತ್ರೀಲೋಲರಾಗಿ ಮಧುಪಾನಮಾಡಿ ಪ್ರಜ್ಞೆಯಿಲ್ಲದೆ ಸಮುದ್ರತೀರಕ್ಕೆ ಬಂದು ನಿಷ್ಕಾರಣವಾಗಿ ಜಗಳವನ್ನು ತೆಗೆದು ಅಯೋಮುಸಲದ ರೇಣುಗಳಿಂದ ಜೊಂಡುಹುಲ್ಲಾಗಿ ಬೆಳೆದಿದ್ದ ತೃಣ ಗಳನ್ನು ಕಿತ್ತುಕೊಂಡು ಹೊಡೆದಾಡಿ ಮಡಿದುಹೋದರು. ಈ ವಿಚಾರವನ್ನು ತಿಳಿದು ಶ್ರೀ ಕೃಷ್ಣನು ದೇಹಾಯಾಸಗೊಂಡು ಒಂದಾನೊಂದು ಮರದ ಬುಡದಲ್ಲಿ ಮಲಗಿಕೊಂಡಿದ್ದನು. ಆಗ ಮೊದಲು ವಾಲಿಯಾಗಿ ಹುಟ್ಟಿದ್ದು ರಾಮಾವತಾರಿಯಾದ ವಿಷ್ಣುವಿನಿಂದ ಕೊಲ್ಲಲ್ಪಟ್ಟ ವಾನರನು ಈಗ ಬೇಡರವನಾಗಿ ಹುಟ್ಟಿ ಮೀನಿನ ವ್ಯಾಜದಿಂದ ಅಯೋಮುಸಲದ ಶೇಷವನ್ನು ಸಂಪಾದಿಸಿ ಅದನ್ನು ಬಾಣವಾಗಿಟ್ಟುಕೊಂಡಿದ್ದ ಕಿರಾತನು ಬೇಟೆಗೋಸ್ಕರವಾಗಿ ಮೃಗವನ್ನು ಹುಡುಕುತ್ತ ಬಂದು ಕಾಲುಚಾಚಿಕೊಂಡು ಮಲಗಿದ್ದ ಕೃಷ್ಣನ ಅಂಗಾಲುಗಳನ್ನು ಕಂಡು ಇದು ಒಂದು ಮೃಗವೆಂದು ತಿಳಿದು ಬಾಣಪ್ರಯೋಗ ಮಾಡಲು ಆ ಬಾಣವು ಶ್ರೀಕೃಷ್ಣನ ಅಂಗಾಲಿಗೆ ತಗಲಿ ಕೂಡಲೆ ಶ್ರೀಕೃಷ್ಣನು ತನ್ನ ದೇಹವನ್ನು ಬಿಟ್ಟು ಕೃಷ್ಣಾವತಾರವನ್ನು ಪೂರೈಸಿಕೊಂಡು ಸಚ್ಚಿದಾನಂದಸ್ವರೂಪನಾಗಿ ದಿವ್ಯತೇಜಸ್ಸಿನಿಂದ ಹೊಳೆಯುತ್ತ ದೇವತೆಗಳು ಜಯಜಯವೆಂದು

ಹೊಗಳುತ್ತಿರುವಲ್ಲಿ ತನ್ನ ಸ್ವಸ್ಥಾನವಾದ ವೈಕುಂಠವನ್ನು ಸೇರಿದನು ಕೂಡಲೆ ಆದಿಲಕ್ಷ್ಮಿಸ್ವರೂಪದಿಂದ ವಿಷ್ಣುಮಾಯಾವಿನೋದಕ್ಕಾಗಿ ಅವತಾರಮಾಡಿದ್ದ ರುಕ್ಮಿಣಿ ಮೊದಲಾದವರೂ ತಮ್ಮ ದೇಹವನ್ನು ಬಿಟ್ಟು ವೈಕುಂಠಕ್ಕೆ ಹೋಗಿ ನಾರಾಯಣನ ಸನ್ನಿಧಾನವನ್ನು ಸೇರಿದರು.

## ಇಂದ್ರಪ್ರಸ್ಥಪುರದಲ್ಲಿ ವಜ್ರನಿಗೆ ಪಟ್ಟಾಭಿಷೇಕ.

ಹೀಗೆ ಕೃಷ್ಣಾವತಾರ ಪರಿಸಮಾಪ್ತಿಯಾದ ವರ್ತಮಾನವನ್ನು ತಿಳಿದು ಅರ್ಜುನನು ದ್ವಾರಕೆಗೆ ಬಂದು ಸತ್ತುಹೋದವರಿಗೆ ಮಾಡಬೇಕಾದ ಸಂಸ್ಕಾರ ಸಂಚಯನಗಳನ್ನು ಮಾಡಿ ಶ್ರೀಕೃಷ್ಣನಿಂದ ಪರಿಗ್ರಹಿಸಲ್ಪಟ್ಟಿದ್ದ ರಾಜಪುತ್ರಿಯರನ್ನು ಯಾದವರಲ್ಲಿ ಹತಶೇಷನಾಗಿ ಉಳಿದುಕೊಂಡಿದ್ದ ವಜ್ರನನ್ನೂ ಸಂಗಡ ಕರೆದುಕೊಂಡು ಬರುತ್ತ ಮಧ್ಯಮಾರ್ಗದಲ್ಲಿ ಸ್ತ್ರೀಯರಿಗಾಗಿ ಜಗಳಕ್ಕೆ ನಿಂತ ಕಿರಾತನೊಡನೆ ಯುದ್ಧಮಾಡಿ ಕೃಷ್ಣನ ಸಹಾಯವಿಲ್ಲದಕಾರಣ ಅವರನ್ನು ಗೆಲ್ಲಲಾರದೆ ಸೋತುಹೋಗಿ ಆ ರಾಜಪುತ್ರಿಯರನ್ನು ಅಲ್ಲಿಯೆಬಿಟ್ಟು ವಜ್ರನನ್ನು ಕರೆದುಕೊಂಡು ಬಂದು ಇಂದ್ರಪ್ರಸ್ಥದಲ್ಲಿ ಅವನಿಗೆ ರಾಜ್ಯಾಭಿಷೇಕವನ್ನು ಮಾಡಿ ಸುಖವಾಗಿರುವಂತೆ ಏರ್ಪಡಿಸಿ ಧರ್ಮರಾಯನ ಬಳಿಗೆ ಬಂದು ನಡೆದ ಸಂಗತಿಯನ್ನು ವಿಸ್ತಾರವಾಗಿ ವಿವರಿಸಿ ಹೇಳಿದನು.

## ಪರೀಕ್ಷಿದ್ರಾಜನ ಪಟ್ಟಾಭಿಷೇಕ ಮತ್ತು ಪಾಂಡವರ ನಿರ್ಯಾಣ.

ಧರ್ಮಾತ್ಮನಾದ ಯುಧಿಷ್ಠಿರನು ಅರ್ಜುನನಿಂದ ದ್ವಾರಕೆಯಲ್ಲಿ ನಡೆದ ಸಂಗತಿಯನ್ನೆಲ್ಲ ತಿಳಿದು ಚಿಂತಾಕ್ರಾಂತನಾಗಿ ಈಗ ಕಲಿಯುಗವು ಸಮೀಪಿಸುತ್ತಿದೆ ಇನ್ನು ನಮ್ಮ ಧರ್ಮಾಚರಣೆಗೆ ಅವಕಾಶ ಕಡಿಮೆಯಾದ ಕಾರಣ ನಾವೆಲ್ಲರೂ ವಾನಪ್ರಸ್ಥರಾಗಿ ಶ್ರೀಕೃಷ್ಣ ಸಾಯುಜ್ಯವನ್ನು ಪಡೆಯುವುದೆ ಉತ್ತಮವೆಂದು ಹೇಳಿ ತನ್ನ ಪತ್ನಿ ಭ್ರಾತೃಗಳನ್ನು ಒಡಂಬಡಿಸಲು ಅವರು ಅದಕ್ಕೊಪ್ಪಿದಕಾರಣ ದೃಢಮನಸ್ಕನಾಗಿ ಧರ್ಮರಾಯನು ಸುಭದ್ರೆಯ ಗರ್ಭದಲ್ಲಿ ಹುಟ್ಟಿದ ಅಭಿಮನ್ಯು ಕುಮಾರನಿಗೆ ಮದುವೆಯಾಗಿದ್ದ ವಿರಾಟಪುತ್ರಿಯಾದ ಉತ್ತರೆಯ ಹೊಟ್ಟೆಯಲ್ಲಿ ಹುಟ್ಟಿ ಬೆಳೆದು ಪ್ರಾಯಸಮರ್ಥನಾಗಿ ಕುರುಪಾಂಡವ ವಂಶಗಳನ್ನು ಉದ್ಧರಿಸುವ ಶಕ್ತಿಯುಳ್ಳವನಾಗಿ ಚಂದ್ರವಂಶಕ್ಕೆ ಲಲಾಮಪ್ರಾಯನಾಗಿದ್ದ ಪರೀಕ್ಷಿತನಿಗೆ ಪಟ್ಟವನ್ನು ಕಟ್ಟಿ ಹಸ್ತಿನಾವತಿಯ ರಾಜ್ಯಭಾರವನ್ನು ಅವನಿಗೆ ವಹಿಸಿ ತಾನು ತನ್ನ ಪರಿವಾರದೊಡನೆ ವಾನಪ್ರಸ್ಥಕ್ರಮದಿಂದ ಮಹಾಪ್ರಸ್ಥಾನಕ್ಕೆ ಹೊರಟು ಸ್ವರ್ಗವನ್ನು ಆರೋಹಣಮಾಡಿ ತಮ್ಮ ಕರ್ಮಾನುಸಾರವಾಗಿ ಲೋಕಾಂತರಗಳಲ್ಲಿ ಹೊಕ್ಕು ಕಡೆಗೆ ವೈಕುಂಠವಾಸಿಯಾದ ಶ್ರೀಮನ್ನಾರಾಯಣನ ಸಾನ್ನಿಧ್ಯವನ್ನು ಸೇರಿದನು.

ಹೀಗೆ ಧರ್ಮಸಂಸ್ಥಾಪನೆಗಾಗಿ ತಮ್ಮ ಮಹಿಮಾತಿಶಯದಿಂದ ಅವತಾರ ಮಾಡಿ ದುಷ್ಟನಿಗ್ರಹ ಶಿಷ್ಟಪರಿಪಾಲನಕ್ರಮದಿಂದ ಭೂಭಾರವನ್ನು ಇಳುಹಿ ಲೋಕವನ್ನುದ್ಧರಿಸಿದ ಸರ್ವಚೈತನ್ಯಸ್ವರೂಪನೂ ಸಚ್ಚಿದಾನಂದಮಯನೂ ಭಕ್ತವತ್ಸಲನೂ ಆದ ಶ್ರೀಹರಿಯ ಅವತಾರ ಲೀಲೆಗಳನ್ನು ಭಕ್ತಿಯಿಂದ ಬರೆದೋದಿ ಹೇಳಿ ಕೇಳುವ ಪುಣ್ಯಪುರುಷರಿಗೆ ಸರ್ವಾನಿಷ್ಟಗಳೂ ನಿವೃತ್ತಿಯಾಗಿ ಸಕಲ ಇಷ್ಟಾರ್ಥಗಳೂ ಕೈಗೂಡಿ ದಿವ್ಯಭೋಗಭಾಗ್ಯಂಗಳನ್ನು ಅನುಭವಿಸಿ ಇಹದಲ್ಲಿ ಕೀರ್ತಿಯನ್ನು ಪರದಲ್ಲಿ ಮೋಕ್ಷವನ್ನು ಪಡೆದು ನಿತ್ಯತೃಪ್ತರಾಗಿ ಬಾಳುವರೆಂದು ದಿವ್ಯಜ್ಞಾನಿಯಾದ ಶುಕಮಹರ್ಷಿಯು ನಿರೂಪಿಸಿದನೆಂಬಲ್ಲಿಗೆ ಶ್ರೀಕೃಷ್ಣಾವತಾರಕಥೆ ಸಂಪೂರ್ಣಂ.

ಕಂ|| ಶ್ರೀಕಂಪಿನೆ ಕವಿನಾಗಂ | ಲೋಕಿಸಿ ಕೃಷ್ಣಾವತಾರ ಮಹಿಮೆಯನನುವಿಂ |
ಶ್ರೀಕೃಪೆಯೊದಗಿರೆ ತಿದ್ದಿದ | ನೀಕೃತಿಯೊಳ್ ಮೆರೆವ ಕಥೆಯು ನಾಂಗೀರಸದೊಳ್ ||೧||

## ಶ್ರೀ ಕೃಷ್ಣಾವತಾರದ ಕಥೆ ಸಂಪೂರ್ಣಂ.

ಶ್ರೀರಸ್ತು.

ಶ್ರೀ ಸದ್ಗುರು ಪರಬ್ರಹ್ಮಣೇ ನಮಃ.

# ಬೌದ್ಧಾವತಾರದ ಕಥೆ.

ಲೋಕಕಂಟಕನಾಗಿ ದೇವತೆಗಳನ್ನು ಬಾಧಿಸುತ್ತಿದ್ದ ಮಹಾಶೂರನಾದ ತಾರಕಾಸುರನೆಂಬ ರಾಕ್ಷಸನನ್ನು ಈಶ್ವರಪುತ್ರನಾದ ಷಣ್ಮುಖನು ಅವತರಿಸಿ ಕುಮಾರಸ್ವಾಮಿಯಾಗಿ ದೇವಸೇನೆಯ ಪಟ್ಟವನ್ನು ವಹಿಸಿ ಲೀಲಾಮಾತ್ರದಿಂದ ಸಂಹರಿಸಿ ತಾರಕಾರಿ ಎಂದು ಪ್ರಸಿದ್ಧನಾಗಿ ದೇವತೆಗಳ ಸಂಕಟವನ್ನು ತಪ್ಪಿಸಿದನಷ್ಟೆ. ಆ ಬಳಿಕ ತಾರಕಾಸುರನ ಮಕ್ಕಳಾದ ತಾರಕಾಕ್ಷ, ವಿದ್ಯುನ್ಮಾಲಿ, ಕಮಲಾಕ್ಷರೆಂಬ ಮೂರುಮಂದಿ ರಾಕ್ಷಸರು ಒಟ್ಟಾಗಿ ಬ್ರಹ್ಮನನ್ನು ಕುರಿತು ಬಹು ಕ್ರೂರವಾದ ತಪಸ್ಸು ಮಾಡಿ ಅವನನ್ನು ಪ್ರತ್ಯಕ್ಷವಾಗುವಂತೆ ಮಾಡಿಕೊಂಡು ಆತನಿಂದ ತಮಗೆ ಬೇಕಾದವರವನ್ನು ಪಡೆದು ಮದೋನ್ಮತ್ತರಾಗಿ ತ್ರಿಪುರಗಳೆಂಬ ಹೆಸರಿನಿಂದ ಆಕಾಶಮಧ್ಯದಲ್ಲಿ ಸಂಚರಿಸುವ ಶಕ್ತಿಯುಳ್ಳದ್ದಾಗಿ ಆಕಾಶದಲ್ಲೆ ನಿಂತು ತೋರುವ ಮೂರು ಕೋಟೆಗಳನ್ನು ಚಿನ್ನ, ಬೆಳ್ಳಿ, ತಾಮ್ರಗಳಿಂದ ಕಟ್ಟಿಸಿ ಆ ಲೋಹನಗರವಲ್ಲಿ ವಾಸಿಸುತ್ತ ತಮ್ಮ ತಂದೆಯ ಸಂಹಾರಕ್ಕೆ ಕಾರಣರಾದ ದೇವತೆಗಳನ್ನು ನಾಶಮಾಡಬೇಕೆಂದು ಸಂಕಲ್ಪಿಸಿ ಬಗೆಬಗೆಯಾದ ವಿಧದಿಂದ ದೇವತೆಗಳಿಗೆ ಬಾಧೆಯನ್ನುಂಟುಮಾಡುತ್ತ ಅಜೇಯರಾಗಿ ಮಹಾಕ್ರೌರ್ಯದಿಂದ ತ್ರಿಲೋಕಗಳನ್ನು ಪೀಡಿಸುತ್ತಿದ್ದರು. ಈ ತ್ರಿಪುರಾಸುರರ ಹೆಂಡತಿಯರ ಪಾತಿವ್ರತ್ಯ ಮಹಿಮೆಯು ಇವರಿಗೆ ಸಹಾಯವಾಗಿ



ಬ್ರಹ್ಮನ ವರವು ಮೂಲವಾಗಿ ಇವರನ್ನು ಜಯಿಸುವ ಶೂರರೇ ಇಲ್ಲವಾದರು. ಈ ರಾಕ್ಷಸರ ಹಾವಳಿಯನ್ನು ತಡೆಯಲಾರದೆ ಬ್ರಹ್ಮಾದಿ ದೇವತೆಗಳು ಪಾರ್ವತಿಯ ಬಳಿಗೆ ಹೋಗಿ ಮೊರೆಯಿಟ್ಟು ಗೋಳಾಡಿ ಅವಳ ಮೂಲಕ ಪರಮೇಶ್ವರನನ್ನು ಪ್ರಾರ್ಥಿಸಿ ಹೇಗಾದರೂ ಮಾಡಿ ನಮ್ಮನ್ನು ಆ ರಾಕ್ಷಸರ ಬಾಧೆಯಿಂದ ತಪ್ಪಿಸಿ ಕಾಪಾಡಬೇಕೆಂದು ಬೇಡಿಕೊಂಡರು. ಆಗ ಪರಮೇಶ್ವರನು ಅಯ್ಯಾ ನಿಮ್ಮ ಪ್ರಾರ್ಥನೆಯಂತೆ ನಾನು ತ್ರಿಪುರಗಳನ್ನು ನಾಶಮಾಡುತ್ತೇನೆ ಆದರೆ ಇದಕ್ಕೆ ವಿಷ್ಣುವಿನ ಸಹಾಯಬೇಕು ಆದಕಾರಣ ವೈಕುಂಠಕ್ಕೆ ಹೋಗಿ ಕಮಲಾಕ್ಷನಾದ ಶ್ರೀಹರಿಗೆ ಈ ವೃತ್ತಾಂತವನ್ನು ತಿಳಿಸಿ ಆತನನ್ನು ಒಪ್ಪಿಸಿ ಕರೆದುತಂದರೆ ನಿಮ್ಮ ಇಷ್ಟಾರ್ಥವು ನೆರವೇರುವುದೆಂದು ಹೇಳಲು, ಬ್ರಹ್ಮಾದಿಗಳು ವೈಕುಂಠಕ್ಕೆ ಹೋಗಿ ನಾರಾಯಣನನ್ನು ಮರೆಹೊಕ್ಕು ಪ್ರಾರ್ಥಿಸಿಕೊಳ್ಳಲು, ವಿಷ್ಣುವು ಎಲೈ ದೇವಾಧಿದೇವತೆಗಳಿರಾ! ನಿಮ್ಮ ಪ್ರಾರ್ಥನೆಯಂತೆ ನಾನು ಸಹಾಯಕ್ಕೆ ಬಂದು ಈಶ್ವರನ ಮೂಲಕ ಆ ತ್ರಿಪುರರನ್ನು ಸಂಹರಿಸುತ್ತೇನೆ ಆದರೆ ನಾನು ಆ ಕಾಲದಲ್ಲಿ ಮಾಡಬೇಕಾಗಿರುವ ಅವತಾರವಿಶೇಷಕ್ಕೆ ನೀವು ಸಹಾಯಕರಾಗಿ ನನ್ನ ಭಕ್ತರಾಗಿರಬೇಕು. ಹಾಗಿಲ್ಲದೆ ಹೋದರೆ ಕೆಲಸ ಕೆಟ್ಟೀತು ಎಂದು ಹೇಳಿ ಅವರನ್ನು ಸಮ್ಮತಿಸಿ ಕಳುಹಿಸಿ ತಾನು ತನ್ನ ಅಂತರಂಗದಲ್ಲಿ ಯೋಚಿಸಿ ಬ್ರಹ್ಮದೇವನ ವರಬಲವು ಕ್ಷಯಿಸುತ್ತ ಬಂದಿದೆ. ಈಗ ಆ ತ್ರಿಪುರಾಸುರರು ತಮ್ಮ ಹೆಂಡತಿಯರ ಪಾತಿವ್ರತ್ಯ ಮಹಿಮೆಯಿಂದ ಅಜೇಯರಾಗಿದ್ದಾರೆ ಆದಕಾ

ರಣ ಮೊದಲು ನಾನು ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯವನ್ನು ಕೆಡಿಸುವುದಕ್ಕೆ ಸಹಾಯವಾದ ಬೌದ್ಧಾವತಾರವನ್ನು ಮಾಡಿ ಧರ್ಮೋದ್ಧಾರ ಮಾಡಬೇಕೆಂದು ಯೋಚಿಸಿ ಅಲ್ಲಿಂದ ಹೊರಟು ಕೈಲಾಸಕ್ಕೆ ಬಂದು ತನ್ನ ಅಭಿಪ್ರಾಯವನ್ನು ಈಶ್ವರನಿಗೆ ತಿಳಿಸಲು ಪರಶಿವನು ತಥಾಸ್ತು ಎಂದಮೇಲೆ ಅಮೃತಕುಂಡಲಧರರಾಗಿ ಪತ್ನಿಯರ ಪಾತಿವ್ರತ್ಯ ಪ್ರಭಾವದಿಂದ ಅಜೇಯರಾಗಿದ್ದ ತ್ರಿಪುರಾಸುರರ ಮೇಲೆ ಪರಮೇಶ್ವರನು ಯುದ್ಧಕ್ಕೆ ಹೊರಡುವಂತೆ ಪ್ರೇರಿಸಿದನು. ಬಳಿಕ ಮಹಾವಿಷ್ಣುವು ದಿವ್ಯಸುಂದರವಾದ ಆಕಾರವನ್ನು ಧರಿಸಿ ಲೋಕಮೋಹನವಾದ ಸನ್ಯಾಸಿಯಂತೆ ವೇಷವನ್ನು ಹಾಕಿಕೊಂಡು ನಾಲ್ಕು ಜನ ಶಿಷ್ಯರೊಡನೆ ತ್ರಿಪುರಗಳಿಗೆ ಹೋಗಿ ಅಲ್ಲಿ ತಪಸು ಮಾಡುತ್ತ ಕುಳಿತು ತನ್ನ ಶಿಷ್ಯರಮೂಲಕ ವೇದಕರ್ಮಗಳನ್ನು ಖಂಡಿಸಿ ನಾಸ್ತಿಕವಾದವನ್ನು ಹೂಡಿ ಆ ಹಿಂಸೆಯೆ ಲೋಕಕ್ಕೆ ಮೋಕ್ಷಕಾರಣವೆಂದು ಹಟಹಿಡಿದು ಸಾಧಿಸುತ್ತ ದುಃಖವೆ ನರಕ ಸುಖವೆ ಸ್ವರ್ಗ ಈ ದೇಹವಳಿದಮೇಲೆ ಪುನರ್ಜನ್ಮವಿಲ್ಲ ದೇಹಾಂತವೇ ಮೋಕ್ಷ ಆದಕಾರಣ ಅವರವರ ಇಷ್ಟಾನುಸಾರ ಸುಖವನ್ನು ಅನುಭವಿಸುತ್ತ ಅಹಿಂಸಾತತ್ಪರರಾಗಿ ಲೋಕಸುಖವನ್ನನುಭವಿಸುವುದೇ "ಮೋಕ್ಷ ಸಾಧನ ಅಹಿಂಸಾ ಪರಮೋ ಧರ್ಮಃ" ಎಂದು ಅಸುರಿಮೋಹಕವಾದ ನಾಸ್ತಿಕ ಬೋಧೆಯನ್ನು ಹೇಳತೊಡಗಿದನು. ಆ ಕಾಲಕ್ಕೆ ಸರಿಯಾಗಿ ದೇವಕಾರ್ಯಧುರಂಧರನಾದ ನಾರದಮಹಾಮುನಿಯು ತ್ರಿಪುರಾಸುರರ ಬಳಿಗೆ ಬಂದು ಅವರಿಂದ ಸತ್ಕೃತನಾಗಿ ಮರಳಿ ಹಿಂದಿರುಗಿ ಹೋಗುವಾಗ ಈಗ ನಿಮ್ಮ ಬಳಿಗೆ ಬಂದಿರುವವನು ಮಹಾಯೋಗಸಿದ್ಧನಾದ ಮುನಿಶ್ರೇಷ್ಠನು ನೀವು ಈತನ ಶಿಷ್ಯರಾಗಿ ಈತನ ಅಪ್ಪಣೆಯಂತೆ ನಡೆದುಕೊಂಡರೆ ನಿಮಗೆ ಸುಖವುಂಟಾಗುವುದೆಂದು ಹೇಳಿ ಹೊರಟುಹೋದನು. ಆ ಬಳಿಕ ತ್ರಿಪುರಾಸುರರು ರಾಕ್ಷಸರಾದಕಾರಣ ಮದಾಂಧರಾಗಿ ತಮ್ಮ ನಿತ್ಯಕರ್ಮಾನುಷ್ಠಾನಗಳನ್ನೂ ಯಜ್ಞಯಾಗಾದಿಗಳನ್ನು ಬಿಟ್ಟು ಪ್ರತಿದಿನವೂ ತಪ್ಪದೆ ಮಾಡುತ್ತಿದ್ದ ಶಿವಪೂಜೆಯನ್ನು ಮೂಲೆಗೊತ್ತರಿಸಿ ಲೋಕಸುಖಲಂಪಟರಾಗಿ ಏಕಪತ್ನಿವ್ರತವನ್ನು ಕಳೆದುಕೊಂಡು ಸ್ವೇಚ್ಛಾವಿಹಾರಿಗಳಾದರು. ಪುರುಷರೆಲ್ಲರೂ ಹೀಗೆ ಕೆಟ್ಟಮೇಲೆ ಸ್ತ್ರೀಯರು ತಮ್ಮ ಪಾತಿವ್ರತ್ಯಮಹಿಮೆಯನ್ನು ಕಳೆದುಕೊಂಡು ಬೌದ್ಧಾವತಾರಿಯಾದ ಸ್ವಾಮಿಯಲ್ಲಿ ಮೋಹಗೊಂಡು ಆತನೊಡನೆ ಅಂಗಸಂಗ ಸಲ್ಲಾಪಾದಿಗಳನ್ನು ಪಡೆದು ಭ್ರಷ್ಟರಾದರು. ಇದಾದಮೇಲೆ ಪರಶಿವನು ತನ್ನ ಲಯಕರ್ತೃತ್ವಕ್ಕೆ ತಕ್ಕ ಸಮಯವು ತನಗೆ ದೊರೆತುದನ್ನು ಕಂಡು ಆನಂದಭರಿತನಾಗಿ ಭೂಮಿಯನ್ನೇ ರಥವಾಗಿ ಮಾಡಿಕೊಂಡು ಚತುರ್ವೇದಗಳನ್ನು ಅದಕ್ಕೆ ಕುದುರೆಯಾಗಿ ಕಟ್ಟಿ ಬ್ರಹ್ಮನು ಸಾರಥಿಯಾಗಿ ರಥವನ್ನು ನಡೆಸುತ್ತಿರುವಲ್ಲಿ ಮೇರುಪರ್ವತವನ್ನು ಬಿಲ್ಲಾಗಿ ಹಿಡಿದುಕೊಂಡು ಅದಕ್ಕೆ ಆದಿಶೇಷನನ್ನು ಹೆದೆಯಾಗಿ ಬಿಗಿದು ಕಟ್ಟಿ ಶ್ರೀಮಹಾವಿಷ್ಣುವಿನ ನೃಸಿಂಹಾವತಾರದ ಅಂಶವನ್ನು ಬಾಣವಾಗಿ ಹೂಡಿ ಅಟ್ಟಹಾಸಯುಕ್ತನಾಗಿ ದೇವಸೇನೆಯೊಂದಿಗೆ ಹೊರಟು ಬೌದ್ಧಾವತಾರದ ಮಹಿಮೆಯಿಂದ ತಮ್ಮ ಧರ್ಮವನ್ನು ಕಳೆದುಕೊಂಡು ದೇಹಹಿಂಸಕರಾಗಿ ವಿಷಯಲಂಪಟದಿಂದ ಮಗ್ನರಾಗಿ ಮದಿಸಿದ್ದ ತ್ರಿಪುರಾಸುರರನ್ನು ಕೊಂದು ದೇವತೆಗಳನ್ನು ಸಂತೋಷಪಡಿಸಿ ತನ್ನ ತ್ರಿಪುರಹರಲೀಲೆಯನ್ನು ಲೋಕವಿಖ್ಯಾತವಾಗುವಂತೆ ಮೆರೆಯಿಸಿದನು ಹೀಗೆ ಧರ್ಮಸಂಸ್ಥಾಪನೆಗೆ ಸಹಾಯವಾಗಿ ಶ್ರೀವಿಷ್ಣುವು ಬುದ್ಧಿಪ್ರಾಮುಖ್ಯವಾದ ನಾಸ್ತಿಕತ್ವಪ್ರಧಾನವಾದ ಬೌದ್ಧಾವತಾರವನ್ನು ಮಾಡಿ ತನ್ನ ಪ್ರತಿಜ್ಞೆಗೆ ಭಂಗಬರದಂತೆ ಧರ್ಮಸ್ಥಾಪನೆ ಮಾಡಲೋಸುಗ ಅವತರಿಸಿ ತೋರಿಸಿದ ಈ ಬೌದ್ಧಾವತಾರದ ಮಹಿಮೆಯನ್ನು ಭಕ್ತಿಯಿಂದ ಪಠಿಸಿ ಬರೆದು ಓದಿ ಹೇಳಿ ಕೇಳುವ ಪುಣ್ಯಾತ್ಮರಿಗೆ

ಭಗವಂತನು ಸರ್ವಾರಿಷ್ಟಗಳನ್ನು ನಿವಾರಣೆಮಾಡಿ ಸರ್ವಸುಖ ಸಂಪತ್ತುಗಳನ್ನು ಕೊಡುವನೆಂಬಲ್ಲಿಗೆ ಬೌದ್ಧಾವತಾರದ ಕಥೆ ಸಂಪೂರ್ಣಂ, ಶ್ರೀ. ಶ್ರೀ. ಶ್ರೀ.



ಶ್ರೀರಸ್ತು.

ಶ್ರೀ ಕೃಷ್ಣಪರಮಾತ್ಮನೇ ನಮಃ.

# ಕಲ್ಕ್ಯವತಾರದ ಕಥೆ.



ಹೀಗೆ ಧರ್ಮಸಂಸ್ಥಾಪನೆಗಾಗಿ ಮಹಾಮಹಿಮನಾದ ಭಗವಂತನು ಕಾಲಾನುಸಾರವಾಗಿ ತೋರಿಸಿದ ಅನೇಕ ಲೀಲೆಗಳೂ ಅವತಾರಗಳೂ ಅಸಂಖ್ಯಾತವಾಗಿರುವುವು ಅವೆಲ್ಲವನ್ನು ವಿಸ್ತರಿಸಿ ಬರೆದರೆ ಗ್ರಂಥವಿಸ್ತಾರವಾಗುವುದೆಂಬ ಭಯದಿಂದ ಪುರಾಣಕರ್ತನಾದ ವ್ಯಾಸಮಹಾಮುನಿಯು ಭಗವದವತಾರಘಟ್ಟದಲ್ಲಿ ಅನುಭವವೆಂಬ ಖನಿಯನ್ನು ಅಗೆದು ಅದರಲ್ಲಿ ಆರಿಸಿ ತೆಗೆದ ಹತ್ತು ಅವತಾರ ರತ್ನಗಳೇ ಬಹುಮುಖ್ಯವೆಂದು ಪ್ರಸಿದ್ಧನಾಗಿರುವಕಾರಣ ಈ ದಶಾವತಾರ ಕಥಾಸಂಗ್ರಹವನ್ನು ಬರೆಯಬೇಕಾಯಿತು. ಈಗ ಗ್ರಂಥದಲ್ಲಿ ಇದುವರೆಗೆ ವರ್ಣಿಸಿರುವ ಒಂಭತ್ತು ಅವತಾರಗಳೂ ಕೃತ ತ್ರೇತ ದ್ವಾಪರಾದಿ ಮೂರು ಯುಗಗಳಲ್ಲಿ ನಡೆದುದೆಂದು ಶಾಸ್ತ್ರ ಸಮ್ಮತಿಯುಂಟಾಗಿದೆ. ಇನ್ನು ಕಲಿಯುಗದಲ್ಲಿ ಧರ್ಮಸಂಸ್ಥಾಪನೆಗಾಗಿ ಮಹಾವಿಷ್ಣುವು ಕಲ್ಕಿರೂಪದಿಂದ ಅವತರಿಸಿ ಧರ್ಮೋದ್ಧಾರಮಾಡಿದ ಕಥೆಯನ್ನು ಸಂಕ್ಷೇಪವಾಗಿ ಇಲ್ಲಿ ವಿವರಿಸಬೇಕಾಗಿದೆ. ವಾಚಕಮಹಾಶಯರೆ! ಇದುವರೆಗೂ ಯಾವ ಭಗವಂತನು ಧರ್ಮಸಂಸ್ಥಾಪನೆಗಾಗಿ ತನ್ನ ಸಚ್ಚಿದಾನಂದ ಸ್ವರೂಪವಾದ ದಿವ್ಯ ಮಂಗಳಮೂರ್ತಿಯ ತೇಜಸ್ಸನ್ನು ಮೀನ ಮೃಗ ಮನುಷ್ಯಾದಿ ದೇಹಗಳಲ್ಲಿ ಸ್ಥಾಪಿಸಿ ಧರ್ಮಸಂಸ್ಥಾಪನೆಯನ್ನು ಮಾಡಿದನೋ ಆ ಭಗವಂತನು ತನ್ನ ಸ್ವರೂಪಚೈತನ್ಯನಾದ ಧರ್ಮಕ್ಕೆ ಹಾನಿಯೊದಗಿ ಅಧರ್ಮವೇ ಅತ್ಯಂತವಾಗಿ ಹರಡಿಕೊಂಡು ಬ್ರಹ್ಮಾವರ್ತ ಪುಣ್ಯಭೂಮಿಗಳಲ್ಲಿ ಆರ್ಷೇಯವಾಗಿ ನೆಲೆಸಿದ್ದ ಆರ್ಯಧರ್ಮವನ್ನು ಅಣಗಿಸಿ ತುಳಿದಿರುವುದೊ ಅಂಥ ಕಲಿಮಹಿಮೆಯನ್ನು ಕಂಡು ವಿಸ್ಮೃತನಾಗಿ ತನ್ನ ಮಹಿಮೆಯಿಂದ ಕಲ್ಕಿಯಾಗಿ ಅವತರಿಸಿ ಕಲಿಯುಗದಲ್ಲಿ ಧರ್ಮಸಂಸ್ಥಾಪನೆ ಮಾಡುವನು. ಹೇಗೆಂದರೆ ಭಕ್ತಿಭಾಗ್ಯಗಳಿಂದ ಮೆರೆಯುತ್ತಿದ್ದ ಭರತಖಂಡದಲ್ಲಿ ಕಪಟ ಕುತಂತ್ರಗಳು ಹೆಚ್ಚಿ ಧರ್ಮಕ್ಕೆ ಚ್ಯುತಿಯುಂಟಾಗಿ ಗೋಬ್ರಾಹ್ಮಣರಿಗೆ ಹಿಂಸೆಹೆಚ್ಚಿ ಧರ್ಮವು ಕೆಟ್ಟುಹೋಗಿ ಅಧರ್ಮವೇ ತುಂಬಿಕೊಂಡು ಕನ್ಯಾವಿಕ್ರಯ, ಕಪಟವಿಶ್ವಾಸ, ಸತ್ಯಚ್ಯುತಿ, ಅಸತ್ಯಪ್ರಾಬಲ್ಯ, ವೇದನಿಂದೆ, ವೈದಿಕಾವಮಾನಗಳು ಹೆಚ್ಚಿ ಗುರುಜನ ಪರಿಹಾಸವೂ ಆತ್ಮಸ್ತುತಿಯೂ ಸ್ವಾರ್ಥಪ್ರಶಂಸೆಯೂ ಅತ್ಯಂತ ಪ್ರಬಲವಾಗಿ ಲೋಕವನ್ನು ಅಧರ್ಮಮಯವಾಗಿ ಮಾಡಿ ಧರ್ಮದೇವತೆಗೆ ನಿಲ್ಲುವುದಕ್ಕೆ ನೆಲೆಯಿಲ್ಲದಂತಾಗಿ ಭೂಭಾರವನ್ನು ಹೆಚ್ಚಿಸಿದಾಗ ಅಧರ್ಮವನ್ನು ತೊಡೆದು ಧರ್ಮಸಂಸ್ಥಾಪನೆ ಮಾಡಿ, ಸತ್ಯವನ್ನು ನೆಲೆಗೊಳಿಸಿ ಅಸತ್ಯವನ್ನು ಹೊರನೂಕಿ ಭೂಭಾರವನ್ನು ತಗ್ಗಿಸಿ ಪ್ರಜೆಗಳಿಗೆ ಕ್ಷೇಮವನ್ನುಂಟು

ಮಾಡುವ ವ್ಯಾಜದಿಂದ "ಧರ್ಮಸಂಸ್ಥಾಪನಾಚಾರ್ಯ" ನೆಂಬ ಬಿರುದನ್ನು ವಹಿಸಿ ಕಲ್ಕಿರೂಪದಿಂದ ಕಲಿನಾಶನಕ್ಕಾಗಿ ವಿಷ್ಣುಯಶ ದೇವಪ್ರಭೆಯರೆಂಬ ದಂಪತಿಗಳು ತಪಸ್ಸು ಮಾಡುತ್ತಿರಲು ಅವರ ಕೋರಿಕೆಯಂತೆ ಮಹಾವಿಷ್ಣುವು ಕರ್ಮವೀರನಾಗಿ ಹುಟ್ಟಿ ಬಹುಕಾಲ ಇಹಲೋಕದ ಅಧರ್ಮವನ್ನು ಅನುಭವಿಸುತ್ತಿದ್ದು ಕಡೆಗೆ ತನ್ನ ಪ್ರಭಾವದಿಂದ ನಿತ್ಯಸುಖರೂಪವಾದ ನಿಜ ಮಹಿಮೆಯನ್ನು ಪ್ರಸರಿಸಿ ಪ್ರಬಲವೈರದಿಂದ ಮೆರೆಯುತ್ತಿದ್ದ ಹೂಣ ಮ್ಲೇಂಛಾದಿಗಳಿಗೆ ಶಾಂತಿಯ ಸ್ವೈರಣೆಯನ್ನುಂಟುಮಾಡಿ ಖಡ್ಗವನ್ನು ಹಿಡಿದು ಕುದುರೆಯನ್ನೇರಿ ಕೃಪಾಳುವಾಗಿ ಲೋಕದಲ್ಲಿ ಸಂಚರಿಸುತ್ತ ಅಹಿಂಸಾಬಲದಿಂದ ಹಿಂಸಕರೆಲ್ಲರನ್ನೂ ನಾಶಗೊಳಿಸಿ, ಧರ್ಮಸಂಸ್ಥಾಪನೆ ಮಾಡಲೋಸುಗ ದಶಾವತಾರಗಳಲ್ಲಿ ಕೊನೆಯದಾದ ಕಲ್ಕ್ಯವತಾರವನ್ನು ವಹಿಸಿ ಪ್ರಸಿದ್ಧನಾದನು ಎಂಬಲ್ಲಿಗೆ ಶ್ರೀವಿಷ್ಣುದಶಾವತಾರ ಕಥೆಗಳಲ್ಲಿ ಹತ್ತನೆಯದಾದ ಕಲ್ಕಿ ಅವತಾರದ ಕಥೆಯು ಸಂಪೂರ್ಣವಾದುದು.

॥ ಶ್ರೀ. ಶ್ರೀ. ಶ್ರೀ. ॥

ಈಕೃತಿ ಸಕಲೇಷ್ಟಾರ್ಥದ ।
ಮಾಕೃತಿ ಸಂಪೂರ್ಣಸೌಖ್ಯದಾಯಕ ಮೆನಲಾ ॥
ಭೀಕರ ಕಲಿ ದೋಷ ಶಮನ ।
ದೀಕೃತಿ ನೆರೆಮೆರೆಗೆ ದೇವದೇವನ ಕೃಪೆಯಿಂ ॥೧॥
ಭುವಿಯೊಳ್ ಭಕ್ತಜನಾವಳಿ ।
ಸುವಿವೇಕದೊಳೋದಿ ಪೇಳಿ ಕೇಳುತ ಕಥೆಯಂ ॥
ಅವಿರಳಸೌಖ್ಯವ ಪಡೆಯಲ್ ।
ತವಕದೆ ಕವಿನಾಗಶರ್ಮ ನಿಂತಿದ ಬರೆದಂ ॥೨॥

# ವಚನ ರಾಮಾಯಣ ಕಥಾಸಂಗ್ರಹಂ

## ಸಂಪೂರ್ಣಂ.



ಹರಿಃ ಓಂ ತತ್ಸತ್.